# ಶ್ರೀ ಚಿದಂಬರ ವಿಜಯು.

ಇದನ್ನು

ಕಲ್ಲೋ ಗಣೇಶ ವಿಜಾಪೂರಕರ,

ಹೆಡ್‌ಮಾಸ್ತರ ಅಕ್ಕತಂಗೇರಹಾಳ (ಜಿ. ಬೆಳಗಾವ)

(ಸದ್ಬೋಧ ಸಂಗ್ರಹ, ಈಶಸಂಕಲ್ಪ, ಭೀಷಣಚಿತ್ರ, ವಿವಿಧಕಲಾಶತಕ, ಬಾಜೀರಾಯರ ಆಖ್ಯಾಯಿಕೆ ಮೊದಲಾದ ಗ್ರಂಥಗಳ ಕರ್ತರು) ಇವರು ಬರೆದರು.

ಪ್ರಕಾಶಕ:—

ಭಿಕಾಜಿ ಪರಶುರಾಮಪಂತ ಕಾಳೆ,

ಮ್ಯಾನೇಜರ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸ, ಆನಂದವನ.

ಅಕ್ಟೋಬರ 1928.

೨ನೆಯ ಆವೃತ್ತಿ.

ಈ ಪುಸ್ತಕದ ಎಲ್ಲ ಹಕ್ಕುಗಳು ಪ್ರಕಾಶಕರಿಂದ ಕಾದಿಡಲ್ಪಟ್ಟವೆ.

ಕಿಲೆ ೧-೧೨-೦

# ಲೇಖಕನ ನಿವೇದನ.

[illegible] ಮೊಟ್ಟಮೊದಲು ಸನ್ ೧೯೦೫ನೇ ಇಸವಿಯ ಡಿಸಂಬರತಿಂಗಳಲ್ಲಿ ಅಧ್ಯಾಪಕನಾಗಿ ಶ್ರೀ ಗುರು ಚಿದಂಬರನ ಅವತಾರದಿಂದ ಪವಿತ್ರವಾದ ಮುರಗೋಡಗ್ರಾಮಕ್ಕೆ ಹೋದೆನು, ಅಲ್ಲಿ ಮೇಲಿಂದಮೇಲೆ ಕೆಂಗೇರಿಗೆ ಹೋಗುವ ಹಾಗೆ ಜನರ ಬಾಯಿಂದ ಶ್ರೀ ಚಿದಂಬರ ದೀಕ್ಷಿತರ ಅತ್ಯದ್ಭುತ ಕಥೆಗಳನ್ನು ಕೇಳುವ ಪ್ರಸಂಗಗಳು ಅನಾಯಾಸವಾಗಿ ಲಭಿಸಿದವು ಆಗ್ಗೆ ಕನ್ನಡದಲ್ಲಿ ಒಂದು ಶ್ರೀ ಚಿದಂಬರ ಚರಿತ್ರವನ್ನು ಬರೆಯಬೇಕೆಂಬ ಇಚ್ಛೆಯು ನನ್ನಲ್ಲಿ ಉಂಟಾಯಿತು. ಹಾಗು ಆ ವಿಷಯವಾಗಿ ನಾನು ಸಾಧನಗಳನ್ನು ಸಂಪಾದಿಸಲುಪಕ್ರಮಿಸಿದೆನು. ಆಗ ಶ್ರೀ. ಸಾಂಬ ದೀಕ್ಷಿತ ಕಾಶೀಕರಕೃತ ಒಂದು ಓವೀಬದ್ಧವಾದ ಮಹಾರಾಷ್ಟ್ರ ಭಾಷೆಯಲ್ಲಿದ್ದ ಶ್ರೀ ಚರಿತ್ರವು ನನಗೆ ಸಿಕ್ಕಿತು. ನಾನು ಅದನ್ನು ಅವಲೋಕಿಸುತ್ತಿರಲು, ಸದ್ಬೋಧಚಂದ್ರಿಕೆಯಲ್ಲಿ ಶ್ರೀ ಚಿದಂಬರ ಚರಿತ್ರವು ಬೈಲಿಗೆ ಬಂತು ಅದರ ಪ್ರಸ್ತಾವನೆಯಲ್ಲಿ ಅದನ್ನು ಶ್ರೀ ಸಾಂಬ ದೀಕ್ಷಿತರ ಗ್ರಂಥಾಧಾರದಿಂದಲೇ ಬರೆದ ಉಲ್ಲೇಖವಿತ್ತು. ಅದನ್ನು ನೋಡಿ ನನ್ನ ಚರಿತ್ರಬರೆಯುವ ಆಶೆಯು ಹಿಮ್ಮೆಟ್ಟಿತು. ಆದರೂ ಆ ವಿಷಯದ ಹಂಬಲವು ಮಾತ್ರ ಪೂರ್ಣವಾಗಿ ನಾಶವಾಗಲಿಲ್ಲ. ಹೀಗಿರಲು, ನನ್ನ ಮಿತ್ರರೊಬ್ಬರು ಮಹಾರಾಷ್ಟ್ರ ಭಾಷೆಯಲ್ಲಿ ಶ್ರೀ ಚರಿತ್ರವನ್ನು ಬರೆಯಲು ಸಿದ್ಧರಾಗಿ ನನ್ನ ಸಹಾಯವನ್ನು ಅಪೇಕ್ಷಿಸಿದ್ದರಿಂದ, ಚರಿತ್ರವನ್ನು ಬರೆಯಬೇಕೆಂಬ ನನ್ನ ಮೊದಲಿನ ಆಶಾಂಕುರವು ಮತ್ತೆ ಚಿಗಿಯತೊಡಗಿತು. ಆಗ ನಾನು ಹೊಸಸಾಧನಗಳೇನಾದರೂ ದೊರೆಯುತ್ತವೆಯೋ ಹೇಗೆ ನೋಡಬೇಕೆಂದು ಪ್ರಯತ್ನ ಮಾಡಲು, ನನ್ನ ಹಾಗು ನಮ್ಮ ಕರ್ನಾಟಕಸ್ಥರ ಸುದೈವದಿಂದ ಬಡ್ಲಿಯಲ್ಲಿ ಒಂದು ಮಹತ್ವದ ಗ್ರಂಥವು ಉಪಲಬ್ಧವಾಯಿತು. ಅದರ ಹೆಸರು ಶ್ರೀಮಚ್ಚಿದಂಬರ ಚರಿತ್ರವೆಂದಿದ್ದು, ಅದನ್ನು ಅಪ್ಪಾನಾನಾ ಎಂಬವರು ಬರೆದಿರುವರು. ನಾನು ಅದನ್ನು ಬಹಳ ಪ್ರಯಾಸದಿಂದ ಸಂಪಾದಿಸಿ, ಆ ಮೂಲಾಗ್ರವಾಗಿ ಓದಿನೋಡಲು, ಅದು ಆ ಕಾಲಕ್ಕೆ ಉಪಲಬ್ಧವಾದ ಸಾಧನಗಳಲ್ಲಿ ಹೆಚ್ಚು ವಿಶ್ವಸನೀಯವಾಗಿ ತೋರಿದ್ದರಿಂದ ನಾನು ಈ ಕೆಲಸಕ್ಕೆ ಕೈ ಹಾಕಿದೆನು. ಮತ್ತು ಈ ಗ್ರಂಥವನ್ನು ಅನುಕೂಲವಾಗುವ ಮಟ್ಟಿಗೆ ಮುಖ್ಯಾಧಾರವಾಗಿಟ್ಟುಕೊಂಡು ಮಿಕ್ಕ ಉಪಲಬ್ಧವಿದ್ದ ಗ್ರಂಥಗಳೂ, ಆಖ್ಯಾಯಿಕೆಗಳೂ ಅದರ ಸಹಾಯಕ ಸಾಧನಗಳೆಂದು ತಿಳಿದುಕೊಂಡು ಶ್ರೀ ಸದ್ಗುರು ಚರಿತ್ರವನ್ನು ಬರೆಯಲುಪಕ್ರಮಿಸಿ ಒಂದು ವಿಶಿಷ್ಟಪದ್ಧತಿಯ ಸಂವಿಧಾನವನ್ನು ಲಕ್ಷಿಸಿ, ಅದನ್ನು ಸನ್ ೧೯೧೪ ನೇ ಇಸವಿಯಲ್ಲಿ ಬರೆದು ಮುಗಿಸಿದೆನು.

ಮುಂದೆ ಕೆಲವು ದಿವಸಗಳನಂತರ ಅಂದರೆ ಈಗ ನಾಲ್ಕಾರು ತಿಂಗಳಗಳ ಪೂರ್ವದಲ್ಲಿ ನನ್ನ ಮಿತ್ರರೂ, ಶ್ರೀಶೇಷಾಚಲ ಗುರುಗಳ ಶಿಷ್ಯರಲ್ಲಿ ಒಬ್ಬರೂ ಆದ ರಾ. ವಿಷ್ಣುಪಂತ ಕೋಹಳ್ಳಿ ಎಂಬವರು ಸಂಚಾರಕ್ಕೆ ಬಂದ ಸಮಯದಲ್ಲಿ ಶ್ರೀ ಚಿದಂಬರ ದೀಕ್ಷಿತರ ಚರಿತ್ರದ ವಿಷಯವಾಗಿ ಪ್ರಸ್ತಾಪ ಹೊರಟು, ಅವರು ನಾನು ಬರೆದ ಶ್ರೀ ಚಿದಂಬರ ವಿಜಯವನ್ನು ಮುದ್ರಿಸಲು, ಪ್ರಯತ್ನಿಸುತ್ತೇವೆಂದು ಆಶ್ವಾಸನವನ್ನು ಕೊಟ್ಟರು ಒಮ್ಮೆ ಅನುಕೂಲಕಾಲವು ಒದಗಿತೆಂದರೆ ಎಲ್ಲವೂ ಕೂಡಿಬರುತ್ತದೆಂಬದು ಸುಳ್ಳಲ್ಲ. ಮುಂದೆ ನಾನು ಶ್ರೀ ಶೇಷಾಚಲ ಗುರುಗಳ ಜಯಂತ್ಯುತ್ಸವಕ್ಕೆ ಅಗಡಿಗೆ ಹೋದಾಗ ಅಲ್ಲಿಯ ಭಕ್ತರು ರಾ. ಕೋಹಳ್ಳಿಯವರು ಕೊಟ್ಟ ಆಶ್ವಾಸನಕ್ಕೆ ಉತ್ತೇಜನವನ್ನು ಕೊಟ್ಟರು. ರಾ. ರಾ. ಕಾಳೆ ಎಂಬ ಭಕ್ತರಂತೂ ಈ ವಿಷಯದಲ್ಲಿ ಬಹಳ ಆಸ್ಥೆಯನ್ನು ತೋರಿಸಿ, ನಾನು ಬರೆದ ಗ್ರಂಥವನ್ನು ಆಮೂಲಾಗ್ರವಾಗಿ ಓದಿ ಎಷ್ಟೋ ಯೋಗ್ಯವಾದ ತಿದ್ದುಪಡೆಗಳನ್ನು ಮಾಡಿ, ಶ್ರೀ ಚಿದಂಬರ ದೀಕ್ಷಿತರ ಭಾವಚಿತ್ರವನ್ನು ಪರಮಪ್ರಯಾಸದಿಂದ ಸಂಪಾದಿಸಿ, ಶ್ರೀ ಚಿದಂಬರ ವಿಜಯವನ್ನು ಬೈಲಿಗೆ ತಂದರು. ಹೀಗೆ ಬಹಳ ದಿವಸಗಳವರೆಗೆ ಮೂಲೆಗುಂಪಾಗಿ ಬಿದ್ದ ನನ್ನ ಶ್ರಮವು ಶ್ರೀ ಶೇಷಾಚಲ ಗುರುಗಳ ಅನುಗ್ರಹದಿಂದ ಬೈಲಿಗೆ ಬಂದದ್ದರಿಂದ ನಾನು ಅವರನ್ನು ಅನನ್ಯಭಾವದಿಂದ ಸಂಪ್ರಾರ್ಥಿಸಿ, ಅಲ್ಪಸೇವೆಯೆಂದು ಈ ಪುಸ್ತಕದ ಎಲ್ಲ ಹಕ್ಕನ್ನು ಶ್ರೀ ಗುರುಸ್ಥಾನಕ್ಕೆ ಅರ್ಪಿಸಿ, ಈ ನಿವೇದನವನ್ನು ಮುಗಿಸುತ್ತೇನೆ.

| | |
|---|---|
| ಮಿತಿ ಭಾದ್ರಪದ ಶು॥ ೪<br>ಶಕೆ ೧೮೪೧ | ಶ್ರೀ ಚಿದಂಬರ ಕಿಂಕರ,<br>ಕ. ಗ. ವಿಜಾಪೂರ. |

# ಅರ್ಪಣ ಪತ್ರ.

ಕರ್ಣಾಟಕದಲ್ಲೆಲ್ಲ ತಮ್ಮ ಸತ್ಪ್ರಭಾವದಿಂದ ಪ್ರಸಿದ್ಧರಾಗಿದ್ದ
ಆನಂದವನ-ಅಗಡಿಯ ಪರಮಪೂಜ್ಯರಾದ
ಶ್ರೀ ಶೇಷಾಚಲ ಸಾಧುಗಳವರ



ಪಾದಾರವಿಂದಗಳಿಗೆ
ಈ ಗ್ರಂಥವು ಲೇಖಕನಿಂದ ಭಾವನಾಪೂರ್ವಕ
ವಾಗಿ, ಅರ್ಪಿಸಲ್ಪಟ್ಟಿದೆ

ಗ್ರಂಥಕರ್ತೃ.

# ಮೊದಲನೆಯ ಆವೃತ್ತಿಯ ಪ್ರಸ್ತಾವನೆಯು.

ಜೀವನ ಚರಿತ್ರೆಗಳು ಐತಿಹಾಸಿಕ ದೃಷ್ಟಿಯಿಂದ ಬರೆಯಲ್ಪಟ್ಟರೆ ಅವುಗಳ ಮಹತ್ವವು ಹಲವು ಬಗೆಗಳಿಂದ ಹೆಚ್ಚುವದಲ್ಲದೆ, ರಾಷ್ಟ್ರಪ್ರಗತಿಗೂ ಕಾರಣೀಭೂತವಾಗುವದು ಪ್ರಸ್ತುತ ವಿಜಯವು ಬಹು ಮಟ್ಟಿಗೆ ಐತಿಹಾಸಿಕ ದೃಷ್ಟಿಯಿಂದ ಬರೆಯಲ್ಪಟ್ಟಿರುವದೆಂದು ಹೇಳಲು, ಯಾವ ಅಭ್ಯಂತರವೂ ಇಲ್ಲ. ಮಹಾಸ್ವಾಮಿಯು ಬರಿಯ ಧಾರ್ಮಿಕ ಗುರುವಾಗಿರದೆ, ರಾಜಕೀಯ ಗುರುವೂ ಆಗಿದ್ದನು. ಬಾಪೂಗೋಖಲೆ, ಪಟವರ್ಧನ, ರಾಸ್ತೇ ಮೊದಲಾದ ರಾಜಕೀಯ ಪುರುಷರಿಗೂ ಮಹಾಸ್ವಾಮಿಗೂ ಅತಿಶಯ ನಿಕಟ ಸಂಬಂಧವಿತ್ತು. ಆ ಸಂಬಂಧದ ಹಲವು ಐತಿಹಾಸಿಕ ಕಾಗದ-ಪತ್ರಗಳು ಉಪಲಬ್ಧವಿರುವವು. ಬಾಪೂಗೋಖಲೆಯು ಮಹಾಸ್ವಾಮಿಯ ಅಪ್ಪಣೆಯಿಲ್ಲದೆ ಯಾವ ಕೆಲಸವನ್ನೂ ಮಾಡುತ್ತಿದ್ದಿಲ್ಲ. ಇವೆಲ್ಲ ಸಂಗತಿಗಳಿಂದ ಈ ಚಿದಂಬರ ವಿಜಯವು ಆ ಕಾಲದ ಇತಿಹಾಸವನ್ನೇ ಬೈಲಿಗಿಟ್ಟಿರುತ್ತದೆಂದು ಹೇಳಲಾಗುವದು.

ಮೇಲೆ ಹೇಳಿದಂತೆ ಐತಿಹಾಸಿಕ ದೃಷ್ಟಿಯಿಂದಲ್ಲದೆ ಧಾರ್ಮಿಕದೃಷ್ಟಿಯಿಂದಲೂ ಈ ಪುಸ್ತಕವು ಬರೆಯಲ್ಪಟ್ಟಿರುವದರಿಂದ, ಇದರಿಂದ ಐತಿಹಾಸಿಕ ಜಿಜ್ಞಾಸುಗಳಿಗಿಂತ ಧಾರ್ಮಿಕ ಜಿಜ್ಞಾಸುಗಳ ಮನಸ್ಸು ಹೆಚ್ಚು ತೃಪ್ತವಾಗುವದೆಂದು ನಮ್ಮ ತಿಳುವಳಿಕೆಯಾಗಿರುತ್ತದೆ. ಪುತ್ರನು ತಾಯಿ-ತಂದೆಗಳ ಕೂಡ ನಡೆಯಬೇಕಾದ ಸೂಕ್ಷ್ಮ ಧರ್ಮಗಳನ್ನು ಮಹಾಸ್ವಾಮಿಯು ತನ್ನ ಆಚರಣೆಯಿಂದ ತೋರಿಸಿಕೊಟ್ಟಿರುವನು. ಗೃಹಸ್ಥ ಧರ್ಮದ ರಹಸ್ಯವೂ ಸ್ವಾಮಿಯ ಆಚರಣೆಯಲ್ಲಿ ವ್ಯಕ್ತವಾಗಿರುವದು ಒಟ್ಟಿಗೆ ಮಹಾಸ್ವಾಮಿಯು ಕಲಿಯುಗದಲ್ಲಿ ಹ್ರಾಸವಾಗುತ್ತಿರುವ ಧರ್ಮವನ್ನು ಸರಿಪಡಿಸಬೇಕಾದ್ದರಿಂದ ಅದಕ್ಕೆ ತಕ್ಕಂತೆ ಲೀಲೆಗಳನ್ನು ಪ್ರಕಟಿಸಬೇಕಾಯಿತು. ಜನರಲ್ಲಿ ಧರ್ಮಲಂಘನವು ಹುಟ್ಟಬಾರದೆಂದು ಆ ಮಹಾತ್ಮನು ಸಾವಿರಾರು ಅಮಾನುಷ ಕಾರ್ಯಗಳನ್ನು ಮಾಡಿ ತೋರಿಸಿ ಒಂದೊಂದು ಬಗೆಯಿಂದ ಜನರ ಕಲ್ಯಾಣವನ್ನು ಮಾಡಿದನು. ಆತನಿಂದ ಕಲ್ಯಾಣಹೊಂದಿದ ನಮ್ಮ ಕರ್ನಾಟಕದೊಳಗಿನ, ಮಹಾರಾಷ್ಟ್ರದೊಳಗಿನ ಎಷ್ಟೋ ಕುಟುಂಬಗಳು ಈಗ್ಯೂ ಆ ಮಹಾಮಹಿಮನ ಅಗಾಧ ಸಾಮರ್ಥ್ಯದಲ್ಲಿ ನಂಬಿಗೆಯನ್ನಿಟ್ಟು ಭಜಿಸುತ್ತಿರುವವು. ಅಮಾನುಷ ಕೃತ್ಯಗಳು ಗೌಣವೆಂದು ಕೆಲಕೆಲವು ಜನರು ತಿಳಿಯುತ್ತಿದ್ದರೂ ಜನರಲ್ಲಿ ಸದಾಚಾರ, ಆಸ್ತಿಕ್ಯಬುದ್ಧಿಗಳು ನೆಲೆಗೊಳ್ಳಬೇಕಾದರೆ ಇದರಂಥ ಸರ್ವೋತ್ಕೃಷ್ಟ ಸಾಧ

ನವು ಬೇರೊಂದಿಲ್ಲವೆಂದು ಹೇಳಬಹುದು. ಅಂತೆಯೇ ವಿಭೂತಿಪುರುಷರೆಲ್ಲರು ತಮ್ಮ ಗುರುತ್ವವನ್ನು* ಮೊದಲು ತೋರಿಸಿ, ಸದಾಚಾರವನ್ನು ಬೋಧಿಸುತ್ತ ಬಂದಿರುವರು.

ಒಟ್ಟಿಗೆ ಯಾವ ಕಾಲದಲ್ಲಾದರೂ ಜನರಿಗೆ ಪ್ರತ್ಯಕ್ಷ ಫಲವು ಬೇಕಾದ್ದರಿಂದ ಅದಕ್ಕೆ ತಕ್ಕಂತೆ ಪ್ರಾಚೀನ ಋಷಿಗಳೂ, ಅರ್ವಾಚೀನ ಸತ್ಪುರುಷರೂ ನಡೆಯುತ್ತ ಬಂದಿರುವರು ಇಂಥ ಪುರಾಣವನ್ನು ಓದಿದರೆ ಇಂಥ ಫಲವು ದೊರೆಯುವದು; ಇಂಥ ವ್ರತಮಾಡಿದರೆ ಇಂಥ ಫಲವು ಪ್ರಾಪ್ತವಾಗುವದು, ಎಂಬ ಫಲಶ್ರುತಿಗಳು ಪ್ರತಿಯೊಂದು ಪುರಾಣದಲ್ಲಿಯೂ, ಕಥೆಯಲ್ಲಿಯೂ ಕಂಡುಬರುವವು. ಇದರ ತಾತ್ಪರ್ಯವಿಷ್ಟೇ; ಜನರಿಗೆ ಪ್ರಾಪಂಚಿಕಸೌಖ್ಯದ ನಾದಹಚ್ಚಿ ಅವರನ್ನು ಸದ್ಧರ್ಮದಲ್ಲಿ ತೊಡಗಿಸುವದು. ಅದರಂತೆ ಸತ್ಪುರುಷರ ಚರಿತ್ರೆಗಳಾದರೂ ಫಲದಾಯಕಗಳಿದ್ದದರಿಂದ ಭಾವಿಕರು ಇವನ್ನು ಭಕ್ತಿಯಿಂದ ಪಠಣಮಾಡಬೇಕು. ಅಂದರೆ ಕೇವಲ ಜಗತ್ಕಲ್ಯಾಣಕ್ಕಾಗಿಯೇ ಅವತರಿಸಿರುವ ಸತ್ಪುರುಷರು ತಮ್ಮ ಗುಣಗಳ ಅನುಸರಣಮಾಡುವ ಜನರ ಕಲ್ಯಾಣವನ್ನು ಮಾಡದೆ ಇರಲಾರರು! ಈ ಚಿದಂಬರ ವಿಜಯ ಪುಸ್ತಕದಲ್ಲಿ ಬರೇ ಚಮತ್ಕಾರಾತ್ಮಕ ವಿಷಯಗಳಿರದೆ, ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು ಒಂದು ಅವತಾರದಲ್ಲಿ ಧರ್ಮವಿಜಯ ಮಾಡಿತೋರಿಸಿದ ಕಥೆಯಿದ್ದದರಿಂದ ಇದನ್ನು ಓದಿದ ಭಾವಿಕರ ಕಲ್ಯಾಣವು (ವಿಜಯವು) ಆಗದೆ ಇರದು. ಆದ್ದರಿಂದಲೇ ಇದಕ್ಕೆ ಶ್ರೀ ಚಿದಂಬರ ವಿಜಯವೆಂಬ ಹೆಸರನ್ನು ಇಟ್ಟಿದೆ.

| | |
|---|---|
| ಶ್ರೀ ಕ್ಷೇತ್ರ ಆನಂದವನ, | ಸಜ್ಜನ ವಿಧೇಯ,<br>ರಾ. ತ್ರ್ಯ. ಕರ್ಪೂರ, |

## ೨ನೆಯ ಆವೃತ್ತಿಯು.

ಮೊದಲನೆಯ ಆವೃತ್ತಿಯ ಪ್ರತಿಗಳು ಲೋಕಪ್ರಿಯವಾಗಿ ಹಾಹಾ ಅನ್ನುವಷ್ಟರಲ್ಲಿ ತೀರಿದವು. ಎಷ್ಟೋ ಜನರು ಈ ಪುಸ್ತಕ ಪಾರಾಯಣದಿಂದ ವಾಂಛಿತಫಲಗಳನ್ನು ಪಡೆದ ಬಗ್ಗೆ ಪತ್ರ ಸಹ ಬರೆದಿರುವರು. ಸರ್ವೇಶ್ವರನಾದ ಶ್ರೀ ಚಿದಂಬರನು ಸರ್ವರಿಗೂ ಮಂಗಳವನ್ನೀಯಲಿ. ಶ್ರೀ ಚಿದಂಬರ ಭಕ್ತರು ಈ ಆವೃತ್ತಿಗೂ ಆಶ್ರಯ ಕೊಡುವರೆಂದು ನಂಬಿರುವೆವು.

| | |
|---|---|
| ಶ್ರೀ ಕ್ಷೇತ್ರ ಆನಂದವನ,<br>ತಾ॥೧೮-೧೦-೨೮ | ರಾ. ತ್ರ್ಯ. ಕರ್ಪೂರ, |

# ವಿಷಯಾನುಕ್ರಮಣಿಕೆ



## ನಾಲ್ಕನೆಯ ಭಾಗ ೧೨೩-೨೬೪



## ಐದನೆಯ ಭಾಗ ೨೬೫-೩೦೫

|| ಶ್ರೀ ||



ಶ್ರೀ ಚಿದಂಬರ ದೀಕ್ಷಿತರು [ಮಹಾಸ್ವಾಮಿ] ಮುರಗೋಡ.

*Shri Sheshachal Press, Anandvan.*

|| ಶ್ರೀ ಗುರು ಚಿದಂಬರ ಪ್ರಸನ್ನ || 

# ಶ್ರೀ ಚಿದಂಬರ ವಿಜಯ.

## ಮೊದಲನೆಯ ಭಾಗ.

### ಪೂರ್ವ ವೃತ್ತಾಂತ.

### ೧ನೆಯ ಪ್ರಕರಣ.

#### ಸದ್ಗುರು ಕೃಪೆ.

ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ ||
ಗುರುಃಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ || ೧ ||



ಪೇಶ್ವಾಯಿಯ ಆಳಿಕೆಯ ಕೊನೆಯ ಭಾಗದಲ್ಲಿ ದೈವತಂತ್ರದಿಂದಲೋ ಅಥವಾ ಕಾಲಮಹಿಮೆಯಿಂದಲೋ ಜನರಲ್ಲಿ ಸ್ವಾರ್ಥಪರಾಯಣತೆಯು ಹೆಚ್ಚಿತು; ಜೀವನ ಕಲಹವು ಬೆಳೆದು ಜನ ಸಮೂಹದಲ್ಲಿ ಅಸಂತೋಷ, ನಾಸ್ತಿಕವಾದ, ವೈದಿಕ ಧರ್ಮದಲ್ಲಿ ಅನಾಸ್ಥೆ ಮೊದಲಾದವುಗಳು ಸ್ಪಷ್ಟವಾಗಿ ಕಂಡುಬರಹತ್ತಿದವು; ಬಲಿಷ್ಠರು ನಿರ್ಬಲರನ್ನು ಸುಲಿಯುವ ಪುಂಡಾಟಿಕೆಯನ್ನೆಬ್ಬಿಸಿದರು; ಎಲ್ಲಿ ನೋಡಿದರೂ ಅಧರ್ಮ ಸಾಮ್ರಾಜ್ಯವೇ ನೆಲೆಗೊಂಡಿತು. ಇಂಥ ಪರಿಸ್ಥಿತಿಯಲ್ಲಿ ಭಗವಂತನು "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ | ಅಭ್ಯುತ್ಥಾನಮ ಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ||" ಎಂಬ ಗೀತೋಕ್ತಿಯಂತೆ ತಾನೇ 'ಶ್ರೀ ಚಿದಂಬರ ದೀಕ್ಷಿತರ' ರೂಪದಿಂದ ಅವತರಿಸಬೇಕಾಯಿತು. ಹೀಂಗೆ ಜಗತ್ಕಲ್ಯಾಣಾರ್ಥವಾಗಿ ಅವತರಿಸಿದ ಶ್ರೀ ಚಿದಂಬರ ಮಹಾಸ್ವಾಮಿಯ ಸಚ್ಚರಿತ್ರವನ್ನು ಯಥಾಮತಿಯಿಂದ ಬರೆಯಲುಪಕ್ರಮಿಸಿ, ಆ ಮಂಗಲ ರೂಪನನ್ನು ನಮಸ್ಕರಿಸುವೆನು.

ವಿಜಾಪುರ ಪ್ರಾಂತದಲ್ಲಿ * 'ಗೋಠೆ' ಎಂಬ ಗ್ರಾಮವಿದೆ. ಅಲ್ಲಿ ಈ ಚರಿತ್ರನಾಯಕರ ಮೂಲಪುರುಷರಾದ ವತ್ಸ ಗೋತ್ರದ ನಾಗೇಶಭಟ್ಟರೆಂಬ ಶುಕ್ಲ ಯಜುರ್ವೇದೀಯ ಬ್ರಾಹ್ಮಣರು ಜ್ಯೋತಿರ್ವಿದರಾಗಿ, ಅದರಿಂದಲೇ ತಮ್ಮ ಉಪಜೀವಿಕೆಯನ್ನು ಸಾಗಿಸುತ್ತಿದ್ದರು. ಇವರ ಶಾಖೆಯು ಕಣ್ವ; ಇವರು † ಹೋರಾ ಶಾಸ್ತ್ರದಲ್ಲಿ ಬಹು ಪ್ರವೀಣರಾಗಿದ್ದರು. ಇವರಿಗೆ ಗಂಗಾಬಾಯಿ ಎಂಬ ಸಾಧ್ವಿಯು ಧರ್ಮಪತ್ನಿಯಾಗಿದ್ದಳು. ನಾಗೇಶಭಟ್ಟರಿಗೆ ಶಂಕರನೆಂಬ ಒಬ್ಬನೇ ಮಗನಿದ್ದನು. ಈ ಶಂಕರಭಟ್ಟರು ವೈದಿಕವಿದ್ಯೆಯಲ್ಲಿ ಒಳ್ಳೇ ಹೆಸರಾಗಿದ್ದರು. ಇವರ ಪತ್ನಿಯ ಹೆಸರು ಪಾರ್ವತೀಬಾಯಿ. ಶಂಕರಭಟ್ಟರ ಪುತ್ರರಾದ ತ್ರ್ಯಂಬಕ (ತಿರುಮಲ) ಭಟ್ಟರು ತಮ್ಮ ಪಿತಾಮಹರಂತೆ, ಜ್ಯೋತಿಷ ಶಾಸ್ತ್ರದಲ್ಲಿ ಬಹು ಪ್ರವೀಣರಾಗಿದ್ದರು. ಇವರಿಗೆ ಸುಶೀಲೆಯೂ, ಪತಿವ್ರತೆಯೂ ಆದ ಕೃಷ್ಣಾಬಾಯಿ ಎಂಬ ಕುಟುಂಬದಿಂದ ನಾಲ್ಕು ಮಂದಿ ಗಂಡುಮಕ್ಕಳಾದರು. ಅವರಲ್ಲಿ ಜ್ಯೇಷ್ಠಪುತ್ರರಾದ ಮಾರ್ತಂಡ (ಮಲ್ಹಾರ) ಭಟ್ಟರೇ ಈ ಚರಿತ್ರನಾಯಕರ ಜನಕರು. ಇವರು ಶಾಲಿವಾಹನ ಶಕದ ೧೬೨೭ನೇ ವರ್ಷದಲ್ಲಿ ಅಂದರೆ, ಇಸ್ವಿ ಸನ್ ೧೭೦೫ರಲ್ಲಿ ಹುಟ್ಟಿದರು. ಇವರು ಶಿವಭಕ್ತರೂ, ಜಿತೇಂದ್ರಿಯರೂ, ಪಿತೃಸೇವಾ ತತ್ಪರರೂ ಆಗಿದ್ದರು. ಇವರ ಮೊದಲನೆಯ ಮದುವೆಯು ಇವರ ವಯಸ್ಸಿನ ಹದಿನಾರನೆಯ ವರ್ಷದಲ್ಲಾಯಿತು. ಇವರಿಗೆ ದ್ರವ್ಯದ ಮೇಲೆ ಎಷ್ಟು ಮಾತ್ರವೂ ಆಶೆಯಿದ್ದಿಲ್ಲ ಇವರಲ್ಲಿ ಹುಟ್ಟಿದಾರಭ್ಯ ವೈರಾಗ್ಯ ವೃತ್ತಿಯು ಬಹು ಜಾಜ್ವಲ್ಯವಾಗಿದ್ದದರಿಂದ, ಇವರಿಗೂ ಕುಟುಂಬದವರಿಗೂ ಕೂಡಿ ನಡೆಯುತ್ತಿದ್ದಿಲ್ಲ. ಆದುದರಿಂದ ಇವರ ಮಡಿ-ಮೈಲಿಗೆ ನಿತ್ಯಾಹ್ನಿಕಗಳು ಸರಿಯಾಗಿ ಸಾಗದಂತಾದವು. ತಂದೆಯ ಪಶ್ಚಾತ್ ಸಂಸಾರದ ಭಾರವಾದರೂ ಇವರ ಮೈಮೇಲೆಯೇ ಬಿತ್ತು. ಇದಲ್ಲದೆ ಜ್ಯೋತಿರ್ವೃತ್ತಿಗೆ ಅನುಗುಣವಾದ ದುರ್ದಾನ ಗ್ರಹಣ, ದುಷ್ಟಾನ್ನ ಭೋಜನ ಮುಂತಾದ ಎಷ್ಟೋ ಸಂಕಟಗಳು ಮೇಲಿಂದ ಮೇಲೆ ಇವರಿಗೆ ಒಂದು ಒದಗಿದವು ಇವೆಲ್ಲ ಕಾರಣಗಳಿಂದ ಮಾರ್ತಂಡಭಟ್ಟರಿಗೆ ವಿಶೇಷವಾಗಿ ಅನುತಾಪವೂ, ಉಪರತಿಯೂ ಉಂಟಾದ್ದರಿಂದ, ಅವರು ಮನೆ-ಮಾರುಗಳನ್ನು ತೊರೆದು, ತೀರ್ಥಯಾತ್ರೆಗಳಿಗೆ ಹೋಗಬೇಕೆಂದು ನಿಶ್ಚಯಿಸಿದರು.

ಇದೇ ಸಂಧಿಯಲ್ಲಿ ಒಂದು ದಿವಸ ಒಬ್ಬ ರೈತನು ತನ್ನ ಜೋಳದ ಹಗ

* ಗೋಠೆ — ಗೋಠಾನ (ಗೋಷ್ಠ) † ಹೋರಾಶಾಸ್ತ್ರ — ಜ್ಯೋತಿಃಶಾಸ್ತ್ರದ ಒಂದು ಭಾಗ

ಯನ್ನು ತೆಗೆಯಬೇಕೆಂದು ಯೋಚಿಸಿ, ಮುಹೂರ್ತವನ್ನು ಕೇಳುವದಕ್ಕೋಸ್ಕರ ಮಾರ್ತಂಡಭಟ್ಟರ ಮನೆಗೆ ಬಂದನು. ಆಗ ಅವರು ರೈತನನ್ನು ಕುರಿತು—ಈ ಹೊತ್ತು ದಿನಶುದ್ಧಿಯು ಉತ್ತಮವಾಗಿದೆ. ಇನ್ನು ಸ್ವಲ್ಪ ಕಾಲದಲ್ಲಿಯೇ ಹಗೆಯನ್ನು ತೆಗೆಯಬೇಕು, ಎಂದು ಹೇಳಿ ತಾವು ತಮ್ಮ ಪಂಚಾಂಗವನ್ನೂ, ಹಸಿಬೆಯನ್ನೂ ತಕ್ಕೊಂಡು, ತಮ್ಮ ಹಿರಿಯರ ಪದ್ಧತಿಯನ್ನನುಸರಿಸಿ, ಜೋಳವನ್ನು ತರುವದಕ್ಕಾಗಿ ರೈತನ ಮನೆಗೆ ಹೋದರು. ರೈತನು ಕೂಡಲೆ ಹಗೆಯ ಬಾಯಿಯನ್ನು ತೆಗೆದು ಅದರ ಮೇಲ್ಭಾಗದಲ್ಲಿದ್ದ ಕೆಟ್ಟಂಥ ಕೆಲವು ಕಾಳನ್ನು ಒತ್ತಟ್ಟಿಗೆ ತೆಗೆದಿಟ್ಟು, ಚಲೋ ಜೋಳವನ್ನು ಒಂದು ಬುಟ್ಟಿಯಲ್ಲಿ ತುಂಬಿ, ಮಾರ್ತಂಡಭಟ್ಟರ ಹಸಿಬೆಯಲ್ಲಿ ಸುರುವಹತ್ತಿದನು. ಜೋಳವು ಹಸಿಬೆಯಲ್ಲಿ ಬೀಳುತ್ತಿರಲು, ಕರ್ಮ-ಧರ್ಮ ಸಂಯೋಗದಿಂದ ಅದರಲ್ಲಿದ್ದ ಒಂದು ರೊಟ್ಟಿಯ ತುಣುಕು ಅಕಸ್ಮಾತ್ತಾಗಿ ಮಾರ್ತಂಡಭಟ್ಟರ ಕಣ್ಣಿಗೆ ಬಿತ್ತು! ಆಗ ಅವರು ಮನಸಿನಲ್ಲಿ:—ಈ ಧಾನ್ಯವನ್ನು ಮನೆಗೆ ಒಯ್ದರೆ, ಮನೆಯೊಳಗಿನ ಜನರು ಇವನ್ನು ಉಪಯೋಗಿಸುವರು. ಇದರಿಂದ ಅಧರ್ಮಾಚರಣೆಯ ದೋಷವು ನಮಗೆ ತಟ್ಟುವದು. ಒಂದುವೇಳೆ ಧಾನ್ಯವನ್ನು ಬಿಟ್ಟು, ಬರಿಗೈಯಿಂದ ಹೋದರೆ, ಮನೆಯವರಿಗೂ ನಮಗೂ ಕಲಹವಾಗುವದು ನಿಶ್ಚಯವು! ಇನ್ನು ಏನು ಮಾಡಬೇಕು? ಎಂದು ಯೋಚಿಸುತ್ತ ಮುಂದುಗಾಣದೆ ಚಿಂತಾಕ್ರಾಂತರಾಗಿ, ನೀಚವಾದ ಜ್ಯೋತಿಷವೃತ್ತಿಯನ್ನೂ ಅಸಾರವಾದ ಸಂಸಾರವನ್ನೂ ಧಿಕ್ಕರಿಸಿ, ಪಂಚಾಂಗವನ್ನೂ ಹಸಿಬೆಯನ್ನೂ ಅಲ್ಲೇ ಬಿಟ್ಟು, ಮನೆಗೆ ಸಹ ಹೋಗದೆ, ಅಲ್ಲಿಂದಲೇ ತಮ್ಮ ಕುಲಸ್ವಾಮಿಯ ವಾಸಸ್ಥಾನವಾದ ದೇವರಹಿಪ್ಪರಿಗಿಗೆ ಹೊರಟುಹೋದರು. ಅಲ್ಲಿ ಅವರು ಶ್ರೀ ಮಾರ್ತಂಡಭೈರವನನ್ನು ಒಳ್ಳೇ ಭಕ್ತಿಯಿಂದಲೂ, ಏಕಮನಸ್ಸಿನಿಂದಲೂ ಪೂಜಿಸಿ, ಅಲ್ಲಿಂದ ಶ್ರೀ ಪಾಂಡುರಂಗನ ವಾಸಸ್ಥಾನವೂ, ಪುಣ್ಯಭೂಮಿಯೂ, ಮುಕ್ತಿಯ ತವರುಮನೆಯೂ ಆದ ಪಂಢರಪುರ ಕ್ಷೇತ್ರಕ್ಕೆ ಹೋದರು

ಇತ್ತ ರೈತನು ಬಹಳಹೊತ್ತು ದಾರೀ ನೋಡಿ, ಜೋಯಿಸರು ಬಾರದ್ದರಿಂದ ಮನಸ್ಸಿನಲ್ಲಿ:—"ಒಂದೇ ಬುಟ್ಟಿ ಜೋಳವನ್ನು ಕೊಟ್ಟೆನು, ಇದರಿಂದ ಅವರು ಸಿಟ್ಟಾಗಿ ಹೋಗಿರಬಹುದು" ಎಂದು ಯೋಚಿಸಿ, ಮತ್ತೆ ಎರಡು ಬುಟ್ಟಿ ಜೋಳವನ್ನು ಅವರ ಹಸಿಬೆಯಲ್ಲಿ ಹಾಕಿ, ಹಸಿಬೆಯನ್ನೂ ಪಂಚಾಂಗದ ಗಂಟನ್ನೂ ಮಾರ್ತಂಡಭಟ್ಟರ ಮನೆಗೆ ಮುಟ್ಟಿಸಿ, ಆತನು ತನ್ನ ಮನೆಗೆ ಹೊರಟುಹೋದನು. ಮಾರ್ತಂಡಭಟ್ಟರ ಮನೆಯವರು ಮೊದಲೇ ಅವರ ವೈರಾಗ್ಯವೃತ್ತಿಗೂ ಛಾಂದಿ-

ಷ್ಟಸ್ವಭಾವಕ್ಕೂ ಬೇಸತ್ತಿದ್ದದರಿಂದ ಅವರು ಮಾರ್ತಾಂಡಭಟ್ಟರ ವಿಷಯವಾಗಿ ಯಾವ ವಿಚಾರವನ್ನೂ ಮಾಡದೆ, ಮೊದಲಿನಂತೆ ತಮ್ಮ ಜ್ಯೋತಿಷವೃತ್ತಿಯಲ್ಲಿ ಮಗ್ನರಾಗಿ ಸುಖದಿಂದ ಕಾಲಹರಣ ಮಾಡಹತ್ತಿದರು.

ಅತ್ತ ಮಾರ್ತಂಡಭಟ್ಟರು ಪಂಢರಪುರದಲ್ಲಿ ಭಕ್ತವತ್ಸಲನೂ ಕೃಪಾಸಮುದ್ರನೂ ಆದ ಪಾಂಡುರಂಗನ ಸೇವೆಯಲ್ಲಿ ಕೆಲವು ದಿವಸ ಇದ್ದು, ತರುವಾಯ ಭರತಖಂಡದ ಸಪ್ತಮುಕ್ತಿ ಪುರಿಗಳಲ್ಲಿ ಒಂದಾದ ಕಾಶೀಕ್ಷೇತ್ರಕ್ಕೆ ಹೋಗಬೇಕೆಂದು ಹೊರಟರು. ಮಾರ್ಗದಲ್ಲಿ ಅವರಿಗೆ ಅವರಂತೆಯೇ ಮನೆ-ಮಾರುಗಳನ್ನು ತೊರೆದು, ಕಾಶೀಯಾತ್ರೆಯನ್ನು ಮಾಡಬೇಕೆಂಬ ಇಚ್ಛೆಯಿಂದ ಹೊರಟ ಕೃಷ್ಣೇಂದ್ರಸ್ವಾಮಿ † ಮತ್ತು ಸಿದ್ಧೇಶ್ವರ ಮಹಾರಾಜ § ಎಂಬ ಇಬ್ಬರು ಸತ್ಪುರುಷರ ಭೆಟ್ಟಿಯಾಯಿತು. ಬಳಿಕ ಮಾರ್ತಂಡಭಟ್ಟರು ಆ ಈರ್ವರಿಂದೊಡಗೂಡಿ ಮಾರ್ಗಕ್ರಮಣ ಮಾಡುತ್ತ, ಕೆಲವು ದಿವಸಗಳಲ್ಲಿ ಕಾಶೀಕ್ಷೇತ್ರವನ್ನು ಸೇರಿದರು.

ಆ ಕಾಲಕ್ಕೆ ಕಾಶೀಕ್ಷೇತ್ರದಲ್ಲಿ ‘ಸ್ವಯಂಪ್ರಕಾಶ’ರೆಂಬ ಒಬ್ಬ ಬ್ರಹ್ಮನಿಷ್ಠರಾದ ಸಿದ್ಧಪುರುಷರು ಈಶ್ವರಾರಾಧನೆಯಲ್ಲಿ ಮಗ್ನರಾಗಿ ಕಾಲಹರಣ ಮಾಡುತ್ತಿದ್ದರು. ಅವರು ಸ್ಥಿರತ್ವದಲ್ಲಿ ಭೂಮಿಯಂತೆ, ಗಾಂಭೀರ್ಯದಲ್ಲಿ ರತ್ನಾಕರನಂತೆ, ತೇಜಸ್ಸಿನಲ್ಲಿ ಸೂರ್ಯನಂತೆ, ಶಾಂತತೆಯಲ್ಲಿ ಚಂದ್ರನಂತೆ ತೋರುತ್ತಿದ್ದರು. ಅವರು ಸ್ವಭಾವಸಿದ್ಧವಾಗಿ ಶಾಂತರಿದ್ದಾಗ್ಯೂ ತಪಶ್ಚರ್ಯದ ಪ್ರಭಾವದಿಂದ ನೋಡುವವರಿಗೆ ಪ್ರತ್ಯಕ್ಷ ದಿನಮಣಿಯಂತೆ ತೋರುತ್ತಿದ್ದರು ಅವರು ದಿನಾಲು ಒಂದು ಕಾಲನ್ನೂ ಕೈಯನ್ನೂ ಉರಿಯುವ ಅಗ್ಗಿಷ್ಟಿಗೆಯಲ್ಲಿಟ್ಟು ಯೋಗಾಭ್ಯಾಸವನ್ನು ಮಾಡುತ್ತಿದ್ದರು; ಅಂದಬಳಿಕ ಇಂತಹ ತಪಸ್ವಿಯ ಮಹಿಮೆಯನ್ನು ಬಣ್ಣಿಸುವದು ಸಾಧ್ಯವಾಗಬಹುದೇ?

ಮೇಲೆ ಹೇಳಿದಂತೆ ಮಾರ್ತಂಡಭಟ್ಟರು ಈರ್ವರು ಸ್ನೇಹಿತರಿಂದೊಡಗೂಡಿ ಕಾಶೀಕ್ಷೇತ್ರಕ್ಕೆ ತಲಪಿದ ಬಳಿಕ ಆ ಮೂವರು ದಿನಾಲು ಉಷಃಕಾಲದಲ್ಲೆದ್ದು ಪಾಪೌಘವಿನಾಶಿನಿಯಾದ ಭಾಗೀರಥಿಯಲ್ಲಿ ಸ್ನಾನಮಾಡಿ, ಸಂಧ್ಯಾವಂದನಾದಿ ಸ್ವಧರ್ಮೋಚಿತವಾದ ಕರ್ಮಗಳನ್ನಾಚರಿಸುತ್ತ ಶ್ರೀ ವಿಶ್ವೇಶ್ವರನ ಆರಾಧನೆಯನ್ನು ಮನಃಪೂರ್ವಕವಾಗಿ ಮಾಡುತ್ತಿದ್ದರು. ಆರಾಧನೆಯು ಮುಗಿದ ಕೂಡಲೆ ಅವರು ಊರೊಳಗೆ ಮಧುಕರಿಯನ್ನು ಬೇಡಿತಂದು, ತಮ್ಮ ಉದರನಿರ್ವಾಹವನ್ನು ಸಾಗಿ

† ಇವರ ಪೂರ್ವಾಶ್ರಮದ ಹೆಸರು ಗೊತ್ತಿಲ್ಲದ್ದರಿಂದ ಚತುರ್ಥಾಶ್ರಮದ ಹೆಸರನ್ನೇ ಉಪಯೋಗಿಸಿದೆ.

§ ಇವರು ಕೊಲ್ಹಾಪುರದ ಗುರುಮಹಾರಾಜರ ಪೂರ್ವಜರಲ್ಲೊಬ್ಬರು.

ಸುತ್ತಿದ್ದರು. ಭೋಜನವಾದ ಬಳಿಕ ಆ ಮೂವರೂ ಕೂಡಿ ಮುಮುಕ್ಷುಗಳಿಗೆ ಯೋಗ್ಯವಾದ ಗ್ರಂಥಗಳನ್ನೋದಿ, ಕೈಲಾದಮಟ್ಟಿಗೆ ಪರಮಾರ್ಥಜ್ಞಾನದ ಚರ್ಚೆಯನ್ನು ಮಾಡುತ್ತಿದ್ದರು. ಇದರಂತೆ ಅವರು ಕೆಲವು ದಿವಸ ಶ್ರದ್ಧೆಯಿಂದಲೂ, ಒಮ್ಮನಸಿನಿಂದಲೂ ಶ್ರೀ ವಿಶ್ವೇಶ್ವರನ ಸೇವೆಯನ್ನು ಮಾಡಿದ್ದರಿಂದ ಆ ಮೂವರ ಅಂತಃಕರಣಗಳೂ ನಿರ್ಮಲವಾದವು. ಅವರು ಶಿವೋಪಾಸನೆಯಿಂದ ಈಶ ಕೃಪೆಗೆ ಪಾತ್ರರಾಗಿದ್ದರು. ಅಂದಬಳಿಕ ಅಂಥಹ ಮುಮುಕ್ಷುಗಳಿಗೆ ಸದ್ಗುರು ದೊರೆಯುವದೇನಾಶ್ಚರ್ಯವು?

ಒಂದು ದಿವಸ ಮಾರ್ತಂಡಭಟ್ಟ, ಕೃಷ್ಣೇಂದ್ರಸ್ವಾಮಿ, ಸಿದ್ಧೇಶ್ವರ ಮಹಾರಾಜ ಹೀಗೆ ಈ ಮೂವರು ನಿತ್ಯದಂತೆ ಮಣಿಕರ್ಣಿಕಾ ಘಟ್ಟದ ಮೇಲೆ ಸ್ನಾನಕ್ಕಾಗಿ ಹೋದ ಸಮಯದಲ್ಲಿ ಅಕಸ್ಮಾತ್ತಾಗಿ ಅವರಿಗೆ ಮೇಲೆ ಹೇಳಿದ ಸ್ವಯಂಪ್ರಕಾಶಸ್ವಾಮಿಗಳ ದರ್ಶನವಾಯಿತು. ಆಗ ಚಂದ್ರನನ್ನು ನೋಡಿ ರತ್ನಾಕರನಿಗೆ, ಜಲವನ್ನು ನೋಡಿ ತೃಷಾರ್ತನಿಗೆ, ಪಂಚಪಕ್ವಾನ್ನಗಳನ್ನು ನೋಡಿ ಕ್ಷುಧಿತನಿಗೆ ಆನಂದವಾಗುವಂತೆ ಆ ಮೂವರಿಗೆ ಸ್ವಾಮಿಗಳ ದರ್ಶನದಿಂದ ಆನಂದವಾಯಿತಲ್ಲದೆ, ಅವರಲ್ಲಿ ಪೂಜ್ಯಬುದ್ಧಿಯೂ ಜನಿಸಿತು! ಕೂಡಲೆ ಆ ಮೂವರು ಸ್ವಾಮಿಗಳ ಚರಣಕಮಲಗಳಿಗೆ ಭಕ್ತಿಯಿಂದ ಎರಗಿದರು. ಆಗ ತ್ರಿಕಾಲಜ್ಞರಾದ ಸ್ವಯಂಪ್ರಕಾಶಸ್ವಾಮಿಗಳು ಆ ಮೂವರ ಮನೋಭಾವಗಳನ್ನರಿತು, ಅವರನ್ನು ತಮ್ಮ ಕೃಪಾದೃಷ್ಟಿಯಿಂದ ಅವಲೋಕಿಸಿದರು. ಬಳಿಕ ಆ ಮೂವರು ಸ್ವಾಮಿಗಳ ಪುಣ್ಯಾಶ್ರಮಕ್ಕೆ ಹೋಗಿ, ಅವರ ಶಿಷ್ಯತ್ವವನ್ನು ಸ್ವೀಕರಿಸಿ, ಏಕನಿಷ್ಠೆಯಿಂದ ಅವರ ಸೇವೆಯನ್ನು ಮಾಡಲಾರಂಭಿಸಿದರು

ತಪೋಧನರಾದ ಸ್ವಯಂಪ್ರಕಾಶ ಸ್ವಾಮಿಗಳ ಬಳಿಯಲ್ಲಿ ನಾಲ್ಕುಸಾವಿರ ಶಿಷ್ಯಸಮುದಾಯವಿತ್ತು. ವಾಚಕರೇ, ಈ ಶಿಷ್ಯರು ಮೋಕ್ಷೇಚ್ಛೆಯಿಂದ ಗುರುಸೇವೆಯನ್ನು ಮಾಡಬೇಕೆಂದು, ಗುರುಸನ್ನಿಧಿಯಲ್ಲಿ ವಾಸಮಾಡಿದ್ದಿಲ್ಲ! ಕೇವಲ "ಉದರ ನಿಮಿತ್ತಂ ಬಹು ಕೃತ ವೇಷಮ್" ಎಂಬ ನಾಣ್ಣುಡಿಗೆ ಸರಿಯಾಗಿ, ಹೊಟ್ಟೆ ಹೊರಕೊಳ್ಳುವ ಮಟ್ಟಿಗೆ ಮಾತ್ರ ಸತ್‌ಶಿಷ್ಯರ ಸೋಗುಹಾಕಿಕೊಂಡು ಸುಖದಿಂದ ಕಾಲಕಳೆಯುತ್ತಿದ್ದರೆಂಬ ಮಾತು ಮುಂದಿನ ವಿವರಣೆಯಿಂದ ಗೊತ್ತಾಗುವದು. ಈ ಬಳಿಯ ಶಿಷ್ಯಸಮುದಾಯಕ್ಕ ನಮ್ಮ ನೂತನ ಶಿಷ್ಯತ್ರಯವು ಮಾತ್ರ ಅಪವಾದವಾಗಿತ್ತು.

ಒಂದು ದಿವಸ ಸ್ವಯಂಪ್ರಕಾಶಸ್ವಾಮಿಗಳು, ತಮ್ಮ ಶಿಷ್ಯರ ಯೋಗ್ಯತೆ

ಯನ್ನು ಪರೀಕ್ಷಿಸಬೇಕೆಂದು ಆಲೋಚಿಸಿ, ಎಲ್ಲ ಶಿಷ್ಯರನ್ನೂ ಸಮೀಪಕ್ಕೆ ಕರೆದು:—“ಶಿಷ್ಯರಿರಾ, ನಿಮ್ಮ ಗುರುಭಕ್ತಿಯನ್ನು ನೋಡಿ, ಬಹು ಸಂತೋಷ ವಾಗುತ್ತದೆ! ನಮಗೆ ಪೂರ್ವಕರ್ಮಾನುಸಾರವಾಗಿ ಒಂದು ಬೇನೆಯು ಬರತಕ್ಕ ದ್ದಿರುವದು! ಯೋಗಿಯು ಪರಮಹಂಸನಾದಾಗ್ಯೂ ದೇಹಭೋಗವನ್ನು ಅವಶ್ಯ ವಾಗಿ ಭೋಗಿಸಲೇ ಬೇಕಾಗುವದು! ಆದುದರಿಂದ ನಿಮ್ಮಂಥ ಸತ್‌ಶಿಷ್ಯರ ಯೋಗವಿದ್ದಾಗಲೇ ಅದನ್ನು ಭೋಗಿಸಿ ತೀರಿಸಬೇಕೆಂದು ಯೋಚಿಸಿದ್ದೇವೆ; ಆದ್ದರಿಂದ ರೋಗಗ್ರಸ್ತರಾದಾಗ ನಮ್ಮ ಸೇವೆಯನ್ನು ಮನಃಪೂರ್ವಕವಾಗಿ ಮಾಡುತ್ತೇವೆಂದು ನೀವು ಅಭಿವಚನವಿತ್ತಲ್ಲಿ, ನಾವು ಅದನ್ನು ಈಗಲೇ ಬರಮಾಡಿ ಕೊಳ್ಳುವೆವು.” ಎಂದು ನುಡಿಯಲು, ಹಳೆಯ ಶಿಷ್ಯರು ಮನಸ್ಸಿನಲ್ಲಿ:—“ಇಂತಹ ಮಹನ್ ತಪಸ್ವಿಗಳಿಗೆ ವ್ಯಾಧಿಯುಂಟಾಗುವದೆಂದರೆ ಅಸಂಭವವು! ಸುಮ್ಮನೆ ಏನೋ ನುಡಿಯುತ್ತಾರೆ, ಎಂದು ಆಲೋಚಿಸಿ, ಸ್ವಾಮಿಗಳನ್ನು ಕುರಿತು:—“ನಾವು ಸತ್‌ಶಿಷ್ಯರಾಗಿದ್ದರೆ, ತಮ್ಮ ಸೇವೆಯನ್ನು ಏಕನಿಷ್ಠೆಯಿಂದ ಮಾಡುವೆವು, ಅದಕ್ಕೆ ಇಷ್ಟು ಚಿಂತೆಯೇಕೆ?” ಎಂದು ಮೇಲುಪಚಾರದ ಮಾತು ಗಳನ್ನಾಡಿ, ಅವರ ಮಾತಿಗೆ ತಮ್ಮ ಸಮ್ಮತಿಯನ್ನಿತ್ತರು. ಸತ್ಪುರುಷರು ಭಗವ ದಂಶರಿರುತ್ತಾರಾದ್ದರಿಂದ ಅವರು ಬೇಕಾದ ವೇಳೆಯಲ್ಲಿ ಬೇಕಾದಂಥ ಸಂಗತಿ ಗಳನ್ನು ಮಾಡಲಿಕ್ಕೆ ಸಮರ್ಥರೆಂಬದನ್ನು ಸೂಜ್ಞವಾಚಕರಿಗೆ ಬೇರೆಯಾಗಿ ಹೇಳುವ ಕಾರಣವಿಲ್ಲ ಸ್ವಯಂಪ್ರಕಾಶಸ್ವಾಮಿಗಳು ಕೂಡಲೆ, ಶಿಷ್ಯಪರೀ ಕ್ಷಾರ್ಥವಾಗಿ ತಮ್ಮ ತಪಃಪ್ರಭಾವದಿಂದ ವ್ಯಾಧಿಗ್ರಸ್ತರಾದರು. ಸರ್ವಾಂಗದಲ್ಲಿ ವ್ರಣಗಳು ಒಡೆದು, ಅವುಗಳೊಳಗಿಂದ ಕೀವವು ಸೋರತೊಡಗಿತು. ಆಶ್ರಮದ ಲ್ಲೆಲ್ಲ ದುರ್ಗಂಧವಿಡಿಗಿತು ಬರಬರುತ್ತ ವ್ರಣಗಳಲ್ಲಿ ಕ್ರಿಮಿಗಳುಂಟಾಗಿ, ಸ್ವಾಮಿ ಗಳು ವ್ಯಾಧಿಯನ್ನು ಸಹಿಸದಂತಾದರು. ಆಗ ಅವರು ತಮ್ಮ ವ್ಯಾಧಿಗೆ ಏನಾ ದರೂ ಉಪಚಾರ ಮಾಡಿಸಬೇಕೆಂದು ಯೋಚಿಸಿ, ದುರ್ಗಾಘಟ್ಟದಲ್ಲಿ ರಾಜವೈದ್ಯ ನೆಂಬ ಹೆಸರಿನಿಂದ ಖ್ಯಾತನಾಗಿರುವ ಒಬ್ಬ ವೈದ್ಯನನ್ನು ಕರೆಸಿಕೊಂಡರು. ವೈದ್ಯರು ಸ್ವಾಮಿಗಳ ವ್ಯಾಧಿಯನ್ನು ಪರೀಕ್ಷಿಸಿ—ಇದು ನಿಮ್ಮ ಮನೋ ವ್ಯಾಪಾರದಿಂದ ಹುಟ್ಟಿದ ಬೇನೆಯೇ ಹೊರತು ಅಂಗರೋಗವೇನೂ ಅಲ್ಲ! ಎಂದು ಹೇಳಲು, ಸ್ವಾಮಿಗಳು ವೈದ್ಯರಿಗೆ ತಮ್ಮ ನಿಜಾಭಿಪ್ರಾಯವನ್ನು ಗುಪ್ತ ರೀತಿಯಿಂದ ಅರುಹಿದರು. ಆಗ ವೈದ್ಯರು ಸ್ವಾಮಿಗಳ ಅಭಿಪ್ರಾಯಕ್ಕೆ ಉಚಿತ ವಾದ ಉಪಚಾರವನ್ನು ಸೂಚಿಸಬೇಕೆಂದು ಯೋಚಿಸಿ, ಎಲ್ಲ ಶಿಷ್ಯವೃಂದವನ್ನು

ಸಮೀಪಕ್ಕೆ ಕರೆದು:—"ಶಿಷ್ಯರಿರಾ, ಇನ್ನು ಮೇಲೆ ನಿಮ್ಮ ಗುರುಗಳ ಬೇನೆಯು ದಿನದಿನಕ್ಕೆ ಹೆಚ್ಚಾಗುತ್ತ ಹೋಗುವದು. ಆದುದರಿಂದ ನೀವು ದಿನಾಲು ಈ ಗಾಯುಗಳನ್ನು ತಣ್ಣೀರನಿಂದ ತೊಳೆದು, ನಾಲಿಗೆಯಿಂದ ಒಳಗಿನ ಹುಳಗಳನ್ನು ತೆಗೆಯಬೇಕು ಈ ಬೇನೆಗೆ ಇಷ್ಟೇ ಉಪಚಾರವು ಸಾಕು; ಏಳು ಸಪ್ತಕಗಳ ವರೆಗೆ ಇದರಂತೆ ಮಾಡಿದರೆ, ಬೇನೆಯು ತಾನೇ ವಾಸಿಯಾಗುವದು" ಎಂದು ಹೇಳಿ, ಸ್ವಾಮಿಗಳ ಅಪ್ಪಣೆಯನ್ನು ತಕ್ಕೊಂಡು ಅವರು ತಮ್ಮ ಸ್ವಸ್ಥಾನಕ್ಕೆ ಹೊರಟು ಹೋದರು.

ವೈದ್ಯರು ಹೋದ ಬಳಿಕ ಶಿಷ್ಯರೆಲ್ಲರು ಒತ್ತಟ್ಟಿಗೆ ಕಲೆತು:—"ಗುರುಗಳ ಬೇನೆಯು ಸಾಂಸರ್ಗಿಕವಾಗಿದೆ; ಹಾಗು ವೈದ್ಯರಾದರೂ ಅಸಹ್ಯವಾದ ಉಪ ಚಾರವನ್ನರುಹಿದ್ದಾರೆ ಇಂಥ ಸೇವೆಯು ನಮ್ಮಿಂದಾಗದು; ಇನ್ನು ಮೇಲೆ ನಾವು ಇಲ್ಲಿಂದ ಪಲಾಯನ ಮಾಡುವದೇ ಯೋಗ್ಯವು," ಎಂದು ಗೊತ್ತುಮಾಡಿದರು; ಆದರೆ ಈ ವಿಚಾರವು ಮಾರ್ತಂಡಭಟ್ಟರಿಗೂ ಅವರ ಈರ್ವರು ಸ್ನೇಹಿತರಿಗೂ ಸರಿ ದೋರಲಿಲ್ಲ. ಹೀಗೆ ಮಾಡುವದು ಒಳಿತಲ್ಲವೆಂದು ಅವರು ಬಗೆಬಗೆಯಿಂದ ತಮ್ಮ ಸಾಧ್ಯಾಯಿಗಳಿಗೆ ಉಪದೇಶಿಸಿದರು. ಆದಾಗ್ಯೂ ಮಿಕ್ಕ ಶಿಷ್ಯರು ಇವರ ಮಾತನ್ನು ಲಕ್ಷಿಸದೆ, ತಾವು ಗೊತ್ತುಮಾಡಿದಂತೆಯೇ ಸ್ವಲ್ಪ ದಿವಸಗಳಲ್ಲಿ ದುರ್ಗಂಧಕ್ಕೂ ಹೇಸಿಗೆಗೂ ಬೇಸತ್ತು, ಗುರುಸನ್ನಿಧಿಯಿಂದ ಒಬ್ಬೊಬ್ಬರೇ ಹೋಗಹತ್ತಿದರು. ಈ ಸುದ್ದಿಯು ಸ್ವಾಮಿಗಳಿಗೆ ತಿಳಿಯಿತು; ಆದರೆ ಅವರು ಈ ವಿಷಯವಾಗಿ ಏನೂ ಮಾತಾಡಲಿಲ್ಲ ಯಾಕಂದರೆ, ಅವರು ಶಿಷ್ಯರನ್ನು ಪರೀ ಕ್ಷಿಸಬೇಕಾಗಿತ್ತು. ಕೆಲವು ದಿವಸಗಳಲ್ಲಿ ಎಲ್ಲ ಶಿಷ್ಯರೂ ಹೋಗಿ ಗುರುಸೇವಾ ತತ್ಪರರಾದ, ಮಾರ್ತಂಡಭಟ್ಟ, ಕೃಷ್ಣೇಂದ್ರಸ್ವಾಮಿ, ಸಿದ್ಧೇಶ್ವರ ಮಹಾರಾಜ ಈ ಮೂವರು ಮಾತ್ರ ಏತಕ್ಕೂ ಹೇಸದೆ, ವೈದ್ಯರ ಹೇಳಿಕೆಯಂತೆ ತ್ರಿಕರಣ ಪೂರ್ವಕವಾಗಿ ಸೇವೆಯನ್ನು ಮಾಡುತ್ತ ಉಳಿದರು; ಆಗ ಸ್ವಾಮಿಗಳ ಬೇನೆಯು ಕಡಿಮೆಯಾಗಹತ್ತಿ ಏಳು ಸಪ್ತಕಗಳಲ್ಲಿ ಪೂರ್ಣ ಗುಣವಾಯಿತು. ಮುಂದೆ ಅವರು ಒಂದು ದಿವಸ ಸುಪ್ರಸನ್ನರಾಗಿ, ಆ ಮೂವರ ತಲೆಯ ಮೇಲೆ ವರದಹಸ್ತ ವನ್ನಿಟ್ಟು:—ನೀವು ಕೀರ್ತಿಶಾಲಿಗಳಾಗಿರಿ! ಎಂದು ಅವರನ್ನು ಆಶೀರ್ವದಿಸಿದರು. ಆಗ ಆ ಶಿಷ್ಯತ್ರಯಕ್ಕಾದ ಆನಂದವನ್ನು ವರ್ಣಿಸುವದು ಸುಲಭವಲ್ಲ! ಸದ್ಗುರು ಗಳನುಗ್ರಹದಿಂದಾಗುವ ಆನಂದವು ಅನುಭವವುಳ್ಳವರಿಗೆ ಮಾತ್ರ ತಿಳಿಯುವದು. ಅನ್ಯರು ಅದನ್ನು ತಿಳಿಯಲಾರರು. ವಾಚಕರೇ. ಗುರುಕೃಪೆಯನ್ನು ಸಂಪಾ

ದಿಸಿದವರಿಗೆ ಯಾವ ಮಾತಿನ ಕೊರತೆಯುಂಟಾಗುವದು!

ಹೀಗೆ ಗುರುಕೃಪೆಯಿಂದ ತುಷ್ಟರಾದ ಆ ಶಿಷ್ಯರು ಗುರುಗಳ ಬಳಿಯಲ್ಲಿ ಶತಪಥಬ್ರಾಹ್ಮಣ, ಶ್ರುತಿ, ಸ್ಮೃತಿ, ವೇದ-ವೇದಾಂಗಗಳನ್ನೂ ಜ್ಯೋತಿಶ್ಶಾಸ್ತ್ರವನ್ನೂ ಕಲಿತು ವೇದಶಾಸ್ತ್ರಪಾರಂಗತರಾದರು. ಗುರುಗಳು ಅವರ ಯೋಗ್ಯತೆಯನ್ನರಿತು, ಅವರಿಗೆ ಚಿದಂಬರಮಹಾಮಂತ್ರ, ಕ್ಷಿಪ್ರಮಹಾಗಣಪತಿ, ನಕುಲೀ-ಸರಸ್ವತೀ, ಬಾಲಾತ್ರ್ಯಕ್ಷರೀ ಮತ್ತು ಷೋಡಶೀ-ಷೋಡಶೀ ಎಂಬ ಪಂಚ ಮಹಾ ಮಂತ್ರಗಳನ್ನು ಉಪದೇಶಿಸಿದರು. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಆ ಮೂವರಿಗೆ ಗುರುಗಳ ಪೂರ್ಣಕೃಪೆಯಿಂದ ಸ್ವಾತ್ಮಾನುಭವವುಂಟಾಯಿತು; ಆದರೂ ಅವರು ತಮ್ಮ ಕೆಲಸವಾಯಿತೆಂದು ತಿಳಿದು, ಗುರುಸನ್ನಿಧಿಯಿಂದ ಹೋಗಲಿಚ್ಛಿಸದೆ, ಮತ್ತೆ ಮೊದಲಿನಂತೆಯೇ ಇಪ್ಪತ್ತು ವರ್ಷಗಳವರೆಗೆ ಒಮ್ಮನಸ್ಸಿನಿಂದ ಗುರುಸೇವೆಯನ್ನು ಮಾಡಿದರು. ಆಗ ಸ್ವಾಮಿಗಳು ಅವರ ಅನನ್ಯಭಾವವನ್ನರಿತು—: ನಾನು ನಿಮ್ಮ ಸೇವೆಯಿಂದ ತುಷ್ಟನಾಗಿದ್ದೇನೆ ನಿಮ್ಮ ನಿಮ್ಮ ಇಚ್ಛಿತ ವರಗಳನ್ನು ಬೇಡಿಕೊಳ್ಳಿರಿ; ಎಂದು ನುಡಿಯಲು, ಮಾರ್ತಂಡಭಟ್ಟರು ಮೊದಲು ಸಾಷ್ಟಾಂಗವೆರಗಿ:—ಗುರುಗಳೇ, ತಾವು ಪ್ರಸನ್ನರಾಗಿರುತ್ತಿರಲು, ಪಾಮರನಾದ ನಾನು ಏನು ಬೇಡಲಿ? ಕೊಡುವದಿದ್ದರೆ, ನನಗೆ ಸಂನ್ಯಾಸದೀಕ್ಷೆಯನ್ನು ಕೊಟ್ಟು, ಈ ದೀನನನ್ನು ಉದ್ಧರಿಸಬೇಕು, ಎಂದು ಬೇಡಿಕೊಂಡರು. ಆಗ ಸ್ವಾಮಿಗಳು:— "ನೀನು ಸಂನ್ಯಾಸವನ್ನು ಸರ್ವಥಾ ಸ್ವೀಕರಿಸಲಿಕ್ಕಾಗದು! ಯಾಕಂದರೆ, ಗೃಹಸ್ಥಾಶ್ರಮಿಗಳ ಕೈಯಿಂದಾಗಬಹುದಾದ ಎಷ್ಟೋ ಮಹತ್ವದ ಕೆಲಸಗಳು ನಿನ್ನಿಂದಾಗಬೇಕಾಗಿವೆ. ಕಾರಣ ಇನ್ನು ಮೇಲೆ ನೀನು ಇಲ್ಲಿಂದ ದಕ್ಷಿಣದಿಕ್ಕಿಗಿರುವ ಶ್ರೀ ರೇಣುಕಾ ಕ್ಷೇತ್ರಕ್ಕೆ ಹೋಗಿ, ಅಲ್ಲಿ ಶ್ರೀ ರೇಣುಕಾಮಾತೆಯನ್ನು ಪೂಜಿಸಿ. ಅಲ್ಲಿಂದ ವಾಯುವ್ಯದಿಕ್ಕಿಗೆ ಹದಿನೆಂಟು ಮೈಲುಗಳ ಮೇಲಿರುವ "ತ್ರಿಶೃಂಗಪುರ" (ಮುರಗೋಡ)ಕ್ಕೆ ಹೋಗಿ ಅಲ್ಲಿ ಪತ್ನಿಯಿಂದೊಡಗೂಡಿ, ಗೃಹಸ್ಥಾಶ್ರಮಕ್ಕನುಗುಣವಾಗಿ ಸುಖದಿಂದ ಪ್ರಪಂಚವನ್ನು ಮಾಡು" ಎಂದು ಹೇಳಿದರು. ಆಗ ಮತ್ತೆ ಪ್ರಪಂಚವನ್ನು ಸ್ವೀಕರಿಸಬೇಕಾಗುತ್ತದೆಂದು, ಮಾರ್ತಂಡಭಟ್ಟರಿಗೆ ತುಸ ವಿಷಾದವಾಯಿತು. ಆದಾಗ್ಯೂ ಅವರು, ಗುರ್ವಾಜ್ಞೆಯು ಶಿಷ್ಯಕಲ್ಯಾಣವನ್ನೇ ಮಾಡುವದೆಂದು ನಂಬಿ, ಗುರುಗಳ ಅಪ್ಪಣೆಯ ಮೇರೆಗೆ ಅಲ್ಲಿಂದ ಹೊರಟು ತಮ್ಮ ಗೃಹಿಣಿಯನ್ನು ಕರಕೊಂಡು ಬರಬೇಕೆಂದು ಮೊದಲು ತಮ್ಮ ಜನ್ಮಭೂಮಿಯಾದ ಗೋಠೆ ಗ್ರಾಮಕ್ಕೆ ಬಂದರು.

ಶ್ರೀ ಸ್ವಯಂಪ್ರಕಾಶ ಸ್ವಾಮಿಗಳು ಪ್ರಸನ್ನರಾಗಿ ಮಾರ್ತಂಡಭಟ್ಟರಿಗೆ ಮೇಲೆ ಹೇಳಿದಂತೆ ಅಪ್ಪಣೆಯನ್ನು ಕೊಟ್ಟ ಬಳಿಕ ಕೃಷ್ಣೇಂದ್ರಸ್ವಾಮಿಗಳನ್ನು ಕುರಿತು:—ನಿನ್ನ ಬಯಕೆಯು ಏನಿರುವದು? ಹೇಳು ಎಂದು ನುಡಿದರು. ಆಗ ಕೃಷ್ಣೇಂದ್ರಸ್ವಾಮಿಗಳು ಕೈಮುಗಿದು:-ಸ್ವಾಮಿ, ತಾವು ನನಗೆ ಸಂನ್ಯಾಸದೀಕ್ಷೆಯನ್ನು ಕೊಟ್ಟು, ತಮ್ಮ ಚರಣಸನ್ನಿಧಿಯಲ್ಲಿಯೇ ಆಶ್ರಯವನ್ನೀಯಬೇಕು! ಇಷ್ಟೇ ನನ್ನ ಬಯಕೆಯು! ಎಂದು ನುಡಿದರು. ಆಗ ಸ್ವಯಂಪ್ರಕಾಶಸ್ವಾಮಿಗಳು ಮುಂದಣ ವಿಚಾರವನ್ನರಿತು, ಅವರಿಗೆ ಸಂನ್ಯಾಸ ದೀಕ್ಷೆಯನ್ನು ಕೊಟ್ಟು:— "ದೇವರು ನಿನಗೆ ಕಲ್ಯಾಣ ಮಾಡಲಿ! ನೀನು ಯಾವಾಗಲೂ ಕೀರ್ತಿಶಾಲಿಯಾಗುವಿ!!" ಎಂದು ಆಶೀರ್ವದಿಸಿ, 'ನೀನು ಇಲ್ಲಿ ಮಾತ್ರ ಇನ್ನು ಮೇಲೆ ಇರಕೂಡದು! ಹುಬ್ಬಳ್ಳಿಗೆ ಹೋಗು' ಎಂದು ಆಜ್ಞಾಪಿಸಿದರು. ಆಗ ಕೃಷ್ಣೇಂದ್ರಸ್ವಾಮಿಗಳು ನಿರುಪಾಯರಾಗಿ ಗುರುಗಳ ಅಪ್ಪಣೆಯಂತೆ ಹುಬ್ಬಳ್ಳಿಗೆ ಬಂದು, ಅಲ್ಲಿ ಗುರುಕೃಪೆಯಿಂದಲೇ ಜನರಿಗೆ ಎಷ್ಟೋ ಅದ್ಭುತ ಚಮತ್ಕಾರಗಳನ್ನು ತೋರಿಸಿ, ತೀವ್ರವೇ ಲೋಕವಂದ್ಯರಾದರು.

ಶ್ರೀ ಗುರುಗಳು ಕೃಷ್ಣೇಂದ್ರಸ್ವಾಮಿಗಳನ್ನು ಆಜ್ಞಾಪಿಸಿದ ಬಳಿಕ ಮೂರನೆಯ ಶಿಷ್ಯರಾದ ಸಿದ್ಧೇಶ್ವರ ಮಹಾರಾಜರಿಗೆ ಮೇಲಿನ ಇರ್ವರು ಶಿಷ್ಯರಂತೆಯೇ ಪ್ರಶ್ನೆ ಮಾಡಿದರು. ಅದಕ್ಕೆ ಸಿದ್ಧೇಶ್ವರ ಮಹಾರಾಜರು—"ಪ್ರಪಂಚವು ದುಃಖಮಯವಾಗಿದೆ! ಆದುದರಿಂದ ನನಗೆ ತದ್ವಿರಹಿತರಾದ ಸಂನ್ಯಾಸವನ್ನು ಕೊಟ್ಟು, ಪ್ರಪಂಚೋದಧಿಯೊಳಗಿಂದ ನನ್ನನ್ನು ಪಾರುಮಾಡಬೇಕು" ಎಂದು ಬೇಡಿಕೊಂಡರು. ಆಗ ಸ್ವಾಮಿಗಳು—"ಮಾರ್ತಂಡಭಟ್ಟರಂತೆ ನೀನಾದರೂ ಸಂನ್ಯಾಸವನ್ನು ಗ್ರಹಿಸಲಿಕ್ಕಾಗದು. ನಿನಗೆ ಪ್ರಪಂಚ-ಪಾರಮಾರ್ಥಗಳು ಏಕರೂಪವಾಗುವವು! ನೀನು ಇಲ್ಲಿಂದ ಕೊಲ್ಲಾಪುರಕ್ಕೆ(ಕರವೀರಪುರಕ್ಕೆ)ಹೋಗು. ಅಲ್ಲಿ ನಿನಗೆ ಸಂಸ್ಥಾನದಿಂದ ಮರ್ಯಾದೆಯು ದೊರೆಯುವದು ನಿನ್ನ ಕೀರ್ತಿಯು ನಾಲ್ಕೂಕಡೆಯಲ್ಲಿ ಪಸರಿಸುವದು" ಎಂದು ಹೇಳಲು, ಗುರುಗಳ ಆಜ್ಞೆಯನ್ನು ಶಿರಸಾವಹಿಸಿ. ಸಿದ್ಧೇಶ್ವರ ಮಹಾರಾಜರು ಕರವೀರಪುರಕ್ಕೆ ಬಂದು, ಗುರುಕೃಪೆಯಿಂದ ಕರವೀರಪುರಸ್ಥರಿಗೆ ಹಲವು ಬಗೆಯ ಚಮತ್ಕಾರಗಳನ್ನು ತೋರಿಸಿದರು. ಅದರಿಂದ ಅಲ್ಪ ಕಾಲದಲ್ಲಿಯೇ ಅವರ ಕೀರ್ತಿಯು ನಾಲ್ಕೂಕಡೆಯಲ್ಲಿ ಹಬ್ಬಿತು; ಹಾಗು ಅವರಿಗೆ ಕೊಲ್ಲಾಪುರ ಸರಕಾರದ ಕುಲಗುರುತ್ವವೂ, ನಾಲ್ವತ್ತುಸಾವಿರದ ಉಂಬಳಿಯೂ ದೊರಕಿದವು. ಇರಲಿ.

ಮಾರ್ತಂಡಭಟ್ಟರು ಮೇಲೆ ಹೇಳಿದಂತೆ ಜನ್ಮಭೂಮಿಗೆ ಬಂದ ಬಳಿಕ ತೀವ್ರವೇ ಮನೆಯಲ್ಲಿದ್ದ ಮೂವರು ತಮ್ಮಂದಿರಲ್ಲಿ ನಾಗೇಶನೆಂಬವನನ್ನು ಕುಲಕ್ರಮಾಗತವೃತ್ತಿಯನ್ನು ಸಾಗಿಸುವದಕ್ಕಾಗಿ ಅಲ್ಲಿಯೇ ಇಟ್ಟು, ಮಿಕ್ಕ ಇಬ್ಬರು ತಮ್ಮಂದಿರನ್ನೂ, ಹೆಂಡತಿಯನ್ನೂ ಸಂಗಡ ಕರಕೊಂಡು ಗುರ್ವಾಜ್ಞೆಯ ಮೇರೆಗೆ ಮುರುಗೋಡಕ್ಕೆ ಬರಬೇಕೆಂದು ಹೊರಟರು. ಮಾರ್ಗದಲ್ಲಿ ಅವರ ಮೊದಲನೆಯ ವಸ್ತಿಯು 'ಮುನಿಪಲ್ಲಿ' (ಮನ್ಹೊಳಿ) ಎಂಬಲ್ಲಾಯಿತು. ಅಲ್ಲಿ ಸಂಗಡ ಇದ್ದ ಇಬ್ಬರು ತಮ್ಮಂದಿರಲ್ಲಿ ಮಲ್ಲಂಭಟ್ಟ (ಮಲಿಭಟ್ಟ)ಎಂಬವನಿಗೆ— 'ನೀನು ಇಲ್ಲಿಯೇ ಮನೆಮಾಡಿಕೊಂಡು, ಸದ್ಧರ್ಮದಿಂದ ಕಾಲಕ್ಷೇಪ ಮಾಡಬೇಕು' ಎಂದು ಹೇಳಿ ಅವನನ್ನು ಅಲ್ಲಿಯೇ ಇರಿಸಿ, ತಾವು ಮುಂದಕ್ಕೆ ಹೊರಟರು. ಅವರ ಎರಡನೆಯ ವಸ್ತಿಯು 'ನಮಿಪುರ' (ಉಗುರಗೊಳ್ಳ) ದಲ್ಲಾಯಿತು ಅಲ್ಲಿ ಒಂದು ರೇಣುಕಾ ದೇವಾಲಯುವದೆ. ಮಾರ್ತಂಡಭಟ್ಟರು ಅಲ್ಲಿ ತಮ್ಮ ಸ್ವಧರ್ಮೋಚಿತವಾದ ಕರ್ಮಗಳನ್ನೆಲ್ಲ ತೀರಿಸಿ, ವಿವಿಧೋಪಚಾರಗಳಿಂದ ರೇಣುಕಾಮಾತೆಯನ್ನು ಪೂಜಿಸಿ, ಭೋಜನವನ್ನು ತೀರಿಸಿದರು. ಅವರು ಭೋಜನೋತ್ತರದಲ್ಲಿ ಗುರ್ವಾಜ್ಞೆಯಂತೆ ರೇಣುಕಾಕ್ಷೇತ್ರವಾದ ಎಲ್ಲಮ್ಮನ ಗುಡ್ಡಕ್ಕೆ ಬಂದು ಅಲ್ಲಿ ದೇವಿಯನ್ನು ವಿಧ್ಯುಕ್ತವಾಗಿ ಪೂಜಿಸಿ, ತಮ್ಮ ಕಿರಿಯ ತಮ್ಮನನ್ನು ಕುರಿತು—"ನೀನು ಇಲ್ಲಿಂದ ತಡಕೋಡಕ್ಕೆ ಹೋಗಿ, ಅಲ್ಲಿ ಸದ್ಧರ್ಮದಿಂದ ಗೃಹಸ್ಥಾಶ್ರಮವನ್ನು ಪಾಲಿಸು" ಎಂದು ಹೇಳಿ. ಆತನನ್ನು ಅತ್ತಕಡೆಗೆ ಕಳಿಸಿ. ತಾವು ಶಕೆ ೧೬೭೫ ರಲ್ಲಿ ಪತ್ನಿಯೊಡನೆ ಮುರಗೋಡಕ್ಕೆ ತಲ್ಪಿದರು. ಅತ್ತ ಕಿರಿಯ ಬಂಧುವು ಅಣ್ಣನ ಅಪ್ಪಣೆಯ ಮೇರೆಗೆ ತಡಕೋಡ ಗ್ರಾಮವನ್ನು ಸೇರಿ. ಸದ್ಧರ್ಮದಿಂದ ಕಾಲಹರಣ ಮಾಡಹತ್ತಿದನು.

---

## ೩ನೆಯ ಪ್ರಕರಣ.

### ಸೋಮಯಾಗ.

ಶಕೆ ೧೬೭೫ರ ಸುಮಾರಿನಲ್ಲಿ ಅಂದರೆ ಮಾರ್ತಂಡಭಟ್ಟರು ಬಂದ ಕಾಲದಲ್ಲಿ ಮುರಗೋಡವು ಕೊಲ್ಲಾಪುರದವರ ಅಧಿಕಾರಕ್ಕೊಳಪಟ್ಟ ಮನ್ಹೊಳಿ(ಮುನೋಳಿ) ತಾಲೂಕಿನ ಹಳ್ಳಿಯಾಗಿ ಎಣಿಸಲ್ಪಡುತ್ತಿತ್ತು. ಅಲ್ಲಿ ಬ್ರಾಹ್ಮಣ ವಸ್ತಿಯು

ತಕ್ಕವುಟ್ಟಿಗಿದ್ದು ಜೋಯಿಸ, ಜೇರೆ ಮತ್ತು ದೇಶಪಾಂಡೆ ಎಂಬ ಮನೆತನಗಳು ಪ್ರಸಿದ್ಧವಾಗಿದ್ದವು. ಗುರ್ವಾಜ್ಞೆಯ ಮೇರೆಗೆ ಮಾರ್ತಂಡಭಟ್ಟರು ಅಲ್ಲ ಸುಖ ದಿಂದ ಪ್ರಪಂಚವನ್ನು ಸಾಗಿಸಹತ್ತಿದರು. ಅವರು ಬ್ರಹ್ಮಕರ್ಮದಲ್ಲಿ ನಿಪುಣ ರಿದ್ದದರಿಂದ ಎಲ್ಲರಲ್ಲಿಯೂ ಅವರ ವರ್ಚಸ್ಸು ತೀವ್ರವಾಗಿ ಬೆಳೆದು, ಚರಿತಾರ್ಥವು ನಿರ್ವಿಘ್ನದಿಂದ ಸಾಗಹತ್ತಿತು. ಹೀಗಿರಲು ಒಂದು ದಿವಸ ಅಕಸ್ಮಾತ್ತಾಗಿ ಅವರ ಹೆಂಡತಿಯು ಪರಲೋಕವನ್ನೈದಿದಳು. ಆಗ ಅವರು ಅವಳ ಉತ್ತರಕ್ರಿಯೆ ಯನ್ನು ಮಾಡಿ, ಪ್ರಪಂಚದ ಬಂಧನವು ಕತ್ತರಿಸಿತೆಂದು ತಿಳಕೊಂಡು ಮತ್ತೆ ಮೊದಲಿನಂತೆ ಇರಹತ್ತಿದರು; ಆದರೆ ಗುರ್ವಾಜ್ಞೆಯು, 'ಗೃಹಸ್ಥಾಶ್ರಮವನ್ನೇ ಸ್ವೀಕರಿಸಿ, ಕಾಲಹರಣಮಾಡಬೇಕು' ಎಂದು ಇದ್ದದರಿಂದ, ಅವರು ನಿರುಪಾಯ ರಾಗಿ ಮುಂದೆ ಸ್ವಲ್ಪ ದಿವಸಗಳಲ್ಲಿ ಎರಡನೆಯ ಮದುವೆಯನ್ನು ಮಾಡಿಕೊಂಡರು; ಆದರೆ ದೈವಗತಿಯು ವಿಚಿತ್ರವಾಗಿದ್ದದರಿಂದ ಮದುವೆಯಾದ ಕೆಲ ದಿವಸಗಳಲ್ಲಿಯೇ ಅವರ ಎರಡನೆಯ ಕುಟುಂಬವಾದರೂ ಕಾಲವಶವಾಯಿತು. ಆಗ ಮಾರ್ತಂಡ ಭಟ್ಟರು ಒದಗಿದ ಸಂಕಟವನ್ನು ಲಕ್ಷಿಸದೆ, ಅಗ್ನಿಹೋತ್ರವನ್ನು ಸ್ವೀಕರಿಸಿ, ಗೃಹ ಸ್ಥಾಶ್ರಮ ಧರ್ಮವನ್ನು ಯೋಗ್ಯರೀತಿಯಿಂದ ನಡಿಸಬೇಕೆಂದು ಯೋಚಿಸಿ, ಅವರು ತಮ್ಮ ವಯಸ್ಸಿನ ೩೦ನೆಯ ವರುಷದಲ್ಲಿ ಯಥಾವಿಧಿ ಮೂರನೆಯ ಮದುವೆಯನ್ನು ಮಾಡಿಕೊಂಡರು. ಅವರ ಮೂರನೆಯ ಹೆಂಡತಿಯ ಹೆಸರು ‡ ಲಕ್ಷ್ಮೀಬಾಯಿ; ಇವರ ಪುಣ್ಯೋದರದಲ್ಲಿಯೇ ನಮ್ಮ ಚರಿತ್ರನಾಯಕನು ಅವ ತರಿಸಿದನು. ಇವರು ಸುಶೀಲರೂ ಪತಿಸೇವಾತತ್ಪರರೂ ಆಗಿದ್ದರು.

ಘನಪಂಡಿತರೂ, ಕರ್ಮದಕ್ಷರೂ, ನಿಸ್ಪೃಹಿಗಳೂ ಆದ ಮಾರ್ತಂಡ ಭಟ್ಟರು ಮೇಲೆ ಹೇಳಿದಂತೆ ತೃತೀಯ ವಿವಾಹವನ್ನು ಮಾಡಿಕೊಂಡು, ವೇದ-ಧರ್ಮಾಸಕ್ತರಾಗಿ ಗೃಹಸ್ಥಾಶ್ರಮವನ್ನು ಸಾಗಿಸಹತ್ತಿದರು. ಅವರು ಶ್ರೌತಪಕ್ಷ ವನ್ನು ಸ್ವೀಕರಿಸಿ, ಅಗ್ನಿಹೋತ್ರವನ್ನಿಟ್ಟರು. ಅವರ ಶಿಷ್ಯಸಂಪತ್ತು ದಿನೇ ದಿನೇ ಬೆಳೆಯಹತ್ತಿತು. ಅವರು ಶಮೆ ದಮೆಯುಳ್ಳವರಾಗಿ ನಿರಪೇಕ್ಷ ಬುದ್ಧಿಯಿಂದ ಸೋಮಯಾಗವನ್ನು ಮಾಡಬೇಕೆಂದು ಆಲೋಚಿಸಿ, ಸೂತ್ರಭಾಷ್ಯಕ್ಕನುಸಾರ ವಾಗಿ ಷೋಡಶ-ಪ್ರಯೋಗಗಳನ್ನೂ ಸೋಮಾವಧಿಯವರೆಗೆ ಶ್ರೌತಪ್ರಯೋಗ ವನ್ನೂ ರಚಿಸಿದರು. ಅವರು ಇವುಗಳನ್ನು ಹೊಟ್ಟೆಹೊರಕೊಳ್ಳುವ ಆಶೆಯಿಂದ ರಚಿಸಲಿಲ್ಲ; ಕೇವಲ ಪರೋಪಕಾರಕ್ಕಾಗಿಯೇ ಈ ಕೆಲಸವನ್ನು ಮಾಡಿದರು.

‡ ಇವರು ಬಿಟಸೂರ ಗ್ರಾಮದ ಗೌಡರ ವಂಶದವರು.

ಮಹಾತ್ಮರಲ್ಲಿ ಪರೋಪಕಾರ ಬುದ್ಧಿಯು ಸ್ವಾಭಾವಸಿದ್ಧವಾಗಿರುತ್ತದೆ. ಈ ಪ್ರೊತ್ತಿಗೂ ಕಣ್ವಶಾಖೆಯುವರಲ್ಲಿ ಸೋಮಯಾಜೀ ಪ್ರಯೋಗಗಳೆಂಬ ಹೆಸರಿನಿಂದ ಮಾರ್ತಾಂಡಭಟ್ಟರ ಷೋಡಶ ಪ್ರಯೋಗಗಳೂ ಶ್ರೌತಪ್ರಯೋಗವೂ ಸರ್ವ ಸಮ್ಮತವಾಗಿರುವವು.

ಮಾರ್ತಾಂಡಭಟ್ಟರು ಮೊದಲು ಆಲೋಚಿಸಿದಂತೆ, ಸೋಮಯಾಗವನ್ನು ಮಾಡಬೇಕೆಂದು ಮುನ್ನೊಳ್ಳಿಗೆ ಹೋದರು. ಮುನ್ನೊಳ್ಳಿಗ್ರಾಮವು ನಾನಾ ವೃಕ್ಷಗಳಿಂದೊಪ್ಪುವ ತೋಟಗಳಿಂದಲೂ 'ಮಲಾಪಹಾರಿ' ಎಂಬ ಹೊಳೆಯಿಂದಲೂ ಬಹು ರಮಣೀಯವಾಗಿತ್ತು. ಅಲ್ಲದೆ ಆ ಕಾಲಕ್ಕೆ ಅದು ತಾಲೂಕಿನ ಸ್ಥಳವಾಗಿತ್ತು. ಅಲ್ಲಿಯ ಜನರಿಗೆ ಮಾರ್ತಾಂಡಭಟ್ಟರ ಕೀರ್ತಿಯು ಮೊದಲೇ ಗೊತ್ತಾಗಿದ್ದದರಿಂದ ಅವರು ಮಾರ್ತಾಂಡಭಟ್ಟರನ್ನು ಚನ್ನಾಗಿ ಸತ್ಕರಿಸಿದರು. ಮಾರ್ತಾಂಡಭಟ್ಟರು ಒಂದು ದಿವಸ ಊರೊಳಗಿನ ನಾಲ್ಕು ಜನ ಸಂಭಾವಿತರನ್ನು ಕರೆಯಿಸಿ:—"ನಾವು ಸೋಮಯಾಗವನ್ನು ಮಾಡಬೇಕೆಂದು ಇಲ್ಲಿಗೆ ಬಂದಿರುವೆವು! ನಮಗೆ ಹಣದ ಕೊರತೆಯಿರುವದು; ಕಾರಣ ಯಾರಾದರೂ ನಮ್ಮ ಕಡೆಯಿಂದ ಕತಬಿಯನ್ನು ಬರೆಯಿಸಿಕೊಂಡು ನಮಗೆ ಐದುಸಾವಿರ ರೂಪಾಯಿಗಳನ್ನು ಸಾಲವಾಗಿ ಕೊಡಿರಿ. ಶ್ರಮವಿಲ್ಲದೆ ಸಂಗ್ರಹಿಸಿದ ಹಣದಿಂದ ಯಾಗವನ್ನು ಮಾಡಿದರೆ, ಪುಣ್ಯವು ಬರಲಾರದು" ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದರು. ಆಗ ಅಲ್ಲಿಯ ಮುಖಂಡರು ಕತಬಿಗಳನ್ನು ಬರೆಯಿಸಿಕೊಂಡು ಸಾಲವನ್ನು ಕೊಟ್ಟರು. ಮಾರ್ತಾಂಡಭಟ್ಟರು ಯಾಗವನ್ನು ವಿಧ್ಯುಕ್ತವಾಗಿ ಮಾಡಿದರು. ಯಜ್ಞಕಾರ್ಯವು ಒಳ್ಳೇ ವಿಜೃಂಭಣೆಯಿಂದ ಸಾಂಗವಾಯಿತು. ಯಾಗವನ್ನು ಮಾಡಿದಂದಿನಿಂದ ಮಾರ್ತಾಂಡಭಟ್ಟರಿಗೆ, ಭಟ್ಟರು ಅಥವಾ ಜೋಯಿಸರು ಎಂಬ ಉಪನಾಮಗಳು ತಪ್ಪಿ 'ದೀಕ್ಷಿತ' ಎಂಬ ಉಪನಾಮವು ರೂಢವಾಯಿತು.

ಬಳಿಕ ಒಂದು ದಿವಸ ಊರೊಳಗಿನ ಸಾವ್ಕಾರರೆಲ್ಲರು ಒತ್ತಟ್ಟಿಗೆ ಕೂಡಿ:- "ಈಗ ದೀಕ್ಷಿತರ ಬಳಿಯಲ್ಲಿ ಹಣವಿಲ್ಲ; ಇದೇ ಸಂಧಿಯಲ್ಲಿ ಹಣವನ್ನು ಕೊಡಿರೆಂದು ಅವರನ್ನು ಕೇಳಿದರೆ ಈಗ ನಮ್ಮ ಹತ್ತರ ಹಣವಿಲ್ಲೆಂದು ಹೇಳುತ್ತಾರೆ. ಆದ್ದರಿಂದ ಕತಬಿಗಳನ್ನು ಹರಿದುಕೊಟ್ಟು ಕೃತಕೃತ್ಯರಾಗಬೇಕು" ಎಂದು ಆಲೋಚಿಸಿದರು. ಈ ಸುದ್ದಿಯು ಕರ್ಣೋಪಕರ್ಣಗಳಿಂದ ದೀಕ್ಷಿತರಿಗೆ ತಿಳಿಯಲು, ಅವರು ಸಾವ್ಕಾರರನ್ನು ಕರೆಯಿಸಿ:-ತಮ್ಮ ಸಾಲತೀರಿಸುವ ಅವಧಿಯು ಇನ್ನೂ ಆರು ತಿಂಗಳುಗಳ ವರೆಗೆ ಇರುವದು. ಅವದಿಗೆ ಸರಿಯಾಗಿ ತಮ್ಮ ಹಣವನ್ನು

ಮುಟ್ಟಿಸುವೆವು. ತಾವು ಏನಾದರೂ ಯೋಚಿಸಿಕೊಂಡು ಅಲ್ಲದ ಕೆಲಸವನ್ನು ಮಾಡಬಾರದು, ಎಂದು ಹೇಳಲು, ಸಾವುಕಾರರು ದಿಗಿಲುಬಿದ್ದು, ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಇತ್ತ ದೀಕ್ಷಿತರು ಹಣವನ್ನು ದೊರಕಿಸುವದಕ್ಕಾಗಿ ಪುಣೆಗೆ ಹೋಗಬೇಕೆಂದು ಹೊರಟರು.

ದೀಕ್ಷಿತರು ಮಾರ್ಗಕ್ರಮಣ ಮಾಡುತ್ತ ಮಾಡುತ್ತ ಕೆಲವು ದಿವಸಗಳಲ್ಲಿ ಪುಣ್ಯಪತ್ತನವನ್ನು ಸೇರಿ, ಶ್ರೀಮಂತರಿಗೆ ಭೆಟ್ಟಿಯಾಗಿ ಅವರಿಗೆ ತಾವು ಬಂದ ಕಾರಣವನ್ನರುಹಿದರು. ಆಗ ಶ್ರೀಮಂತರು ತಮ್ಮ ಕಾರಭಾರಿಗೆ:-"ಈ ದೀಕ್ಷಿತರು ಸಂಚಾರಾರ್ಥವಾಗಿ ಬಂದಿರುವರು; ಇವರಿಗೆ ತುಸು ಹೆಚ್ಚಿಗೆ ದ್ರವ್ಯವು ಬೇಕಾಗಿರುವದಂತೆ! ಆದುದರಿಂದ ಮೊನ್ನೆ ಒಬ್ಬ ಪಾತರದವಳು ನಿರ್ವಂಶಳಾಗಿ ಮರಣ ಹೊಂದಿದ್ದರಿಂದ ಸರಕಾರಕ್ಕೆ ಜಮೆಯಾದ ಅವಳ ಒಂದು ಲಕ್ಷ ಬೆಲೆಬಾಳುವ ಆಸ್ತಿಯೊಳಗಿಂದ ಇವರಿಗೆ ಬೇಕಾದಷ್ಟು ಹಣವನ್ನು ಕೊಡಿರಿ," ಎಂದು ನುಡಿಯಲು, ಅಲ್ಲೇ ಸಮೀಪದಲ್ಲಿ ಕುಳಿತಿರುವ ದೀಕ್ಷಿತರು, ಶ್ರೀಮಂತರ ಈ ಮಾತುಗಳನ್ನು ಕೇಳಿ, ಶ್ರೀಮಂತರನ್ನು ಕುರಿತು—"ಮಹಾರಾಜ, ನನ್ನದೊಂದು ವಿಜ್ಞಾಪನೆಯಿರುವದು; ಕೇಳಬೇಕು. ಕೇವಲ ದುರ್ವರ್ತನದಿಂದ ಸಂಪಾದಿಸಿದ ಗಣಿಕಾಸ್ತ್ರೀಯ ಹಣದಿಂದ ಯಜ್ಞದ ಸಾಲವನ್ನು ತೀರಿಸಿ ನಾವು ಯಾವ ಪಾಪಕ್ಕೆ ಗುರಿಯಾಗೋಣ! ನಾವು ಇಂತಹ ಹಣವನ್ನು ಎಂದಿಗೂ ಸ್ವೀಕರಿಸಲಾರೆವು! ಪಟ್ಟಣದೊಳಗಿನ ಬ್ರಹ್ಮನಿಷ್ಠರಾದ ಬ್ರಾಹ್ಮಣರು ತಮ್ಮ ಶಕ್ತ್ಯನುಸಾರವಾಗಿ ಕೊಟ್ಟ ಹಣದಲ್ಲಿ ತಾವು ಎರಡೇ ರೂಪಾಯಿಗಳನ್ನು ಹಾಕಿ, ನಮಗೆ ಕೊಡಿಸುವ ವ್ಯವಸ್ಥೆ ಮಾಡಿದಲ್ಲಿ ನಾವು ಅದನ್ನು ಸ್ವೀಕರಿಸುವೆವು" ಎಂದು ಹೇಳಿದರು. ಆಗ ಶ್ರೀಮಂತರು ದೀಕ್ಷಿತರ ಮಾತಿಗೆ ಒಡಂಬಟ್ಟು, ಅದರಂತೆಯೇ ವ್ಯವಸ್ಥೆಯನ್ನು ಮಾಡಿಸಲು, ದೀಕ್ಷಿತರು ಅದನ್ನು ಸಂತೋಷದಿಂದ ಸ್ವೀಕರಿಸಿ, ಮರಳಿ ಮುನ್ನೊಳ್ಳಿಗೆ ಹೊರಟು ಬಂದರು.

ದೀಕ್ಷಿತರು ಊರೊಳಗೆ ಬಂದ ಸುದ್ದಿಯು ಸಾವುಕಾರರಿಗೆ ತಿಳಿಯಲು, ಅವರು ದೀಕ್ಷಿತರ ದರ್ಶನಕ್ಕೆ ಬಂದರು. ಆಗ ದೀಕ್ಷಿತರು ಅವರ ಕ್ಷೇಮವಾರ್ತೆಯನ್ನು ವಿಚಾರಿಸಿ. ಅವರಿಗೆ ಬಡ್ಡಿ ಸಹಿತವಾಗಿ ಎಲ್ಲ ರೂಪಾಯಿಗಳನ್ನು ಕೊಟ್ಟು, ಕತಬಿಗಳನ್ನು ಇಸುಕೊಂಡರು; ಹಾಗು ತಮಗೆ ಸಹಾಯ ಮಾಡಿದ ಮುಖಂಡರನ್ನು ಹೊಗಳಿ, ಊರೊಳಗಿನ ಎಲ್ಲ ಜನರಿಗೆ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ, ಅವರೆಲ್ಲರ ಅಪ್ಪಣೆಯನ್ನು ತಕ್ಕೊಂಡು ಮುರಗೋಡಕ್ಕೆ ಬಂದು

ಮೊದಲಿನಂತೆ ವೇದಧರ್ಮಾಸಕ್ತರಾಗಿ ಕಾಲಹರಣ ಮಾಡುತ್ತಿದ್ದರು.

ಹೀಗೆ ಮಾರ್ತಂಡ ದೀಕ್ಷಿತರು ಗೃಹಸ್ಥಾಶ್ರಮಿಗಳಾಗಿ ಬಹು ದಿವಸಗಳಾದರೂ ಸಂತಾನವಾಗದಿರಲು, ಅವರಿಗೆ ಬಹಳ ಅಸಮಾಧಾನವಾಯಿತು. ಯಾಕಂದರೆ, ಅವರು ಕೇವಲ ವಿಷಯಸುಖಕ್ಕಾಗಿಯೇ ಮದುವೆಯನ್ನು ಮಾಡಿಕೊಂಡಿದ್ದಿಲ್ಲ! ವಂಶಾಭಿವೃದ್ಧಿಗಾಗಿ ಪುತ್ರಸಂತಾನವಾಗಬೇಕೆಂತಲೂ ಕೈಲಾದ ಮಟ್ಟಿಗೆ ಪರೋಪಕಾರವು ಘಟಿಸಬೇಕೆಂತಲೂ ಅವರು ಮೂರು ಮದುವೆಯನ್ನು ಮಾಡಿಕೊಂಡರು. ಆದರೂ ಸಂತಾನವಾಗದಿರಲು, ಅವರು ತಪಸ್ಸನ್ನಾಚರಿಸಿ, ಈಶಾನುಗ್ರಹವನ್ನು ಸಂಪಾದಿಸಿಯಾದರೂ ಪುತ್ರನನ್ನು ಪಡೆಯಬೇಕೆಂದು ನಿಶ್ಚಯಿಸಿ, ತಪಸ್ಸನ್ನಾಚರಿಸುವದಕ್ಕಾಗಿ, ಪತ್ನೀಸಮೇತರಾಗಿ ದೇವರಹಿಪ್ಪರಗಿಗೆ ಹೊರಟು ಹೋದರು. ಅಲ್ಲಿ ಅವರು ಮಾರ್ತಂಡಭೈರವನನ್ನು ಭಕ್ತಿಯಿಂದ ಪೂಜಿಸಿ, ವೇದಮಾತೆಯಾದ † ಗಾಯತ್ರೀಪುರಶ್ಚರಣವನ್ನಾರಂಭಿಸಿದರು. ಆರು ತಿಂಗಳುಗಳ ತರುವಾಯ ಶ್ರೀ ಮಾರ್ತಂಡಭೈರವನು ದೀಕ್ಷಿತರ ದೃಢತರವಾದ ಭಕ್ತಿಗೆ ಮೆಚ್ಚಿ, ಅವರ ಸ್ವಪ್ನದಲ್ಲಿ ಬಂದು:-"ಭಕ್ತಶಿಖಾಮಣಿಯಾದ ದೀಕ್ಷಿತವರ್ಯನೇ, ನಿನ್ನ ಭಕ್ತಿಗೂ, ಅನುಷ್ಠಾನಕ್ಕೂ ಮೆಚ್ಚಿ, ನಾನು ಪ್ರಸನ್ನನಾಗಿರುವೆನು. ನಿನ್ನ ತಪಸ್ಸು ಸಿದ್ಧಿಸಿತು; ನಿನ್ನ ಬಯಕೆಯಾದರೂ ನನಗೆ ಗೊತ್ತಾಗಿರುವದು. ನೀನು ಇನ್ನು ಮೇಲೆ ಸಂತತಿಯ ಸಲುವಾಗಿ ಚಿಂತಿಸಬೇಡ. ಇಲ್ಲಿಂದ ದಕ್ಷಿಣ ದಿಕ್ಕಿನಲ್ಲಿರುವ ಆಕಾಶಚಿದಂಬರಕ್ಷೇತ್ರ (ಗಾಯತ್ರೀಸ್ಥಾನ) ಕ್ಕೆ ಹೋಗಿ ಆ ಪುಣ್ಯಕ್ಷೇತ್ರದಲ್ಲಿ ತಪಸ್ಸನ್ನಾಚರಿಸಬೇಕು; ಅಂದರೆ ಪ್ರತ್ಯಕ್ಷ ಚಿದಂಬರನೇ ನಿನಗೆ ಪ್ರಸನ್ನನಾಗಿ, ನಿನ್ನ ಪುತ್ರನಾಗಿ ಅವತರಿಸುವನು," ಎಂದು ಹೇಳಿ ಅಂತರ್ಧಾನವನ್ನೈದಿದನು. ಇತ್ತ ತಪೋಧನರಾದ ಮಾರ್ತಂಡದೀಕ್ಷಿತರು ಜಾಗ್ರತರಾಗಿ, ಸ್ವಪ್ನಸಂಗತಿಯನ್ನೆಲ್ಲ ಜ್ಞಾಪಕಕ್ಕೆ ತಂದುಕೊಂಡು ಮುದಿತರಾಗಿ, ಅದನ್ನು ಸಾದ್ಯಂತವಾಗಿ ಪತ್ನಿಗೆ ಅರುಹಿದರು. ಆಗ ಅವಳಿಗಾದರೂ ಬಹಳ ಆನಂದವಾಯಿತು. ಬಳಿಕ ದೀಕ್ಷಿತರು ಶ್ರೌತಾಗ್ನಿಯನ್ನು ಸಮಾರೋಪಮಾಡಿ ಕುಲದೇವತೆಯ ಅಪ್ಪಣೆಯ ಮೇರೆಗೆ ತಪಸ್ಸನ್ನಾಚರಿಸುವದಕ್ಕಾಗಿ, ಸಪತ್ನಿಕರಾಗಿ

† ಗಾಯತ್ರೀ ಪುರಶ್ಚರಣವೆಂದರೆ—ಗಾಯತ್ರೀ ಮಂತ್ರವನ್ನು ೨೪ ಲಕ್ಷ ಸಂಖ್ಯಾಕವಾಗಿ ಜಪಿಸಬೇಕು. ಈ ಸಂಖ್ಯೆಯ ಒಂದು ಹತ್ತಾಂಶ ತರ್ಪಣ, ಅದರ ಒಂದು ಹತ್ತಾಂಶ ಹೋಮ, ಅದರ ಒಂದು ಹತ್ತಾಂಶ ಮಾರ್ಜನ, ಮತ್ತು ಅದರ ಒಂದು ಹತ್ತಾಂಶ ಬ್ರಾಹ್ಮಣ ಭೋಜನ ಮಾಡಿಸಬೇಕು. ಅಂದರೆ ಒಂದು ಗಾಯತ್ರೀಪುರಶ್ಚರಣವು ಪೂರ್ಣವಾಗುವದು.

ಶ್ರೀ ಚಿದಂಬರಕ್ಷೇತ್ರಕ್ಕೆ ಹೋಗಬೇಕೆಂದು ಹೊರಟರು. ವ್ಯಾಸರು ಶ್ರೀ ಆಕಾಶಚಿದಂಬರಕ್ಷೇತ್ರದ ಮಹಿಮೆಯನ್ನು ಸ್ಕಂದಪುರಾಣದಲ್ಲಿ ವಿಶದವಾಗಿ ವರ್ಣಿಸಿರುವರು. ಅದು ವಾಚನಾರ್ಹವಾಗಿರುವದರಿಂದ, ಅದನ್ನು ಇದ್ದಕ್ಕಿದ್ದ ಹಾಗೆಯೇ ಮುಂದಣ ಪ್ರಕರಣದಲ್ಲಿ ಕೊಟ್ಟಿರುವೆವು

---

## ೩ನೆಯ ಪ್ರಕರಣ.

## ಶ್ರೀ ಆಕಾಶಚಿದಂಬರ ಕ್ಷೇತ್ರವರ್ಣನೆ.



ಒಬ್ಬ ಚಕ್ರವರ್ತಿಯು ಮಕ್ಕಳೋಪಾದಿಯಲ್ಲಿ ತನ್ನ ಪ್ರಜೆಗಳನ್ನು ಪಾಲಿಸುತ್ತ, ರಾಜನೀತಿಗೆ ಸರಿಯಾಗಿ ರಾಜ್ಯವಾಳುತ್ತಿದ್ದನು. ಒಂದಾನೊಂದು ದಿವಸ ಅವನಿಗೆ ಪೂರ್ವಕರ್ಮಾನುಸಾರವಾಗಿ ಗಲಿತ್ಕುಷ್ಟವೆಂಬ ಮಹಾರೋಗವು ಉತ್ಪನ್ನವಾಯಿತು. ಆಗ ಅವನು ತನ್ನ ವ್ಯಾಧಿಯ ನಿವಾರಣಕ್ಕಾಗಿ ಬಹಳ ಉಪಾಯಗಳನ್ನು ಮಾಡಿದನು; ಆದರೆ ಅವುಗಳಿಂದ ಅವನಿಗೆ ಸ್ವಲ್ಪಾದರೂ ಗುಣವಾಗಲಿಲ್ಲ. ಬೇನೆಯು ಅಸಹ್ಯವಾದುದರಿಂದ, ರಾಜನಿಗೆ ಜೀವವು ಬೇಸರವಾಯಿತು. ಆಗ ಅವನು ಮನಸ್ಸಿನಲ್ಲಿ:—ಪರಮಪವಿತ್ರವಾದ ರಾಮೇಶ್ವರಕ್ಷೇತ್ರಕ್ಕೆ ಹೋಗಿ, ಅಲ್ಲಿ ಈಶ್ವರನನ್ನು ಪ್ರಸನ್ನೀಕರಿಸಿಕೊಂಡು ವ್ಯಾಧಿಯನ್ನು ಕಳಕೊಳ್ಳಬೇಕು; ಹಾಗಾಗದ ಪಕ್ಷದಲ್ಲಿ ಅಸುವನ್ನಾದರೂ ತೊರೆಯಬೇಕು, ಎಂದು ನಿಶ್ಚಯಿಸಿ, ಅತ್ತ ಕಡೆಗೆ ಸೈನ್ಯದೊಂದಿಗೆ ಹೊರಟನು. ಮಾರ್ಗಕ್ರಮಣ ಮಾಡುತ್ತಿರಲು, ಮಧ್ಯಾಹ್ನಕಾಲವು ಪ್ರಾಪ್ತವಾದದ್ದರಿಂದ, ಅವನು ಪಶ್ಚಿಮಸಮುದ್ರದಿಂದ ಒಂದೂವರೆ ಯೋಜನದ ಮೇಲಿರುವ ಒಂದು ರಮಣೀಯವಾದ ಉದ್ಯಾನದಲ್ಲಿ ಸೈನ್ಯದೊಂದಿಗೆ ತಳವೂರಿದನು. ಊಟ-ಉಡಿಗೆಗಳು ಮುಗಿದ ಬಳಿಕ ಅರಸನು ಏಕಾಂತದಲ್ಲಿ ಒಂದು ಔದುಂಬರ ವೃಕ್ಷದ ಕೆಳಗೆ ವಿಚಾರಮಾಡುತ್ತ ಕುಳಿತುಕೊಂಡನು. ಆ ಏಕಾಂತ ಸ್ಥಾನವು ಮನೋಲ್ಹಾದಕರವಾಗಿದ್ದರೂ, ವ್ಯಾಧಿಯ ಮೂಲಕ ಅವನ ಮನಸ್ಸಿಗೆ ಸೊಗಸಾಗಲೊಲ್ಲದು. ಮನಸ್ಸಿನಲ್ಲಿ ನಾನಾ ವಿಧ ವಿಚಾರಗಳು ಒಂದರ ಮೇಲೊಂದು ಬರಹತ್ತಿದವು. ಅಷ್ಟರಲ್ಲಿ ಒಂದು ಕಾಡಹಂದಿಯು ಓಡುತ್ತೋಡುತ್ತ, ರಾಜನು ಕುಳಿತಿರುವ ಔದುಂಬರ ವೃಕ್ಷದ ಬಳಿಯಲ್ಲಿರುವ ಒಂದು ಕರ್ದಮಮಯವಾದ ಗರ್ತದ (ಗುಂಡಿ)ಸಮೀಪಕ್ಕೆ ಬಂದು ಅದರಲ್ಲಿ, ಮನಬಂದಂತೆ ಉರುಳಾಡಹತ್ತಿತು. ಕೆಲವು ಹೊತ್ತಿನ

ಮೇಲೆ ಅದು ಮೇಲಕ್ಕೆ ಬಂದಿತು. ಆಗ ಅದರ ಸರ್ವಾಂಗವು ಸುವರ್ಣಮಯ ವಾಗಿತ್ತು! ಅಲ್ಲಿಯೇ ಸಮೀಪದಲ್ಲಿ ವಿಚಾರ ಮಾಡುತ್ತ ಕುಳಿತ ರಾಜನು ಈ ಅದ್ಭುತವನ್ನು ನೋಡಿ ಬೆರಗಾದನು. ಆತನ ಮನಸ್ಸಿನಲ್ಲಿ ತನ್ನ ಬೇನೆಯ ಸಂಬಂಧವಾಗಿ ಆಶಾಜನಕ ವಿಚಾರಗಳುಂಟಾಗಹತ್ತಿದವು. ಅವನು ದೇವರ ಹೆಸರನ್ನು ತೆಕ್ಕೊಂಡು, ಕೂತೂಹಲದಿಂದ ಚಟ್ಟನೆ ಎದ್ದು ಆ ಗರ್ತಿನ ಸಮೀಪಕ್ಕೆ ಬಂದನು; ಹಾಗು ಮೈಮೇಲಿನ ಅರುವೆಗಳನ್ನು ಒತ್ತಟ್ಟಿಗೆ ತೆಗೆದಿಟ್ಟು, ಶ್ರೀರಾಮೇಶ್ವರನನ್ನು ಧ್ಯಾನಿಸುತ್ತ ಆ ಗರ್ತನಲ್ಲಿ ಧುಮುಕಿದನು. ಅವನು ತುಸ ಹೊತ್ತು ಅದರಲ್ಲಿ ಉರುಳಾಡಿ ಮೇಲಕ್ಕೆ ಬರಲು ಆತನ ರೋಗವು ಹೇಳಹೆಸರಿಲ್ಲದಂತಾಗಿ, ದೇಹವು ಸುವರ್ಣಸದೃಶವಾಯಿತು! ಆಗ ರಾಜನಿಗಾದ ಸಂತೋಷವನ್ನು ಹೇಳಲಾಸಲ್ಲ; ಆತನು ಅಲ್ಲಿ ಬಹಳ ದಾನ-ಧರ್ಮಗಳನ್ನು ಮಾಡಿ, ವಿಶ್ರಾಂತಿಯ ಸಲುವಾಗಿ ಕೆಲವು ದಿವಸಗಳ ವರೆಗೆ ಅಲ್ಲಿಯೇ ಉಳಕೊಂಡನು. ಈ ಚಮತ್ಕಾರವು ವರ್ತಿಸಿದಂದಿನಿಂದ ಆ ಚಕ್ರವರ್ತಿಗೆ ಸುವರ್ಣಚಕ್ರವರ್ತಿಯೆಂಬ ಹೆಸರುಂಟಾಯಿತು.

ಒಂದು ದಿವಸ ಸುವರ್ಣಚಕ್ರವರ್ತಿಯ ಮನಸಿನಲ್ಲಿ ಆ ಗರ್ತವನ್ನು ಹೆಚ್ಚಿಗೆ ಅಗಿಸಬೇಕೆಂಬ ಆಕಾಂಕ್ಷೆಯುಂಟಾಯಿತು ಆಗ ಅವನು ಆಳುಗಳನ್ನು ಕರೆದು, ಆ ತಗ್ಗಿನೊಳಗಿನ ರಾಡಿಯನ್ನು ತೆಗೆಯಿಸಿ, ಅದನ್ನು ಹೆಚ್ಚಿಗೆ ಅಗಿಸಹತ್ತಿದನು. ಆಗ ಅಲ್ಲಿ ಒಂದು ದೇವಾಲಯವು ಹೊರಟಿತು. ಆ ದೇವಾಲಯದ ಒಂದೆಡೆಯಲ್ಲಿ 'ಇದು ಆಕಾಶಚಿದಂಬರ ಕ್ಷೇತ್ರವು. ಇಲ್ಲಿಯ ಕರ್ದಮಮಯವಾದ ಗರ್ತಿಯು ಪಾತಾಳಗಂಗೆಯು' ಎಂದು ಬರೆದಿತ್ತು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು! ಈ ಪರಮಪಾವನ ಕ್ಷೇತ್ರವು ಈಗ ಇತಿಹಾಸ ಪುರಾಣಗಳಲ್ಲಿ ಗಾಯತ್ರೀಗ್ರಾಮ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವದು. ಅಲ್ಲಿ ಇಂದ್ರ, ಬ್ರಹ್ಮ, ವಿಷ್ಣು, ಉಮಾ-ಮಹೇಶ್ವರ, ತಾಂಡವನೃತ್ಯ ಎಂಬ ಪಂಚಸಭೆಗಳಿದ್ದು, ಅವು ಬಹು ರಮಣೀಯಗಳಾಗಿವೆ ಕಣ್ವ, ಉಪಮನ್ಯು ಮೊದಲಾದವರು ಇದೇ ಸ್ಥಾನದಲ್ಲಿ ಘೋರವಾದ ತಪಸ್ಸನ್ನಾಚರಿಸಿ, ವರಗಳನ್ನು ಪಡೆದು ಪ್ರಸಿದ್ಧರಾದರು. ವಿಷ್ಣು-ಬ್ರಹ್ಮಾದಿಗಳಾದರೂ ಇದೇ ಸ್ಥಾನದಲ್ಲಿ ವರಗಳನ್ನು ಪಡೆದರು. ಭಕ್ತವತ್ಸಲನೂ, ಆನಂದಸಾಗರನೂ ಆದ ಚಿದಂಬರನು ಇಲ್ಲಿ ಯಾವಾಗಲೂ ವಾಸಿಸಿ, ಭಕ್ತರ ಅಭೀಷ್ಟಗಳನ್ನು ಪೂರೈಸುತ್ತಿರುವನು. ಸಾರಾಂಶ, ಈ ಕ್ಷೇತ್ರವು ವರ್ಣಿಸಲು ಅಸಾಧ್ಯವಾಗಿದೆ. ಇದು ಮುಕ್ತಿಯ ತವರುಮನೆಯೂ, ಸಿದ್ಧರ ವಾಸಸ್ಥಾನವೂ, ಚಾರಣರ ತಪೋಭೂಮಿಯೂ, ಪಾಪಾಂಧಕಾರಭಾನುವೂ, ಭಕ್ತ

ಕಾಮಧೇನುವೂ ಆಗಿರುವದು! ಇದರ ಸುತ್ತಲಿನ ಪ್ರದೇಶವು ಅಲ್ಲಲ್ಲಿ ಬೆಳೆದಿರುವ ಆಮ್ರ, ಔದುಂಬರ, ಅಶ್ವತ್ಥ, ಬಿಲ್ವ ಮೊದಲಾದ ವೃಕ್ಷಗಳಿಂದಲೂ, ಪುಣ್ಯಕರ ವಾದ ತೀರ್ಥಗಳಿಂದಲೂ ಒಪ್ಪುತ್ತಿರುವದು. ಈ ಕ್ಷೇತ್ರದ ಸುತ್ತಲೂ ರಮ್ಯ ವಾದ ಉದ್ಯಾನಗಳೂ, ಕಮನೀಯವಾದ ಕಾಸಾರಗಳೂ ಇರುವವು. ಈ ಕ್ಷೇತ್ರದಲ್ಲಿ ಸಿಂಹ ಮೊದಲಾದ ಹಿಂಸ್ರ ಪಶುಗಳು ತಮ್ಮ ತಮ್ಮ ಜಾತಿದ್ವೇಷವನ್ನು ಬಿದಿಗಿಟ್ಟು, ಎಲ್ಲ ಪ್ರಾಣಿಗಳೊಡನೆ ಪ್ರೇಮಭಾವದಿಂದ ನಡಕೊಳ್ಳುತ್ತಿದ್ದವು.

ಇಂತಹ ಪಾವನ ಕ್ಷೇತ್ರದಲ್ಲಿ ಸುವರ್ಣಚಕ್ರವರ್ತಿಯು ಆನಂದದಿಂದಿದ್ದು ಕೊಂಡು, ಆ ಕ್ಷೇತ್ರದ ವ್ಯವಸ್ಥೆಯನ್ನು ಮಾಡಿಸಹತ್ತಿದನು. ದೇವಾಲಯದಲ್ಲಿ ಒಂದು ಮೂರ್ತಿಯನ್ನು ಸ್ಥಾಪಿಸಬೇಕೆಂದು ಆತನು ಗೊತ್ತುಮಾಡಿದನು. ಆತ ನಿಗೆ ದೇವಾಲಯದಲ್ಲಿ ಸುವರ್ಣಮಯವಾದ ಭೋಗ(ಉತ್ಸವ)ಮೂರ್ತಿಯನ್ನು ಸ್ಥಾಪಿಸಬೇಕೆಂದು ಮಹೇಶನ ದೃಷ್ಟಾಂತವೂ ಆಯಿತು. ಆಗ ಅವನಿಗೆ ಪ್ರೋತ್ಸಾಹವುಂಟಾಗಿ, ಅವನು ಆ ಕೆಲಸಕ್ಕೆ ಉದ್ಯುಕ್ತನಾದನು.

ಮರುದಿವಸ ಸುವರ್ಣಚಕ್ರವರ್ತಿಯು ವಿಪುಲ ಸುವರ್ಣವನ್ನು ತರಿಸಿ, ಮೂರ್ತಿಯನ್ನು ಮಾಡಿಸಬೇಕೆಂದು ಅದನ್ನು ಕರಗಿಸಲುದ್ಯುಕ್ತನಾದನು. ಸುವ ರ್ಣವು ಸಾಧಾರಣವಾಗಿ ಕರಗುತ್ತ ಬಂದಿತ್ತು. ಅಷ್ಟರಲ್ಲಿ ಮೂಸಿಯು ಒಡೆದು, ಅದೆಲ್ಲ ಬೆಂಕಿಯ ಪಾಲಾಯಿತು. ಆದರೂ ರಾಜನು ಹಿಂಜರಿಯದೆ, ಮತ್ತೆ ಬಂ- ಗಾರವನ್ನು ತರಿಸಿ ಕರಗಿಸಲಾರಂಭಿಸಿದನು. ಮತ್ತೆ ಕುಲುಮೆಯೊಡೆದು ಬಂಗಾ ರವು ನಾಶವಾಯಿತು. ಇದೇ ಪ್ರಕಾರ ತೊಂಭತ್ತೊಂಭತ್ತು ಸಲ ರಾಜನ ಪ್ರಯ ತ್ನವು ವ್ಯರ್ಥವಾಯಿತು. ಆಗ ಆತನು ಇನ್ನು ಮೇಲೆ ನನ್ನ ಪ್ರಯತ್ನಕ್ಕೆ ಯಶವು ದೊರೆಯದೆ ಹೋದಲ್ಲಿ ಇಲ್ಲಿಯೇ ನಾಲಿಗೆಯನ್ನು ಕಿತ್ತುಕೊಂಡು ಪ್ರಾಣ ತ್ಯಾಗವನ್ನು ಮಾಡುತ್ತೇನೆ, ಎಂದು ಭೀಷಣವಾದ ಪ್ರತಿಜ್ಞೆಯನ್ನು ಮಾಡಿ ಮತ್ತೆ ಬಂಗಾರವನ್ನು ತರಿಸಿ, ಕರಗಿಸಲಾರಂಭಿಸಿದನು. ಪೂರ್ವರಾತ್ರಿಯಲ್ಲಿ ಯೇ ಆತನಿಗೆ ನಿದ್ದೆಹತ್ತಿದಂತಾಗಿ, ಒಂದು ಕನಸು ಬಿತ್ತು. ಕನಸಿನಲ್ಲಿ ಆತನ ನಿರ್ಧಾರಕ್ಕೆ ಮೆಚ್ಚಿದ ನೀಲಕಂಠನು ವೈಭವದೊಂದಿಗೆ ಬಂದು ಆತನ ಎದು ರಿನಲ್ಲಿ ನಿಂತುಕೊಂಡನು; ಹಾಗೂ ರಾಜನೇ, ಏಳು ಏಳು, ಎಂದು ನುಡಿದನು. ಆಗ ಸುವರ್ಣಚಕ್ರವರ್ತಿಯು ಆ ಸ್ವಪ್ನದಲ್ಲಿ ಒಮ್ಮೆಲೆ ಎಚ್ಚತ್ತು, ನಾಲ್ಕೂ ಕಡೆ ಯಲ್ಲಿ ವ್ಯಾಪಿಸಿದ ಪ್ರಕಾಶದಿಂದ ದೀಪ್ತವಾದ ಕಣ್ಣುಗಳುಳ್ಳವನಾಗಿ, ಎದ್ದು ನಿಂತು ಸರ್ವಮಂಗಲಾಪತಿಯನ್ನು ಹಲವು ಬಗೆಯಿಂದ ಸ್ತುತಿಸಿ, ಆತನಿಗೆ ತನ್ನ

ವೃತ್ತಾಂತವನ್ನೆಲ್ಲ ಹೇಳಿ, ಚರಣಗಳ ಮೇಲೆ ಉರುಳಾಡ ಹತ್ತಿದನು. ಆಗ ಸದಾಶಿವನು ಆತನನ್ನು ಹಿಡಿದೆತ್ತಿ—ಧೈರ್ಯತಾಳು ಹಿಂಜರಿಯಬೇಡ; ಹಿಡಿದ ಕಾರ್ಯವನ್ನು ಹಾಗೆಯೇ ಮುಂದಕ್ಕೆ ಸಾಗಿಸು. ಈ ಹೊತ್ತು ಮಧ್ಯರಾತ್ರಿಯ ಸುಮಾರಕ್ಕೆ ಒಬ್ಬ ದ್ವಿಜಕುಮಾರನು ಇಲ್ಲಿಗೆ ಬರುವನು. ಆತನು ಎಂತಹ ಭಯಂಕರವಾದ ಕಾರ್ಯವನ್ನು ಹೇಳಿದರೂ ಹೆದರದೆ, ಅವನ ವಚನದಂತೆ ವರ್ತಿಸು, ಅಂದರೆ ನಿನ್ನ ಕಾರ್ಯವು ನಿಶ್ಚಯವಾಗಿ ನೆರವೇರುವದು, ಎಂದು ಹೇಳಿ, ಅಂತರ್ಧಾನವನ್ನೈದಿದನು ಸುವರ್ಣಚಕ್ರವರ್ತಿಯು ಎಚ್ಚತ್ತು ಶಂಕರನ ಮಾತಿನ ಮೇಲೆ ನಂಬಿಗೆಯನ್ನಿಟ್ಟು ದ್ವಿಜಕುಮಾರನ ಮಾರ್ಗಪ್ರತೀಕ್ಷೆಯನ್ನು ಮಾಡುತ್ತ, ಕುಲುಮೆಯ ಬಳಿಯಲ್ಲಿ ಕುಳಿತುಕೊಂಡನು ಮಧ್ಯರಾತ್ರಿಯಾಗಲು ಸೂರ್ಯನಂತೆ ಕಾಂತಿಯುಳ್ಳ ಒಬ್ಬ ಬ್ರಹ್ಮಚಾರಿಯು, ಶಿವ ವಚನದಂತೆ ಅಲ್ಲಿ ಪ್ರಕಟನಾಗಿ:—ರಾಜನೇ ನಾನು ಅತಿಥಿಯು; ನನಗೆ ಬಹಳ ಹಸಿವೆಯಾಗಿರುವದು. ಕಾರಣ ನೀನು ಮೋಹವನ್ನು ಬದಿಗಿಟ್ಟು, ಕೈಯೊಳಗಿದ್ದ ಪದಾರ್ಥವನ್ನೇ ತೀವ್ರವಾಗಿ ಕೊಟ್ಟು. ನನ್ನನ್ನು ಸಂತೋಷಗೊಳಿಸು, ಎಂದು ನುಡಿದನು. ಅದಕ್ಕೆ ಸುವರ್ಣಚಕ್ರವರ್ತಿಯು:--ವಟುವೇ, ಒಳಭಾಗಕ್ಕೆ ಬರಬೇಕು. ಕೈಯಲ್ಲಿ ತಪ್ತವಾದ ಸುವರ್ಣ ರಸವಿರುವದು; ಸ್ವಲ್ಪ ಸಮಾಧಾನವನ್ನು ತಾಳಿದಲ್ಲಿ ಪಂಚಪಕ್ವಾನ್ನಗಳಿಂದ ತಮ್ಮ ಕ್ಷುಧೆಯನ್ನು ಶಾಂತಗೊಳಿಸುವೆನು, ಎಂದು ಹೇಳಲು, ಬ್ರಹ್ಮಚಾರಿಯು:—ರಾಜನೇ, ಯಾಚಕರನ್ನು ವಿಮುಖಮಾಡಿ ಕಳುಹುವದು ರಾಜಧರ್ಮವಲ್ಲ! ನಿನ್ನಲ್ಲಿ ಮೋಹವು ಜನಿಸಿದಂತೆ ತೋರುತ್ತದೆ! ಇದು ಒಳಿತಲ್ಲ. ಏನೇ ಆಗಲಿ, ನಿನ್ನ ಕೈಯಲ್ಲಿರುವ ತಪ್ತ ಸುವರ್ಣ ರಸವನ್ನೇ ನನ್ನ ಮುಖದಲ್ಲಿ ಸುರುವು, ಎಂದು ನುಡಿದನು. ಆಗ ರಾಜನಿಗೆ ಪೂರ್ವರಾತ್ರಿಯಲ್ಲಿ ಹೇಳಿದ ಅಂಬಿಕಾಧವನ ವಚನದ ಸ್ಮರಣೆಯಾಗಿ, ಅವನು ಧೈರ್ಯದಿಂದ ಬ್ರಹ್ಮಚಾರಿಯ ಮುಖದಲ್ಲಿ ಅವನ ಹೇಳಿಕೆಯಂತೆ, ತಪ್ತವಾದ ಸುವರ್ಣರಸವನ್ನು ಸುರುವಿದನು. ಆಗ ಆ ಬ್ರಾಹ್ಮಣ ವಟುವು ತನ್ನ ವಟುವೇಷವನ್ನು ತೊರೆದು, ದಿವ್ಯವಾದ ಭೋಗಮೂರ್ತಿಯಾಗಿ ವಿರಾಜಿಸಹತ್ತಿದನು. ಆಗ ಚಕ್ರವರ್ತಿಗೆ ಆನಂದಾಶ್ಚರ್ಯಗಳುಂಟಾದವು. ಬಳಿಕ ಮರುದಿವಸ ಅವನು ಆ ಮೂರ್ತಿಯನ್ನು ದೇವಾಲಯದಲ್ಲಿ ವಿಧ್ಯುಕ್ತವಾಗಿ ಸ್ಥಾಪಿಸಿ, ಅದಕ್ಕೆ 'ಚಿದಂಬರ ಸಭಾಪತಿ' ಎಂದು ಹೆಸರಿಟ್ಟನು. ಮುಂದೆ ಕೆಲವು ದಿವಸಗಳ ವರೆಗೆ ಆನಂದೋತ್ಸವಗಳನ್ನು ಮಾಡಿ, ಆ ಮೇಲೆ ತನ್ನ ರಾಜ್ಯವನ್ನು ಸೇರಿ, ಸುಖದಿಂದ ಕಾಲಹರಣ ಮಾಡಹತ್ತಿದನು.

## ೩ನೆಯ ಪ್ರಕರಣ.

### ಘೋರ ತಪಶ್ಚರ್ಯೆ.

ಹಿಂದೆ ಎರಡನೆಯ ಪ್ರಕರಣದಲ್ಲಿ ಹೇಳಿದಂತೆ ಮಾರ್ತಂಡ ದೀಕ್ಷಿತರು ಹಿಪ್ಪರಿಗೆಯಿಂದ ಹೊರಟು ಮಾರ್ಗಕ್ರಮಣಮಾಡುತ್ತ ಮಾಡುತ್ತ ಕೆಲವು ದಿವಸಗಳಲ್ಲಿ ಶ್ರೀ ಆಕಾಶಚಿದಂಬರ ಕ್ಷೇತ್ರವನ್ನು ಸೇರಿದರು. ಅಲ್ಲಿ ಮೊದಲು ಅವರು ಕ್ಷೇತ್ರವಿಧಿಯನ್ನು ತೀರಿಸಿ, ಬಳಿಕ ತಪಸನ್ನಾಚರಿಸತೊಡಗಿದರು. ಅವರು ದಿನಾಲು ಬ್ರಾಹ್ಮ್ಯಮುಹೂರ್ತದಲ್ಲೆದ್ದು, ಪ್ರಾತಃಸ್ಮರಣವನ್ನೂ-ಪ್ರಾತರ್ವಿಧಿಯನ್ನೂ ತೀರಿಸಿ, ಶಿವತೀರ್ಥದಲ್ಲಿ ಸ್ನಾನವನ್ನು ಮಾಡಿ, ಸಂಧ್ಯಾದಿ ನಿತ್ಯಕರ್ಮಗಳನ್ನು ನೆರವೇರಿಸಿ, ಶ್ರೀ ಶಂಕರನನ್ನು ಭಕ್ತಿಪೂರ್ವಕವಾಗಿ ಪೂಜಿಸುತ್ತಿದ್ದರು. ಬಳಿಕ ಅವರು ದರ್ಭಾಸನದಲ್ಲಿ ಕುಳಿತು, ಷಡಕ್ಷರೀ ಮಹಾಮಂತ್ರದ ಜಪವನ್ನು ಆರಂಭಿಸುತ್ತಿದ್ದರು. ಮಧ್ಯಾಹ್ನದವರೆಗೆ ಜಪವನ್ನು ಮಾಡಿ, ಅನಂತರ ಮತ್ತೆ ಶಿವತೀರ್ಥದಲ್ಲಿ ಸ್ನಾನಮಾಡಿ, ನಿರ್ಮಲಮನಸಿನಿಂದ ಮಧ್ಯಾಹ್ನದ ಆಹ್ನಿಕವನ್ನು ತೀರಿಸಿ, ಉಮಾಕಾಂತನನ್ನು ಪೂಜಿಸಿ, ಮತ್ತೆ ಜಪಾಸಕ್ತರಾಗುತ್ತಿದ್ದರು. ಪ್ರದೋಷಕಾಲವು ಪ್ರಾಪ್ತವಾಗಲು, ಪುನಃ ಸ್ನಾನಮಾಡಿ, ಪ್ರದೋಷಪೂಜೆಯನ್ನು ಮಾಡುತ್ತಿದ್ದರು. ಪೂಜಾನಂತರದಲ್ಲಿ ಅವರು ಮತ್ತೆ ಯಥಾಪ್ರಕಾರ ಷಡಕ್ಷರೀ ಜಪವನ್ನು ಮಾಡುತ್ತ ಧ್ಯಾನಾಸಕ್ತರಾಗಿ ಮಧ್ಯರಾತ್ರಿಯವರೆಗೆ ಕುಳಿತುಕೊಳ್ಳುತ್ತಿದ್ದರು. ತರುವಾಯ ಸ್ವಲ್ಪ ಕರಕೀ ರಸವನ್ನು ತೆಗೆದು ಅಂಬಿಕಾಧವನಿಗೆ ನೈವೇದ್ಯಮಾಡಿ, ಅನಂತರ ಅದನ್ನು ಸೇವಿಸಿ, ಅಲ್ಲಿಯೇ ಕೃಷ್ಣಾಜಿನದ ಮೇಲೆ ತುಸು ವಿಶ್ರಮಿಸುತ್ತಿದ್ದರು. ಅವರು ಶಿವನ ಹೊರತು ಬೇರೆ ಯಾವದನ್ನೂ ಚಿಂತಿಸುತ್ತಿದ್ದಿಲ್ಲ ಹಾಲು-ನೀರುಗಳು ಸಮರಸವಾಗುವಂತೆ ಅವರ ಮನಸ್ಸು ಶಿವಚರಣದಲ್ಲಿ ಸಮರಸವಾಗಿತ್ತು. ಮಾರ್ತಂಡ ದೀಕ್ಷಿತರ ತಪಸ್ತೇಜವು ದಿನವೊಂದಕ್ಕೆ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯಾಗಹತ್ತಿತು. ಇದೇ ಕ್ರಮವು ಹನ್ನೆರಡು ವರುಷಗಳವರೆಗೆ ಸಾಗಿತು.

ಒಂದು ದಿವಸ ಮಾರ್ತಂಡ ದೀಕ್ಷಿತರು ಆನಂದದಿಂದ ಶಿವಧ್ಯಾನವನ್ನು ಮಾಡುತ್ತ ಕುಳಿತಿರಲು, ನಿಶಾ-ಸಮಯವು ಪ್ರಾಪ್ತವಾಯಿತು; ಹಾಗೂ ಆ ಮಹಾತ್ಮರ ದೃಢವಾದ ಅನುಷ್ಠಾನದಿಂದ ಅವರ ಊರ್ಜಿತಕಾಲವು ಸಮೀಪಿಸಿತು! ಆಗ ಶ್ರೀಚಿದಂಬರನು ಪ್ರತ್ಯಕ್ಷನಾಗಿ:-"ದೀಕ್ಷಿತವರ್ಯನೇ, ಏಳು-ಏಳು, ನಿನ್ನ

ತಪಸ್ಸು ಸಿದ್ಧಿಸಿತು. ನಾನು ಪ್ರಸನ್ನನಾಗಿದ್ದೇನೆ; ನಿನ್ನ ಮನೋಬಯಕೆಗಳನ್ನು ಹೇಳು. ಅವುಗಳನ್ನು ಪೂರ್ಣಮಾಡುವೆನು'' ಎಂದು ನುಡಿದು, ತನ್ನ ವೈಭವ ದೊಂದಿಗೆ ದೀಕ್ಷಿತರ ಎದುರಿನಲ್ಲಿ ನಿಂತುಕೊಂಡನು. ಶಿವಧ್ಯಾನದಲ್ಲಿ ಲೀನರಾದ ದೀಕ್ಷಿತರು ಶಿವಾವಿರ್ಭಾವವಾದದ್ದನ್ನು ತಿಳಿಯದೆ, ಹಾಗೇ ಧ್ಯಾನಾಸಕ್ತರಾಗಿ ಕುಳಿತುಕೊಂಡರು. ಆಗ ಭಕ್ತಾಧೀನನಾದ ಸದಾಶಿವನು ದೀಕ್ಷಿತರ ತಲೆಯ ಮೇಲೆ ವರದ ಹಸ್ತವನ್ನಿಟ್ಟು ಅವರನ್ನು ಅಲ್ಲಾಡಿಸಿ:-ಏಳು-ಏಳು, ಎಂದು ನುಡಿ ದನು. ಆಗ ದೀಕ್ಷಿತರು ಎಚ್ಚತ್ತು ನೋಡಲು, ಶಾಂತವಾದ ತೇಜಸ್ಸು ನಾಲ್ಕೂ ಕಡೆಗೆ ಹಬ್ಬಿತ್ತು. ಅದನ್ನು ನೋಡಿ ಅವರ ಕಣ್ಣುಗಳು ಮುಚ್ಚಿದವು. ಹೀಗೆ ಮುಹೂರ್ತಕಾಲವು ಕ್ರಮಿಸಿ ಹೋದ ಬಳಿಕ, ಅವರು ಮತ್ತೆ ಕಣ್ತೆರೆದು ನೋಡಲು, ಪುರಾಣ ಪುರುಷನಾದ ಮಹಾದೇವನು ತನ್ನ ವೈಭವದೊಂದಿಗೆ ನಿಂತಿದ್ದು ಅವರ ಕಣ್ಣಿಗೆ ಬಿತ್ತು. ಶುಭ್ರ ಜಟಾಮಂಡಲವೂ, ತ್ರಿನೇತ್ರಗಳೂ, ಪಂಚವಕ್ತ್ರಗಳೂ, ಭಸ್ಮೋದ್ಧೂಲಿತವಾದಗಾತ್ರವೂ, ಶುಭ್ರವಾದ ಸ್ಫಟಿಕಹಾರವೂ, ರುದ್ರಾಕ್ಷಮಾಲೆಗಳೂ ಒಪ್ಪುತ್ತಿರಲು, ಶಂಕರನು ದೀಕ್ಷಿತರನ್ನು ಆನಂದಸಾಗರ ದಲ್ಲಿ ಮುಳುಗಿಸಿಬಿಟ್ಟನು! ದೀಕ್ಷಿತರು ಈ ಪ್ರಕಾರ ತೇಜೋರಾಶಿಯಾದ ಶಿವ ಮೂರ್ತಿಯನ್ನು ನೋಡಿ, ಮುದಿತರಾಗಿ ಸಾಷ್ಟಾಂಗವೆರಗಲು, ದಯಾಪರನಾದ ಶಂಕರನು ದೀಕ್ಷಿತರನ್ನು ಹಿಡಿದೆತ್ತಿ, ಪ್ರೇಮಪುರಸ್ಸರವಾಗಿ ದೃಢಾಲಿಂಗನವನ್ನು ಕೊಟ್ಟು, ವರಗಳನ್ನು ಬೇಡು, ಎಂದು ನುಡಿದನು. ಆಗ ಮಾರ್ತಂಡ ದೀಕ್ಷಿತರು ಕೈಜೋಡಿಸಿ, ಒಮ್ಮನಸಿನಿಂದ ಮಹೇಶ್ವರನನ್ನು ಸ್ತುತಿಸಿ, ‹‹ಹರನೇ, ನೀನು ಪ್ರಸನ್ನನಾಗಿರಲು, ನಾನು ಯಾವ ವರಗಳನ್ನು ಬೇಡಲಿ? ನಿನ್ನ ಚರಣದಲ್ಲಿ ದೃಢ ತರವಾದ ಭಕ್ತಿಯೊಂದನ್ನೇ ದಯಪಾಲಿಸೆ''ಂದು ಪುನಃ ಪುನಃ ಪ್ರಣಾಮಪೂರ್ವಕ ವಾಗಿ ಬೇಡಿಕೊಂಡರು. ಕರುಣಾಸಾಗರನಾದ ಮಹಾದೇವನು ದೀಕ್ಷಿತರ ನುಡಿ ಗಳನ್ನು ಕೇಳಿ:—ದೀಕ್ಷಿತಮಣಿಯೇ, ಪುತ್ರಕಾಮನವನ್ನು ಮರೆತೆಯಾ? ನೀನು ಪುತ್ರನನ್ನು ಬಯಸಿ ಈ ಘೋರವಾದ ತಪಶ್ಚರ್ಯವನ್ನಾಚರಿಸಲಿಲ್ಲವೆ? ಎಂದು ನುಡಿ ದನು. ಆಗ ದೀಕ್ಷಿತರು ಪುತ್ರಕಾಮನವನ್ನು ಜ್ಞಾಪಕಕ್ಕೆ ತಂದಕೊಂಡು:—ಎಲೈ ಉಮಾಧವನೇ, ಅತ್ಯಂತ ದುರ್ಲಭವಾದ ನಿನ್ನ ದರ್ಶನದಿಂದ ಪರವಶನಾಗಿ ನನ್ನ ಪೂರ್ವದ ಸಂಕಲ್ಪವನ್ನು ಮರೆತು ಬಿಟ್ಟೆನು; ಆದರೆ ನೀನೇ ಈ ದೀನನನ್ನು ಉದ್ಧರಿಸಬೇಕೆಂದು ಅದನ್ನು ಸ್ಮರಣಕ್ಕೆ ತಂದುಕೊಟ್ಟೆ; ನಿನ್ನ ಅಪಾರವಾದ ದಯ ದಿಂದ ನಾನು ಪುನೀತನಾದೆನು. ಈಗ ನಿನ್ನಂಥ ಒಬ್ಬ ಪುತ್ರನನ್ನು ಕೊಟ್ಟು,

ನನ್ನನ್ನು ರಕ್ಷಿಸು, ಎಂದು ಬೇಡಿಕೊಂಡರು. ಅದಕ್ಕೆ ಶಂಕರನು:—"ನಾನು ಭೂಮಿಯ ಮೇಲೆ ಧರ್ಮಸ್ಥಾಪನಾರ್ಥವಾಗಿಯೂ, ದೀನೋದ್ಧಾರಕ್ಕಾಗಿಯೂ ಅವತಾರ ತಾಳುವದು ಅವಶ್ಯವಾಗಿದೆ! ನೀನೂ ಸುತೇಚ್ಛು ಆಗಿರುವಿ!! ಆದುದರಿಂದ ನಾನೇ ನಿನ್ನ ಪುತ್ರನಾಗಿ ಜನಿಸುವೆನು!!! ನೀನು ನಿನ್ನ ಅನುಷ್ಠಾನವನ್ನು ಪೂರ್ಣಮಾಡು" ಎಂದು ವರಪ್ರದಾನವನ್ನು ಮಾಡಿದನು. ದೀಕ್ಷಿತರು ಮಹೇಶ್ವರನು ಮಾಡಿದ ವರಪ್ರದಾನವನ್ನು ಕೇಳಿ:—ಶ್ರೀ ಚಿದಂಬರನೇ, ನೀನು ಮನುಷ್ಯನಾಗಿ ಅವತರಿಸತಕ್ಕವನಷ್ಟೇ; ಆಗ ನಿನ್ನ ನೆನಪು ಆಗುವದಕ್ಕಾಗಿ ನನಗೆ ಏನಾದರೊಂದು ಅವತಾರದ ಕುರುಹನ್ನು ಹೇಳು, ಎಂದು ಕೇಳಿಕೊಳ್ಳಲು, ಚಿದಂಬರನು:—ನಾನು ಹುಟ್ಟುತ್ತಲೇ ನನ್ನ ಬಲಗಿವಿಯಲ್ಲಿ ಕೋಮಲವಾದ ಬಿಲ್ವಪತ್ರವೂ, ಶುಭ್ರಾಕ್ಷತೆಗಳೂ ನಿನ್ನ ದೃಷ್ಟಿಗೆ ಬೀಳುವವು. ಇದೇ ನನ್ನ ಅವತಾರದ ಗುರುತು, ಎಂದು ಹೇಳಿ, ಶಂಕರನು ಅಂತರ್ಧಾನವನ್ನೈದಿದನು. ಬಳಿಕ ದೀಕ್ಷಿತರು ಶಂಕರನು ಅಂತರ್ಧಾನವನ್ನೈದಿದ ಸ್ಥಳಕ್ಕೆ ನಮಸ್ಕಾರಮಾಡಿ, ಪತ್ನಿಗೆ ಶಿವಾನುಗ್ರಹದ ಸಂಗತಿಯನ್ನು ತಿಳಿಸಿದರು ಅದನ್ನು ಕೇಳಿ ಪತಿನಿಷ್ಠಳಾದ ಲಕ್ಷ್ಮೀಮಾತೆಗೆ ಅತ್ಯಾನಂದವಾಯಿತು. ತರುವಾಯ ಮಾರ್ತಂಡ ದೀಕ್ಷಿತರು ಅನುಷ್ಠಾನವನ್ನು ಪೂರ್ಣಮಾಡಿ, ಭಾರ್ಯೆಯೊಡನೆ ಮುರಗೋಡಕ್ಕೆ ಬಂದರು.

ಮುಂದೆ ಕೆಲವು ದಿವಸಗಳ ತರುವಾಯ ಮಾರ್ತಂಡ ದೀಕ್ಷಿತರು ಬ್ರಹ್ಮತೇಜಸ್ಸಿನ ವೃದ್ಧ್ಯರ್ಥವಾಗಿ, ಮತ್ತೆ ಗಾಯತ್ರೀ ಪುರಶ್ಚರಣವನ್ನು ಮಾಡಬೇಕೆಂದು ಯೋಚಿಸಿ, ಮುರಗೋಡದಿಂದ ಪೂರ್ವಕ್ಕೆ ನಾಲ್ಕು ಮೈಲುಗಳ ಮೇಲಿರುವ § ಸುಗೋಲ (ಸೊಗಲು) ಎಂಬ ಕ್ಷೇತ್ರಕ್ಕೆ ಪತ್ನೀಸಮೇತರಾಗಿ ಹೊರಟು ಹೋದರು.

ಈ ಸುಗೋಲ ಕ್ಷೇತ್ರವು ಸೃಷ್ಟಿ-ಸೌಂದರ್ಯದ ತವರುಮನೆಯಾಗಿರುವದು. ಇದು ರಮ್ಯವಾದ ಗಿಡಗಳಿಂದಲೂ, ಸಂದಟಿತವಾದ ಕೇತಕಿಯ ಬನಗಳಿಂದಲೂ, ಅಲ್ಲಲ್ಲಿ ಹರಿಯುವ ನೀರಿನ ಸಣ್ಣ ಸಣ್ಣ ಪ್ರವಾಹಗಳಿಂದಲೂ ಗುಡ್ಡಗಳ ಅಮೋಘವಾದ ಸೌಂದರ್ಯದಿಂದಲೂ, ನಾನಾತರದ ದೇವಾಲಯಗಳಿಂದಲೂ

---

§ ಸುಗೋಲ. ಎಂಬ ಋಷಿಗಳು ಈ ಸ್ಥಾನದಲ್ಲಿ ಎಷ್ಟೋ ದಿವಸಗಳ ವರೆಗೆ ತಪಸ್ಸನ್ನಾಚರಿಸಿ, ಈಶ್ವರನನ್ನು ಪ್ರಸನ್ನೀಕರಿಸಿ, ವರವನ್ನು ಪಡಕೊಂಡದ್ದರಿಂದ ಇದಕ್ಕೆ ಈ ಹೆಸರು ಉಂಟಾಯಿತು. ಇದರ ಸಂಬಂಧವಾಗಿ ಹೆಚ್ಚಿನ ವಿವರವನ್ನು ತಿಳಕೊಳ್ಳಬೇಕೆಂದಿಚ್ಛಿಸುವವರು ಶ್ರೀಮಲಾಪಹಾರೀ ಮಾಹಾತ್ಮ್ಯವನ್ನು ಅವಲೋಕಿಸಬಹುದು.

ಕಂಗೊಳಿಸುತ್ತದೆ. ತಡಿಸಲು, ಸೂಜಿಗಲ್ಲು, ಕದಂಬರಾಜನಕೋಟೆ, ವಿಶ್ವೇಶ್ವರನ ದೇವಾಲಯ ಮತ್ತು ದುರ್ಗಾದೇವಾಲಯ ಮೊದಲಾದ ಎಷ್ಟೋ ಸ್ಥಳಗಳು ಈಗ್ಯೂ ನೋಡತಕ್ಕಂಥವುಗಳಾಗಿವೆ. ಈ ಕ್ಷೇತ್ರದ ಅಧಿದೈವತವು † ಶ್ರೀ ಸೋಮೇಶ್ವರನು. ಇಲ್ಲಿ ಪ್ರತಿವರ್ಷ ಮಾಘ ಮಾಸದಲ್ಲಿ ಮನ್ವಾದಿ ತಿಥಿಯೊಳಗೆ ಪಾರ್ವತಿಯ ವಿವಾಹ ಸಮಾರಂಭವು ಈಗ್ಯೂ ಆಗುತ್ತದೆ ಈ ಸಮಾರಂಭವನ್ನು ನೋಡಲು, ದೂರ ದೂರಿನ ಜನರು ಬರುತ್ತಾರೆ. ಈ ಕ್ಷೇತ್ರದ ದಕ್ಷಿಣ ದಿಕ್ಕಿಗೆ ಇದೇ ಹೆಸರಿನ ಒಂದು ಗ್ರಾಮವಿತ್ತು. ಅದು ಈಗ ಹಾಳಾಗಿದೆ. ಸುಗೋಲ ಕ್ಷೇತ್ರವು ದಂಡಕಾರಣ್ಯದ ಭಾಗವೆಂತಲೂ, ಕಣ್ವ-ಶೃಂಗ ಮೊದಲಾದ ಋಷಿ ವರ್ಯರು ಈ ಸ್ಥಾನದಲ್ಲಿ ತಪಸ್ಸು ಮಾಡಿದರೆಂತಲೂ ಇತಿಹಾಸದಿಂದ ಗೊತ್ತಾಗುತ್ತದೆ.

ಇಂತಹ ಪವಿತ್ರವಾದ ಸುಗೋಲ ಕ್ಷೇತ್ರಕ್ಕೆ ಮಾರ್ತಂಡ ದೀಕ್ಷಿತರು ಹೋದ ಬಳಿಕ, ಅವರು ಮೊದಲು ಶ್ರೀ ಸೋಮನಾಥನನ್ನು ಪೂಜಿಸಿ, ಬಳಿಕ ದುರ್ಗಾದೇವಾಲಯದ ಬಳಿಯಲ್ಲಿ ವೇದ ಮಾತೆಯಾದ ಗಾಯತ್ರೀಪುರಶ್ಚರಣ ವನ್ನಾರಂಭಿಸಿದರು. ಅಲ್ಲಿ ಅವರು ಮೂರು ಪುರಶ್ಚರಣಗಳನ್ನು ಮಾಡಿ, ಈಶಾನುಗ್ರಹವನ್ನು ಸಂಪಾದಿಸಿದನಂತರ ಸಪ್ತಸಂಸ್ಥೆಗಳನ್ನೂ, ಕೂಷ್ಮಾಂಡ ಹೋಮ ವನ್ನೂ ಮಾಡಿದರು. ತರುವಾಯ ಅವರು ಅಲ್ಲಿ ಉಚಿತವಾದ ದಾನ-ಧರ್ಮಗಳನ್ನೂ, ಬ್ರಾಹ್ಮಣ ಭೋಜನವನ್ನೂ ಮಾಡಿಸಿ, ಮತ್ತೆ ಅಲ್ಲಿಂದ ತಮ್ಮ ಕುಲದೇವತೆಯ ದರ್ಶನಕ್ಕಾಗಿ ದೇವರಹಿಪ್ಪರಿಗಿಗೆ ಹೊರಟುಹೋದರು.

ಹಿಪ್ಪರಿಗಿಯಲ್ಲಿ ದೀಕ್ಷಿತರು ಒಂದು ದಿವಸ ಶ್ರೀ ಮಲ್ಲಾರಿಯನ್ನು ವಿಧ್ಯುಕ್ತವಾಗಿ ಪೂಜಿಸಿ, ಅವನ ಗುಣಾನುವಾದವನ್ನು ಮಾಡುತ್ತ ಕುಳಿತಿರಲು, ಮಾರ್ತಂಡ ಭೈರವನು ಅವರ ಭಕ್ತಿಗೆ ಮೆಚ್ಚಿ, ಒಮ್ಮಿಂದೊಮ್ಮೆ ಒಗ್ಗಯ್ಯನ ರೂಪದಿಂದ ಪ್ರಕಟನಾಗಿ:-ದೀಕ್ಷಿತನೇ, ನಾನು ಬಹಳ ಕ್ಷುಧಿತನಾಗಿದ್ದೇನೆ. ನನಗೆ ಭೋಜನ ವನ್ನು ಕೊಡು. ಅಂದರೆ ನಿನ್ನ ಕಲ್ಯಾಣವಾಗುವದು, ಎಂದು ನುಡಿದನು. ಆಗ ದೀಕ್ಷಿತರು ಮನಸ್ಸಿನಲ್ಲಿ:—ಒಗ್ಗಯ್ಯನ ಮುಖಚರ್ಯೆಯ ಮೇಲಿಂದ ಇವನು ಸಾಕ್ಷಾತ್ ಪರಮೇಶ್ವರನೆಂದೂ, ನನ್ನ ಪರೀಕ್ಷಾರ್ಥವಾಗಿ ಈ ಪ್ರಕಾರದ ರೂಪ

† ಪರಶುರಾಮನು ಎಲ್ಲ ಕ್ಷತ್ರಿಯರನ್ನು ಸಂಹರಿಸಿದ ಬಳಿಕ ತದ್ದೋಷ ಪರಿಹಾರಾರ್ಥವಾಗಿ ಈ ಸುಗೋಲ ಕ್ಷೇತ್ರದಲ್ಲಿಯೇ ಸೋಮಯಾಗವನ್ನು ಮಾಡಿ, ಆ ಯಾಗದ ಕುರುಹು ಎಂದು ಈ ಸೋಮೇಶ್ವರನನ್ನು ಸ್ಥಾಪಿಸಿದ್ದಾನಂತೆ. —ಮಲಾಪಹಾರಿ ಮಾಹಾತ್ಮ್ಯ.

ವನ್ನು ಧರಿಸಿರುವನೆಂದೂ ಸಂದೇಹವಿಲ್ಲದೆ ಊಹಿಸಿ, ಆತನಿಗೆ ಯಥೇಚ್ಛವಾಗಿ ಭೋಜನವನ್ನಿತ್ತರು. ಆಗ ಒಗ್ಗಯ್ಯ ವೇಷಧಾರಿಯಾದ ಮಲ್ಲಾರಿಯು ಸಂತುಷ್ಟನಾಗಿ, ತನ್ನ ನಿಜಸ್ವರೂಪವನ್ನು ವ್ಯಕ್ತಮಾಡಿ:-ದೀಕ್ಷಿತೇಂದ್ರನೇ, ಈ ಮೊದಲು ನಿನಗೆ 'ನಿನ್ನ ಉದರದಿಂದ ಸಾಕ್ಷಾತ್ ಚಿದಂಬರನೇ ನಿನ್ನ ಮಗನಾಗಿ ಜನಿಸುವನೆಂದು ವರವನ್ನು ಕೊಟ್ಟಿರುವೆನಷ್ಟೇ? ಈಗ ಮತ್ತೊಂದು ವರವನ್ನು ಕೊಡುತ್ತೇನೆ. ಈ ವರದಿಂದ ನಿನಗೆ ಮತ್ತೊಬ್ಬ ಮಗನು ಭಾಸ್ಕರಾಂಶದಿಂದ ಜನಿಸುವನು. ಅವನಿಗೆ ಪ್ರಭಾಕರ ಎಂದು ಹೆಸರನ್ನಿಡು. ಎಂದು ನುಡಿದು, ನೋಡ ನೋಡುವಷ್ಟರಲ್ಲಿ ಗುಪ್ತನಾದನು. ಬಳಿಕ ದೀಕ್ಷಿತರು ಮಾರ್ತಂಡಭೈರವನು ಗುಪ್ತವಾದ ಸ್ಥಳಕ್ಕೆ ನಮಸ್ಕಾರ ಮಾಡಿ, ಮನೆಗೆ ಹೋದರು; ಹಾಗು ಪತ್ನಿಗೆ ಆದ ವೃತ್ತಾಂತವನ್ನೆಲ್ಲ ಅರುಹಿದರು. ಮುಂದೆ ಕೆಲವು ದಿವಸಗಳವರೆಗೆ ಅವರು ಅಲ್ಲಿಯೇ ಇದ್ದುಕೊಂಡು, ತರುವಾಯ ಹೆಂಡತಿಯೊಡನೆ ಮತ್ತೆ ಮರಳಿ ಮುರುಗೋಡಕ್ಕೆ ಬಂದು, ಮೊದಲಿನಂತೆ ವೇದಧರ್ಮಾಸಕ್ತರಾಗಿ, ಕಾಲಹರಣ ಮಾಡ ಹತ್ತಿದರು.

---

# ಎರಡನೆಯ ಭಾಗ.

## ಪುತ್ರಧರ್ಮ ಪ್ರದರ್ಶನ.

### ೧ನೆಯ ಪ್ರಕರಣ.

### ಶ್ರೀ ಚಿದಂಬರಾವತಾರ.

ಬಭೂವ ಭೂವೌ ಪರಮೇಶ್ವರೋsಸೌ ಚಿದಂಬರಾಖ್ಯಃ ಸ ಶಿವೋsವತೀರ್ಣಃ ||
ಯಸ್ಯಪ್ರಭಾವೋ ನಿಗಮೈರಗಮ್ಯೋ ಯನ್ಮಾಯಯಾ ಮುಹ್ಯತಿ ಜೀವಲೋಕಃ ||
— ಭಕ್ತಾನಂದ



ಮೇರೆಗೆ ಮಾರ್ತಂಡ ದೀಕ್ಷಿತರು ಈಶಾನುಗ್ರಹವನ್ನು ಸಂಪಾದಿಸಿ, ಮುರಗೋಡದಲ್ಲಿ ಪ್ರತಿನಿತ್ಯ ಶಿವಾರಾಧನೆಯನ್ನು ಮಾಡುತ್ತ ಆನಂದದಿಂದ ಕಾಲಹರಣ ಮಾಡುತ್ತಿರಲು, ಈಶ್ವರಾನುಗ್ರಹದ ಸಮಯವು ಪ್ರಾಪ್ತವಾಯಿತು. ಶ್ರೀ ಚಿದಂಬರನು ತಾನು ವರಪ್ರದಾನ ಮಾಡಿದಂತೆ ಧರ್ಮರಕ್ಷಣಕ್ಕೋಸ್ಕರ ಅವತರಿಸುವದಕ್ಕಾಗಿ ಶಕೆ ೧೬೭೮ನೇ ಮಾಘ ಮಾಸದಲ್ಲಿ ಲಕ್ಷ್ಮೀಮಾತೆಯ

ಗರ್ಭವನ್ನಲಂಕರಿಸಿದನು ಭಗವದ್ವರದಂತೆ ತಮ್ಮ ಪತ್ನಿಯು ಗರ್ಭಿಣಿಯಾದದ್ದನ್ನು ನೋಡಿ ದೀಕ್ಷಿತರಿಗೆ ಪರಮ ಸಂತೋಷವಾಯಿತು. ತಾವು ಬಹು ಭಾಗ್ಯಶಾಲಿಗಳೆಂದು ನೆನಿಸಿದರು. ಯಜ್ಞ, ದಾನ, ಜಪ, ತಪಗಳಿಂದ ದುರ್ಲಭನಾದ ಚಿದಂಬರನು ಇನ್ನು ಮೇಲೆ ತಮ್ಮೊಡನೆ ಆಡುವನೆಂದು ತಿಳಿದು, ಅವರು ಕೃತಕೃತ್ಯರಾದರು. ದೀಕ್ಷಿತಸತಿಯು ಪುಣ್ಯ ಗರ್ಭಲಾಂಛನಗಳು ಶುಕ್ಲೇಂದುವಿನಂತೆ ಬೆಳೆಯುಹತ್ತಿದವು. ಗರ್ಭಲಾಂಛನಗಳಿಂದ ಲಕ್ಷ್ಮೀಮಾತೆಯು ಸೌಂದರ್ಯವು ಹೆಚ್ಚಿತು. ಶಾಂತವಾದ ಬ್ರಹ್ಮತೇಜಸ್ಸು ಮುಖದಲ್ಲಿ ಉಕ್ಕಹತ್ತಿತು. ಸದಾನಂದಿತಳಾದ ಅವಳು ಯಾವಾಗಲು ಕಣ್ಣುಗಳನ್ನು ಮುಚ್ಚಿಕೊಂಡು, ಮನದಲ್ಲಿ ಅಂತಜ್ಯೋತಿಯನ್ನು ಧ್ಯಾನಿಸುತ್ತ ಕೂತುಕೊಳ್ಳಲು, ಅವಳಿಗೆ ಆಗಾಗ್ಗೆ ರೋಮಾಂಚಗಳೇಳುವವು. ಅಂತರಂಗದಲ್ಲಿ ಪ್ರತ್ಯಕ್ಷ ಚಿದಂಬರನು ಪ್ರವೇಶಿಸಿದ್ದರಿಂದ, ಲಕ್ಷ್ಮೀಮಾತೆಯು ದ್ವೈತಭಾವವನ್ನಳಿದು, ಚರಾಚರಗಳಿಂದ ಪೂರ್ಣವಾಗಿರುವ ಜಗತ್ತನ್ನೆಲ್ಲ ಚಿದಂಬರರೂಪವೆಂದು ಭಾವಿಸಿ, ಜಾಗ್ರುತಿ, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯದಲ್ಲಾದರೂ ಶಿವಧ್ಯಾನದಲ್ಲಿ ಸಮರಸಳಾಗಿ ನಿಜಾನಂದದಲ್ಲಿ ಇರತೊಡಗಿದಳು.

ಹೀಗೆ ಲಕ್ಷ್ಮೀಮಾತೆಯು ಯಾವಾಗಲೂ ಆನಂದದಿಂದ ಧ್ಯಾನಮಾಡುತ್ತ ಕೂಡುವದನ್ನು ನೋಡಿ, ಮಾರ್ತಾಂಡ ದೀಕ್ಷಿತರಿಗೆ ಬಹಳ ಆಶ್ಚರ್ಯವಾಯಿತು. ಒಂದು ದಿವಸ ಅವರು ಬ್ರಹ್ಮಚಿಂತನೆಯಲ್ಲಿ ಮಗ್ನಳಾದ ಪತ್ನಿಯನ್ನು ಕುರಿತು:-- "ನೀನು ಹೀಗೆ ಬಹುಕಾಲ ಧ್ಯಾನಮಾಡುತ್ತ ಯಾಕೆ ಕುಳಿತುಕೊಳ್ಳುವಿ? ನಿನ್ನ ಮನೋಬಯಕೆಗಳನ್ನಾದರೂ ಹೇಳು. ಅವುಗಳನ್ನು ಪೂರೈಸುವೆನು. ಮಾತಾಡು, ಮಾತಾಡು, ಎಂದು ನುಡಿದರು, ಆದರೆ ಚಿದಾನಂದದಲ್ಲಿ ಲೀನವಾಗಿ ನಿರ್ವಿಕಲ್ಪಳಾಗಿರುವ ಆ ದೀಕ್ಷಿತಸತಿಯು ಯಾವ ಮಾತನ್ನೂ ಆಡದೆ ಸುಮ್ಮನಿದ್ದಳು. ಅದನ್ನು ನೋಡಿ ದೀಕ್ಷಿತರು ಮನಸಿನಲ್ಲಿ:--ಇವಳಿಗೆ ಏನಾಗಿರಬಹುದು? ಇವಳು ಹೀಗೇಕೆ ಮಾಡುತ್ತಿರಬಹುದು? ಮಾತಾಡುವದಿಲ್ಲವೇಕೆ? ಎಂದು ಚಿಂತಿಸಿ, ಮತ್ತೆ ಪತ್ನಿಯನ್ನು ಕುರಿತು—ನಿನ್ನ ಇಚ್ಛೆಯು ಏನಿರುವದು? ಖಂಡಿತವಾಗಿ ಹೇಳು, ಎಂದು ಕೂಗಲು, ಪತಿವ್ರತಾಶಿರೋಮಣಿಯಾದ ಲಕ್ಷ್ಮೀಮಾತೆಯು ನೇತ್ರಗಳನ್ನು ತೆಗೆದು, ಬಳಿಯಲ್ಲಿರುವ ಪತಿಯನ್ನು ನೋಡಿ:—ನಿರಿಚ್ಛನಾಗಿರುವ ನನಗೆ ಏನು ಬೇಕೆಂದು ಯಾಕೆ ಕೇಳುವಿರಿ? ಎಲ್ಲ ಕಡೆಯಲ್ಲಿ ನಾನೇ ಪೂರ್ಣವಾಗಿ ವ್ಯಾಪಿಸಿರುವೆನು. ಎಲ್ಲ ಚರಾಚರವಸ್ತುಗಳಿಗೆ ನಾನೇ ಮೂಲಕಾರಣನಾಗಿರುವೆನು.

ಧರ್ಮವನ್ನು ಸ್ಥಾಪಿಸುವೆನು! ಬ್ರಹ್ಮಕರ್ಮವನ್ನು ತಿಳಿಸುವೆನು! ಕಲಿಯನ್ನು ಬಿಗಿದು ಕಟ್ಟುವೆನು! ಭಕ್ತಾವಳಿಗೆ ನಿಜಾನಂದವನ್ನು ಕೊಡುವೆನು! ಎಂದು ನುಡಿದಳು ಧರ್ಮಜ್ಞಾನದಿಂದ ತುಂಬಿ ತುಳುಕುತ್ತಿರುವ ಪತ್ನಿಯ ಮಾತುಗಳನ್ನು ಕೇಳಿ, ದೀಕ್ಷಿತರು ಪರಮಾಶ್ಚರ್ಯಬಟ್ಟು, ಭಗವದ್ವಾಕ್ಯಗಳನ್ನು ಕೇಳುವದಕ್ಕಾಗಿ ಪುನಃ ಪುನಃ ಪ್ರಶ್ನೆಗಳನ್ನು ಮಾಡತೊಡಗಿದರು. ಆಗ ಲಕ್ಷ್ಮೀಮಾತೆಯು ಅವುಗಳಿಗೆ ಪ್ರತ್ಯುತ್ತರವಾಗಿ ಒಮ್ಮೆ:—ನನಗೆ ಬೇರೆ ಯಾವ ಇಚ್ಛೆಯೂ ಇಲ್ಲ! ಧರ್ಮಸ್ಥಾಪನ, ಜಗದುದ್ಧರಣ, ಮತ್ತು ಭಕ್ತರಕ್ಷಣ ಇವುಗಳನ್ನೇ ಬಯಸುವೆನು; ಎಂದೂ, ಮತ್ತೊಮ್ಮೆ:-ಕೈಲಾಸಾಧೀಶನಾದ ಹರನು, ಮನೋಹರವಾದ ಬಾಲರೂಪದಿಂದ ಯಾವಾಗ್ಗೆ ದರ್ಶನ ಕೊಡುವನೆಂಬದನ್ನು ಮಾತ್ರ ಚಿಂತಿಸುವೆನು, ಎಂದೂ ನುಡಿದಳು.

ಈ ಪ್ರಕಾರ ದೀಕ್ಷಿತ ಸತಿಯು ಅದ್ವೈತ ಮಾತುಗಳನ್ನಾಡುತ್ತ, ಗರ್ಭಸ್ಥನಾದ ಚಿದಂಬರನ ಹೃದ್ಗತವನ್ನು ಒಡನುಡಿಯುತ್ತ, ವಲ್ಲಭನನ್ನು ಸಂತೋಷಬಡಿಸುತ್ತಿದ್ದಳು. ಮಾರ್ತಂಡ ದೀಕ್ಷಿತರು ಸತಿಯ ಮಾತಿಗೆ ಆನಂದಭರಿತರಾಗಿ, ಆರ್ಯಧರ್ಮಕ್ಕನುಸಾರವಾಗಿ ಸೀಮಂತೋನ್ನಯನ ಮೊದಲಾದ ಗರ್ಭಸಂಸ್ಕಾರಗಳನ್ನು ಮಾಡಿ, ಈಶಾವತಾರದ ಮಾರ್ಗವನ್ನು ನಿರೀಕ್ಷಿಸುತ್ತ ಕಾಲಹರಣ ಮಾಡಹತ್ತಿದರು.

ಲಕ್ಷ್ಮೀಮಾತೆಗೆ ಒಂಬತ್ತು ತಿಂಗಳು ತುಂಬಿ, ಹತ್ತನೇ ತಿಂಗಳು ಪ್ರಾಪ್ತವಾಗಲು, ಶಕೆ ೧೬೫೦ ನೇ ಬಹುಧಾನ್ಯ ಸಂವತ್ಸರದ ಕಾರ್ತಿಕ ಕೃಷ್ಣ ಷಷ್ಠಿಯ ಶುಭತಿಥಿಯಲ್ಲಿ ಸೋಮವಾರ ದಿವಸ ಪಂಚ ಶುಭಗ್ರಹಗಳು ಸ್ವಕ್ಷೇತ್ರದಲ್ಲಿ ಬಂದಿರಲು, ಮಕರ ಲಗ್ನದ ಎರಡು ಪ್ರಹರವಾಗಿರಲು, ಅಧರ್ಮಾಂಧಕಾರ ಭಾನುವು ಅವತರಿಸಿದನು. ಜಗನ್ನಾಯಕನ ಈ ಅವತಾರ ಸಮಯದಲ್ಲಿ ತಂಗಾಳಿಯು ಸುಳಿಯಿತು. ಸಾಧು- ಸತ್ಪುರುಷರ ಚಿತ್ತಗಳೂ, ದಶ-ದಿಕ್ಕುಗಳೂ ನಿರ್ಮಲವಾದವು! ದೇವದುಂದುಭಿಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು. ಈ ಪ್ರಕಾರ ಎಲ್ಲೆಡೆಗಳಲ್ಲಿ ಆನಂದವುಂಟಾಗುತ್ತಿರಲು, ಲಕ್ಷ್ಮೀಮಾತೆಯು ಪ್ರಸವವೇದನೆಯಿಲ್ಲದೆ, ತನ್ನ ಎದುರಿನಲ್ಲಿ ನಿಂತಿರುವ ಮನೋಹರವೂ, ಅಷ್ಟವರ್ಷಾತ್ಮಕವೂ, ತೇಜಃಪುಂಜವೂ ಆದ ಮೂರ್ತಿಯನ್ನು ನೋಡಿದಳು. ಈ ಸುದ್ದಿಯು ಮಾರ್ತಂಡ ದೀಕ್ಷಿತರಿಗೆ ತಿಳಿಯಲು, ಅವರಾದರೂ ಈ ಅದ್ಭುತ ಚಮತ್ಕಾರವನ್ನು ನೋಡಬೇಕೆಂದು ಬಹಳೇ ಆತುರದಿಂದ ಸೂತಿಕಾಗೃಹಕ್ಕೆ ಬಂದರು.

ಶಂಕರನ ರಮ್ಯಮೂರ್ತಿಯು ಕಾಂತಿಯಿಂದ ಸೂತಿಕಾಗೃಹವು ಪ್ರಕಾಶಮಾನವಾಗಿತ್ತು. ವರದಾನ ಕಾಲದಲ್ಲಿ ಹೇಳಿದ ಕುರುಹುಗಳಂತೆ, ಮೂರ್ತಿಯ ಬಲಗಿವಿಯಲ್ಲಿ ಕೋಮಲವಾದ ಬಿಲ್ವದಳವೂ, ಶುಭ್ರಾಕ್ಷತೆಗಳೂ ಶೋಭಿಸುತ್ತಿದ್ದವು. ಶರೀರವು ಸರ್ವಾಲಂಕಾರಗಳಿಂದ ಭೂಷಿತವಾಗಿತ್ತು. ಆ ಅಷ್ಟವರ್ಷಾತ್ಮಕವಾದ ಮೂರ್ತಿಯ ಮಂದಸ್ಮಿತದಿಂದ ವಿರಾಜಿಸುವ ಮುಖೇಂದುವನ್ನೂ, ಅಕ್ಷಮಾಲೆಗಳಿಂದ ಅಲಂಕೃತವಾದ ಕರ-ಕಂಧರಗಳನ್ನೂ ನೋಡಿ ದೀಕ್ಷಿತರು ಪರಮ ಮುದಿತರಾದರು. ಅವರು ಅಷ್ಟವರ್ಷಾತ್ಮಕ ರೂಪಿಯಾದ ಪರಮೇಶ್ವರನ ಚರಣದಲ್ಲಿ ಮಸ್ತಕವನ್ನಿಟ್ಟು, ಸಾಷ್ಟಾಂಗನಮಸ್ಕಾರಗಳನ್ನು ಮಾಡಿ, ಎದ್ದು ನಿಂತು ಬದ್ಧಾಂಜಲಿವುಳ್ಳವರಾಗಿ--"ಸತ್ಯಸಂಕಲ್ಪನಾದ ಉಮಾಕಾಂತನೇ, ನೀನು ಕೊಟ್ಟ ವಚನವನ್ನು ಪಾಲಿಸಿದಿ! ನಿನ್ನ ಮೂರ್ತಿಯನ್ನು ನಿರೀಕ್ಷಿಸಿದೆನು. ನೀನೇ ಸಾಕ್ಷಾತ್ ಕೈಲಾಸಪತಿಯಿರುತ್ತೀ! ಮೃತ್ಯುಂಜಯನೇ, ನೀನು ಅಜನ್ಮನಾದಾಗ್ಯೂ, ಕೊಟ್ಟ ವಚನವನ್ನು ಪಾಲಿಸುವದಕ್ಕಾಗಿ ಮನುಷ್ಯನಾಗಿ ಹುಟ್ಟಿದಿ! ಎಲೈ ಭಕ್ತವತ್ಸಲನೇ, ನೀನು ಭಕ್ತರಕ್ಷಣಕ್ಕಾಗಿ ಅವತಾರವನ್ನು ಧರಿಸಿದಿ!! ಸೃಷ್ಟಿ-ಸ್ಥಿತಿ-ಲಯಾದಿಗಳ ಕರ್ತನೇ, ನಿನ್ನನ್ನು ನಮಸ್ಕರಿಸುತ್ತೇನೆ. ಯಾವ ನಿನ್ನ ನಾಮೋಚ್ಚಾರದಿಂದ ಅನಂತ ಜನ್ಮದ ಪಾಪಗಳು ಕೂಡ ಭಸ್ಮವಾಗುವವೋ, ಆ ನಾಮವುಳ್ಳ ನೀನು ನನ್ನ ಪುತ್ರನಾಗಿ ಜನಿಸಿದಿ! ಅಂದಬಳಿಕ ನಾನು ಪರಮ ಭಾಗ್ಯಶಾಲಿಯಲ್ಲವೇ! ನನ್ನ ನಾಲ್ವತ್ತೆರಡು ಕುಲಗಳು ಉದ್ಧೃತವಾದವು. ಎಲೈ ಹರನೇ, ನೀನು ಈ ನಿನ್ನ ಮನೋಹರವಾದ ಅಷ್ಟವರ್ಷಾತ್ಮಕ ರೂಪವನ್ನು ಜನರಲ್ಲಿ ಪ್ರಕಟಮಾಡಬೇಡ. ಇನ್ನು ಇದನ್ನು ಉಪಸಂಹರಿಸಿ, ಹಸುಳನಾಗಿ ನನಗೆ ಆನಂದವನ್ನುಂಟುಮಾಡು. ಇದೇ ನನ್ನ ಪ್ರಾರ್ಥನೆಯು!!" ಎಂದು ಭಕ್ತಿಯಿಂದ ಸ್ತೋತ್ರಮಾಡಿ, ಮತ್ತೆ ಸಾಷ್ಟಾಂಗವೆರಗಿ ಎದ್ದು ನಿಂತು ಏಕಚಿತ್ತರಾಗಿ, ಆ ಮೂರ್ತಿಯು ತಮ್ಮ ಹೃತ್ಕಮಲದಲ್ಲಿ ಸ್ಥಿರವಾಗಿ ನೆಲೆಗೊಳ್ಳಬೇಕೆಂದು ಅದನ್ನು ದಿಟ್ಟಿಸಿ ನೋಡಹತ್ತಿದರು .ಅತ್ತ ಲಕ್ಷ್ಮೀಮಾತೆಯಾದರೂ ಆ ದಿವ್ಯಮೂರ್ತಿಗೆ ನಮಸ್ಕಾರ ಮಾಡಿದಳು. ಅವಳ ಆನಂದಕ್ಕಂತೂ ಮಿತಿಯೇ ಉಳಿಯಲಿಲ್ಲ. ಅವಳ ಸರ್ವಾಂಗದಲ್ಲಿ ರೋಮಾಂಚನಗಳುಂಟಾದವು. ಕುತ್ತಿಗೆಯ ಶಿರಗಳು ಬಿಗಿದವು. ನೇತ್ರಗಳಿಂದ ಪ್ರೇಮಾಶ್ರುಗಳು ಹೊರಡಹತ್ತಿದವು. ಇಂತಹ ಸ್ಥಿತಿಯಲ್ಲಿ ಆ ಸಾಧ್ವಿಯು ಕೈಜೋಡಿಸಿ—"ಪತಿತಪಾವನನೇ, ನೀನು ನನ್ನ ಬಯಕೆಗಳನ್ನು ಪೂರ್ಣಮಾಡಿದಿ. ನಿನ್ನ ಈ ರೂಪವನ್ನು ನೋಡುವದಕ್ಕೆ ಎಷ್ಟೋ

ಮಹನ್ ಮಹನ್ ಯೋಗಿಗಳೂ, ಸತ್ಪುರುಷರೂ ಅನೇಕ ವರ್ಷಗಳ ವರೆಗೆ ಶ್ರಮಬಡುವರು. ಹೀಗಿದ್ದು ನಿನ್ನ ದರ್ಶನವು ನನಗೆ ಅನಾಯಾಸವಾಗಿ ಆದದ್ದರಿಂದ ನನ್ನ ಕುಲಗಳು ಉದ್ಧಾರವಾದವು. ಇನ್ನು ಮೇಲೆ ಈಸು ಈ ರೂಪವನ್ನು ಉಪಸಂಹರಿಸಿ, ಹಸುಳನಾಗಿ ನಿನ್ನ ಅಗಾಧವಾದ ಬಾಲಲೀಲೆಗಳಿಂದ ನಮ್ಮನ್ನು ಸಂತೋಷಗೊಳಿಸಿ, ಈ ಭವಸಾಗರದಿಂದ ಪಾರುಮಾಡು; ಹಾಗು ನಮ್ಮ ಕೈಯಿಂದ ಆದಷ್ಟು ಸೇವೆಯನ್ನು ಸ್ವೀಕರಿಸು'' ಎಂದು ಸಂಪ್ರಾರ್ಥಿಸಿ, ಮತ್ತೆ ಚರಣಕ್ಕೆರಗಿದಳು.

ಚಿದಂಬರನು ಚರಣಕ್ಕೆರಗಿದ ಮಾತೆಯನ್ನು ಹಿಡಿದೆತ್ತಿ:—''ತಾಯಿ! ನಿನ್ನ ಬಯಕೆಗಳು ನಿಶ್ಚಯವಾಗಿ ಕೊನೆಗಾಣುವವು! ಮನಸಿನ ದುಗುಡವನ್ನು ಬಿಡು. ನಿಮ್ಮ ತಪಶ್ಚರ್ಯಕ್ಕೆ ಮೆಚ್ಚಿ, ನಾನು ನಿಮ್ಮ ಪುತ್ರನಾಗಿ ಜನಿಸಿರುವೆನು. ನಿಮಗೆ ಅವತಾರದ ಕುರುಹನ್ನು ತೋರಿಸುವದಕ್ಕಾಗಿಯೇ ಈ ರೂಪವನ್ನು ಧರಿಸಿರುವೆನು. ನೀವು ಮಾಡಿದ ಈ ಸ್ತೋತ್ರವನ್ನು ಪಠಿಸುವವರ, ಹೇಳುವವರ ಮತ್ತು ಕೇಳುವವರ ಎಲ್ಲ ಬಯಕೆಗಳು ಪೂರ್ಣವಾಗುವವು; ಹಾಗೂ ಅವರಿಗೆ ಇಹ-ಪರಗಳಲ್ಲಿ ಸೌಖ್ಯವೂ ಲಭಿಸುವದು'' ಎಂದು ಮಾತಾಡಿ, ಕೂಡಲೆ ಶಿಶು-ರೂಪವನ್ನು ತಳೆದು ರೋದಿಸಹತ್ತಿದನು.

ಅಯೋನಿ ಸಂಭವವಾದ ಆ ಹಸುವು ರೋದಿಸಹತ್ತಿದ್ದನ್ನು ನೋಡಿದರೆ ಜಗದಾತ್ಮನ ಮಾಯೆಯನ್ನು ತಿಳಿಯುವದು ಪರಮದುಸ್ತರವೆಂದು ಕಂಡಬರುವದು. ಪ್ರಸವ ವೇದನೆಯಿಲ್ಲದೆ, ಜನ್ಮವಿಲಾಸವನ್ನು ತೋರಿದ ಆ ಬಾಲಕನನ್ನು ಲಕ್ಷ್ಮೀಮಾತೆಯು ಹಿಡಿದೆತ್ತಿ ಅಪ್ಪಿಕೊಂಡಳು. ದೀಕ್ಷಿತರಿಗೆ ಗಂಡು ಮಗನು ಜನಿಸಿದ ವಾರ್ತೆಯು ಊರೊಳಗೆ ತಿಳಿಯಲು, ಎಷ್ಟೋ ಜನ ಮುತ್ತೈದೆಯರು ಅಲ್ಲಿಗೆ ಬಂದರು. ಮಾರ್ತಾಂಡ ದೀಕ್ಷಿತರು ಜೋಯಿಸರನ್ನು ಕರೆಯಿಸಿ, ಜಾತಕರ್ಮವನ್ನು ಮಾಡಿಸಿ, ಬ್ರಾಹ್ಮಣರಿಗೆ ಗೋದಾನ, ಭೂದಾನ ಮತ್ತು ಹಿರಣ್ಯದಾನಗಳನ್ನು ಕೊಟ್ಟು ಸಂತೋಷಗೊಳಿಸಿದರು. ಅಷ್ಟರಲ್ಲಿ ಮತ್ತೆ ಹಲವು ಜನ ನಿಪುಣರಾದ ಜ್ಯೋತಿಷಿಗಳು ಅಲ್ಲಿಗೆ ಬಂದು. ಆ ಕಾಲದ ಲಗ್ನ ಶುದ್ಧಿಯನ್ನು ನೋಡಿ:—''ದೀಕ್ಷಿತವರ್ಯರೇ, ಈ ಲಗ್ನದಲ್ಲಿ ಜನಿಸಿದವನು ಲೋಕೋದ್ಧಾರಕನೂ. ಶಾಪಾನುಗ್ರಹಶಕ್ತಿಯುಳ್ಳವನೂ ಆಗುವನು! ಲಗ್ನ ಬಲವನ್ನು ಹೆಚ್ಚು ಸೂಕ್ಷ್ಮರೀತಿಯಿಂದ ನಿರೀಕ್ಷಿಸಿದರೆ, ಸಾಕ್ಷಾತ್ ಭೂತಪತಿಯೇ ಅವತರಿಸಿರುವನೆಂಬಂತೆ ತೋರುತ್ತದೆ! ಅಂಗ ಚಿಹ್ನಗಳ ಮೇಲಿಂದ ಈ ಬಾಲಕನು ಲೋಕ

ಪಾಲಕನಂತೆ ಕಾಣುತ್ತಾನೆ'' ಎಂದು ಹೇಳಿ, ಬಾಲಕನನ್ನು ಆಶೀರ್ವದಿಸಿ, ಆನಂದದಿಂದ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಜ್ಯೋತಿರ್ವಿದರಾದ ಪ್ರಿಯ ವಾಚಕರೇ, ಇಂತಹ ಜಗದ್ವಿಖ್ಯಾತನಾದ ಬಾಲಕನ ಲಗ್ನ ಶುದ್ಧಿ ಮತ್ತು ಜನ್ಮ-ಲಗ್ನ ಕುಂಡಲಿಯನ್ನೂ, ಇವನು ಇದೇ ಸಂವತ್ಸರ, ಇದೇ ತಿಂಗಳು, ಇದೇ ತಿಥಿ, ಇದೇ ವಾರ, ಇದೇ ನಕ್ಷತ್ರ, ಇದೇ ಯೋಗ ಮತ್ತು ಇದೇ ಕರಣ ಮುಂತಾದ ವಿವಕ್ಷಿತ ಶುಭವೇಳೆಯನ್ನೇ ಸಾಧಿಸಿ, ಏಕೆ ಜನ್ಮ ತಾಳಿದನೆಂಬದರ ಕಾರಣಗಳನ್ನೂ ತಿಳಿದುಕೊಳ್ಳಲು ನಿಮ್ಮ ಮನಸ್ಸು ಹಾತೊರೆಯುತ್ತಿರಬಹುದು! ಆದುದರಿಂದ ಮೇಲಿನ ಪ್ರಶ್ನೆಗಳ ವಿವರವನ್ನು ಇಲ್ಲಿ ಸಾದ್ಯಂತವಾಗಿಕೊಡುತ್ತೇವೆ.

## ಲಗ್ನ ಶುದ್ಧಿಃ

ಅಸ್ಮಿನ್ನ ಶುಭದಿನೆ ದಿವಾಜನ್ಮಕಾಲ ಘಟಿ ೧೦ ಪ, ೫೫ ತತ್ಕಾಲ ಲಗ್ನ ೧೦ ಅಂಶ ೧ ಏವಂ ಲಗ್ನ ಶುದ್ಧಿಃ

|| ಶ್ರೀ ಚಿದಂಬರಾಯನಮಃ ||

| | | | |
|---|---|---|---|
| ೧೨ | ೧ | ೨ | ರಾ ೩ |
| ಶ ೧೧ | | | ಚ ೪ |
| ಲಗ್ನ ೧೦ | ಜನ್ಮ-ಲಗ್ನ ಕುಂಡಲಿ | | ೫ |
| ಗು ೯ ಕೇ | ಬು ೮ ಮ | ರ ೭ ಶು | ೬ |

## ಜನ್ಮ ವೇಳೆಯ ಕಾರಣಗಳು.

೧ ನಾಲ್ಕೂ ಕಡೆಗೆ ಧನ-ಧಾನ್ಯ ವೃದ್ಧಿಯಾಗಿ, ಬಹುಧಾನ್ಯ ಸಂವತ್ಸರದ ಹೆಸರು ಸಾರ್ಥಕವಾಗಬೇಕೆಂದು ತಿಳಿದು, ಬಹುಧಾನ್ಯ ಸಂವತ್ಸರದಲ್ಲಿ ಅವತಾರ ವನ್ನು ತಾಳಿದನು.

೨ ಹರಿ-ಹರರಲ್ಲಿ ಭೇದವಿಲ್ಲೆಂಬ ಸಿದ್ಧಾಂತವನ್ನು ಸಮರ್ಥಿಸಬೇಕಾದರೆ ಎಲ್ಲ ತಿಂಗಳಲ್ಲಿ ಕಾರ್ತಿಕಮಾಸವೇ ಶ್ರೇಷ್ಠವೆನ್ನಬೇಕಾಗುತ್ತದೆ. ಯಾಕೆಂದರೆ ಆ

ತಿಂಗಳಲ್ಲಿ ವೈಕುಂಠ ಚತುರ್ದಶಿಯು ದಿವಸ ಒಂದೇ ರಾತ್ರಿಯಲ್ಲಿ ಪೂರ್ವರಾತ್ರಿ ವಿಷ್ಣುಪೂಜೆಯಾಗಿ ಉತ್ತರರಾತ್ರಿ ಬೆಳಗು ಮುಂಜಾನೆ ಶಿವಪೂಜೆಯಾಗುತ್ತದೆ. ಕಾರಣ ಹರಿ-ಹರರಲ್ಲಿ ಭೇದವಿಲ್ಲೆಂದು ತೋರಿಸುವದಕ್ಕಾಗಿಯೇ ಚಿದಂಬರನು ಕಾರ್ತಿಕ ಮಾಸದಲ್ಲಿ ಅವತರಿಸಿದನು.

೩ ಜಗತ್ತಿನೊಳಗಿನ ಯಾವತ್ತು ಷಟ್ಕಗಳಿಗೆ ಹಿತವಾಗಬೇಕೆಂತಲೂ, ಷಷ್ಠಿ ತಿಥಿಗೆ ನಂದಾ ತಿಥಿಯೆಂಬ ಹೆಸರಿರುವದರಿಂದ, ನಂದ ಅಂದರೆ ಆನಂದವು ಎಲ್ಲ ಜನರಿಗೆ ಆಗಬೇಕೆಂತಲೂ ಆಲೋಚಿಸಿ, ಚಿದಂಬರನು ಷಷ್ಠಿಯಲ್ಲಿ ಅವತಾರ ವನ್ನು ತಾಳಿದನು.

೪ ಸೋಮವಾರಕ್ಕೆ ಚಂದ್ರವಾರವೆಂತಲೂ ಅನ್ನುತ್ತಾರೆ. ಆದುದರಿಂದ ಪ್ರತ್ಯಕ್ಷ ಚಂದ್ರಮೌಳಿಯೇ ಅವತರಿಸಿರುವನೆಂದು ತೋರುವದಕ್ಕಾಗಿಯೂ, ಚಂದ್ರನಂತೆ ಎಲ್ಲರಿಗೆ ಆಹ್ಲಾದಕರನಾಗಬೇಕೆಂತಲೂ ಚಿದಂಬರನು ಶುಭ್ರಾಂಶು ವಾರ (ಚಂದ್ರವಾರ) ದಿವಸದಲ್ಲಿ ಅವತರಿಸಿದನು.

೫ ಸ್ವರ್ಗದಲ್ಲಿ ಬೃಹಸ್ಪತಿಯು ತಿಷ್ಯ (ಪುಷ್ಯ) ನಕ್ಷತ್ರದ ಮೇಲೆ ಹುಟ್ಟಿದ್ದರಿಂದ ಎಲ್ಲ ದೇವತೆಗಳಿಗೆ ಗುರುವಾದನು. ಅದರಂತೆ ತಾನಾದರೂ ಎಲ್ಲರಿಗೆ ಗುರುವಾಗಬೇಕೆಂದು ಯೋಚಿಸಿ, ಚಿದಂಬರನು ಪುಷ್ಯನಕ್ಷತ್ರದಲ್ಲಿ ಅವತರಿಸಿದನು.

೬ ಜಗತ್ತೂ, ದೇಹವೂ ಬ್ರಹ್ಮರೂಪವಾಗಿಯೇ ಇರುತ್ತವೆಂದು ತೋರಿಸುವದಕ್ಕಾಗಿಯೇ ಚಿದಂಬರನು ಬ್ರಹ್ಮನಾಮಯೋಗವನ್ನು ಸಾಧಿಸಿ, ಅವತರಿಸಿದನು.

೭ ವಣಿಜಾ ಕರಣವು ವಿದ್ಯಾದಾಯಕವಾದದ್ದು. ಆದುದರಿಂದ ಎಲ್ಲರ ಮನಸ್ಸಿನಲ್ಲಿ ವಿದ್ಯಾಭಿರುಚಿಯನ್ನು ಬೆಳಿಸಬೇಕೆಂಬದಾಗಿ, ಶ್ರೀ ಚಿದಂಬರನು ವಣಿಜಾಕರಣದ ಮೇಲೆ ಅವತೀರ್ಣನಾದನು.

ಒಟ್ಟಿನ ಮೇಲೆ, ಚರಾಚರ ಪ್ರಾಣಿಗಳಿಗೆಲ್ಲ ಸುಖವಾಗಬೇಕೆಂದು ತಿಳಿದು, ಮೇಲೆ ಹೇಳಿದಂತೆ ಯಾವತ್ತು ವಿವಕ್ಷಿತ ಶುಭ ವೇಳೆಯನ್ನೇ ಸಾಧಿಸಿ, ಶ್ರೀ ಚಿದಂಬರನು ಅವತಾರವನ್ನು ತಳೆದನು; ಇರಲಿ. ಹಿಂದೆ ಹೇಳಿದಂತೆ ಜ್ಯೋತಿಷಿಗಳು ಶಿಶುವನ್ನು ಆಶೀರ್ವದಿಸಿ ಹೋದಬಳಿಕ, ಲಕ್ಷ್ಮೀಮಾತೆಯು ಮನೆಗೆಬಂದ ಮುತ್ತೈದೆಯರಿಗೆ, ಅರಿಶಿನ ಕುಂಕುಮಗಳನ್ನು ಹಚ್ಚಿಸಿ, ಉಡಿಯನ್ನು ತುಂಬಿಸಿ, ಅವರಿಗೆ ಮರಳಿ ಮನೆಗೆ ಹೋಗಲಿಕ್ಕೆ ಅನುಮತಿಸಿದಳು. ಮುಂದೆ ಬ್ರಾಹ್ಮಣ ಭೋಜನ ಮೊದಲಾದವುಗಳು ಮುಗಿದು, ಆ ಮಂಗಲಕರವಾದ ದಿವಸದ ಮಹೋತ್ಸವವು ಪೂರ್ಣವಾಯಿತು. ಮುಂದೆ ಕ್ರಮವಾಗಿ ಹನ್ನೆರಡನೆಯ ದಿವಸದ ವರೆಗೆ ಆಗ ತಕ್ಕ ಷಷ್ಠೀಪೂಜನ ಮುಂತಾದ ಸಂಸ್ಕಾರಗಳು ಕಾಲಕ್ಕೆ

ಸರಿಯಾಗಿ ಜರಗಿದವು. ಹನ್ನೆರಡನೆಯ ದಿವಸ ನಾಮಕರಣ ಸಮಾರಂಭಕ್ಕೆ ಆರಂಭವಾಯಿತು. ಆ ಹೊತ್ತು ಶುಭವೇಳೆಯಲ್ಲಿ ಸುವಾಸಿನಿಯರು ಆನಂದ ದಿಂದ ಆ ಶಿಶುವನ್ನು ಅಂದವಾದ ತೊಟ್ಟಿಲಲ್ಲಿಟ್ಟು, ಅದಕ್ಕೆ ಬಹು ಸಂಭ್ರಮದಿಂದ ಯಥೋಚಿತವಾಗಿ *'ಚಿದಂಬರ' ಎಂದು ಹೆಸರನ್ನಿಟ್ಟು, ಜೋಗುಳವನ್ನು ಹಾಡುತ್ತ ಮಂಗಲವನ್ನು ಮಾಡಿದರು.

ಪುಣ್ಯಶಾಲಿಗಳಾದ ದೀಕ್ಷಿತರ ಮನೆಯಲ್ಲಿ ಪರಮಾತ್ಮನು 'ಚಿದಂಬರ' ಎಂಬ ಹೆಸರನ್ನು ಧರಿಸಿ, ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಬೆಳೆಯಹತ್ತಿದನು. ಜ್ಞಾನರೂಪನಾದ ಚಿದಂಬರನು ಭಕ್ತರ ಸಲುವಾಗಿ ಅಜ್ಞಾನವನ್ನು ಹೊದ್ದು ಕೊಂಡು ಬಗೆಬಗೆಯಿಂದ ಕ್ರೀಡಿಸಹತ್ತಿದನು. ಪರಮಾತ್ಮನೇ ಹೀಗೆ ಆಡ ಹತ್ತಿದ ಬಳಿಕ ಮಿಕ್ಕವರು ಮೋಹಗೊಳ್ಳುವದರಲ್ಲೇನಾಶ್ಚರ್ಯವು! ದೀಕ್ಷಿತ ದಂಪತಿಗಳು ಶ್ರೀ ಚಿದಂಬರನೇ ತಮ್ಮ ಮಗನೆಂದು ಭಾವಿಸಿ, ಪರಿಪರಿಯಿಂದ ಲೂ, ಪ್ರೀತಿಯಿಂದಲೂ ಆತನ ಲಾಲನ-ಪಾಲನಗಳನ್ನು ಮಾಡತೊಡಗಿದರು. ಜಪ-ತಪಾದಿಗಳಿಂದ ಕೂಡ ದುರ್ಲಭನಾದ ಚಿದಂಬರನು ಯಾರ ಉದರದಲ್ಲಿ ಜನ್ಮತಾಳಿದನೋ, ಆ ದೀಕ್ಷಿತದಂಪತಿಗಳ ಭಾಗ್ಯವನ್ನೂ, ಯೋಗ್ಯತೆಯನ್ನೂ ಎಷ್ಟೆಂದು ಬಣ್ಣಿಸಬೇಕು? ಅವರು ನಿಜವಾಗಿ ಧನ್ಯರೇ ಸರಿ!!

---

## ೩ನೆಯ ಪ್ರಕರಣ.

### ಬಾಲಲೀಲೆ ಹಾಗು ಬ್ರಹ್ಮಚರ್ಯ.



ಚಿದಂಬರನು ದೊಡ್ಡವನಾದ ಹಾಗೆ ಅವನ ಬಾಲಲೀಲೆಗಳು ಮಾತಾ-ಪಿತೃ ಗಳಿಗೆ ಹೆಚ್ಚುಹೆಚ್ಚಿಗೆ ಆನಂದಕರವಾಗತೊಡಗಿದವು. ಹುಟ್ಟುತ್ತಿರುವ ಹಲ್ಲು, ಸುರಿಯುತ್ತಿರುವ ಜೊಲ್ಲು, ತಪ್ಪುವ ಹೆಜ್ಜೆಗಳು, ತೊದಲುವ ನುಡಿ, ಪ್ರಕಾಶಿಸುವ ಸೊಬಗು, ಹೊಳೆಯುವ ನಗೆಮೋರೆ, ಕಾಂತಿಯುಳ್ಳ ನೇತ್ರ, ಮಿಂಚುವ ಕೆನ್ನೆ,

---

* ಈ ಚತುರಾಕ್ಷರಗಳ ಮಹಿಮೆಯು ಅತ್ಯಗಾಧವಾಗಿದೆ. ಇವುಗಳನ್ನು ಜಪಿಸುವದ ರಿಂದ ಚತುರ್ವಿಧ ಪುರುಷಾರ್ಥಗಳೂ, ಚತುರ್ವಿಧ ಮುಕ್ತಿಗಳೂ ಕೈಗೆ ಬರುವವು. ಮನುಷ್ಯನು ಸಾಧನ ಚತುಷ್ಟಯ ಸಂಪನ್ನನಾಗುವನು, ಆತನ ದೇಹಚತುಷ್ಟಯಗಳೂ, ಅವಸ್ಥಾಚತುಷ್ಟಯ ಗಳೂ ಲಯಹೊಂದುವವು. ಈ ಚತುರಾಕ್ಷರಗಳನ್ನು ಚತುರ್ವೇದಗಳೂ, ಷಟ್‌ಶಾಸ್ತ್ರಗಳೂ ಹೊಗಳುತ್ತಿರುವವು.

ಶೋಭಿಸುವ ಹಣೆ, ಅಸ್ತವ್ಯಸ್ತವಾದ ಮುಂಗುರುಳು, ಗಂಭೀರವಾದ ನಾಭಿ, ಬಟ್ಟೆತ್ತಾದ ತೊಡೆ, ವಿಶಾಲವಾದ ಬಾಹು, ಮಿಂಚುವ ಶ್ಯಾಮವರ್ಣ ಇವುಗಳಿಂದ ಯುಕ್ತನಾದ ಚಿದಂಬರನನ್ನು ದೀಕ್ಷಿತ ದಂಪತಿಗಳೂ, ಮಿಕ್ಕ ಪ್ರಮದೆಯರೂ ಆನಂದದಿಂದ ಆಡಿಸತೊಡಗಿದರು. ಚಿದಂಬರನು ಬಾಲಭಾವದಿಂದ ದೀಪವನ್ನು ಹಿಡಿಯ ಹೋಗುವನು; ದೆಂಕಿಯನ್ನು ಮುಟ್ಟುವನು; ಪಾತ್ರೆಗಳನ್ನು ಉರುಳಿಸುವನು; ಆಗ ತಾಯಿ-ತಂದೆಗಳು ಪ್ರತಿಬಂಧಿಸಲು, ಮತ್ತೊಂದು ಕಡೆಗೆ ಓಡಿಹೋಗಿ, ಹಿಟ್ಟಿನಲ್ಲಿ ಕಾಳನ್ನು ಬೆರಿಸುವನು; ಲಕ್ಷ್ಮೀಮಾತೆಯು ಚಿದಂಬರನ ಈ ಲೀಲೆಗಳನ್ನು ಮನೆಗೆಲಸ ಬಿಟ್ಟು ನೋಡುತ್ತ ನಿಲ್ಲಲು. ಅವನು ಅವುಗಳನ್ನು ಮತ್ತಿಷ್ಟು ಮಾಡತೊಡಗುವನು.

ಚಿದಂಬರನು ಲೌಕಿಕಾರ್ಥವಾಗಿ ಮಾತೆಯ ಮೊಲೆಹಾಲನ್ನು ಉಣ್ಣುತ್ತಿದ್ದನು. ತಾಯಿಯು ಕಾರ್ಯನಿಮಿತ್ತವಾಗಿ ಎಲ್ಲಿಗಾದರೂ ಹೊರಡಲು, ಅವನು ಅಳುತ್ತ ಅವಳನ್ನು ಹಿಂಬಾಲಿಸುವನು. ಆಕೆಯು ಕೆಲಸದಲ್ಲಿ ತೊಡಗಿರಲು, ಅವನು ಉರುಳಾಡಿ-ಉರುಳಾಡಿ, ದೊಡ್ಡ ದನಿಯಿಂದ ಅಳಹತ್ತುವನು. ಆಗ ತಾಯಿಯು ಓಡಿಬಂದು ಅವನನ್ನು ಎತ್ತಿಕೊಂಡು, ಪತಿಯ ಕೈಯಲ್ಲಿ ಕೊಡಲು, ಚಿದಂಬರನು ತೊದಲು ನುಡಿಗಳಿಂದ ತಂದೆಯನ್ನು ಸಂತೋಷಪಡಿಸುವನು. ತನಗೆ ಹಸಿವೆಯಾಗಿದೆ, ಎಂದು ಸನ್ನೆಯಿಂದ ತಿಳಿಸಲು, ಲಕ್ಷ್ಮೀಮಾತೆಯು ಸವಿಯಾದ ಭಕ್ಷ್ಯಗಳನ್ನು ತಾಟಿನಲ್ಲಿ ಬಡಿಸಿ, ಚಿದಂಬರನನ್ನು ಅಡಿಗೆಯ ಮನೆಗೆ ಕರೆದೊಯ್ದು, ತುತ್ತುಗಳನ್ನು ಮಾಡಿ ಉಣಿಸುವಳು. ಚಿದಂಬರನು ವಯಸ್ಸಿಗೆ ಅನುಗುಣವಾದ ಚೇಷ್ಟೆಗಳನ್ನು ಮಾಡುತ್ತ, ಒಂದೆರಡು ತುತ್ತುಗಳನ್ನು ತಿಂದ ಕೂಡಲೆ ಹೊರಗೆ ಓಡಿಹೋಗುವನು. ಆಗ ತಾಯಿಯು ಜುಲುಮೆಯಿಂದ ಅವನನ್ನು ಹಿಡತಂದು ತುತ್ತುಗಳನ್ನು ಬಾಯಲ್ಲಿ ಹಾಕಲು, ಅವನು ಅವನ್ನು ಉಗುಳುವನು. ಅದನ್ನು ನೋಡಿ ಲಕ್ಷ್ಮೀಮಾತೆಯು:—ಬಾಳಾ, ಚಿದಂಬರಾ, ಹೀಗೆ ಉಗುಳಬಾರದಪ್ಪಾ, ನಮ್ಮ ಚಿದಂಬರನು ಬಲು ಜಾಣನು; ಇವೆರಡು ತುತ್ತುಗಳನ್ನು ತಿಂದುಬಿಡು. ನಿನ್ನ ಕೂಡ ಆಡುತ್ತ ಕೂಡ್ರಲಿಕ್ಕೆ ನನಗೆ ವೇಳೆಯಿಲ್ಲ, ಎಂದು ಚಿದಂಬರನನ್ನು ರಮಿಸುವಳು ಚಿದಂಬರನು ತುತ್ತುಗಳನ್ನು ತಕ್ಕೊಳ್ಳಲಿಕ್ಕೆ ಬಾಯಿ ತೆರೆಯಲು, ಅದರಲ್ಲಿ ಲಕ್ಷ್ಮೀಮಾತೆಗೆ ಎಲ್ಲ ವಿಶ್ವವು ಕಂಗೊಳಿಸುವದು. ಆ ವಿಶ್ವದೊಳಗೆ ತಾನು ಇದ್ದ ಮನೆಯಲ್ಲಿ, ತಾನು ಚಿದಂಬರನಿಗೆ ಉಣ್ಣಿಸುತ್ತಿರುವದನ್ನು ನೋಡಿ, ಅವಳು ಅಂಜಿಕೆಯಿಂದ ಕಣ್ಣುಗಳನ್ನು ಮುಚ್ಚುವಳು.

ಬಳಿಕ ಅವಳು ಈ ಕೌತಕವನ್ನೆಲ್ಲ ಗಂಡನಿಗೆ ಹೇಳುವಳು. ಆಗ ಮಾರ್ತಂಡ ದೀಕ್ಷಿತರು ಮುದಿತರಾಗಿ:—ನಿನ್ನ ಮಗನು ಮನುಷ್ಯನಲ್ಲ; ಸಾಕ್ಷಾತ್ ಪರ ಮೇಶ್ವರನೇ ಅವತರಿಸಿರುವನೆಂಬದನ್ನು ಮರೆತಿಯಾ? ಎಂದು ಸೂಚಿಸುವರು. ಆಗ ಚಿದಂಬರನು ಮಾತೆಯನ್ನು ಮಾಯಾಜಾಲದಿಂದ ಮೋಹಿಸಿ:—ತಾಯಿ, ನನಗೆ ಬೇಗನೆ ಉಣ್ಣಿಸು; ಆಡಲಿಕ್ಕೆ ಹೋಗುವೆನು, ಎಂದು ಹೇಳುವನು. ಇಂತು ಬ್ರಹ್ಮನೇ ಮೊದಲಾದ ದೇವತೆಗಳಿಗೆ ತಿಳಿಯಲಶಕ್ಯವಾದ ಲೀಲೆಗಳನ್ನು ತಾಯಿ ತಂದೆಗಳಿಗೆ ದಿನಾಲು ತೋರಿಸುತ್ತಿದ್ದನು. ಯಾವನ ಭಾಂಡಾರಾಧಿಕಾರಿಯು ಕುಬೇರನೋ, ಆ ಚಿದಂಬರನಿಗೆ ಕಾಲ್ಗಡಗಗಳನ್ನು ಮಾಡಿಸುವರು ಯಾವನ ಮುಂದೆ ಮೃತ್ಯುವು ಕೈಜೋಡಿಸಿಕೊಂಡು ನಿಲ್ಲುವದೋ, ಆ ಚಿದಂಬರನು ತನಗೆ ಅಂಜಿಕೆ ಬರುತ್ತದೆಂದು ಹೇಳುವನು. ಯಾವನು ಶೇಷಶಯನನೋ. ಅವನು ತಾಯಿಗೆ ನನ್ನನ್ನು ತೊಟ್ಟಿಲಲ್ಲಿ ಮಲಗಿಸು, ಎಂದು ನುಡಿಯುವನು. ವಾಚಕರೇ, ಇದೆಲ್ಲ ಜಗದಾತ್ಮನ ಮಾಯಾವಿಲಾಸವಲ್ಲವೇ?

ಇಂತು ಚಿದಂಬರನು ಲೌಕಿಕಾರ್ಥವಾಗಿ ಪರಿಪರಿಯ ಲೀಲೆಗಳನ್ನು ತೋರಿಸಿ ತಾಯಿ-ತಂದೆಗಳಿಗೆ ಸಂತೋಷವನ್ನು ಈಯುತ್ತಿರಲು, ಮಾರ್ತಂಡ ದೀಕ್ಷಿತರಿಗೆ ಕುಲಸ್ವಾಮಿಯ ಎರಡನೇ ವರದಂತೆ, ಭಾಸ್ಕರಾಂಶದಿಂದ ಪ್ರಭಾ ಕರನೆಂಬ ಮಗನು ಹುಟ್ಟಿದನು. ಮುಂದೆ ಕೆಲ ದಿವಸಗಳಲ್ಲಿಯೇ ದೀಕ್ಷಿತರ ಹೊಟ್ಟೆಯಲ್ಲಿ ಶೇಷಕ್ಕನೆಂಬ ಹೆಸರಿನ ಒಬ್ಬ ಮಗಳೂ ಜನಿಸಿದಳು. ದೀಕ್ಷಿತ ದಂಪತಿಗಳು ಈ ಮೂವರು ಮಕ್ಕಳನ್ನು ಆಡಿಸುತ್ತ ಸುಖದಿಂದ ಕಾಲಹರಣ ಮಾಡಹತ್ತಿದರು

ಚಿದಂಬರನು ದೊಡ್ಡವನಾಗಲು, ತನ್ನ ಓರಿಗೆಯ ಗೆಳೆಯರೊಡನೆ ಹಲವು ಪ್ರಕಾರದ ಆಟಗಳನ್ನಾಡಹತ್ತಿದನು. ಅವನು ಒಮ್ಮೊಮ್ಮೆ ಚಿಣಿಫಣಿಯನ್ನೂ, ಒಮ್ಮೊಮ್ಮೆ ಗೋಲಿಗಳನ್ನೂ ಆಡುವನು. ಒಮ್ಮೊಮ್ಮೆ ಗಣೇಶನ ಆಟವನ್ನೂ, ಹರಿಚಂಡನ್ನೂ ಆಡುವನು. ಒಂದೊಂದು ವೇಳೆ ಗೆಳೆಯರೊಡನೆ ಗುಮಮುರಿಗೆ ಯನ್ನು ಹಾಕುವನು. ಇಂತು ಸಲಿಗೆಯಿಂದ ಚಿದಂಬರನ ಕೂಡ ಆಡುವ ಗೆಳೆ ಯರು ಧನ್ಯರಲ್ಲವೇ? ಅವರು ನಿಜವಾಗಿ ಧನ್ಯರು! ಮಹಾಪುಣ್ಯಶಾಲಿಗಳು!!

ಒಂದು ದಿವಸ ಚಿದಂಬರನು ಗೆಳೆಯರ ಕೂಡ ಆಡಬೇಕೆಂದು ಯೋಚಿಸಿ, ಅಂಗಳದಲ್ಲಿ ಒಂದು ಶಿವಾಲಯವನ್ನು ನಿರ್ಮಿಸಿ, ಆಡತೊಡಗಿದನು. ಅವನು ಒಂದು ಶಿಲೆಯಲ್ಲಿ ಉಮಾಧವನನ್ನು ಆವಾಹಿಸಿ, ಗಂಧ ಪುಷ್ಪ-ಧೂಪ-ದೀಪಗಳಿಂದ ಆತ

ನನ್ನು ಪೂಜಿಸಿದನು. ಚಿದಂಬರನು ಪೂಜೆಗಾಗಿ ಕಲ್ಪಿಸಿದ ವಸ್ತುಗಳು ಪ್ರತ್ಯಕ್ಷ ವಾಗಿ ಒದಗಿದವು. ಅವನ್ನು ಆತನ ಗೆಳೆಯರು ಕಣ್ಮುಟ್ಟ ನೋಡಿ, ಆಶ್ಚರ್ಯ ಪಟ್ಟರು. ಬಳಿಕ ಚಿದಂಬರನು ನೈವೇದ್ಯಕ್ಕಾಗಿ ಮಣ್ಣಿನ ರಾಶಿಯನ್ನು ಮಾಡಿ, ಅದನ್ನು ಪರಮೇಶ್ವರನಿಗೆ ಅರ್ಪಿಸಿ, ಮಂಗಳಾರತಿಯನ್ನು ಮಾಡಿದನು. ತರು ವಾಯ ಅವನು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ಗೆಳೆಯರಿಗೆ ತೀರ್ಥ- ಪ್ರಸಾದಗಳನ್ನು ಕೊಟ್ಟನು. ಚಿದಂಬರನು ಪ್ರಸಾದವೆಂದು ಮಣ್ಣನ್ನು ಹಂಚುತ್ತಿರಲು, ಅದು ಅವನ ಮಹಿಮೆಯಿಂದ ಉತ್ತಮವಾದ ಸಕ್ಕರೆಯಾಯಿತು. ಅದರೊಳಗಿನ ಕಲ್ಲುಗಳು ಕಲ್ಲುಸಕ್ಕರೆಯ ಹರಳುಗಳಾದವು. ಹುಡುಗರು ಚಿದಂಬರನು ಕೊಟ್ಟ ಪ್ರಸಾದವನ್ನು ಬಾಯಲ್ಲಿ ಹಾಕಿಕೊಂಡು, ಬಾಲಭಾವ ಕ್ಕನುಗುಣವಾಗಿ "ಇನ್ನಿಷ್ಟು ಪ್ರಸಾದ ಕೊಡು" ಎಂದು ಬೇಡಹತ್ತಿದರು. ಆಗ ಲೀಲಾಧಾರಿಯಾದ ಚಿದಂಬರನು ಅವರಿಗೆ ಮನದಣಿಯುವಷ್ಟು ಪ್ರಸಾದವನ್ನು ಕೊಟ್ಟು ಸಂತೋಷಗೊಳಿಸಿದನು. ಇಂತು ಸಂತುಷ್ಟರಾದ ಬಾಲಕರು ಆಟ ಮುಗಿದ ಕೂಡಲೆ ತಮ್ಮ ತಮ್ಮ ಮನೆಗಳಿಗೆ ಹೋಗಿ, ಆದ ಸಂಗತಿಯನ್ನೆಲ್ಲ ತಮ್ಮ ತಾಯಿ-ತಂದೆಗಳಿಗೆ ಹೇಳಿದರು. ಆಗ ಮಣ್ಣು ಸಕ್ಕರೆಯಾದ ಸುದ್ದಿಯು ನಾಲ್ಕೂ ಕಡೆಗೆ ಹಬ್ಬಿ, ಎಷ್ಟೋ ಜನರು ಚಿದಂಬರನು ಆಡುತ್ತಿರುವ ಸ್ಥಳಕ್ಕೆ ಬಂದು, ಭಕ್ತಿಪರವಶರಾಗಿ ಅವನನ್ನು ನಮಸ್ಕರಿಸಿ, ಸ್ತೋತ್ರವನ್ನು ಮಾಡಲಾರಂಭಿಸಿ ದರು. ಕೆಲವು ವೇಳೆ ಸ್ತೋತ್ರ ಮಾಡಿದ ಬಳಿಕ ಪುರಜನರು ಚಿದಂಬರನ ಕೈಹಿಡಿದು, ಮಾರ್ತಂಡ ದೀಕ್ಷಿತರಿದ್ದೆಡೆಗೆ ಕರೆದೊಯ್ದು, ವರ್ತಿಸಿದ ಸಂಗತಿಯನ್ನೆಲ್ಲ ಸಾದ್ಯಂತ ವಾಗಿ ಹೇಳಿದರು. ಆಗ ದೀಕ್ಷಿತರು ಸವಿ ಮಾತುಗಳಿಂದ ಕೂಡಿದ ಜನರನ್ನು ಸಂಬೋಧಿಸಿ, ಅವರಿಗೆ ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು; ಹಾಗೂ ಚಿದಂಬರನನ್ನು ಏಕಾಂತದಲ್ಲಿ ಕರೆದೊಯ್ದು:-ಚಿದಂಬರಾ, ನೀನು ಈ ಪ್ರಕಾರ ಅದ್ಭುತ ಲೀಲೆಗಳನ್ನು ತೋರಿಸಿ, ಈಗಲೇ ಪ್ರಕಟನಾಗಬೇಡ. ಯಾಕಂದರೆ:— ನೀನು ಈಗ ಪ್ರಕಟನಾದಿಯೆಂದರೆ, ನಿನ್ನ ದರ್ಶವು ನನಗೆ ದುರ್ಲಭವಾಗುವದು ಕಂಡೆಯಾ! ಎಂದು ಪ್ರಾರ್ಥಿಸಿದರು. ಆಗ ಚಿದಂಬರನು 'ನಿಮ್ಮ ಮನಸಿನಂ- ತೆಯೇ ಆಗಲಿ' ಎಂದು ನುಡಿದು, ಮತ್ತೆ ಗೆಳೆಯರನ್ನು ಕೂಡಿಸಿ, ಅವರೊಂದಿಗೆ ಆಡತೊಡಗಿದನು. ಹೀಗೆ ಅವನು ಹಲವು ಕ್ರೀಡೆಗಳಲ್ಲಿ ಆಸಕ್ತನಾಗಿರಲು, ತಂದೆ ಯು ಅವನಿಗೆ ಉಪದೇಶಿಸಿದ್ದೇನಂದರೆ:—ಚಿದಂಬರಾ, ಹುಡುಗರು ಬಹಳ ಹೊತ್ತು ಆಡಬಾರದು. ನೀನು ಗುಣವಂತನಾದ್ದರಿಂದ, ಇನ್ನು ಮೇಲೆ ಅಭ್ಯಾ

ಸದ ಕಡೆಗೆ ಲಕ್ಷ್ಯವನ್ನು ಕೊಡು. ಲೋಕದಲ್ಲಿ ವಿದ್ಯೆಯಿಂದ ದೊಡ್ಡಸ್ತನವು ದೊರೆಯುವದು. ಚಿದಂಬರನು ತಂದೆಯ ಮಾತುಗಳನ್ನು ಕೇಳಿ:--ತಂದೆಯೇ, ನಾನು ವಿದ್ಯಾಭ್ಯಾಸವನ್ನು ಮಾಡವಿದ್ದರೂ, ನಿನ್ನ ಮುಂದೆ ಎಲ್ಲ ವಿದ್ಯೆಗಳನ್ನೂ ಹೇಳುವೆನು ಇನ್ನು ಲೌಕಿಕಾರ್ಥವಾಗಿ ನಿಮ್ಮ ಅಪ್ಪಣೆಯಂತೆ ವಿದ್ಯಾಭ್ಯಾಸವನ್ನು ಮಾಡುವೆನು, ಎಂದು ದಿಟ್ಟತನದಿಂದ ನುಡಿಯಲು, ದೀಕ್ಷಿತರು ಮುದಿತರಾಗಿ ಅವತಾರಿಯಾದ ನನ್ನ ಮಗನು ತನ್ನ ಪ್ರಭಾವವನ್ನು ಅಡಿತೋರಿಸುತ್ತಾನೆಂದು ತಿಳಕೊಂಡು. ಪ್ರತಿ ನಿತ್ಯದಲ್ಲಿ ಮಗನ ಹೊಸ ಹೊಸ ಲೀಲೆಗಳನ್ನು ಅವಲೋಕಿಸುತ್ತ ಸುಖದಿಂದ ಕಾಲಹರಣ ಮಾಡಹತ್ತಿದರು.

ಹೀಗಿರಲು ಉತ್ತರಾಯಣವು ಪ್ರಾಪ್ತವಾಯಿತು ಆಗ ಮಾರ್ತಂಡ ದೀಕ್ಷಿತರು ಒಂದು ದಿವಸ ಶುಭಮುಹೂರ್ತದಲ್ಲಿ ಮೊದಲು ಗಣಪತಿಯನ್ನೂ, ಶಾರದೆಯನ್ನೂ ಪೂಜಿಸಿ, ಬಳಿಕ ಓಂಕಾರಪೂರ್ವಕವಾಗಿ ಅಕ್ಷರಾಭ್ಯಾಸವನ್ನಾರಂಭಿಸಿದರು. ಚಿದಂಬರನು ಒಂದೇ ದಿವಸದಲ್ಲಿ ಎಲ್ಲ ಮೂಲಾಕ್ಷರಗಳನ್ನೂ, ಬಳ್ಳಿಗಳನ್ನೂ ಕಲಿತು, ಮುಂದೆ ಏನು ಕಲಿಯುತಕ್ಕದ್ದೆಂದು ತಂದೆಗೆ ಪ್ರಶ್ನೆಮಾಡಲು, ತಂದೆಯು ಮಗನ ಮೇಧಾಶಕ್ತಿಯನ್ನು ನೋಡಿ ಸಂತೋಷಪಟ್ಟು, ಕ್ರಮದಿಂದ ಎಲ್ಲ ಅಭ್ಯಾಸವನ್ನು ಮಾಡಿಸಿ, ಕಾವ್ಯಾದಿ ವಿಷಯಗಳ ಅಧ್ಯಯನವನ್ನು ಮಾಡಿಸಿದರು. ಇಂತು ಪ್ರಭಾಕರನಿಗಾದರೂ ಅಕ್ಷರಾರಂಭಮಾಡಿ, ಚಿದಂಬರನ ಕೂಡ ಎಲ್ಲ ವಿದ್ಯಾಭ್ಯಾಸವನ್ನು ಮಾಡಿಸಿದರು. ಚಿದಂಬರನಿಗೆ ಐದು ವರುಷಗಳು ತುಂಬಲು, ಶಕೆ ೧೬೫೫ ರಲ್ಲಿ ಅವನ ಉಪನಯನವನ್ನು ವಿಧ್ಯುಕ್ತರೀತಿಯಿಂದ ನೊಗಲಪೆಂಬಲ್ಲಿ ಒಳ್ಳೇ ಸಮಾರಂಭದಿಂದ ಮಾಡಿದರು. ದೀಕ್ಷಿತರು ಈ ಉಪನಯನದಲ್ಲಿ ಬೇರೆ ಎಷ್ಟೋ ಒಡ ಬ್ರಾಹ್ಮಣ ಕುಮಾರರ ಉಪನಯನಗಳನ್ನೂ ಮಾಡಿದರು. ಮೊದಲೇ ಮನೋಹರನಾದ ಚಿದಂಬರನಿಗೆ ಉಪನಯನದಿಂದ ಬ್ರಾಹ್ಮಣತ್ವವು ಪ್ರಾಪ್ತವಾಗಲು, ಸುವರ್ಣಕ್ಕೆ ಸುಗಂಧವು ಕೂಡಿದಂತಾಯಿತು. ಅವನು ಮೇಖಲಾಜಿನ, ಯಜ್ಞೋಪವೀತ, ದಂಡಕಮಂಡಲು, ಕೌಪೀನಗಳನ್ನು ಧರಿಸಿದ್ದರಿಂದ ಸಾಕ್ಷಾತ್ ವೇದಪುರುಷನಂತೆ ತೋರಹತ್ತಿದನು. ಮುಂದೆ ತುಸ ದಿವಸಗಳಲ್ಲಿ ದೀಕ್ಷಿತರು ಪ್ರಭಾಕರನ ಮೌಂಜೀಬಂಧನವನ್ನಾದರೂ ಒಳ್ಳೇ ಸಡಗರದಿಂದ ಮಾಡಿದರು.

ನರ-ನಾರಾಯಣರಂತಿರುವ ಈ ಚಿದಂಬರ-ಪ್ರಭಾಕರರೆಂಬ ಬಾಲಕರು ಚಾಂಚಲ್ಯವನ್ನು ಬಿಟ್ಟು, ದಿನಾಲು ಉಷಃಕಾಲದಲ್ಲೆದ್ದು ಸ್ನಾನ-ಸಂಧ್ಯಾದಿ

ಕರ್ಮಗಳನ್ನೂ, ಅಗ್ನಿಕಾರ್ಯವನ್ನೂ ನೆರವೇರಿಸಿ, ಬಳಿಕ ಅಕ್ಷರಾಭ್ಯಾಸವನ್ನಾರಂಭಿಸುವರು. ಅಭ್ಯಾಸವು ಮುಗಿದ ಕೂಡಲೆ ತಂದೆ ಹೇಳಿದ ಮಂತ್ರಗಳನ್ನು ಪಾಠಮಾಡುತ್ತಿದ್ದರು. ಚಿದಂಬರನು ತನ್ನ ಪಾಠವನ್ನು ಒಂದೇ ಸಾರೆ ಓದಿ, ತಂದೆಗೆ ಅದನ್ನು ಅಸ್ಖಲಿತವಾಗಿ ಅಂದು ತೋರಿಸುವನು. ಪ್ರಭಾಕರನ ಮೇಧಾಶಕ್ತಿಯಾದರೂ ಸಾಧಾರಣವಿದ್ದಿಲ್ಲ. ಅವನಾದರೂ ಚಿದಂಬರನಂತೆ ತನ್ನ ಪಾಠವನ್ನು ಬಹು ತೀವ್ರವಾಗಿ ಪಾಠಮಾಡುತ್ತಿದ್ದನು. ಇಂತು ಮನಮುಟ್ಟಿ ಅಭ್ಯಾಸವನ್ನು ಮಾಡುವ ಚಿದಂಬರ-ಪ್ರಭಾಕರರಿಗೆ ಮಾರ್ತಂಡ ದೀಕ್ಷಿತರು ಚತುರ್ವೇದಗಳನ್ನೂ, ಮಂತ್ರ, ಬ್ರಾಹ್ಮಣ, ಪದ, ಕ್ರಮ, ಜಟಾ, ಘನ. ಷಟ್ ಶಾಸ್ತ್ರಗಳನ್ನೂ, ಅಷ್ಟಾದಶಪುರಾಣಗಳನ್ನೂ ಹೇಳಿದರು. ಆ ಇಬ್ಬರು ಕುಮಾರರು ತಂದೆಯಿಂದ ಯಾಜ್ಞಿಕವನ್ನೂ, ಸೂತ್ರಭಾಷ್ಯವನ್ನೂ, ಬೀಜನ್ಯಾಸ ಮಹಾಮಂತ್ರಗಳ ರಹಸ್ಯ ಕೃತಿಗಳನ್ನೂ ಕಲಿತುಕೊಂಡರು ಜನರು ಇವರ ಧಾರಣಾಶಕ್ತಿಯನ್ನು ನೋಡಿ:—ಇದು ಲೋಕೋತ್ತರವಾದ ಚಮತ್ಕಾರವು! ಹದಿನಾಲ್ಕು ವಿದ್ಯೆಗಳನ್ನು ಒಂದೇ ವರುಷದಲ್ಲಿ ಕಲಿಯುವದು ಮನುಷ್ಯನಿಂದ ಆಗದ ಮಾತು; ಆದ್ದರಿಂದ ಇವರು ಮನುಷ್ಯರಲ್ಲ ಸಾಕ್ಷಾತ್ ನರ-ನಾರಾಯಣರೇ ಎಂದು ಊಹಿಸುತ್ತಿದ್ದರು. ಚಿದಂಬರನ ಸಹಾಧ್ಯಾಯಿಗಳು ಅವನ ಕೃಪೆಯಿಂದ ವೇದಶಾಸ್ತ್ರಪಾರಂಗತರಾದರು. ಮಾರ್ತಂಡ ದೀಕ್ಷಿತರು ಮನೆಯಲ್ಲಿ ಇಷ್ಟಿಯನ್ನು ಆರಂಭಿಸಲು, ಚಿದಂಬರನು ಶ್ರೌತಾಧ್ವರ ಕೃತಿಗಳನ್ನು ಸ್ವತಃ ಮಾಡಿ ತೋರಿಸುವನು. ಇವನ ಎದುರಿಗೆ ಯಾವ ಪಂಡಿತನಾದರೂ ಮಾತಾಡುತ್ತಿದ್ದಿಲ್ಲ. ಬರಬರುತ್ತ ಪಿಶಾಚಿ ಬಾಧೆಯುಳ್ಳವರೂ, ವ್ಯಾಧಿಗ್ರಸ್ತರಾದ ನರ-ನಾರಿಯರೂ, ಬಾಲಕರೂ ಚಿದಂಬರನಿಗೆ ಶರಣುಹೋಗಿ, ಆರೋಗ್ಯವನ್ನು ಪಡೆಯುತ್ತಿದರು. ಅವನು ಹೇಳಿದ ಮಾತುಗಳು ಎಂದಿಗೂ ಅಸತ್ಯವಾಗುತ್ತಿದ್ದಿಲ್ಲ. ಆದ್ದರಿಂದ ಜನರು ಅವನನ್ನು ಭಕ್ತಿಯಿಂದ ಭಜಿಸತೊಡಗಿದರು. ಸಾರಾಂಶ, ಚಿದಂಬರನ ಲೀಲೆಯಿಂದ ಮೋಹಿತರಾದ ಜನರು ಅವನ ಸಮಸ್ತ ಲೀಲೆಗಳನ್ನು ನೋಡುವದಕ್ಕಾಗಿ ತಮಗೆ ಆರೋಗ್ಯವನ್ನೂ, ದೀರ್ಘಾಯುಷ್ಯವನ್ನೂ ದಯಪಾಲಿಸೆಂದು ದೇವರನ್ನು ಅನನ್ಯಭಾವದಿಂದ ಬೇಡಿಕೊಳ್ಳುತ್ತಿದ್ದರು.

---

## ೩ನೆಯ ಪ್ರಕರಣ.

### ಕೆಂಗೇರೀಕ್ಷೇತ್ರನಿರ್ಮಾಣವೂ, ಮಾರ್ತಂಡದೀಕ್ಷಿತರ ಸಂಚಾರಕ್ರಮವೂ.

ಮಾರ್ತಂಡ ದೀಕ್ಷಿತರು ಹಿಂದೆ ಹೇಳಿದಂತೆ ಮಕ್ಕಳಿಂದೊಡಗೂಡಿ ಸುಖದಿಂದ ಕಾಲಕ್ರಮಣ ಮಾಡುತ್ತಿದ್ದರು. ಅವರು ಪ್ರಪಂಚದಲ್ಲಿದ್ದಾಗ್ಯೂ, ಪಾರಮಾರ್ಥವನ್ನು ಮರೆತಿದ್ದಿಲ್ಲ. ಅವರು ದಿನಾಲು ಅನುಷ್ಠಾನ ಮುಂತಾದ ನಿತ್ಯಕರ್ಮಗಳನ್ನು ನಿಯಮದಿಂದ ಜರುಗಿಸುತ್ತಿದ್ದರು ಹೀಗಿರಲು ಅವರು ಒಂದು ದಿವಸ ಯಾವದೋ ಕಾರ್ಯನಿಮಿತ್ತವಾಗಿ ಮುರಗೋಡದ ಉತ್ತರ ದಿಕ್ಕಿಗೆ ಒಂದು ಕೂಗಳತೆಯ ಮೇಲಿರುವ ಒಂದು ಹೊಲಕ್ಕೆ ಹೋಗಿದ್ದರು. ಅವರು ಅಲ್ಲಿಯ ಕಾರ್ಯವನ್ನು ತೀರಿಸಿಕೊಂಡು ತಿರುಗಿ ಬರುವಾಗ ಮಾರ್ಗದಲ್ಲಿ ಅಲ್ಲೇ ಸಮೀಪದಲ್ಲಿರುವ ಕಲ್ಲುಗಳಿಂದ ತುಂಬಿದಂಥ ಒಂದು ಪ್ರದೇಶವನ್ನು ನೋಡಿ:—"ಈ ಸ್ಥಳವು ಎಷ್ಟು ಸುಖಕರವಾಗಿದೆ! ಇನ್ನು ಮೇಲೆ ನಿತ್ಯಕರ್ಮಗಳನ್ನೆಲ್ಲ ಇಲ್ಲಿಯೇ ತೀರಿಸುವಂತೆ ವ್ಯವಸ್ಥೆಯನ್ನು ಮಾಡಬೇಕೆಂದು ನನ್ನ ಮನಸ್ಸು ನನಗೆ ಹೇಳುತ್ತದೆ ಆದ್ದರಿಂದ ಈ ಸ್ಥಳವನ್ನು ಕ್ರಯಕ್ಕೆ ತಕ್ಕೊಂಡು, ಸಾಗುಮಾಡಿಸುವದು ಉಚಿತವೆ"ಂದು ಯೋಚಿಸಿ, ಮನೆಗೆ ಬಂದರು. ಬಳಿಕ ಆ ಪ್ರದೇಶದ ಯಜಮಾನನನ್ನು ಕರೆಯಿಸಿ, ಅವನಿಗೆ ತಮ್ಮ ಅಭಿಪ್ರಾಯವನ್ನು ಅರುಹಿದರು ಆಗ ಅವನು ಆ ಮಾತಿಗೆ ಒಪ್ಪಿಕೊಂಡದ್ದರಿಂದ, ದೀಕ್ಷಿತರು ಅವನಿಗೆ ತೊಂಭತ್ತು † ನೀಲಕಂಠೀ ರೂಪಾಯಿಗಳನ್ನು ಕೊಟ್ಟು, ಆ ಪ್ರದೇಶವನ್ನು ಸಂಪಾದಿಸಿದರು.

ಆ ಪ್ರದೇಶದಲ್ಲಿ ನೀರು ಎಲ್ಲಿಯೂ ಇದ್ದಿಲ್ಲ. ಎತ್ತ ನೋಡಿದತ್ತ ಕಲ್ಲುಗಳೇ ಹರಡಿಕೊಂಡಿದ್ದವು. ದೀಕ್ಷಿತರು ಬರಬರುತ್ತ ಈ ಶಿಲಾಮಯವಾದ ಭೂಮಿಯನ್ನು ಸ್ವಲ್ಪ ಸ್ವಲ್ಪ ಸಾಗುಮಾಡಿಸಹತ್ತಿದರು. ಮೊಟ್ಟ ಮೊದಲು ಅಲ್ಲಿ ನೀರಿನ ಪೂರೈಕೆಯಾಗುವದು ಅತ್ಯವಶ್ಯವೆಂದು ಯೋಚಿಸಿ, ಅವರು ಆ ಭೂಮಿಯ ಪಶ್ಚಿಮ ಭಾಗದಲ್ಲಿ ಒಂದು ಕೆರೆಯನ್ನು ಅಗಿಸಿದರು. ಅದು ಈಗ್ಯೂ ಇರುತ್ತದೆ. ಅದು ದೀರ್ಘವರ್ತುಲಾಕಾರವಾಗಿದೆ ಅದರಲ್ಲಿ ನೀರು ವಿಪುಲವಾಗಿ ಸಂಗ್ರಹಿಸಬೇಕೆಂಬ ಹೇತುವಿನಿಂದ ದೀಕ್ಷಿತರು ಸಮೀಪದಲ್ಲಿರುವ ಗುಡ್ಡದಿಂದ ಕೆರೆಯ ವರೆಗೆ ಒಂದು ಉತ್ತಮವಾದ ಕಾಲುವೆಯನ್ನು ಅಗಿಸಿ, ಗುಡ್ಡದ

† ಇವು ಸಾಂಗಲಿ ಸಂಸ್ಥಾನದ ರೂಪಾಯಿಗಳು ಇವುಗಳ ಬೆಲೆ ಒಂಭತ್ತಾಣೆ.

ಮೇಲಿನ ಯಾವತ್ತು ನೀರು ಕೆರೆಯಲ್ಲಿ ಒಂದು ಬೀಳುವಂತೆ ವ್ಯವಸ್ಥೆಯನ್ನು ಮಾಡಿಸಿದರು. ಅಲ್ಲಿಯ ಭೂಮಿಯು ಕೆಂಪು ಇದ್ದು, ಕಾಲುವೆಯಿಂದ ಬರುವ ನೀರಾದರೂ ಕೆಂಪಗಿರುತ್ತಿದ್ದದರಿಂದ, ಕೆರೆಯಲ್ಲಿ ಕೆಂಪು ನೀರು ಸಂಗ್ರಹವಾಗ ಹತ್ತಿದವು. ಆದ್ದರಿಂದ ಅದಕ್ಕೆ ಕೆಂಗೆರಿ(ಕೆಂಪು+ಕೆರಿ)ಎಂಬ ಹೆಸರುಂಟಾಯಿತು. ಮುಂದೆ ಕೆಲವು ಕಾಲವು ಗತಿಸಿದ ಬಳಿಕ ಆ ಸ್ಥಳದಲ್ಲಿ ಬಹಳ ಜನವಸ್ತಿಯಾಗಿ, ಅದು ಗಾವಠಾಣೆಯಾಯಿತು. ಆಗ ಅದಕ್ಕೆ 'ಕೆಂಗೆರಿ' ಎಂಬ ಕೆರೆಯ ಹೆಸರಿನ ಮೇಲಿಂದ ಕೆಂಗೇರಿ (ಕೆಂಪು+ಕೇರಿ) ಎಂಬ ಹೆಸರುಂಟಾಯಿತು. ಮಾರ್ತಾಂಡ ದೀಕ್ಷಿತರು ಈ ಕೆರೆಯ ಸುತ್ತಲೂ, ಮಿಕ್ಕ ಸ್ಥಳದಲ್ಲಿಯೂ ಚೂತ, ಅಶ್ವತ್ಥ, ಬಿಲ್ವ, ಔದುಂಬರ, ಕಪಿತ್ಥ ಮೊದಲಾದ ವೃಕ್ಷಗಳನ್ನು ಹಚ್ಚಿಸಿ, ಆ ಸ್ಥಳಕ್ಕೆ ರಮಣೀಯತ್ವವನ್ನುಂಟುಮಾಡಿಸಿದರು. ವೃಕ್ಷಗಳ ಸಂರಕ್ಷಣೆಯು ಚನ್ನಾಗಿ ಆದ್ದರಿಂದ ಅವು ತೀವ್ರವಾಗಿ ಭರದಿಂದ ವಿಸ್ತಾರವಾಗಿ ಬೆಳೆದು ಆ ಸ್ಥಳಕ್ಕೆ ಅಮೋಘವಾದ ಶೋಭೆಯನ್ನುಂಟುಮಾಡಿದವು.

ಮಾರ್ತಾಂಡ ದೀಕ್ಷಿತರು ಮೇಲೆ ವರ್ಣಿಸಿದ ಕೆರೆಯ ಪೂರ್ವದಿಕ್ಕಿಗೆ ಇಪ್ಪತ್ತೈದು ಮೊಳಗಳ ಅಂತರದ ಮೇಲೆ ಸ್ವಲ್ಪ ಭೂಮಿಯನ್ನು ಬಹು ಚನ್ನಾಗಿ ಹಸನಮಾಡಿಸಿ, ಅಲ್ಲಿ ತುಲಸಿ, ಬಿಲ್ವ ವೃಕ್ಷಗಳನ್ನು ಹಚ್ಚಿಸಿದರು. ಅವಾದರೂ ಸ್ವಲ್ಪಾವಕಾಶದಲ್ಲಿಯೇ ಚನ್ನಾಗಿ ಬೆಳೆದವು ಬಳಿಕ ದೀಕ್ಷಿತರು ಒಂದು ಮಧ್ಯವರ್ತಿಯಾದ ವಿಶಾಲ ಬಿಲ್ವವೃಕ್ಷದ ಕೆಳಗೆ ಒಂದು ಕಟ್ಟೆಯನ್ನು ಕಟ್ಟಿಸಿ, ಅಲ್ಲಿ ದಿನಾಲು ಅನುಷ್ಠಾನವನ್ನು ಮಾಡುತ್ತ ಕುಳಿತುಕೊಳ್ಳಹತ್ತಿದರು. ಈ ಬಿಲ್ವ ವೃಕ್ಷವನ್ನೂ ಸಿಂಹಾಸನ ಕಟ್ಟೆಯನ್ನೂ ಈಗ್ಯೂ ನೋಡಬಹುದು.

ಹೀಗಿರಲು ಒಂದು ದಿವಸ ದೀಕ್ಷಿತರು ಚಿದಂಬರನನ್ನು ಕುರಿತು:— ಚಿದಂಬರಾ, ನಾನು ಅನುಷ್ಠಾನ ಮಾಡುವ ಸ್ಥಳವು ಪರಮ ಪವಿತ್ರವಾದದ್ದೆಂದು ತಿಳಿ. ಕಾಶೀ ಕ್ಷೇತ್ರವಾದರೂ ಇದೇ. ಇದರ ಮಹಿಮೆಯು ಅತ್ಯಗಾಧವಾದದ್ದು. ಆದ್ದರಿಂದ ನಮ್ಮ ವೇಳೆ ಬಂತೆಂದರೆ ನಮ್ಮದು ‡ ಇಲ್ಲಿಯೇ ಆಗಲಿ, ಎಂದು ಹೇಳಿದರು; ಆದರೆ ಆ ಮಾತಿನ ಅಭಿಪ್ರಾಯವು ಚಿದಂಬರನ ಹೊರತು ಉಳಿದವರಿಗೆ ಏನೂ ತಿಳಿಯಲಿಲ್ಲ. ಚಿದಂಬರನು ಮಾತ್ರ ತಂದೆಯ ಅಭಿಪ್ರಾಯವನ್ನು ತಿಳಕೊಂಡು, ಅವರ ಚರಣಕ್ಕೆರಗಿ—ತಮ್ಮ ಅಪ್ಪಣೆಯಂತೆಯೇ ಮಾಡುವೆನು, ಎಂದು ಹೇಳಿದನು. ಸಾರಾಂಶ, ಕೆಂಗೇರಿಯ ಮಾಹಾತ್ಮ್ಯವು ದಿನದಿನಕ್ಕೆ ಬೆಳೆಯಹತ್ತಿತು.

‡ ನಮ್ಮ ದಹನ ಕ್ರಿಯೆಯು.

ಮಾರ್ತಂಡ ದೀಕ್ಷಿತರು ಪ್ರಪಂಚದ ಸಲುವಾಗಿ ಪ್ರತಿ ವರುಷ ತಿಂಗಳಲ್ಲಿ ಹದಿನೈದು ದಿವಸಗಳ ವರೆಗೆ ಸಂಚಾರಕ್ಕೆ ಹೋಗುತ್ತಿದ್ದರು. ಅವರು ಭಿಕ್ಷುಕರ ರೀತಿಯಂತೆ ಭಿಕ್ಷುಕರ ಮನೆಯಲ್ಲಿಯೂ, ಸಾತ್ವಿಕರೂ, ಪವಿತ್ರರೂ, ಆಚಾರಶೀಲರೂ ಆದ ಸದ್ಗೃಹಸ್ಥರ ಮನೆಯಲ್ಲಿಯೂ ಸಂಚಾರ ಮಾಡುತ್ತಿದ್ದರು. ಅವರು ಸಂಚಾರಕ್ಕೆ ಹೋದ ಹೋದಲ್ಲಿ ಮೊದಲೇ ಗೊತ್ತುಪಡಿಸಿದಂತೆ ಅಂದರೆ ಕೆಲವರಲ್ಲಿ ಮುಷ್ಟಿಯಿಂದ ಗೊತ್ತುಮಾಡಿದಷ್ಟು ಧಾನ್ಯ, ಮತ್ತೆ ಕೆಲವರಲ್ಲಿ ಶಕ್ತ್ಯಾನುಸಾರವಾಗಿ ಕೊಟ್ಟ ಹಣ, ಇಷ್ಟನ್ನೇ ಮಾತ್ರ ಸ್ವೀಕರಿಸುತ್ತಿದ್ದರು. ಯಾರಾದರೂ ಹೆಚ್ಚಿಗೆ ಕೊಟ್ಟರೆ, ಅದನ್ನು ಸ್ವೀಕರಿಸುತ್ತಿದ್ದಿಲ್ಲ. ದೀಕ್ಷಿತರು ಸಂಚಾರಾರ್ಥವಾಗಿ ಬಂದ ಕಾಲಕ್ಕೆ ಕೆಲವು ತುಂಟ ಜನರು ಅವರಿಗೆ ನಿರ್ವಾಹವಿಲ್ಲದೆ ಗೊತ್ತುಮಾಡಿದಷ್ಟು ಹಣವನ್ನು ಕೊಡುತ್ತಿದ್ದರು; ಆದರೆ ಅವರು ಹೋದ ಬಳಿಕ ತಾವು ಕೊಟ್ಟಷ್ಟು ಹಣವನ್ನು ಯಾವದೇ ರೀತಿಯಿಂದ ತಮ್ಮಲ್ಲಿಯ ಜನರನ್ನು ಪೀಡಿಸಿ, ಜುಲುಮೆಯಿಂದ ತೆಗೆದುಕೊಳ್ಳುತ್ತಿದ್ದರು. ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು ಅಂಥ ಕುಕರ್ಮಿಗಳ ಮೈಯಲ್ಲಿ ತಮ್ಮ ತಪಃಪ್ರಭಾವದಿಂದ ಉರುಪು ಬೀಳುವಂತೆ ಮಾಡುತ್ತಿದ್ದರು. ಆಗ ಆ ಜನರು ಶರಣು ಬಂದು ಇನ್ನೊಮ್ಮೆ ಇಂಥ ಕೆಲಸಗಳನ್ನು ಎಂದೂ ಮಾಡಲಿಕ್ಕಿಲ್ಲವೆಂದು ದೀಕ್ಷಿತರ ಪಾದಗಳನ್ನು ಮುಟ್ಟಿ ಆಣೆ ಮಾಡುತ್ತಿದ್ದರು. ಆಗ ಆ ದುಷ್ಟಜನರ ಉರುಪು ಶಾಂತಬೀಳುತ್ತಿತ್ತು. ಈ ಪ್ರಕಾರ ದೀಕ್ಷಿತರು ದುಷ್ಟರ ಗರ್ವಖಂಡನ ಮಾಡುತ್ತ, ತಮ್ಮ ತಪಃಪ್ರಭಾವದಿಂದಲೂ, ಸುಗುಣಗಳಿಂದಲೂ ಲೋಕಮಾನ್ಯರಾಗಿ ತಮ್ಮ ಸಂಚಾರವನ್ನು ಸಾಗಿಸುತ್ತಿದ್ದರು.

ದೀಕ್ಷಿತರು ಸಂಚಾರಕ್ಕೆ ಹೋದಾಗ, ಸ್ವತಃ ಸಾತ್ವಿಕ ಆಹಾರದಿಂದ ಶ್ರುತಿ-ಸ್ಮೃತಿಗಳಲ್ಲಿ ಹೇಳಿದಂತೆ ಪಾಕವನ್ನು ಸಿದ್ಧಪಡಿಸಿ, ಬ್ರಾಹ್ಮಣನನ್ನು ಪಂಙ್ತಿಗೆ ಕರಕೊಂಡು, ಭೋಜನವನ್ನು ಮಾಡುತ್ತಿದ್ದರು. ಅವರು ಸಂಚಾರ ಸಮಯದಲ್ಲಾದರೂ, ಅತಿಥಿ-ಅಭ್ಯಾಗತರನ್ನು ವಿಮುಖರನ್ನಾಗಿ ಕಳಹುತ್ತಿದ್ದಿಲ್ಲ. ಸಂಚಾರ ಸಮಯದಲ್ಲಿ ದೀಕ್ಷಿತರ ಸಂಗಡ ಒಬ್ಬ ಬ್ರಾಹ್ಮಣನಲ್ಲದೆ, ಒಂದು ಕುದುರೆಯೂ ಇರುತ್ತಿತು. ಅವರು ತಮ್ಮ ನಿಯಮಿತವಾದ ಸ್ಥಳಗಳ ಹೊರತು ಬೇರೆ ಎಲ್ಲಿಯೂ ಯಾಚನೆಯನ್ನು ಮಾಡುತ್ತಿದ್ದಿಲ್ಲ ಶೂದ್ರರನ್ನು ಮುಟ್ಟುತ್ತಿದ್ದಿಲ್ಲ; ಇಷ್ಟೇ ಅಲ್ಲ, ಸ್ನಾನವಾದ ಮೇಲೆ ಅವರ ದರ್ಶವನ್ನು ಸಹ ತೆಗೆದುಕೊಳ್ಳುತ್ತಿದ್ದಿಲ್ಲ. ಯವನರೂ, ಅಂತ್ಯಜರೂ ಇರುವ ಸ್ಥಳದಲ್ಲಿ ವಸ್ತ್ರಯನ್ನೂ, ಅನ್ನಗ್ರಹಣವನ್ನೂ

ಮಾಡುತ್ತಿದ್ದಿಲ್ಲ. ಇದಂತೂ ಇರಲಿ; ಚಾಂಡಾಲರೂ, ನಾಯಿಯೂ ಹೋದ ಹಾದಿಯಿಂದ ಸಹ ದೀಕ್ಷಿತರು ಹೋಗುತ್ತಿದ್ದಿಲ್ಲ.

ಮಾರ್ತಾಂಡ ದೀಕ್ಷಿತರು ಒಮ್ಮೊಮ್ಮೆ ತಮ್ಮ ಸಂಗಡ ಶಿಷ್ಯಭಾವದಿಂದ ಚಿದಂಬರನನ್ನು ಕರಕೊಂಡು ಹೋಗುತ್ತಿದ್ದರು. ಆಗ ಚಿದಂಬರನು ಪಾಕ ಮೊದಲಾದ ಕೆಲಸಗಳನ್ನು ಮಾಡುತ್ತಿದ್ದನು. ಅವನು ಕೆಲಸವಿಲ್ಲದ ವೇಳೆಯಲ್ಲಿ ತಂದೆಯ ಸೇವೆಯನ್ನು ಮಾಡುತ್ತಿದ್ದನು. ಸಾರಾಂಶ, ದೀಕ್ಷಿತರಂತೆ ಸಂಚಾರ ಮಾಡುವದು ಸದ್ಯಕ್ಕೆ ಅಸಾಧ್ಯವೇ ಸರಿ!!

ಮಾರ್ತಂಡ ದೀಕ್ಷಿತರು ಎಂದಿನಂತೆ ಸಂಚಾರಾರ್ಥವಾಗಿ ಹೊರಟಿರಲು, ಅವರಿಗೆ ತಮ್ಮ ಗುರುಗಳ ದರ್ಶನವನ್ನು ಇನ್ನೊಮ್ಮೆ ತೆಗೆದುಕೊಳ್ಳಬೇಕೆಂಬ ಇಚ್ಛೆಯುಂಟಾಯಿತು. ಆಗ ಅವರು ಸಂಚಾರಕ್ಕೆ ಹೋಗುವದನ್ನು ಬಿಟ್ಟು ವಾರಣಾಶೀ ಕ್ಷೇತ್ರಕ್ಕೆ ಹೋಗಬೇಕೆಂದು ಹೊರಟರು. ಅವರ ಮೊದಲನೇ ವಸ್ತಿಯು ಸುಬ್ರಹ್ಮಣ್ಯ (ಸುಬ್ಬಾಪುರ) ಎಂಬಲ್ಲಿ ಆಯಿತು. ಆ ರಾತ್ರಿ ಅಲ್ಲಿ ಅವರಿಗೆ ಒಂದು ಸ್ವಪ್ನವಾಯಿತು. ಸ್ವಪ್ನದಲ್ಲಿ ಸ್ವಾಮಿಗಳಾದ ಸ್ವಯಂಪ್ರಕಾಶ ಗುರುಗಳು ಬಂದು;—ನಾನು ನಾಳಿನ ದಿವಸ ದೇಹವಿಡತಕ್ಕವನಿದ್ದೇನೆ. ನೀನು ದರ್ಶನಕ್ಕೆ ಬರುವ ಕಾರಣವಿಲ್ಲ. ನಾಳೆ ಇಲ್ಲಿಯೇ ನನ್ನ ಹೆಸರಿನಿಂದ ಒಂದು ಲಿಂಗವನ್ನು ಸ್ಥಾಪಿಸು; ಅಂದರೆ ನನಗೆ ಸಮಾಧಾನವಾಗುವದು, ಎಂದು ಆಜ್ಞಾಪಿಸಿದರು. ಒಳಿಕ ಮರುದಿವಸ ದೀಕ್ಷಿತರು ಗುರುಗಳ ಅಪ್ಪಣೆಯ ಮೇರೆಗೆ ಅಲ್ಲಿ ಸ್ವಪ್ರಕಾಶೇಶ್ವರನೆಂಬ ಒಂದು ಲಿಂಗವನ್ನು ಸ್ಥಾಪಿಸಿದರು. ಈ ಸ್ಥಳವು ಹೋಗಿ ಬರುವವರ ಮುಖ್ಯಮಾರ್ಗವಾಗಿದ್ದರೂ ಅಲ್ಲಿ ಸುತ್ತುಮುತ್ತು ಎಲ್ಲಿಯೂ ನೀರು ಇದ್ದಿಲ್ಲ. ಆದ್ದರಿಂದ ಮಧ್ಯಾಹ್ನ ಕಾಲದಲ್ಲಿ ಮನುಷ್ಯರೂ, ಪಶುಗಳೂ ನೀರಡಿಸಿ ಬಂದು ಹಂಬಲಿಸುತ್ತ, ನೀರು ದೊರೆಯದ್ದರಿಂದ ಚಟಪಟ ಒದ್ದಾಡಿ ಪ್ರಾಣವನ್ನು ಬಿಡುತ್ತಿದ್ದವು. ದೀಕ್ಷಿತರು ಈ ಗೋಳಾಟವನ್ನು ನೋಡಿ ಕನಿಕರಬಟ್ಟು, ಅವರು ಅಲ್ಲಿ ಒಂದು ಬಾವಿಯನ್ನು ಅಗಿಸಿದರು; ಅದರಲ್ಲಿ ನೀರಾದರೂ ವಿಪುಲವಾಗಿ ಬಿದ್ದವು. ಬಳಿಕ ಅವರು ಅಲ್ಲಿ ಸುತ್ತಲೂ ಚೂತ, ಬಿಲ್ವ, ಅಶ್ವತ್ಥ ಮೊದಲಾದ ವೃಕ್ಷಗಳನ್ನು ಹಚ್ಚಿಸಿ, ರಮ್ಯವಾದ ಉದ್ಯಾನವನ್ನುಂಟು ಮಾಡಿಸಿದರು ಬಳಿಕ ದೀಕ್ಷಿತರು ಸ್ವಪ್ರಕಾಶೇಶ್ವರ ಲಿಂಗದ ಮೇಲೆ ಕಲ್ಲಿನ ಗುಡಿಯನ್ನು ಕಟ್ಟಿಸಿ, ಅಲ್ಲಿ ಆರು ತಿಂಗಳುಗಳ ವರೆಗೆ ಅನುಷ್ಠಾನವನ್ನು ಮಾಡಿದರು. ತರುವಾಯ ಮತ್ತೆಲ್ಲಿಯೂ ಹೋಗದೆ, ಅಲ್ಲಿಂದ ಮರಳಿ ಮುರ

ಗೋಡಕ್ಕೆ ಬಂದು, ಮೊದಲಿನಂತೆ ವೇದಧರ್ಮಾಸಕ್ತರಾಗಿ ಕಾಲಹರಣ ಮಾಡ ಹತ್ತಿದರು. ಸುಬ್ಬಾಪುರದಲ್ಲಿ ಸದ್ಯಕ್ಕೆ ಬಾವಿಯನ್ನೂ ಸ್ವಪ್ರಕಾಶೇಶ್ವರನ ಗುಡಿಯನ್ನೂ ನೋಡಬಹುದು. ತೋಟವು ಮಾತ್ರ ಹಾಳಾಗಿದೆ. (ಸದ್ಯಕ್ಕೆ ಸುಬ್ಬಾಪುರವು ಪರಸಗಡ ತಾಲೂಕಿನಲ್ಲಿ ಮುರಗೋಡದಿಂದ ನಾಲ್ಕು ಮೈಲುಗಳ ಮೇಲಿರುತ್ತದೆ. ಅಲ್ಲಿ ನೋಡತಕ್ಕಂಥ ಒಂದು ಗಡವಿರುತ್ತದೆ.)

---

## ೮ನೆಯ ಪ್ರಕರಣ.

### ಪ್ರಾಣಪ್ರತಿಷ್ಠಾಪನ.



ಹೊಸೂರಲ್ಲಿ ಮಾರ್ತಂಡಪ್ಪನೆಂಬ ಒಬ್ಬ ಸದ್ಗೃಹಸ್ಥನು ಮಾರ್ತಂಡ ದೀಕ್ಷಿತರ ಶಿಷ್ಯನಾಗಿ ಸದ್ವರ್ತನದಿಂದ ಕಾಲಹರಣ ಮಾಡುತ್ತಿದ್ದನು. ಒಂದು ದಿವಸ ಅವನು ಮುರಗೋಡಕ್ಕೆ ಬಂದು ಗುರುಗಳಿಗೆ ನಮಸ್ಕಾರ ಮಾಡಿ:— ಈ ಹೊತ್ತು ನಮ್ಮಲ್ಲಿ ಗಜಗೌರೀ ವ್ರತವಿರುವದು. ಆದ್ದರಿಂದ ತಾವು ಅಲ್ಲಿಯವರೆಗೆ ಬಂದು, ವ್ರತವನ್ನು ಸಾಂಗಮಾಡಿಸಬೇಕು, ಎಂದು ಬೇಡಿಕೊಂಡನು. ಅದಕ್ಕೆ ಗುರುಗಳು:— ಈ ಹೊತ್ತು ನನಗೆ ಅನುಕೂಲವಿಲ್ಲ. ಆದ್ದರಿಂದ ಚಿದಂಬರನನ್ನು ಕರಕೊಂಡು ಹೋಗು, ಎಂದು ಹೇಳಿದರು. ಆಗ ಮಾರ್ತಂಡಪ್ಪನು ಗುರುಗಳ ಆಜ್ಞೆಯನ್ನು ಮನ್ನಿಸಿ, ಚಿದಂಬರನನ್ನು ಕರಕೊಂಡು ಹೊಸೂರಿಗೆ ಹೊರಟು ಹೋದನು. ಅವನು ಗ್ರಾಮಕ್ಕೆ ತಲ್ಪಿದ ಬಳಿಕ ಚಿದಂಬರನನ್ನು ಆಸನದಲ್ಲಿ ಕುಳ್ಳಿರಿಸಿ, ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ತರುವಾಯ ಹೆಂಡತಿಯನ್ನು ಸಮೀಪಕ್ಕೆ ಕರೆದು:— ಬೇಗನೆ ಪೂಜಾಸಾಮಗ್ರಿಯನ್ನು ಸಿದ್ಧ ಮಾಡು. ನಿನ್ನ ದೈವವು ದೊಡ್ಡದು. ಆದ್ದರಿಂದಲೇ ವ್ರತವನ್ನು ಸಾಂಗ ಮಾಡುವದಕ್ಕಾಗಿ ಗುರುಪುತ್ರನು ಬಂದಿರುವನು, ಎಂದು ಹೇಳಿದನು. ಆಗ ಅವಳು ಪೂಜಾಸಾಹಿತ್ಯಗಳನ್ನು ಸಿದ್ಧಪಡಿಸಿ, ಬೇರೆ ಎಷ್ಟೋ ಮುತ್ತೈದೆಯರಿಂದ ಕೂಡಿಕೊಂಡು ಪೂಜಾಗೃಹಕ್ಕೆ ಬಂದು, ಗಜಗೌರಿಯನ್ನು ಪೂಜಿಸುವದಕ್ಕಾಗಿ ಮಣೆಯ ಮೇಲೆ ಕುಳಿತುಕೊಂಡಳು. ಅಷ್ಟರಲ್ಲಿ ಚಿದಂಬರನು ಅಲ್ಲಿಗೆ ಬಂದನು. ಆಗ ಅಲ್ಲಿದ್ದ ಸ್ತ್ರೀಯರು ಬಾಲಸೂರ್ಯನಂತೆ ಹೊಳೆಯುತ್ತಿರುವ ಆ ಬಾಲಬ್ರಹ್ಮಚಾರಿಯನ್ನು ನೋಡಿ, ಹಾಸ್ಯ ಮಾಡಿ,

ವಿನೋದವನ್ನು ಮಾಡತೊಡಗಿದರು. ಅವರು ಹಾಸ್ಯ ಮಾಡುತ್ತ:—ಇವನಂತು ಬಾಲಕನು! ಪೂಜೆಯನ್ನು ಹ್ಯಾಗೆ ಮಾಡಿಸುವನು? ಇವನ ಅಧ್ಯಯನವಾದರೂ ಎಷ್ಟು ಆಗಿದೆ? ಎಂಬದನ್ನು ಕೇಳೋಣ ಎಂದು ತಮ್ಮ ತಮ್ಮೊಳಗೆ ಗುಣ ಗುಟ್ಟಹತ್ತಿದರು. ಆಗ ಚಿದಂಬರನು ಆ ಉಪಹಾಸ್ಯವನ್ನು ಕೇಳಿ:—ಭಗಿನಿಯ ರಿರಾ, ನೀವು ನನಗೆ ಏನು ಕೇಳುವಿರಿ? ನಾನಂತೂ ಬಾಲಕನಿರುವೆನು. ಮೇಲಾಗಿ ನನಗೆ ಏನೂ ಬರುವದಿಲ್ಲ. ತಂದೆಯ ಅಪ್ಪಣೆಯನ್ನು ಮೀರಲಾರದೆ ಇಲ್ಲಿಗೆ ಬಂದಿ ರುವೆನು. ಹ್ಯಾಗಾದರೂ ಪೂಜೆಯನ್ನು ಮಾಡಿಸಿ, ಮಿಷ್ಟಾನ್ನ ಭೋಜನದಿಂದ ತುಷ್ಟನಾಗಿ, ದಕ್ಷಿಣೆಯನ್ನು ತಕ್ಕೊಂಡು ಹೋಗುವೆನು; ಇಷ್ಟೇ ನನ್ನ ಕೆಲಸವು, ಎಂದು ನುಡಿದನು. ಅದನ್ನು ಕೇಳಿ ಮಾರ್ತಂಡಪ್ಪನ ಹೆಂಡತಿಯು ಗಂಡನ ಬಳಿಗೆ ಹೋಗಿ:—ಚಿದಂಬರನು ಬಾಲಕನಿರುವನು. ಮೇಲಾಗಿ ನನಗೆ ಏನೂ ಬರುವ ದಿಲ್ಲೆಂದು ಹೇಳುತ್ತಾನೆ. ಅಂದಬಳಿಕ ಪೂಜೆಯನ್ನು ಹ್ಯಾಗೆ ಮಾಡಿಸುವನು? ಎಂದು ಕೇಳಿದಳು. ಅದಕ್ಕೆ ಮಾರ್ತಂಡಪ್ಪನು:—ಹುಚ್ಚೀ, ಅವನು ಗುರುಪುತ್ರ ನಿರುವನು. ಆದ್ದರಿಂದ ಅವನ ವಚನದಲ್ಲಿ ವಿಶ್ವಾಸವನ್ನಿಟ್ಟು ಶಾಂತಚಿತ್ತಳಾಗಿ ಪೂಜೆಯನ್ನು ಮಾಡು, ಎಂದು ಹೇಳಲು, ಅವಳು ಏನೂ ಮಾತಾಡದೆ ಪೂಜಾ ಗೃಹಕ್ಕೆ ಹೋಗಿ, ಶಾಂತಚಿತ್ತಳಾಗಿ ಆಸನದಲ್ಲಿ ಕುಳಿತುಕೊಂಡಳು. ಬಳಿಕ ಚಿದಂಬರನು ಸಂಕಲ್ಪವನ್ನು ಮಾಡಿಸಿ, ಪೂಜೆಯನ್ನು ಹೇಳಲಾರಂಭಿಸಿದನು. ಅವನು ಮೊದಲು ವಿಘ್ನೇಶನಾದ ವಿನಾಯಕನನ್ನು ಪೂಜಿಸಿ, ಬಳಿಕ ತಾನೇ ಸ್ವತಃ ಮೃಣ್ಮಯವಾದ ಗಜಗೌರಿಯ ಪ್ರತಿಮೆಯನ್ನು ಪೀಠದಲ್ಲಿ ಸ್ಥಾಪಿಸಿ, ಪ್ರಾಣಪ್ರತಿ ಷ್ಠಾಪನೆಯ ಮಂತ್ರವನ್ನಾರಂಭಿಸಿದನು. ಚಿದಂಬರನ ಬಾಯಿಂದ ಹೊರಡುವ ಮಂತ್ರಪ್ರಭಾವದಿಂದ ಆ ಮಣ್ಣಿನ ಆನೆಗೆ ಸರ್ವಾಂಗದಲ್ಲಿ ಜೀವಕಳೆಯು ತುಂಬಿ ಅದು ಸಚೇತನವಾಯಿತು. ಆಗ ಚಿದಂಬರನು ಕೈಸನ್ನೆಯಿಂದ ಅದನ್ನು ಸುಮ್ಮ ನಿರಿಸಿ, ಪೂಜೆಯನ್ನು ವಿಧ್ಯುಕ್ತವಾಗಿ ಮಾಡಿಸಿದನು. ಆ ಮೇಲೆ ತಾಂಬೂಲ ದಕ್ಷಿಣೆಗಳನ್ನು ಸ್ವೀಕರಿಸಿ, ಮಾರ್ತಂಡಪ್ಪನ ಅಪ್ಪಣೆಯನ್ನು ತಕ್ಕೊಂಡು ಮುರ ಗೋಡಕ್ಕೆ ಬಂದು, ತಂದೆಯನ್ನು ನಮಸ್ಕರಿಸಿ, ತಮ್ಮ ಅಪ್ಪಣೆಯಂತೆ ಪೂಜೆ ಯನ್ನು ಮಾಡಿಸಿ, ಯಜ್ಞೇಶ್ವರಪ್ರಸಾದಗ್ರಹಣೇಚ್ಛೆಯಿಂದ ಬಂದೆನು, ಎಂದು ಹೇಳಿದನು.

ಅತ್ತ ಹೊಸೂರಲ್ಲಿ ಆ ಮೃಣ್ಮಯವಾದ ಗಜಕ್ಕೆ ಚೇತನವುಂಟಾದ್ದರಿಂದ ಅದು ಪೀಠದಿಂದ ಕೆಳಗಿಳಿದು, ಮೆಲ್ಲ-ಮೆಲ್ಲನೆ ಹೆಜ್ಜೆಗಳನ್ನಿಕ್ಕುತ್ತ ಮನೆಯಲ್ಲೆಲ್ಲ

ಅಪ್ಪಾಜಿಹತ್ತಿರ. ಆಗ ಮಾರ್ತಂಡಪ್ಪನ ಹೆಂಡತಿಯು ಈ ಚಮತ್ಕಾರವನ್ನು ನೋಡಿ ಅದನ್ನು ತನ್ನಲ್ಲಿದ್ದ ಸ್ತ್ರೀಯರಿಗೆ ಅರುಹಿದಳು. ಆಗ ಅವರು ಸೊಂಡೆಯನ್ನು ಮೇಲಕ್ಕೆತ್ತಿ, ತಮ್ಮ ಕಡೆಗೆ ಬರುತ್ತಿರುವ ಆನೆಯನ್ನು ಕಂಡು, ಆಶ್ಚರ್ಯಪಟ್ಟು, ಈ ಮಣ್ಣಿನ ಆನೆಗೆ ಜೀವಕಳೆಯು ಹ್ಯಾಗೆ ತುಂಬಿರಬಹುದು? ಎಂದು ಆಲೋಚಿಸುತ್ತ ಹೆದರಿ ಓಡಲಾರಂಭಿಸಿದರು. ಮಾರ್ತಂಡಪ್ಪನು ಈ ಗದ್ದಲವನ್ನು ಕೇಳಿ, ಅಲ್ಲಿಗೆ ಬಂದು:—ಇದು ಚಿದಂಬರನ ಮಹಿಮೆಯು! ಇದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ತಿಳುವಳಿಕೆಯಿಲ್ಲದ ಸ್ತ್ರೀಯರು ಆ ಬ್ರಹ್ಮಚಾರಿಯ ಉಪಹಾಸವನ್ನು ಮಾಡಿದ್ದರಿಂದ ಇದಕ್ಕೆ ಜೀವಕಳೆಯು ತುಂಬಿ, ಇದು ಚಿದಂಬರನ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತಿರುವದು, ಎಂದು ಮನಸಿನಲ್ಲಿ ಯೋಚಿಸಿ, ಆನೆಯು ಹೊರಗೆ ಹೋಗದಂತೆ ವ್ಯವಸ್ಥೆಯನ್ನು ಮಾಡಿ, ತತ್ಕ್ಷಣವೇ ಮುರುಗೋಡಕ್ಕೆ ಬಂದು, ನಡೆದ ಸಂಗತಿಯನ್ನೆಲ್ಲ ಮಾರ್ತಂಡ ದೀಕ್ಷಿತರಿಗೆ ಹೇಳಿದನು ಆಗ ಅವರು ಚಿದಂಬರನನ್ನು ಸಮೀಪಕ್ಕೆ ಕರೆದು:-ಚಿದಂಬರಾ, ಹೊಸೂರಲ್ಲಿ ಏನು ಮಾಡಿಬಂದಿರುವಿ? ಮಣ್ಣಿನ ಆನೆಗೆ ಜೀವಕಳೆಯು ಹ್ಯಾಗೆ ತುಂಬಿತು? ಎಂದು ಕೇಳಲು, ಅದಕ್ಕೆ ಚಿದಂಬರನು.—ನಾನು ಅಲ್ಲಿ ಏನೂ ಮಾಡಿರುವದಿಲ್ಲ. ತಾವು ಹೇಳಿದ ಪ್ರಕಾರ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿಸಿ ಬಂದಿರುವೆನು ಆ ಮಂತ್ರಪ್ರಭಾವದಿಂದ ಆನೆಗೆ ಜೀವಕಳೆಯು ತುಂಬಿದ್ದರೆ ಮಾತ್ರ ಅದನ್ನು ನಾನು ಅರಿಯೆನು! ಎಂದು ಹೇಳಿದನು. ಆಗ ದೀಕ್ಷಿತರು ನಕ್ಕು:—ನೀನು ಯಾರಿರುವಿ ಎಂಬದನ್ನು ನಾನು ಬಲ್ಲೆನು, ಅದು ಹ್ಯಾಗೆಯೇ ಆಗಿರಲಿ, ನೀನು ಈಗ ಮತ್ತೆ ಹೊಸೂರಿಗೆ ಹೋಗಿ, ಉತ್ತರ ಪೂಜೆಯನ್ನು ಮಾಡಿಸಿ ಬಾ, ಎಂದು ಹೇಳಿದರು. ಆಗ ಚಿದಂಬರನು ತಂದೆಯ ಮಾತನ್ನು ಮಾನ್ಯಮಾಡಿ. ತತ್ಕ್ಷಣವೇ ಪುನಃ ಹೊಸೂರಿಗೆ ಹೋಗಿ, ಉತ್ತರ ಪೂಜೆಯನ್ನು ಮಾಡಿಸಲು, ಆನೆಯು ಪೂರ್ವಸ್ಥಿತಿಯನ್ನು ಹೊಂದಿತು. ಆಗ ಜನರು ಈ ಅದ್ಭುತ ಚಮತ್ಕಾರವನ್ನು ನೋಡಿ, ಆಶ್ಚರ್ಯಪಟ್ಟು ಚಿದಂಬರನನ್ನು ವಂದಿಸಿ, ಸ್ತೋತ್ರಮಾಡಲಾರಂಭಿಸಿದರು. ಆಗ ಚಿದಂಬರನು ಅವರನ್ನು ಮಧುರ ವಚನಗಳಿಂದ ಸಮಾಧಾನಗೊಳಿಸಿದನು. ಬಳಿಕ ಅವನು ಭೋಜನವನ್ನು ತೀರಿಸಿ, ಎಲ್ಲರ ಅಪ್ಪಣೆಯನ್ನು ತಕ್ಕೊಂಡು ಮುರಗೋಡಕ್ಕೆ ಬಂದು, ತಂದೆಗೆ ನಮಸ್ಕಾರ ಮಾಡಿ, ಉತ್ತರ ಪೂಜೆಯನ್ನು ಮಾಡಿಸಿ ಬಂದೆನು, ಎಂದು ಹೇಳಿ, ಅಲ್ಲಿಯೇ ಪಿತೃಸನ್ನಿಧಿಯಲ್ಲಿ ಕುಳಿತುಕೊಂಡನು. ಆಗ ಮಾರ್ತಂಡ ದೀಕ್ಷಿ

ತರು:—ಚಿದಂಬರಾ, ಈಗ ಪ್ರಕಟನಾಗಬೇಡವೆಂದು ನಾನು ಎಷ್ಟು ಹೇಳಿದಾಗ್ಯೂ ಅದನ್ನು ಲಕ್ಷಿಸದೆ, ಬಾಲಭಾವದಿಂದ ಹಲವು ಅದ್ಭುತ ಆಟಗಳನ್ನು ಆಡುತ್ತಿರುವಿ; ಆದರೆ ಈಗ್ಗೆ ಇಂಥ ಚಮತ್ಕಾರಗಳನ್ನು ತೋರಿಸಿ, ಪ್ರಕಟನಾಗಬೇಡ. ನಿನ್ನ ದರ್ಶನವು ನಮಗೆ ದುರ್ಲಭವಾಗುವದು, ಎಂದು ಹೇಳಲು, ಚಿದಂಬರನು:—ತಮ್ಮ ಮನಸಿನಂತೆಯೇ ಆಗಲಿ. ಎಂದು ನುಡಿದನು.

## ೫ನೆಯ ಪ್ರಕರಣ

### ಮೃತವೃಷಭ ಸಂಜೀವನ.

ಬೆಟಸೂರವೆಂಬ ಗ್ರಾಮದಲ್ಲಿ ಭಾವಿಕನಾದ ಮಲ್ಲಪ್ಪನೆಂಬವನೊಬ್ಬ ಮಾರ್ತಂಡ ದೀಕ್ಷಿತರ ಶಿಷ್ಯನು ಇದ್ದನು. ಅವನು ತನ್ನ ಊರಲ್ಲಿ ಒಂದು ಶಿವಾಲಯವನ್ನು ಕಟ್ಟಿಸಿ, ಅದರಲ್ಲಿ ಶಿವಪ್ರತಿಷ್ಠಾಪನವನ್ನು ಮಾಡಬೇಕೆಂದು ಬಹು ದಿವಸಗಳಿಂದ ಬಯಸುತ್ತಿದ್ದನು. ಹೀಗೆ ದಿನಗಳು ಹೋಗುತ್ತಿರಲು, ಒಮ್ಮೆ ಮಲ್ಲಪ್ಪನು ತನ್ನ ಬಯಕೆಯಂತೆ ಒಂದು § ಶಿವಾಲಯವನ್ನು ಕಟ್ಟಿಸಿ, ಅದರಲ್ಲಿ ಶಿವಪ್ರತಿಷ್ಠಾಪನೆಯನ್ನು ಮಾಡುವದಕ್ಕಾಗಿ ಒಂದು ದಿವಸ ಮುಹೂರ್ತ ಕೇಳಲು, ಮುರಗೋಡಕ್ಕೆ ಬಂದು, ಮಾರ್ತಂಡ ದೀಕ್ಷಿತರಿಗೆ ತನ್ನ ಅಭಿಪ್ರಾಯವನ್ನು ಅರುಹಿದನು. ಆಗ ದೀಕ್ಷಿತರು:—ಚೈತ್ರ ಶುದ್ಧ ಪಂಚಮಿಯ ದಿವಸ ಮುಹೂರ್ತವು ಪ್ರಶಸ್ತವಾದದ್ದಿರುತ್ತದೆಂದು ಹೇಳಿದರು. ತರುವಾಯ ಮಲ್ಲಪ್ಪನು ದೀಕ್ಷಿತರ ಒಪ್ಪಿಗೆಯಿಂದ ಸ್ಥಾಪನಾ ಕಾರ್ಯಕ್ಕಾಗಿ ಚಿದಂಬರನನ್ನು ಸಂಗಡ ಕರಕೊಂಡು ಸ್ವಗ್ರಾಮಕ್ಕೆ ಹೊರಟು ಹೋದನು.

ಚೈತ್ರಶುದ್ಧ ಪಂಚಮಿಯ ದಿವಸವು ಪ್ರಾಪ್ತವಾಯಿತು. ಮಲ್ಲಪ್ಪನು ಪ್ರಾತಃಕಾಲದಲ್ಲೆದ್ದು, ಸ್ನಾನಮಾಡಿ, ಪುಣ್ಯಾಹವಾಚನವನ್ನಾರಂಭಿಸಿದನು. ಈ ಸುದ್ದಿಯು ಊರೊಳಗೆ ಮೊದಲೇ ಹಬ್ಬಿದ್ದರಿಂದ ಬಹುಜನ ಬ್ರಾಹ್ಮಣರು ಮಲ್ಲಪ್ಪನ ಮನೆಗೆ ಬಂದರು. ಅಷ್ಟರಲ್ಲಿ ಅಲ್ಲಿಯ ಜೋಯಿಸರಾದರೂ ಅಲ್ಲಿಗೆ ಬಂದು, ಮಲ್ಲಪ್ಪನನ್ನು ಕುರಿತು:—ಈ ಹೊತ್ತು ವ್ಯತ್ಯಯೋಗವಿದೆ; ಶಿವಪ್ರತಿಷ್ಠಾಪನೆಯನ್ನು ಮಾಡಬೇಡ, ನಾವು ಉತ್ತಮವಾದ ಮುಹೂರ್ತವನ್ನು ತೆಗೆದು ಕೊಡುತ್ತೇವೆ, ಎಂದು ಹೇಳಿದರು; ಆದರೆ ಗುರುವಚನದಲ್ಲಿ ನಂಬಿಗೆಯುಳ್ಳ ಮಲ್ಲ

§ ಇದು ಬೆಟಸೂರಿಂದ ಒಂದು ಮೈಲಿನಮೇಲಿರುವ ಮಲ್ಲಪ್ಪನ ತೋಟದಲ್ಲಿ ಇಗ್ಗೂ ಇದೆ.

ಪ್ಪನು ಗುರುದತ್ತ ಮುಹೂರ್ತವೇ ಕ್ಷೇಮಕರವಾದದ್ದೆಂದು ತಿಳಿದು, ಜೋಯಿಸರ ಮಾತನ್ನು ಲೆಕ್ಕಿಸದೆ, ತನ್ನ ಕಾರ್ಯವನ್ನು ಹಾಗೆಯೇ ಮುಂದಕ್ಕೆ ಸಾಗಿಸಿದನು. ಅದನ್ನು ನೋಡಿ; ಜೋಯಿಸರು ಏನೂ ಮಾತನಾಡದೆ ಸುಮ್ಮನೆ ಕುಳಿತುಕೊಂಡರು ಮಲ್ಲಪ್ಪನು ಪುಣ್ಯಾಹವಾಚನವನ್ನು ತೀರಿಸಿ, ದೇವಮಂದಿರಕ್ಕೆ ಹೋಗಬೇಕೆಂದು ಹೊರಟನು. ಮಂಗಲ ವಾದ್ಯಗಳು ಬಾರಿಸಲಾರಂಭಿಸಿದವು. ಸುವಾಸಿನಿಯರು ವಾರಿಪೂರಿತ ಕುಂಭಗಳನ್ನು ಹೊತ್ತುಕೊಂಡು ಮುಂಭಾಗದಲ್ಲಿ ನಡೆಯಹತ್ತಿದರು. ಈ ಪ್ರಕಾರ ಮಲ್ಲಪ್ಪನು ಒಳ್ಳೇ ಸಮಾರಂಭದಿಂದ ಮಹಾದ್ವಾರವನ್ನು ದಾಟಿ ಹೊರಗೆ ಬರುವಷ್ಟರಲ್ಲಿ. 'ಕಾಕತಾಲೀ ನ್ಯಾಯದಿಂದ' ಶಿವಸ್ಥಾಪನಾ ಕಾರ್ಯಕ್ಕೆ ಒಂದು ವಿಘ್ನವು ಒದಗಿತು. ಅದೇನಂದರೆ:—ಅವನ ಬೆಲೆಯುಳ್ಳ ಒಂದು ವೃಷಭವು ಆಕಸ್ಮಾತ್ತಾಗಿ ಕಟ್ಟಿದಲ್ಲಿಯೇ ಚಟಪಟ ಒದ್ದಾಡಿ, ಪ್ರಾಣಬಿಟ್ಟ ಸುದ್ದಿಯನ್ನು ಅವನ ಆಳುಮಕ್ಕಳು ಅವನಿಗೆ ಹೇಳಿದರು. ಆಗ ಮಲ್ಲಪ್ಪನು ದಿಗಿಲು ಬಿದ್ದು, "ಗುರುದತ್ತ ಮುಹೂರ್ತಕ್ಕೆ ವಿಘ್ನವು ಹ್ಯಾಗೆ ಒದಗಿತೆ"ಂದು ಆಲೋಚಿಸುತ್ತ ಸುಮ್ಮನೆ ನಿಂತುಕೊಂಡನು. ಅಷ್ಟರಲ್ಲಿ ಜೋಯಿಸರು ಮುಂದಕ್ಕೆ ಬಂದು:—ಮಲ್ಲಪ್ಪನೇ, ಈಗಾದರೂ ನಮ್ಮ ಮಾತು ನಿನ್ನ ನಿದರ್ಶನಕ್ಕೆ ಬಂತೋ? ಈ ಹೊತ್ತು ವ್ಯತ್ಯಯೋಗವದೆ, ಎಂದು ಹೇಳಿದಾಗ್ಯೂ ನಮ್ಮ ಮಾತನ್ನು ಲಕ್ಷಿಸದೆ ಕಾರ್ಯವನ್ನು ಆರಂಭಿಸಿದಿ. ಇರಲಿ, ಆದದ್ದಾಯಿತು. ಇನ್ನು ಮೇಲೆಯಾದರೂ ಬಿಡು ನಾಡದು ಚಲೋ ಮುಹೂರ್ತವಿರುವದು; ಆಹೊತ್ತು ಸ್ಥಾಪನಾಕಾರ್ಯವನ್ನು ನಿರ್ಭಯದಿಂದ ಮಾಡು, ಎಂದು ಹೇಳಿದರು.

"ಪ್ರಥಮಗ್ರಾಸೇ ಮಕ್ಷಿಕಾಪಾತಃ" ಎಂಬಂತೆ ಕಾರ್ಯಾರಂಭದಲ್ಲಿಯೇ ವಿಘ್ನವುಂಟಾದ್ದರಿಂದ ಮಲ್ಲಪ್ಪನಿಗೆ ಆ ಕಾರ್ಯದಲ್ಲಿ ಸ್ವಲ್ಪ ಮಾನಸಿಕತೆಯುಂಟಾಯಿತು. ಇಷ್ಟರಲ್ಲಿ ಇವನೇನು ಬಾಲಸೂರ್ಯನೋ. ಅಥವಾ ಭಕ್ತವತ್ಸಲನಾದ ಉಮಾರಮಣನೋ, ಇಲ್ಲವೆ ಬಲಿದರ್ಪವನ್ನು ಹರಣಮಾಡಿದ ವಾಮನನೋ ಎನ್ನುವ ಹಾಗೆ ಕೌಪೀನಕಲಶಗಳಿಂದ ಸಮೇತನಾದ ಚಿದಂಬರನು ಮನೆಯೊಳಗಿನ ಕಾರ್ಯಗಳನ್ನೆಲ್ಲ ತೀರಿಸಿ, ವಟುವೇಷದಿಂದ ಅಲ್ಲಿ ಪ್ರಕಟನಾದನು. ಆಗ ರಾಜಹಂಸಗಳನ್ನು ನೋಡಿ ಕಾಗೆಗಳು, ಹುಲಿಯನ್ನು ನೋಡಿ ಎರಳೆಗಳು. ಸೂರ್ಯನನ್ನು ನೋಡಿ ಗೂಗೆಗಳು ಹೆದರುವಂತೆ, ವಟುವೇಷಧಾರಿಯಾದ ಚಿದಂಬರನನ್ನು ನೋಡಿ, ದುಷ್ಟ ಜನರು ಭಯಪಟ್ಟರು. ಜೋಯಿಸರು ಮಾತ್ರ ಹೆದರದೆ, ಚಿದಂಬರನನ್ನೂ, ಮಲ್ಲಪ್ಪನನ್ನೂ ದುರ್ಭಾಷಣಗಳಿಂದ ದೂಷಿಸಹತ್ತಿದರು; ಆದರೆ

ಚಿದಂಬರನು ಜೋಯಿಸರ ಮಾತಿಗೆ ಸ್ವಲ್ಪವಾದರೂ ಲಕ್ಷ್ಯಕೊಡದೆ ಮಲ್ಲಪ್ಪನನ್ನು ಕುರಿತು:—ಮಲ್ಲಪ್ಪನೇ, ವ್ಯರ್ಥವಾಗಿ ಯಾಕೆ ಕಾಲಹರಣ ಮಾಡುವಿ? ಸುಮುಹೂರ್ತಕಾಲವು ಸ್ವಲ್ಪವಿರುವದು ಅದು ಗತಿಸಿದ ಮೇಲೆ ಏನು ಉಪಯೋಗವು? ಸುಮ್ಮನೆ ಏನನ್ನು ಯೋಚಿಸುತ್ತಿರುವಿ? ನಿನ್ನ ಮೋರೆಯು ಕಳೆಗುಂದಿದ ಕಾರಣವೇನು? ಎಂದು ನುಡಿಯಲು, ಮಲ್ಲಪ್ಪನು ಖಿನ್ನಮನಸಿನಿಂದ:- ಬಾಲಕನೇ, ಈ ಹೊತ್ತು ಶಿವಪ್ರತಿಷ್ಠಾಪನೆಯನ್ನು ಮಾಡದೆ, ಮತ್ತೊಂದು ದಿವಸ ಮಾಡೋಣವಂತೆ! ಯಾಕಂದರೆ, ಈ ಹೊತ್ತು ಮೃತ್ಯುಯೋಗವಿರುವದರಿಂದ ಸ್ಥಾಪನಾವಿಧಿಗೆ ಇದೇ ಈಗ ಒಂದು ವಿಘ್ನವು ಒದಗಿರುವದು, ಎಂದು ಹೇಳಿದನು. ಅದಕ್ಕೆ ಚಿದಂಬರನು ನಕ್ಕು:—ನಿನಗೆ ಭ್ರಮೆಯುಂಟಾಗಿದೆಯೋ? ಅದಕ್ಕಂತಲೇ ಸುಮುಹೂರ್ತವನ್ನು ಉಲ್ಲಂಘಿಸಲು ಬಯಸುವಿ. ನಮ್ಮ ತಂದೆಯು ಮುಹೂರ್ತವನ್ನು ತೆಗೆದಿರಲು ಅಲ್ಲಿ ಮೃತ್ಯುಯೋಗವು ಹೇಗೆ ಸಂಭವಿಸುವದು? ಸುಮ್ಮಸುಮ್ಮನೆ ಕೆಟ್ಟ ಜನರ ಮಾತಿನಲ್ಲಿ ವಿಶ್ವಾಸವಿಡಬೇಡ. ನಡೆ, ಶಿವಾಲಯಕ್ಕೆ ಹೋಗಿ ಶಿವಪ್ರತಿಷ್ಠಾಪನೆಯನ್ನು ಮಾಡೋಣ, ಎಂದು ನುಡಿದನು. ಆಗ ಮಲ್ಲಪ್ಪನು:—ಈ ಹೊತ್ತು ಆಕಸ್ಮಾತ್ತಾಗಿ ನಮ್ಮದೊಂದು ಎತ್ತು ಕಟ್ಟಿದಲ್ಲಿಯೇ ಮೃತವಾಗಿರುವದು. ಕಾರಣ ಕಾರ್ಯವನ್ನು ಹೇಗೆ ಆರಂಭಿಸೋಣ? ಎನ್ನಲು, ಚಿದಂಬರನು:—ಛೀ! ಇದಾವ ದೊಡ್ಡ ವಿಘ್ನವು! ನಮ್ಮ ತಂದೆಯು ಮುಹೂರ್ತವನ್ನು ತೆಗೆದಿರಲು, ಹೀಗಾಗುವದು ಅಸಂಭವವು! ಒಂದು ವೇಳೆಇಂಥ ಮಂಗಲಕಾರ್ಯದಲ್ಲಿ ಈ ವಿಘ್ನವು ಉಂಟಾದದ್ದೇ ಆದರೆ, ಪ್ರಾಣಹರಣಮಾಡುವ ಯಮಧರ್ಮನಿಂದ ಆ ಎತ್ತಿನ ಪ್ರಾಣವನ್ನು ತಂದು, ಅದನ್ನು ಬದುಕಿಸಿ, ಈ ವಿಘ್ನವನ್ನು ದೂರಮಾಡುವೆನು. ನೀನು ಚಿಂತಿಸಬೇಡ. ಆ ವೃಷಭವು ಎಲ್ಲಿರುವದು? ತೋರಿಸು, ಎಂದು ನುಡಿದು, ಚಿದಂಬರನು ಎಲ್ಲರಿಂದ ಕೂಡಿಕೊಂಡು ಎತ್ತು ಸತ್ತ ಸ್ಥಳಕ್ಕೆ ಹೋದನು.

ವೃಷಭವು ಪಂಚತ್ವವನ್ನು ಹೊಂದಿ ಕಣ್ಣುಮುಚ್ಚಿಕೊಂಡು ಬಿದ್ದಿತ್ತು. ಅದನ್ನು ಚಿದಂಬರನು ಕೃಪಾದೃಷ್ಟಿಯಿಂದ ನೋಡಿ, ವಿಘ್ನಕಾರಕವಾದ ವೃಷಭವು ಇದೆಯೋ? ಎಂದು ನುಡಿದು, ತನ್ನ ಕಲಶದೊಳಗಿನ ನೀರನ್ನು ವರದಹಸ್ತದಿಂದ ಎತ್ತಿನ ಮೈಮೇಲೆ ಸಿಂಚಿಸಿ, ಬೆನ್ನ ಮೇಲೆ ಚಪ್ಪರಿಸಿ:- ವತ್ಸಾ, ಏಳು; ನಿನ್ನಿಂದ ಮಹತ್ಕಾರ್ಯಕ್ಕೆ ಅಡ್ಡಿಯಾಗಿರುವದು. ತೀವ್ರವಾಗಿ ಏಳು, ಎಂದು ನುಡಿಯಲು, ಆ ಎತ್ತು ಮೈಮುರಿಯುತ್ತ ಎದ್ದು ನಿಂತಿತು. ಆಗ ಮಲ್ಲಪ್ಪನು ಮೃತವೃಷಭ

ಸಂಜೀವನನವನ್ನು ನೋಡಿ, ಆನಂದಸಾಗರದಲ್ಲಿ ಮುಳುಗಿ, ಚಿದಂಬರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಭಕ್ತಿಪರವಶನಾಗಿ ಕುಣಿದಾಡುತ್ತ ಚಿದಂಬರನನ್ನು ಹೊಗಳಹತ್ತಿದನು:—ಹೇ ಶಿತಿಕಂಠನೇ, ಶ್ರೀಶಾರ್ಚಿತನೇ, ಶ್ರೀ ಶಿವಾನಾಥನೇ, ಜಯಶೀಲನಾಗು. ಭೋ ಶ್ರೀಯಾಳಸಖನೇ, ನೀನು ಬಾಲವೇಷದಿಂದ ಅವ ತರಿಸಿರುವಿ ಎಂಬುವದು ಮನವರಿಕೆಯಾಯಿತು. ಶ್ರೀಯುಕ್ತಾರಕನೇ, ಆನತ ಭಯನಿವಾರಕನೇ ದೀನಬಂಧುವೇ, ಈ ದೀನ ದಾಸನನ್ನು ಉದ್ಧರಿಸು. ನೀನೇ ಸಾಕ್ಷಾತ್ ಮೃತ್ಯುಂಜಯನಿರುವಿ! ಆದ್ದರಿಂದಲೇ ಈ ವೃಷಭವನ್ನು ಬದುಕಿ ಸಿರುತ್ತೀ; ಇಲ್ಲವಿದ್ದರೆ ಹೀಗಾಗುವ ಬಗೆ ಹೇಗೆ? ಎಂದು ಹಲವು ಬಗೆಯಿಂದ ಸ್ತುತಿಸಿ ಚಿದಂಬರನ ಚರಣಗಳ ಮೇಲೆ ಉರುಳಾಡಹತ್ತಿದನು. ಆಗ ಕರುಣಾ ನಿಧಿಯಾದ ಚಿದಂಬರನು ಮಲ್ಲಪ್ಪನನ್ನು ಹಿಡಿದೆತ್ತಿ:—ಇನ್ನು ಮೇಲೆ ಹೆದರ ಬೇಡ. ನೀನು ನಿಜವಾಗಿ ಗುರುಭಕ್ತನಿರುವಿ; ಆದ್ದರಿಂದಲೇ ಅವನು ನಿನ್ನ ಎಲ್ಲ ಬಯಕೆಗಳನ್ನು ಪೂರ್ಣಮಾಡುತ್ತಿರುವನು. ಇನ್ನು ಶಿವಪ್ರತಿಷ್ಠಾಪನೆಯನ್ನು ಸಂತೋಷದಿಂದ ಮಾಡು, ಎಂದು ಹೇಳಿದನು. ಆಗ ಮಲ್ಲಪ್ಪನು ಪ್ರತಿಷ್ಠಾ ಪನ ವಿಧಿಯನ್ನು ಉಕ್ತವಾಗಿ ನೆರವೇರಿಸಿ, ಬ್ರಾಹ್ಮಣರನ್ನು ದಕ್ಷಿಣೆಯಿಂದ ಆನಂದಗೊಳಿಸಿದನು. ಕೂಡಿದ ಜನರೆಲ್ಲರು ಚಿದಂಬರನ ಈ ಅಘಟಿತಘಟನೆ ಯನ್ನು ನೋಡಿ ಆಶ್ಚರ್ಯಪಟ್ಟು ಚಿದಂಬರನಿಗೆ ಶರಣು ಬಂದರು. ಕೆಲವರು ಅವನನ್ನು ಹೊಗಳಹತ್ತಿದರು. ಜೋಯಿಸರಾದರೂ ಶರಣುಬಂದು, ಚಿದಂಬರ ನನ್ನು ಹೊಗಳಹತ್ತಿದರು. ಆಗ ಚಿದಂಬರನು:—ನನಗೆ ಯಾಕೆ ಶರಣುಬರು ವಿರಿ? ನೀವು ಸರ್ವಶಾಸ್ತ್ರ ಪಾರಂಗತರು; 'ನಾನು ಬಡ ಬ್ರಾಹ್ಮಣನ ಮಗನು! ಆದ್ದರಿಂದ ನೀವೇ ನನ್ನ ಮೇಲೆ ಅನುಗ್ರಹ ಮಾಡಬೇಕು. ಈಗ ಆದ ಚಮ ತ್ಕಾರಕ್ಕೆ ನಮ್ಮ ತಂದೆಯು ತೆಗೆದುಕೊಟ್ಟ ಮುಹೂರ್ತದ ಪ್ರಭಾವವೇ ಕಾರ ಣವು ಹೊರತು, ಬೇರೆ ಯಾವ ಕಾರಣವೂ ಇಲ್ಲ, ಎಂದು ಎಲ್ಲರನ್ನು ಸವಿಮಾತು ಗಳಿಂದ ಸಂತೈಸಿದನು ಬಳಿಕ ಭೋಜನೋತ್ತರದಲ್ಲಿ ಮಲ್ಲಪ್ಪನಿಂದ ಅಪ್ಪಣೆ ಯನ್ನು ಹೊಂದಿ, ಪಿತೃದರ್ಶನಕ್ಕಾಗಿ ಮುರಗೋಡಕ್ಕೆ ಬಂದು, ತಂದೆಗೆ ವರ್ತ ಸಿದ ವರ್ತಮಾನವನ್ನೆಲ್ಲ ಹೇಳಿದನು.

---

## ೧೧ನೆಯ ಪ್ರಕರಣ.

## ನಷ್ಟಧನಪ್ರಾಪ್ತಿ.

ಮಾರ್ತಂಡ ದೀಕ್ಷಿತರು ಒಂದುದಿವಸ ಚಿದಂಬರನನ್ನು ಸಂಗಡ ಕರ ಕೊಂಡು ಸಂಚಾರಾರ್ಥವಾಗಿ ಹಳ್ಳಿಯಾಳಕ್ಕೆ ಹೋಗಿ, ಅಲ್ಲಿ ತಮ್ಮ ಶಿಷ್ಯನಾದ ರಾಮಚಂದ್ರಪಂತನ ಮನೆಯಲ್ಲಿ ಇಳಕೊಂಡರು. ರಾಮಚಂದ್ರಪಂತನು ಗುರುಗಳಾದ ದೀಕ್ಷಿತರನ್ನು ಬಹಳವಾಗಿ ಸತ್ಕರಿಸಿ, ತನ್ನ ಕ್ಲಪ್ತವಾದ ಸಂಭಾವನೆಯನ್ನು ಕೊಟ್ಟನು. ದೀಕ್ಷಿತರು ಅದನ್ನು ಸ್ವೀಕರಿಸಿ, ಆ ಹೊತ್ತು ಯಾವದೋ ಕಾರ್ಯನಿಮಿತ್ತವಾಗಿ ಅಲ್ಲಿಯೇ ಉಳಕೊಂಡರು. ಅವರು ಸಾಯಂಕಾಲದ ಸಂಧ್ಯಾವಂದನೆಯನ್ನು ತೀರಿಸಿಕೊಂಡು ಸುಖದಿಂದ ನಿದ್ದೆಹೋದರು. ಚಿದಂಬರನು ಮಾತ್ರ ತಂದೆಯ ಚರಣ ಸೇವೆಯನ್ನು ಮಾಡುತ್ತ, ಜಾಗರೂಕನಾಗಿ ಕುಳಿತುಕೊಂಡಿದ್ದನು. ಆಗ ನಡುಮನೆಯಲ್ಲಿ ರಾಮಚಂದ್ರಪಂತನ ಹೆಂಡತಿಯು ಪತಿಯನ್ನು ಕುರಿತು:—ನಿಮ್ಮಿಂದ ಬಹು ಪ್ರಯಾಸದಿಂದ ಸಂಪಾದಿಸಲ್ಪಟ್ಟ ಹಣವೆಲ್ಲವು ನಿನ್ನಿನ ರಾತ್ರಿ ಕಳವಾಗಿ ಹೋಯಿತು. ಇನ್ನು ನಮ್ಮ ಪ್ರಪಂಚವು ಹ್ಯಾಗೆ ಸಾಗುವದು? ಈ ದಿವಸ ನಮ್ಮಲ್ಲಿಗೆ ಸತ್ಪುರುಷರು ಬಂದಿರುವರು. ಅವರಿಗೆ ಈ ಕಳವಿನ ಸುದ್ದಿಯನ್ನು ಅರುಹಿದರೆ, ಅವರ ಕೃಪೆಯಿಂದ ನಮ್ಮ ಬಡತನವು ಹಿಂಗೀತು, ಎಂದು ಹೇಳಿದಳು. ಅದಕ್ಕೆ ರಾಮಚಂದ್ರಪಂತನು:—ನೀನು ಅನ್ನುವದು ನಿಜವು; ಆದರೆ ಸ್ವಲ್ಪ ಮಾತಿನ ಸಲುವಾಗಿ ಸತ್ಪುರುಷರನ್ನು ಯಾಚಿಸಬಾರದು ಹಾಗೆ ಮಾಡಿದರೆ ಕಲ್ಪವೃಕ್ಷದ ಬುಡದಲ್ಲಿ ಕುಳಿತು ಕಜ್ಜಾಯವನ್ನು ಬೇಡಿದಂತಾಗುವದು. ಆದ್ದರಿಂದ ಈ ಮಾತಿನ ಹಟವನ್ನು ಬಿಟ್ಟುಬಿಡು. ಲಾಭಾಲಾಭಗಳು ದೈವಾಧೀನವಾದವುಗಳು. ಯಾಕಂದರೆ, ಇವೆಲ್ಲವು ಪೂರ್ವಜನ್ಮದ ಸುಕೃತದಿಂದ ಘಟಿಸತಕ್ಕ ಕಾರ್ಯಗಳಾಗಿವೆ. ಇಂದು ನಿನ್ನ ಮೇಲೆ ಶಿವಾನುಗ್ರಹವಾಯಿತೆಂದು ತಿಳಿ. ಭಗವಂತನು ಅನುಗ್ರಹವನ್ನು ಮಾಡುವದಕ್ಕಿಂತ ಮೊದಲು ಭಕ್ತರ ವಿತ್ತವನ್ನು ಹರಣ ಮಾಡುತ್ತಾನೆಂಬದು "ಯಸ್ಯಾನುಗ್ರಹಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಮ್" ಎಂಬ ಭಗವದ್ವಾಕ್ಯದಿಂದ ಗೊತ್ತಾಗುತ್ತದೆ ಆದ್ದರಿಂದ ಆಗಿಹೋದ ಮಾತಿನಬಗ್ಗೆ ಚಿಂತೆಮಾಡದೆ ಸ್ವಸ್ಥಚಿತ್ತಳಾಗಿ ಇರು. ಪತಿತರ ಪರಾಮರಿಕೆಯನ್ನು ತಕ್ಕೊಳ್ಳುವದರಲ್ಲಿ ಪರಮೇಶ್ವರನು ಸಮರ್ಥನಿರುವನು, ಎಂದು ಹೇಳಿದನು. ಆಗ ಆ ಸತಿಯು ಪತಿಯ ಬೋಧ

ಪರವಾದ ವಚನಗಳನ್ನು ಕೇಳಿ ಸುಮ್ಮನಾದಳು.

ಇತ್ತ ಪಡಸಾಲೆಯಲ್ಲಿ ಪಾದಸೇವೆಯನ್ನು ಮಾಡುತ್ತ ಕುಳಿತ ಚಿದಂಬರನು ಆ ದುಃಖಿತ ದಂಪತಿಗಳ ಸಂವಾದವನ್ನು ಕೇಳಿ ಕನಿಕರಬಟ್ಟು, ರಾಮಚಂದ್ರ ಪಂತನಿಗೆ:—ನಾನು ಬಹಿರ್ಭೂಮಿಗೆ ಹೋಗಬೇಕಾಗಿದೆ. ಆದ್ದರಿಂದ ದೀಪವನ್ನು ತಕ್ಕೊಂಡು ಬಾ, ಎನ್ನಲು, ಅವನು ದೀಪವನ್ನು ಹಿಡಕೊಂಡು ಚಿದಂಬರನನ್ನು ಮನೆಯ ಹೊರಭಾಗಕ್ಕೆ ಕರೆದೊಯ್ದು, ಇಲ್ಲಿ ಕೂಡ್ರು, ಎಂದು ಹೇಳಿದನು. ಅದಕ್ಕೆ ಚಿದಂಬರನು:—ನಾನು ಇಲ್ಲಿ ಕೂಡುವದಿಲ್ಲ. ನನ್ನನ್ನು ಊರಹೊರಕ್ಕೆ ಕರಕೊಂಡು ನಡೆ, ಎಂದನು. ಆಗ ರಾಮಚಂದ್ರಪಂತನು ಅವನನ್ನು ಊರ ಹೊರಗೆ ಕರಕೊಂಡು ಹೋದನು. ಆಗ ಚಿದಂಬರನು:—ಊರ ಸಮೀಪದಲ್ಲಿ ಹೊಲಸು ಬಹಳವಾಗಿರುವದು; ಆದ್ದರಿಂದ ತುಸ ಮುಂದಕ್ಕೆ ನಡೆ, ಎನ್ನಲು, ರಾಮಚಂದ್ರಪಂತನು ಅವನನ್ನು ತುಸ ಮುಂದಕ್ಕೆ ಕರೆದೊಯ್ದು:—ರಾತ್ರಿಯು ಬಹಳವಾಗಿರುವದು; ಇಲ್ಲೇ ಮುಂದುಗಡೆಯಲ್ಲಿ ಅರಣ್ಯವಿದ್ದು. ಅಲ್ಲಿ ಕ್ರೂರ ಮೃಗಗಳ ಭಯವು ವಿಶೇಷವಾಗಿರುವದು. ಆದ್ದರಿಂದ ಇಲ್ಲಿಯೇ ಕೂಡು, ಎಂದು ಹೇಳಿದನು. ಅದಕ್ಕೆ ಚಿದಂಬರನು:—ನಾನು ನಿನ್ನ ಸಮೀಪದಲ್ಲಿರಲು, ನಿನಗೆ ಕಾಲನಿಂದಲೂ ಭಯವಿಲ್ಲ ಅಂದ ಳಿಕ ಮಿಕ್ಕ ಮೃಗಗಳ ಪಾಡೇನು? ಎಂದು ಹೇಳಿ, ಅವನನ್ನು ಮೂರು ಮೈಲುಗಳ ವರೆಗೆ ಕರೆದೊಯ್ದು, ತಾನು ಅಲ್ಲಿ ಒಂದು ಗಿಡದ ಬುಡದಲ್ಲಿ ನಿಂತು:—ಇತ್ತ ಬಾ, ಸ್ವಲ್ಪ ಅಗಿ, ಅಂದರೆ ನಿನಗೆ ಕಲ್ಯಾಣವಾಗುವದೆಂದು ಹೇಳಲು, ನಿದ್ರಾಪೀಡಿತನಾದ ರಾಮಚಂದ್ರ ಪಂತನು ಸಿಟ್ಟಾಗಿ, ಮಾತಿನ ಅಭಿಪ್ರಾಯವನ್ನು ತಿಳಿಯದೇ ಚಿದಂಬರನನ್ನು ಬಿರಿ ನುಡಿಗಳಿಂದ ಜರೆಯುತ್ತ, ಒಂದ ತಪ್ಪಿಗೆ ನಿರ್ವಾಹವಿಲ್ಲದೆ ಅವನ ಸಮೀಪಕ್ಕೆ ಹೋಗಿ, ಅವನು ಹೇಳುವ ಸ್ಥಳದಲ್ಲಿ ಒಂದು ಗೇಣು ಅಗಿಯಲು, ಅಲ್ಲಿ ಒಂದು ಪೆಟ್ಟಿಗೆಯು ಹೊರಟಿತು. ಆಗ ರಾಮಚಂದ್ರಪಂತನು ಅದನ್ನು ಪರೀಕ್ಷಿಸಿ ನೋಡಿ, ಅದು ತನ್ನ ಪೆಟ್ಟಿಗೆ ಇರುವದೆಂದು ಮನಗಂಡನು.

ಹೀಗೆ ಕಳೆದು ಹೋದ ಧನವು ಅಕಸ್ಮಾತ್ತಾಗಿ ದೊರೆತದ್ದರಿಂದ, ರಾಮ ಚಂದ್ರಪಂತನಿಗೆ ಬಲು ಆನಂದವಾಯಿತು. ಅವನು ಚಿದಂಬರನ ಚರಣಕಮಲ ಗಳಿಗೆರಗಿ, ಅವನನ್ನು ಪರಿಪರಿಯಿಂದ ಸ್ತುತಿಸಹತ್ತಿದನು ಆಗ ಚಿದಂಬರನು ಅವನನ್ನು ಹಿಡಿದೆತ್ತಿ:—ಬೇಗನೆ ಪೆಟ್ಟಿಗೆಯನ್ನು ತಕ್ಕೊಂಡು ಮನೆಗೆ ನಡೆ. ಈ ಸಂಗತಿಯನ್ನು ಅಪ್ಪನ ಮುಂದೆ ಹೇಳಬೇಡ, ಎಂದು ಹೇಳಲು, ರಾಮಚಂದ್ರ

ಪಂತನು ಚಿದಂಬರಾಜ್ಞೆಯನ್ನು ಮನ್ನಿಸಿ, ದೀಪವನ್ನೂ, ಪೆಟ್ಟಿಗೆಯನ್ನೂ ತಕ್ಕೊಂಡು ಗುರುಪುತ್ರನಿಂದೊಡಗೂಡಿ ಮನೆಗೆ ಬಂದನು. ತರುವಾಯ ಚಿದಂಬರನು ತಂದೆಯ ಬಳಿಯಲ್ಲಿ ಮಲಗಿಕೊಂಡನು. ರಾಮಚಂದ್ರಪಂತನು ಅಂತರ್ಗೃಹಕ್ಕೆ ಹೋಗಿ, ಪತ್ನಿಗೆ ಪೆಟ್ಟಿಗೆಯನ್ನು ತೋರಿಸಿ, ನಡೆದ ಸಂಗತಿಯನ್ನೆಲ್ಲ ಹೇಳಿದನು ಆಗ ಅವಳಿಗಾದರೂ ಬಹು ಆನಂದವಾಯಿತು.

ಮರುದಿವಸ ಪ್ರಾತಃಕಾಲಕ್ಕೆ ಮಾರ್ತಂಡ ದೀಕ್ಷಿತರು ಊರಿಗೆ ಹೋಗುವದಕ್ಕಾಗಿ ರಾಮಚಂದ್ರಪಂತನ ಅನುಮತಿಯನ್ನು ಕೇಳಲು, ಅವನು ಕೈ ಜೋಡಿಸಿ:—ಈ ಹೊತ್ತು ವೈಶ್ವದೇವವನ್ನು ಇಲ್ಲೇ ತೀರಿಸಿಕೊಂಡು ಹೋಗಬೇಕು, ಎಂದು ಬೇಡಿಕೊಂಡನು. ಆ ಮಾತಿಗೆ ದೀಕ್ಷಿತರು ಒಡಂಬಡಲು, ರಾಮಚಂದ್ರಪಂತನು ಆ ಹೊತ್ತು ಒಳ್ಳೇ ಸಮಾರಂಭದಿಂದ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಿದನು. ಅವನ ಉತ್ಸಾಹವು ಇಮ್ಮಡಿಯಾಯಿತು. ದೀಕ್ಷಿತರು ಅದನ್ನು ನೋಡಿ:—ಯಾಕೆ? ರಾಮಚಂದ್ರಪಂತನೇ, ಈ ಹೊತ್ತು ನೀನು ಒಳ್ಳೇ ಸಂತೋಷವುಳ್ಳವನಾಗಿರುವಿ. ಇದರ ಕಾರಣವೇನು? ಎಂದು ಕೇಳಲು, ರಾಮಚಂದ್ರಪಂತನು ಚಿದಂಬರನ ಮೋರೆಯನ್ನು ನೋಡಹತ್ತಿದನು. ಆಗ ಚಿದಂಬನು:—'ತಂದೆಯು ಪ್ರತ್ಯಕ್ಷ ದೇವರು' ಎಂದು ಶಾಸ್ತ್ರವು ಹೇಳುತ್ತಿರುವದು. ಅಂದಬಳಿಕ ಅವರು ಕೇಳುತ್ತಿರಲು, ಸಂಶಯವೇಕೆ? ನಡೆದ ಸಂಗತಿಯನ್ನೆಲ್ಲ ಸಾದ್ಯಂತವಾಗಿ ಹೇಳು, ಎಂದು ನುಡಿಯಲು, ರಾಮಚಂದ್ರಪಂತನು ಮುನ್ನಾದಿವಸ ರಾತ್ರಿಯಲ್ಲಿ ವರ್ತಿಸಿದ ಸಂಗತಿಯನ್ನೆಲ್ಲ ವಿಸ್ತಾರವಾಗಿ ಹೇಳಿದನು. ಅದನ್ನು ಕೇಳಿ, ಕೂಡಿದ ಜನರೆಲ್ಲರು ಆಶ್ಚರ್ಯಚಕಿತರಾಗಿ, ಭಕ್ತಿಯಿಂದ ಚಿದಂಬರನನ್ನು ಹೊಗಳಹತ್ತಿದರು. ಆಗ ಮಾರ್ತಂಡ ದೀಕ್ಷಿತರು ಅವರೆಲ್ಲರನ್ನೂ ಮಧುರ ವಚನಗಳಿಂದ ಸಂತೈಸಿ, ಅವರೊಂದಿಗೆ ಸಂತೋಷದಿಂದ ಭೋಜನವನ್ನು ತೀರಿಸಿದರು. ಬಳಿಕ ಇಳಿಹೊತ್ತಿನಲ್ಲಿ ರಾಮಚಂದ್ರಪಂತನಿಗೆ ಹೋಗಿ ಬರುತ್ತೇವೆಂದು ಹೇಳಿ, ಚಿದಂಬರನನ್ನು ಕರಕೊಂಡು ಮರಳಿ ಮುರಗೋಡಕ್ಕೆ ಬಂದರು.

— —

## ೭ನೆಯ ಪ್ರಕರಣ.
## ಕೆಲವು ಸಂಕ್ಷಿಪ್ತ ಲೀಲೆಗಳು.

೧ ಶೂಲಿಸಿವಾರಣ:—ಮೇಲೆ ಹೇಳಿದಂತೆ ಚಿದಂಬರನ ಲೀಲೆಗಳು ಜನರಲ್ಲಿ ಹೆಚ್ಚೆಚ್ಚು ಹಬ್ಬಿದಂತೆ ಮಾರ್ತಂಡ ದೀಕ್ಷಿತರ ಮನೆಗೆ ದಿನಾಲು ಬಂದು ಹೋಗುವ ಭಕ್ತರ ಸಂಖ್ಯೆಯು ಬೆಳೆಯಹತ್ತಿತು. ಹೀಗಿರಲು, ಒಂದು ದಿವಸ ಹೊಟ್ಟೆಶೂಲಿಯುಳ್ಳ ಒಬ್ಬ ಬ್ರಾಹ್ಮಣನು ದೀಕ್ಷಿತರ ಮನೆಗೆ ಬಂದು, ಅವರನ್ನು ನಮಸ್ಕರಿಸಿ.-ನನಗೆ ಅನ್ನ ಪಚನವಾಗುವದಿಲ್ಲ, ನಿದ್ದೆ ಹತ್ತುವದಿಲ್ಲ; ಶೂಲಿಯಿಂದ ಬಳಲುವೆನು. ಇದಕ್ಕೆ ಏನಾದರೂ ಉಪಾಯವನ್ನು ಹೇಳಬೇಕು; ಎಂದು ಅಂಗಲಾಚಿ ಬೇಡಿಕೊಂಡನು. ಆಗ ದೀಕ್ಷಿತರು ಚಿದಂಬರನಿಗೆ:—ಅಪ್ಪಾ, ಚಿದಂಬರಾ, ಈ ಬ್ರಾಹ್ಮಣನಿಗೆ ಹೊಟ್ಟೆಶೂಲಿಯು ಇರುತ್ತದಂತೆ! ಅದಕ್ಕೆ ಏನಾದರೂ ಔಷಧವನ್ನು ಕೊಡು, ಎಂದು ಹೇಳಿದರು. ಚಿದಂಬರನು ಕೂಡಲೆ ಬ್ರಾಹ್ಮಣನನ್ನು ಕುರಿತು.—ನಿನ್ನ ಹೊಟ್ಟೆಶೂಲಿಗೆ ನಮ್ಮಲ್ಲಿಯ ಭೋಜನವೇ ಔಷಧವಾಗಿರುವದು. ಆದ್ದರಿಂದ ತೀವ್ರವಾಗಿ ಊಟಕ್ಕೆ ಬಾ, ಎಂದು ಹೇಳಿದನು. ಅದನ್ನು ಕೇಳಿ ಬ್ರಾಹ್ಮಣನು:—ಅನ್ನದ ಹೆಸರು ಕೇಳಿದರೆ ನನಗೆ ವಾಂತಿಯಾಗುತ್ತದೆ. ಅಂದಬಳಿಕ ಭೋಜನಕ್ಕೆ ಹ್ಯಾಗೆ ಬರಲಿ? ಬೇರೆ ಯಾವದಾದರೂ ಉಪಾಯವನ್ನು ಹೇಳಬೇಕು. ಎನ್ನಲು, ಚಿದಂಬರನು:—ಈ ಬೇನೆಯು ಬೇರೆ ಯಾವ ಉಪಾಯದಿಂದಲೂ ವಾಸಿಯಾಗಲಾರದು. ಆದ್ದರಿಂದ ಏನೇ ಆಗಲಿ, ನೀನು ನಮ್ಮಲ್ಲಿ ಭೋಜನಕ್ಕೆ ಬರಲಿಕ್ಕೇ ಬೇಕು ಎಂದು ಹೇಳಲು, ಬ್ರಾಹ್ಮಣನು ಆ ಮಾತಿಗೆ ನಿರುಪಾಯದಿಂದ ಒಪ್ಪಿಕೊಂಡು ನಿತ್ಯಾಹ್ನಿಕಗಳನ್ನು ತೀರಿಸಿಕೊಂಡು ಬಂದು ಎಲೆಯ ಮೇಲೆ ಕುಳಿತುಕೊಂಡನು. ಕೂಡಲೆ ಬಡಿಸುವದಕ್ಕೆ ಆರಂಭವಾಯಿತು ಆಗ ಎಲೆಯಲ್ಲಿ ಹಾಕಿದ ನುಚ್ಚು-ಭಕ್ಕರಿಗಳನ್ನು ನೋಡಿ, ಬ್ರಾಹ್ಮಣನ ಕೈಕಾಲುಗಳೇ ಹೋದವು. ಆದಗ್ಯೂ ಗಟ್ಟಿಮನಸ್ಸು ಮಾಡಿ ಅಂಥ ಅನ್ನವನ್ನೇ ಸೇವಿಸಲಾರಂಭಿಸಿದನು. ದಿನಾಲು ಸ್ವಲ್ಪ ಅಕ್ಕಿಯಗಂಜಿಯು ಕೂಡ ದಕ್ಕದ ಮನುಷ್ಯನು ಆ ಹೊತ್ತು ನುಚ್ಚು ಭಕ್ಕರಿಗಳನ್ನು ಯಥೇಚ್ಛವಾಗಿ ತಿಂದನು. ಆಗ ಅವನ ವಾಂತಿಯು ಹೇಳಹೆಸರಿಲ್ಲದೆ ಹೋಯಿತು ಶೂಲಿಯು ನಿರ್ನಾಮವಾಯಿತು ಅವನಿಗೆ ಭೋಜನದಲ್ಲಿ ತೃಪ್ತಿಯಾಗಲಿಲ್ಲದು ಉಂಡುಂಡ ಹಾಗೆ ಅನ್ನ ಸೇವಿಸುವ ರುಚಿಯೂ, ಇಚ್ಛೆಯೂ ಬೆಳೆಯಹತ್ತಿದವು. ಇರಲಿ.

ಇದೆಲ್ಲ ಆ ಚಿದಂಬರನ ಮಹಿಮೆಯೇ ಸರಿ. ಭೋಜನವಾದ ಬಳಿಕ ಮಾರ್ತಾಂಡ ದೀಕ್ಷಿತರು ಬ್ರಾಹ್ಮಣನನ್ನು ಕುರಿತು:—ದ್ವಿಜೋತ್ತಮನೇ, ಹೊಟ್ಟೆಶೂಲಿಯು ಹೇಗೆ ಇರುವದು? ಎಂದು ಕೇಳಲು, ಅವನು:-ಚಿದಂಬರಾನುಗ್ರಹದಿಂದಲೂ, ತಮ್ಮ ಆಶೀರ್ವಾದದಿಂದಲೂ ಚೆನ್ನಾಗಿ ಆರೋಗ್ಯವುಂಟಾಗಿರುವದು, ಎಂದು ಹೇಳಿ, ಅಪ್ಪಣೆಯನ್ನು ಪಡಕೊಂಡು, ಚಿದಂಬರನನ್ನು ನಮಸ್ಕರಿಸಿ, ಅವನ ಕೀರ್ತಿಯನ್ನು ನಾಲ್ಕೂ ಕಡೆಗೆ ಬೀರುತ್ತ ತನ್ನ ಊರಿಗೆ ಹೊರಟು ಹೋದನು.

೨ ಬ್ರಾಹ್ಮಣ ಸಂರಕ್ಷಣ:—ಶ್ರೀ ಚಿದಂಬರನಲ್ಲಿ ನಂಬಿಗೆಯುಳ್ಳ ಒಬ್ಬ ಬ್ರಾಹ್ಮಣನು ಒಬ್ಬ ಯವನ ರಾಜನಲ್ಲಿ ನಿರ್ವಾಹವಿಲ್ಲದೆ ಚಾಕರಿಯನ್ನು ಮಾಡು ತ್ತಿದ್ದನು. ಒಂದು ದಿನ ಅವನು ಯಾವದೋ ಒಂದು ಅಪರಾಧ ಮಾಡಿದ್ದರಿಂದ ಅವನ ಯಜಮಾನನು ಅವನ ಕುಟುಂಬದವರನ್ನು ಸೆರೆಮನೆಯಲ್ಲಿ ಹಾಕಿದನು. ಆಗ ಇನ್ನು ಮೇಲೆ ತನ್ನ ಮೇಲೆಯಾದರೂ ಈ ಪ್ರಸಂಗವು ಬರಬಹುದೆಂದು ತಿಳಿದು, ಆ ಬ್ರಾಹ್ಮಣನು ಆ ಊರಬಿಟ್ಟು ಬೇರೂರಿಗೆ ಓಡಿಹೋದನು. ಈ ಸುದ್ದಿಯು ರಾಜನಿಗೆ ತಿಳಿಯಲು, ಅವನು ಬ್ರಾಹ್ಮಣನನ್ನು ಬೆನ್ನಟ್ಟುವದಕ್ಕಾಗಿ ತನ್ನ ಸೈನ್ಯವನ್ನು ಕಳಿಸಿದನು; ಆದರೆ ಬ್ರಾಹ್ಮಣನು ಬಹುದೂರ ಹೋದದ್ದ ರಿಂದ ರಾಜಸೈನಿಕರು ಹಿಂದಿರುಗಿದರು.

ಇತ್ತ ಬ್ರಾಹ್ಮಣನು ಸ್ವಗ್ರಾಮದಿಂದ ಹೊರಟವನು ನೆಟ್ಟಗೆ ಚಿದಂಬರ ನಿದ್ದೆಡೆಗೆ ಬಂದು ನಮಸ್ಕಾರಮಾಡಿ, ತನ್ನ ಯಾವತ್ತು ವೃತ್ತಾಂತವನ್ನು ಸಾದ್ಯಂತ ವಾಗಿ ಹೇಳಿದನು ಆಗ ಚಿದಂಬರನು ಬ್ರಾಹ್ಮಣನಿಗೆ ಅಭಯವನ್ನಿತ್ತು:- ಹೆದರ ಬೇಡ. ಇಲ್ಲಿಂದ ದಕ್ಷಿಣದಿಕ್ಕಿಗೆ 'ಪಾಲಪ್ರೇಮಪುರ' ಎಂಬ ಪುಣ್ಯಕ್ಷೇತ್ರವಿರುವದು. ನೀನು ಅಲ್ಲಿಗೆ ಹೋಗಿ, ಅಲ್ಲಿ ಶ್ರೀ ಮಲ್ಲಾರಿಯ ಸೇವೆಯನ್ನು ಭಕ್ತಿಪೂರ್ವಕವಾಗಿ ಮಾಡು. ಅಂದರೆ ನಿನ್ನೊಡೆಯನು ನಿನ್ನನ್ನು ಇಪ್ಪತ್ತೇಳು ದಿವಸಗಳಲ್ಲಿ ಸುಖ ರೂಪವಾಗಿ ತನ್ನ ರಾಜಧಾನಿಗೆ ಕರಕೊಂಡು ಹೋಗುವನು. ಇದರಲ್ಲಿ ಸ್ವಲ್ಪಾ ದರೂ ಸಂಶಯವಿಲ್ಲ. ನನ್ನ ಮಾತಿನ ಮೇಲೆ ವಿಶ್ವಾಸವಿಟ್ಟು ನಾನು ಹೇಳಿದಂತೆ ಮಾಡಿದರೆ ನಿನಗೆ ಕಲ್ಯಾಣವಾಗುವದು, ಎಂದು ನುಡಿಯಲು, ಬ್ರಾಹ್ಮಣನು ಆ ಮಾತಿಗೆ ಒಡಂಬಟ್ಟು, ಭೋಜನವನ್ನು ತೀರಿಸಿಕೊಂಡು ಚಿದಂಬರಾಜ್ಞೆಯ ಮೇರೆಗೆ ಪಾಲಪ್ರೇಮಪುರಿಗೆ ಹೋಗಿ, ಅಲ್ಲಿ ಅನುಷ್ಠಾನವನ್ನಾರಂಭಿಸಿದನು. ಈ ಅನುಷ್ಠಾನಪ್ರಭಾವದಿಂದ ಅತ್ತ ಯವನರಾಜನಿಗೆ ಕಾರಣವಿಲ್ಲದೆ ಒಮ್ಮಿಂದೊಮ್ಮೆ ಭಯವುಂಟಾಗಹತ್ತಿತು. ಇಷ್ಟೇ ಅಲ್ಲ, ಬ್ರಾಹ್ಮಣನ ಭಕ್ತಿಗೆ ಮೆಚ್ಚಿದ ಮಲ್ಲಾ

ರಿಯು ಒಂದು ದಿವಸ ಯವನನ ಸ್ವಪ್ನದಲ್ಲಿ ಹೋಗಿ:— ನೀನು ಈಗ ಹೊಸದಾಗಿ ಸೆರೆಮನೆಯಲ್ಲಿಟ್ಟ ಬ್ರಾಹ್ಮಣ ಕುಟುಂಬದವರನ್ನು ತೀವ್ರವಾಗಿ ಮುಕ್ತಮಾಡಿ, ಪಾಲಪ್ರೇಮುರಿಯಲ್ಲಿದ್ದ ಆ ಕುಟುಂಬದ ಒಡೆಯನಾದ ಬ್ರಾಹ್ಮಣನನ್ನು ಬಹು ಆದರದಿಂದ ಕರಕೊಂಡು ಬಂದು ಅವನ ಅಧಿಕಾರಗಳನ್ನೆಲ್ಲ ಅವನಿಗೆ ಕೊಡಬೇಕು. ಹೀಗೆ ಮಾಡದಿದ್ದರೆ, ಒಂದು ಅರಕ್ಷಣದಲ್ಲಿ ನಿನ್ನನ್ನೂ, ನಿನ್ನ ರಾಜ್ಯವನ್ನೂ ಹಾಳು ಮಾಡುವೆನು, ಎಂದು ಹೇಳಿದನು. ಆಗ ಯವನನು ಹೆದರಿ, ಮರುದಿವಸವೇ ಆ ಬ್ರಾಹ್ಮಣ ಕುಟುಂಬದವರನ್ನು ಬಿಡುಗಡೆ ಮಾಡಿ, ತಾನು ಸ್ವತಃ ಬ್ರಾಹ್ಮಣನನ್ನು ಕರೆಯುವದಕ್ಕಾಗಿ ಪಾಲಪ್ರೇಮುರಿಗೆ ಹೋದನು.

ಯವನನ ಆಗಮನವನ್ನು ನೋಡಿ ಬ್ರಾಹ್ಮಣನ ಕೈಕಾಲುಗಳು ಹೋದವು; ಆದರೆ ಅಷ್ಟರಲ್ಲಿ ಆ ಯವನನು ಬ್ರಾಹ್ಮಣನ ಸಮೀಪಕ್ಕೆ ಹೋಗಿ ಕೈಜೋಡಿಸಿಕೊಂಡು—ಬ್ರಾಹ್ಮಣೋತ್ತಮನೇ, ನಾನು ಅಪರಾಧಿಯಿರುವೆನು. ನನ್ನನ್ನು ಕಾಪಾಡು! ಸುಮ್ಮಸುಮ್ಮನೆ ನಿನ್ನ ಕುಟುಂಬದವರನ್ನು ಸೆರೆಮನೆಯಲ್ಲಿಟ್ಟೆನು. ಆದದ್ದಾಯಿತು. ಇನ್ನು ಮೇಲೆ ಹೆದರಬೇಡ. ನಿನಗೆ ನನ್ನಿಂದ ಸ್ವಲ್ಪಾದರೂ ತ್ರಾಸವಾಗಲಿಕ್ಕಿಲ್ಲ. ಈಗ ನಿನ್ನ ಕುಟುಂಬದವರನ್ನು ಮುಕ್ತಮಾಡಿ, ನಿನ್ನನ್ನು ಕರೆಯುವದಕ್ಕಾಗಿ ಇಲ್ಲಿಗೆ ಬಂದಿರುವೆನು. ಊರಿಗೆ ನಡೆ, ಎಂದು ನುಡಿಯಲು, ಬ್ರಾಹ್ಮಣನು ರಾಜನ ಸ್ವಭಾವದಲ್ಲಿ ಈ ಪ್ರಕಾರ ಆದ ಹೆಚ್ಚುಕಡಿಮೆಯನ್ನು ಕಂಡು ಚಕಿತನಾಗಿ, ಅನುಷ್ಠಾನವನ್ನು ಪೂರ್ಣಮಾಡಿ, ಯವನನೊಡಗೂಡಿ ಊರಿಗೆ ಬಂದನು. ಬಳಿಕ ಅರಸನು ತಾನು ಕಸಕೊಂಡ ಯಾವತ್ತು ಅಧಿಕಾರಗಳನ್ನು ತಿರುಗಿ ಬ್ರಾಹ್ಮಣನಿಗೆ ಕೊಟ್ಟನು. ಪ್ರಿಯವಾಚಕರೇ, ನೋಡಿದಿರಾ? ಯಾವ ಯವನನು ಬ್ರಾಹ್ಮಣನನ್ನು ಸೆರೆಹಾಕಲು ಇಚ್ಛಿಸುತ್ತಿದ್ದನೋ, ಅವನೇ ಈಗ ಕೃತಕರ್ಮಕ್ಕೆ ಪಶ್ಚಾತ್ತಾಪಪಟ್ಟು, ಸ್ವತಃ ಬ್ರಾಹ್ಮಣನನ್ನು ಕರಕೊಂಡು ಹೋಗಿ, ಅವನ ಅಧಿಕಾರವನ್ನು ಅವನಿಗೆ ಕೊಟ್ಟನು. ಇದು ಚಿದಂಬರನ ಮಹಿಮೆಯಲ್ಲದೆ ಮತ್ತೇನು?

೩ ಭವಿಷ್ಯ:—ಬರಗಾಲದ ದಿವಸಗಳು. ನಾಲ್ಕೂ ಕಡೆಗೆ ಅನಾವೃಷ್ಟಿಯಿಂದ ಬೆಳೆಗಳು ಒಣಗಿದವು ಜನರು ನೀರು-ನೀರು, ಅನ್ನ-ಅನ್ನವೆಂದು ದೇಶದೇಶಗಳನ್ನು ಸಂಚರಿಸುತ್ತಿದ್ದರು. ಕಳ್ಳರ ಹಾವಳಿಯು ವಿಶೇಷವಾಗಿ ಬೆಳೆಯಿತು. ಜನರ ದುಃಖಕ್ಕೆ ಅಳತೆಯೇ ಉಳಿಯಲಿಲ್ಲ. ಇಂಥ ವೇಳೆಯಲ್ಲಿ ಕೆಲವು ಭಾವಿಕ ಜನರು ಮಾರ್ತಂಡದೀಕ್ಷಿತರ ಮನೆಗೆ ಬಂದು, ತಮ್ಮ ದೂರುಗಳನ್ನು ಹೇಳಿ

ಕೊಂಡರು. ಆಗ ಮಾರ್ತಾಂಡದೀಕ್ಷಿತರು ಚಿದಂಬರನನ್ನು ಕುರಿತು:—ಚಿದಂ ಬರಾ, ಇವರಿಗೆ ಮಳೆಯು ಎಂದು ಆಗುತ್ತದೆಂಬದನ್ನು ಹೇಳು, ಎನ್ನಲು, ಅಲ್ಲೇ ಸಮೀಪದಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತ ಕುಳಿತ ಚಿದಂಬರನು:—ಇಂದಿನಿಂದ ನಾಲ್ಕನೇ ದಿವಸ ಮಳೆಯಾಗುವದು. ಇದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ, ಎಂದು ಹೇಳಲು, ಎಲ್ಲ ಜನರು ಮುದಿತರಾಗಿ, ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಮುಂದೆ ನಾಲ್ಕನೇ ದಿವಸ ಚಿದಂಬರನ ಹೇಳಿಕೆಯಂತೆ ಬಹಳ ಮಳೆಯಾಯಿತು. ಜನರೆಲ್ಲ ಭೂಮಿಯನ್ನು ಬಿತ್ತಿದರು. ಆ ವರುಷ ಬೆಳೆಯು ವಿಶೇಷವಾಗಿ ಬಂದದರಿಂದ ನಾಲ್ಕೂ ಕಡೆಗೆ ಧನಧಾನ್ಯಗಳ ವೃದ್ಧಿಯಾಗಿ, ಜನರು ಆನಂದದಿಂದ ಕಾಲಹರಣ ಮಾಡಹತ್ತಿದರು. ಇಂತು ಚಿದಂಬರನು ಬ್ರಹ್ಮ ಚರ್ಯದಲ್ಲಿ ಎಷ್ಟೋ ಅದ್ಭುತ ಚಮತ್ಕಾರಗಳನ್ನು ತೋರುತ್ತ ಹನ್ನೆರಡು ವರುಷ ಬ್ರಹ್ಮಚರ್ಯವ್ರತವನ್ನು ಯಥಾಶಾಸ್ತ್ರವಾಗಿ ಕಾಪಾಡಿದನು.

---

## ೮ನೆಯ ಪ್ರಕರಣ.

### ವಿವಾಹ.

ಹಿಂದೆ ಹೇಳಿದಂತೆ ಚಿದಂಬರನು ಅದ್ಭುತ ಲೀಲೆಗಳನ್ನು ತೋರಿಸುತ್ತ ಹನ್ನೆ ರಡು ವರುಷ ಬ್ರಹ್ಮಚರ್ಯದಿಂದಿರಲು, ಮಾರ್ತಾಂಡದೀಕ್ಷಿತರು ಅವನಿಗೆ ಗೃಹ ಸ್ಥಾಶ್ರಮವನ್ನು ಸ್ವೀಕರಿಸಬೇಕೆಂದು ಉಪದೇಶ ಮಾಡಿದರು. ಅಷ್ಟರಲ್ಲಿ ಮಾಫಳ್ಳಿ ಎಂಬ ಉಪನಾಮವುಳ್ಳ ಲಿಂಗೋಪಂತರೆಂಬ ಸದ್ಗೃಹಸ್ಥರು ಚಿದಂಬರನಿಗೆ ಕನ್ಯಾ ದಾನವನ್ನು ಮಾಡಿಕೊಡಬೇಕೆಂದು ಯೋಚಿಸಿ, ದೀಕ್ಷಿತರ ಬಳಿಗೆ ಬಂದು ತಮ್ಮ ಅಭಿಪ್ರಾಯವನ್ನು ವ್ಯಕ್ತ ಮಾಡಿದರು. ಆಗ ಉಭಯತರಲ್ಲಿ ಲಗ್ನದ ಸಂಬಂಧ ವಾಗಿ ಚರ್ಚೆನಡೆಯಿತು. ಲಿಂಗೋಪಂತರು ವರದಕ್ಷಿಣೆಯನ್ನು ಕೊಡುತ್ತೇ ವೆಂದು ಅನ್ನುತ್ತಿದ್ದರು; ಆದರೆ ಮಾರ್ತಾಂಡದೀಕ್ಷಿತರು ಆ ಮಾತಿಗೆ ಒಡಂಬಡ ಲೊಲ್ಲರು! ಕಡೆಗೆ ಉಭಯತರಿಗೂ ಮಾನ್ಯವಾದ ಕಟ್ಟಳೆಗಳಾಗಿ, ಲಗ್ನವು ನಿಶ್ಚ ಯಿಸಲ್ಪಟ್ಟು ಮುಹೂರ್ತವಾದರೂ ಗೊತ್ತು ಮಾಡಲ್ಪಟ್ಟಿತು. ಆಗ ಲಿಂಗೋ ಪಂತರಿಗೆ ಬಹಳ ಸಮಾಧಾನವಾಯಿತು. ಬಳಿಕ ಅವರು ಲಗ್ನದ ಸಾಹಿತ್ಯ ಸಿದ್ಧ ತೆಗಾಗಿ ಸತ್ತಿಗೇರಿಗೆ ಹೊರಟು ಹೋದರು. ಲಗ್ನಸಮಾರಂಭವು ಸತ್ತಿಗೇರಿ

ಯಲ್ಲಿಯೇ ಆಗತಕ್ಕದ್ದೆಂದು ಮೊದಲೇ ಗೊತ್ತಾದ ಮೂಲಕ ಲಗ್ನಮುಹೂರ್ತದ ಮುನ್ನಾದಿವಸ ದೀಕ್ಷಿತಪರಿವಾರವೂ ಸತ್ತೀಗೇರಿಗೆ ಹೋಯಿತು.

ಬಳಿಕ ವಿವಾಹೋತ್ಸವಕ್ಕೆ ಆರಂಭವಾಯಿತು. ಮೊದಲನೇ ದಿವಸ ಎದುರ ಗೊಳ್ಳುವದಾದ ಮೇಲೆ ಸೀಮಾಂತಪೂಜನ ಮೊದಲಾದ ಕಾರ್ಯಗಳು ಸಂಭ್ರಮ ದಿಂದ ನಡೆದವು. ಮರುದಿವಸ ಪ್ರಾತಃಕಾಲಕ್ಕೆ ವಾಲಗದವರು ಮನೆಯ ಹೊರ ಭಾಗದಲ್ಲಿ ಮಂಗಳ ವಾದ್ಯಗಳನ್ನು ಬಾರಿಸತೊಡಗಿದರು. ಪುರಂಧ್ರೀಯರೂ ಆಶ್ರಿತ ಜನರೂ ಕೈಯಲ್ಲಿ ಅರಿಸಿನ-ಕುಂಕುಮ-ಮಂತ್ರಾಕ್ಷತೆಗಳ ಕರಂಡಕ ಗಳನ್ನೂ, ಬೆಳ್ಳಿಯ ಬಟ್ಟಲಗಳನ್ನೂ ಹಿಡಕೊಂಡು ಗ್ರಾಮದ ನರನಾರಿಯರಿಗೆ ಔತಣ ಕೊಡುವದರಲ್ಲಿ ತೊಡಗಿದರು. ಹುವ್ವಾಡಿಗರು ಒಕುಲ, ಜಾಜಿ, ಮಲ್ಲಿಗೆ, ಕದರುಮಲ್ಲಿಗೆ. ಗುಲಾಬಿ ಮುಂತಾದ ವಿಧವಿಧದ ಪುಷ್ಪಗಳಿಂದ ಹಾರಗಳನ್ನೂ, ತುರಾಯಿಗಳನ್ನೂ ಕಟ್ಟಿ ತಂದು, ಲಗ್ನದ ವ್ಯವಸ್ಥಾಪಕರ ಕೈಯಲ್ಲಿ ಕೊಟ್ಟರು. ಆಗ ಕೆಲವರು ಮಂಟಪದಲ್ಲಿ ಜನರು ಕೂಡ್ರುವದಕ್ಕಾಗಿ ಜಾಜಮುಗಳನ್ನು ಹಾಸಿ. ಲೋಡು-ತೆಕ್ಕೆಗಳನ್ನು ವ್ಯವಸ್ಥೆಯಿಂದ ಇಡುತ್ತಿದ್ದರು. ಮತ್ತೆ ಕೆಲವರು ಕಾಯಿಪಲ್ಲೆಗಳನ್ನು ಹೆಚ್ಚುವದರಲ್ಲಿಯೂ, ಸಾಮಾನು ಅಳೆದು ಕೊಡುವದರ ಲ್ಲಿಯೂ ತೊಡಗಿದ್ದರು. ಪುರೋಹಿತನ ಗಡಿಬಿಡಿಯಂತೂ ಹೇಳಲಸಾಧ್ಯವು. ಆತನು ತಲೆಗೆ ಶಾಲನ್ನು ಸುತ್ತಿಕೊಂಡು, ಹೆಗಲ ಮೇಲೆ ಅಂಚಿನ ಧೋತರವನ್ನು ಚಲ್ಲಿ, ಕೈಯೊಳಗೆ ಪಂಚಾಂಗವನ್ನು ಹಿಡಕೊಂಡು, ಅತ್ತಿಂದಿತ್ತ ಇತ್ತಿಂದತ್ತ ಅಡ್ಡಾ ಡುವದರಲ್ಲಿಯೂ, ತನ್ನ ಶಿಷ್ಯನಿಗೆ.-ಎಲಾ ರಂಗಾ, ಪುಣ್ಯಾಹವಾಚನಕ್ಕಾಗಿ ಅಕ್ಕಿ- ಗೋದಿಗಳನ್ನೂ, ಎಲೆಯಡಿಕೆಗಳನ್ನೂ ತೆಗೆದುಕೊಂಡೆಯಾ? ಎಂದು ಕೇಳುವದರ ಲ್ಲಿಯೂ ತೊಡಗಿದ್ದರು. ಕೆಲವರು ಬೀಗರಿಗೆ ಉಡುಗರೆಯನ್ನು ಕೊಡುವದಕ್ಕಾಗಿ ಅರಿವೆಗಳನ್ನು ಆರಿಸಿ, ಬೇರೆ ಬೇರೆಯಾಗಿ ಇಡುವದರಲ್ಲಿ ತೊಡಗಿದ್ದರು. ಇಷ್ಟರಲ್ಲಿ ಗ್ರಾಮದ ಆಮಂತ್ರಿತ ಜನರು ಸ್ವಚ್ಛವಾದ ಉಡಿಗೆತೊಡಿಗೆಗಳನ್ನು ಧರಿಸಿ. ತಮ್ಮ ತಮ್ಮ ಮಕ್ಕಳಿಂದೊಡಗೂಡಿ ಲಗ್ನಮಂಟಪಕ್ಕೆ ಒರಹತ್ತಿದರು. ಇಂತು ಲಗ್ನ ಗೃಹದಲ್ಲಿ ನಾಲ್ಕೂ ಕಡೆಗೆ ಆನಂದವುಂಟಾಗಿರಲು, ಸುಮುಹೂರ್ತಕಾಲವು ಸಮೀ ಪಿಸಿತು. ಅಷ್ಟರಲ್ಲಿ ಪುರೋಹಿತನು ಪೂರ್ವ ಕೆಲಸಗಳನ್ನೆಲ್ಲ ತೀರಿಸಿಕೊಂಡು ಸಿದ್ಧ ನಾಗಿಯೇ ಇದ್ದನು. ಕೂಡಲೆ ಅವನು ಬೇರೆ ಎಷ್ಟೋ ವಿದ್ವಾಂಸರಾದ ಬ್ರಾಹ್ಮಣ ರಿಂದೊಡಗೂಡಿ, ಮಂಗಲಾಷ್ಟಕಗಳನ್ನು ಉಚ್ಚಸ್ವರದಿಂದ ಅನ್ನತೊಡಗಿದನು. ಆಗ ಮಂಗಲಾಷ್ಟಕಗಳ ಮಂಜುಲವಾದ ಘೋಷವು ಮಂಟಪವನ್ನು ತುಂಬಿರಲು

ಮಾಲಗದ ಸುನಾದವು ಕೇಳುತ್ತಿರಲು, ನರನಾರಿಯರ ಕಲಕಲಾಟವು ನಡೆದಿರಲು, ಜನರ ಮೋರೆಯಮೇಲೆ ಆನಂದವು ಮೊಳೆದೋರುತ್ತಿರಲು, ವಧೂವರರು ಪರಸ್ಪರರ ಮೇಲೆ ಅಕ್ಷತಾರೋಪಣವನ್ನು ಮಾಡಲು ಆತುರಪಡುತ್ತಿರಲು, ನೆರೆದ ಬ್ರಹ್ಮವೃಂದವೂ, ನರನಾರಿಯರೂ ವಧೂವರರಮೇಲೆ ಆ ಸುಮುಹೂರ್ತದಲ್ಲಿ ಸಂಭ್ರಮದಿಂದ ಅಕ್ಷತೆಗಳನ್ನು ಹಾಕಿದರು ಬಳಿಕ ಲಿಂಗೋಪಂತರು ವಿಧ್ಯುಕ್ತವಾಗಿ ಕನ್ಯಾದಾನವನ್ನು ಮಾಡಿದರು. ಉಮಾಮಹೇಶ್ವರ ಪೂಜೆಯ ಕಾಲಕ್ಕೆ ತಮ್ಮ ಕನ್ಯೆಯಾದ ‡ ಸಗುಣಾಬಾಯಿಯ ಬಳಿಯಲ್ಲಿ ಪ್ರತ್ಯಕ್ಷ ಪರಮೇಶ್ವರನೇ ಕುಳಿತಿರುವದನ್ನು ನೋಡಿ, ಲಿಂಗೋಪಂತರು ಪರಮಾನಂದಭರಿತರಾಗಿ ತಮ್ಮ ಸರ್ವಸ್ವವನ್ನೆಲ್ಲ ಚಿದಂಬರನಿಗೆ ಅರ್ಪಿಸಿದರು. ಬಳಿಕ ಮುಂದೆ ನಾಲ್ಕುದಿವಸಗಳ ವರೆಗೆ ಲಗ್ನಸಮಾರಂಭವು ಬಹಳ ವಿಜೃಂಭಣೆಯಿಂದ ಜರಗಿತು. ಮಿಷ್ಟಾನ್ನ ಭೋಜನ, ದಕ್ಷಿಣೆಗಳಿಂದ ದ್ವಿಜವೃಂದವು ತುಷ್ಟವಾಯಿತು. ಹೀಗೆ ಲಗ್ನ ಸಮಾರಂಭವು ಮುಗಿಯಲು, ಮಾರ್ತಂಡದೀಕ್ಷಿತರು ಬೀಗರ ಅಪ್ಪಣೆಯನ್ನು ತಕ್ಕೊಂಡು ಮರಳಿ ಮುರಗೋಡಕ್ಕೆ ಬಂದರು. (ಶಕೆ ೧೬೯೭)

ಈ ಪ್ರಕಾರ ಚಿದಂಬರನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಪಿತೃಸೇವೆಯನ್ನು ಮಾಡತೊಡಗಿದನು. ಮಾರ್ತಂಡದೀಕ್ಷಿತರು ಒಂದು ಕುಲೀನ ಕನ್ಯೆಯನ್ನು ನೋಡಿ ಪ್ರಭಾಕರನ ಲಗ್ನವನ್ನೂ ಬಹಳ ಸಮಾರಂಭದಿಂದ ಮಾಡಿದರು. ಪ್ರಭಾಕರನಾದರೂ ಚಿದಂಬರನಂತೆ ಪಿತೃಸೇವಾತತ್ಪರನಾದನು.

ಈ ಸಮಯಕ್ಕೆ ದೇಶದಲ್ಲಿ ಪುಂಡಾಟಿಕೆಗಳಿಗೆ ಪ್ರಾರಂಭವಾಯಿತು. ಕಂಡಕಂಡವರು ಕಂಡಕಂಡವರನ್ನು ಸುಲಿಯುಹತ್ತಿದರು. ಒಬ್ಬರ ಮಾತನ್ನು ಮತ್ತೊಬ್ಬರು ಕೇಳಲೊಲ್ಲರು. ಅಧಿಕಾರಿಗಳು ಜನರನ್ನು ಹಿಡಕೊಂಡು ಹೋಗಿ ಸೆರೆಮನೆಯಲ್ಲಿಡಹತ್ತಿದರು. ಇದೇ ಗೊಂದಲದಲ್ಲಿ ಲಿಂಗೋಪಂತ ಮಾಘಳ್ಳಿ ಇವರನ್ನಾದರೂ ಕುಟುಂಬ ಸಹಿತವಾಗಿ ಹಿಡಕೊಂಡು ಹೋದರು. ಚಿದಂಬರನ ಪತ್ನಿಯಾದ ಸರಸ್ವತೀಮಾತೆಯು ಆಗ ಚಿಕ್ಕವಳಿದ್ದ ಕಾರಣ ತವರುಮನೆಯಲ್ಲಿ ಇರುತ್ತಿದ್ದಳು. ಆದ್ದರಿಂದ ಅವಳಾದರೂ ಸೆರೆಮನೆಯ ಸೋಬತಿಯಾದಳು. ಈ ಸುದ್ದಿಯು ಮಾರ್ತಂಡದೀಕ್ಷಿತರಿಗೆ ತಿಳಿಯಲು, ಅವರು ಖಿನ್ನರಾದರು; ಹಾಗು ಇನ್ನು ಮೇಲೆ ನಮ್ಮ ಸೊಸೆಯು ಬಿಡುಗಡೆಯಾಗುವದು ದುಸ್ತರವು, ಏನು ಮಾಡಬೇಕು?

‡ ಇವಳ ಅತ್ತೆಯ ಮನೆಯ ಹೆಸರು ಸರಸ್ವತಿ.

ಎಂದು ಆಲೋಚಿಸಿ, ಚಿದಂಬರನ ಎರಡನೇ ಮದುವೆಯನ್ನು ಮಾಡಬೇಕೋ ಹ್ಯಾಗೆ ಎಂಬ ವಿಚಾರದಲ್ಲಿ ತೊಡಗಿದರು.

ಈಶ್ವರನೇ ಭೂಲೋಕದ ಮೇಲೆ ಅವತರಿಸಿದ ಬಳಿಕ ಅವನ ಪರಿವಾರದವರಾದರೂ ಬೇರೆ ಬೇರೆ ರೂಪದಿಂದ ಅವತರಿಸಿ ಸೇವೆಯನ್ನು ಮಾಡುತ್ತಿದ್ದರು. ಉಮಾ ಹಾಗು ಭಾಗೀರಥಿದೇವಿಯವರಾದರೂ ಭೂಮಿಯ ಮೇಲೆ ಅವತರಿಸಿದ್ದರು. ಅವರಲ್ಲಿ ಪಾರ್ವತಿಯ ಅಂಶಸಂಭೂತಳಾದ ಸರಸ್ವತೀಮಾತೆಯ ಪಾಣಿಗ್ರಹಣವನ್ನು ಮೇಲೆ ಹೇಳಿದಂತೆ ಚಿದಂಬರನು ಮಾಡಿಕೊಂಡಿದ್ದನು. ಮುಂದೆ ಕೆಲವು ದಿವಸಗಳ ತರುವಾಯ ಚಿದಂಬರನು ಮನಸಿನಲ್ಲಿ.—“ನಾನು ಪಾರ್ವತಿಯ ಅಂಶಸಂಭೂತಳಾದ ಸರಸ್ವತಿಯ ಪಾಣಿಗ್ರಹಣವನ್ನಂತು ಮಾಡಿದೆನು; ಆದರೆ ಭಾಗೀರಥಿಯ ಅಂಶಸಂಭೂತಳಾದ * ಸಾವಿತ್ರಿಯು ಪಾಣಿಗ್ರಹಣದ ಮಾರ್ಗವನ್ನು ನೋಡುತ್ತಿರಬಹುದು. ಕಾರಣ ತಂದೆಯ ಸಮ್ಮತಿಯಿಂದ ಆಕೆಯನ್ನು ಮದುವೆಯಾಗತಕ್ಕದ್ದೆ”ಂದು ಯೋಚಿಸಿ, ತಂದೆಯ ಬಳಿಗೆ ಬಂದು:— ಈ ಹೊತ್ತು ಒಂದು ಆಕಸ್ಮಿಕ ಸಂಗತಿಯು ವರ್ತಿಸಿತು. ಒಬ್ಬ ಜ್ಯೋತಿಷಿಯು ನನ್ನ ಕೈಯನ್ನು ನೋಡಿ, “ನಿನಗೆ ದ್ವಿಭಾರ್ಯಾಯೋಗವು ಇರುವದು” ಎಂದು ಹೇಳಿದನು. ಇದರ ಅಭಿಪ್ರಾಯವೇನಿರಬಹುದು? ನನಗಂತೂ ತಿಳಿಯಲೊಲ್ಲದು; ಎಂದು ಹೇಳಿದನು ಅದನ್ನು ಕೇಳಿ ಮಾರ್ತಂಡ ದೀಕ್ಷಿತರು ನಕ್ಕು:— ಚಿದಂಬರಾ, ನೀನು ಯಾರಿರುವಿ ಎಂಬದು ನನಗೆ ಗೊತ್ತುಂಟು. ನಿನ್ನ ಇಚ್ಛೆಯಂತೆ ಕಾರ್ಯವಾಗಲಿ, ಎಂದು ಹೇಳಿದರು.

ಈ ಮಾತಿಗೆ ಕೆಲವು ದಿವಸಗಳು ಕಳೆಯಲು, ಒಂದು ಚಮತ್ಕಾರವು ವರ್ತಿಸಿತು. ಅದೇನಂದರೆ:—ಒಂದು ದಿವಸ ಒಬ್ಬ ಬ್ರಾಹ್ಮಣನು ಚಿದಂಬರನ ಬಳಿಗೆ ಬಂದು, ನಮಸ್ಕಾರ ಮಾಡಿ, ಮುಂಭಾಗದಲ್ಲಿ ಸುಮ್ಮನೆ ಕುಳಿತುಕೊಂಡನು. ಆಗ ಚಿದಂಬರನು:—ತಾವು ಎಲ್ಲಿಯವರು? ಎಲ್ಲಿಗೆ ಹೋಗುವಿರಿ? ಇಲ್ಲಿಗೆ ಬಂದ ನಿಮಿತ್ತವೇನು? ಎಂದು ಕೇಳಲು, ಅದಕ್ಕೆ ಬ್ರಾಹ್ಮಣನು:—ತಾವು ಸರ್ವಜ್ಞರು! ನನ್ನ ಮನೋಗತವೆಲ್ಲವು ತಮಗೆ ಗೊತ್ತಾಗಿದ್ದು, ತಾವು ಅಜ್ಞಾನಿಗಳಂತೆ ಪ್ರಶ್ನೆಗಳನ್ನು ಮಾಡುವಿರಲ್ಲ! ವ್ಯವಹಾರರೀತಿಯಿಂದ ನನ್ನ ಬಾಯಿಂದಲೇ ಒಡಮೂಡಿಸದೇಕೆನ್ನುತ್ತೀರಿ. ಉಪಾಯವಿಲ್ಲ, ಎಂದು ನುಡಿದು ತನ್ನ ವೃತ್ತಾಂತವನ್ನು ಹೇಳ

* ಇವಳ ತವರಮನೆಯ ಹೆಸರು ಗೊತ್ತಿಲ್ಲದ್ದರಿಂದ ಅತ್ತೆಯ ಮನೆಯ ಹೆಸರನ್ನೇ ಉಪಯೋಗಿಸಿದೆ

ಲಾರಂಭಿಸಿದನು:—"ಇಲ್ಲಿಂದ ಪೂರ್ವಕ್ಕೆ 'ಶಿಲ್ಲೀಕೇರಿ' ಎಂಬ ಗ್ರಾಮವಿರುವದು. ಅಲ್ಲಿ ಹಿಂದಕ್ಕೆ ಮಣಿಗಿರಿ ಎಂಬ ಸತ್ವಸ್ಥ ಬ್ರಾಹ್ಮಣನು ಆಗಿ ಹೋದನು. ಅವನ ಪತ್ನಿಯ ಹೆಸರು ಕೃಷ್ಣಾಬಾಯಿ. ಈ ದಂಪತಿಗಳ ಹೊಟ್ಟೆಯಿಂದ ಒಬ್ಬ ಮಗನು ಜನಿಸಿದನು. ಅವನು ಒಳ್ಳೇ ಶೈವೋಪಾಸಕನಿದ್ದನು. ಆತನ ಹೆಂಡತಿಯ ಹೆಸರು ತುಂಗಾಬಾಯಿ. ಈ ತುಂಗಾಬಾಯಿಯ ಹೊಟ್ಟೆಯಲ್ಲಿ ಬಿಷ್ಟಪ್ಪ ಎಂಬ ಮಗನು ಜನಿಸಿದನು. ಅವನ ಕೀರ್ತಿಯು ತಮಗೆ ಗೊತ್ತಿರುತ್ತದಷ್ಟೇ? ಈ ಬಿಷ್ಟಪ್ಪನವರ ಹೆಂಡತಿಯ ಹೆಸರು ಸಖುರಾಬಾಯಿ. ಈ ಸಾಧ್ವಿಯಿಂದ ಬಿಷ್ಟಪ್ಪನವರಿಗೆ ಒಬ್ಬ ಮಗಳು ಜನಿಸಿರುವಳು ಅವಳು ಬಹು ಲಾವಣ್ಯವತಿಯಾದ್ದರಿಂದ ಎಷ್ಟೋ ಜನರು ಬಾಲ್ಯದಲ್ಲಿಯೇ ಅವಳ ಪ್ರಾಪ್ತಿಗಾಗಿ ಲಗ್ನದ ಮಾತುಕತೆಗಳ ನ್ನಾಡಹತ್ತಿದರು; ಆದರೆ ಇದು ಬಿಷ್ಟಪ್ಪನವರಿಗೆ ಸಂಪದೋರಲಿಲ್ಲ. ಅವರು ಪ್ರತಿಯೊಬ್ಬರಿಗೆ 'ದೊಡ್ಡವಳಾದ ಮೇಲೆ ನೋಡೋಣ' ಎಂದು ಹೇಳಹತ್ತಿದರು. ಹೀಗಿರಲು, ಒಂದು ದಿವಸ ಒಬ್ಬ ಬ್ರಾಹ್ಮಣನು ಬಂದನು. ಅವನು ತಮ್ಮ ಇತಿಹಾಸವನ್ನು ಸಾದ್ಯಂತವಾಗಿ ಹೇಳಿದನು ಅದನ್ನು ಕೇಳಿ, ನಮಗೂ ಬಿಷ್ಟಪ್ಪನವರಿಗೂ ಪರಮಾನಂದವಾಯಿತು. ತಮ್ಮ ಚರಿತ್ರವು ನಮ್ಮೆಲ್ಲರಿಗಿಂತ ಬಿಷ್ಟಪ್ಪನವರ ಮಗಳ ಮನಸ್ಸನ್ನು ವಿಶೇಷವಾಗಿ ಒಲಿಸಿಕೊಂಡಿತು ಅಂದಿನಿಂದ ಅವಳು ತನಗೆ ಸರ್ವೇಶನಾದ ಚಿದಂಬರನು ಹ್ಯಾಗೆ ದೊರಕುವನೆಂದು ಹಗಲಿರುಳೂ ಚಿಂತಿಸುತ್ತ, ದಿನದಿನಕ್ಕೆ ಕೃಶವಾಗಹತ್ತಿದ್ದಾಳೆ ಹೀಗೆಯೇ ಕೆಲವು ದಿವಸಗಳು ಹೋದರೆ, ಅವಳು ಬದುಕುವ ಆಶೆಯಿಲ್ಲ. ಬಿಷ್ಟಪ್ಪನವರು ಮಗಳ ಈ ಸ್ಥಿತಿಯನ್ನು ನೋಡಿ, ಗಾಬರಿಯಾಗಿ ಇದ್ದ ಸಂಗತಿಯ ನ್ನೆಲ್ಲ ತಮಗೆ ತಿಳಿಸಿಬಾ, ಎಂದು ನನ್ನನ್ನು ಕಳುಹಿಸಿರುವರು. ಈಗ ತಾವು ದಯಮಾಡಿ ನಿರ್ಧಾರವನ್ನು ಹೇಳಬೇಕು ಅಪ್ಪಣೆಯಾದಂತೆ ವರ್ತಿಸುವೆವು."

ಈ ಮೇರೆಗೆ ಬ್ರಾಹ್ಮಣನು [illegible] ಚಿದಂಬರನು ಮನಸ್ಸಿನಲ್ಲಿ ತಂದು, ಆದನು [illegible] ವಿಷ್ಣಾಪನೆಗೆ ಅನುಮತಿಸಿದನು. [illegible] ಬ್ರಾಹ್ಮಣನಿಗೆ:—ನಾವು ಇನ್ನೆರಡು ದಿವಸಗಳಲ್ಲಿ ಲಗ್ನಕ್ಕೆ ಬರುತ್ತೇವೆ ನೀನು ಮೊದಲು ಹೋಗಿ ಯಾವತ್ತು ಸಿದ್ಧತೆಯನ್ನು ಮಾಡು, [illegible] ಊರಿಗೆ ಹೋಗಲಿಕ್ಕೆ ಅಪ್ಪಣೆಯನ್ನಿತ್ತನು. ಆಗ ಬ್ರಾಹ್ಮಣನು [illegible] ಕೈಗೂಡಿದ್ದರಿಂದ ಆನಂದಭರಿತನಾಗಿ, ಶಿಲ್ಲೀಕೇರಿಗೆ ಹೋಗಿ [illegible] ಸುದ್ದಿಯನ್ನು ಬಿಷ್ಟಪ್ಪನವ

ಗೆ ಅರುಹಲು ಅವರಿಗೂ ಆನಂದವಾಯಿತು. ಅವರು ಲಗ್ನದ ಮುಹೂರ್ತವನ್ನು ನಿಶ್ಚಯಿಸಿ, ವರನ ಒರುವಿಕೆಯನ್ನು ಈಕ್ಷಿಸುತ್ತ ಕುಳಿತುಕೊಂಡರು.

ಇತ್ತ ಚಿದಂಬರನು ಬ್ರಾಹ್ಮಣನಿಗೆ ಅಭಿವಚನವಿತ್ತಂತೆ ಅಪ್ತ-ಇಷ್ಟರನ್ನು ಸಂಗಡ ಕರಕೊಂಡು ಶಲ್ಲೀಕೇರಿಗೆ ಹೋಗಿ ಊರ ಹೊರಭಾಗದಲ್ಲಿ ಇಳಕೊಂಡನು. ಈ ಸುದ್ದಿಯು ಬಿಷ್ಟಪ್ಪನವರಿಗೆ ತಿಳಿಯಲು, ಅವರು ಒಳ್ಳೇ ಸಮಾರಂಭದಿಂದ ಚಿದಂಬರನನ್ನು ಕರಕೊಂಡು ಹೋಗಿ, ವಿಧ್ಯುಕ್ತವಾಗಿ ಕನ್ಯಾದಾನವನ್ನು ಮಾಡಿಕೊಟ್ಟರು. ನಾಲ್ಕು ದಿವಸ ಬ್ರಾಹ್ಮಣರಿಗೆ ಮಿಷ್ಟಾನ್ನ ಭೋಜನವಾಗಿ ಲಗ್ನಕಾರ್ಯವು ಸಮಾರಂಭದಿಂದ ಸಮಾಪ್ತವಾಯಿತು. ಈ ಪ್ರಕಾರ ಚಿದಂಬರನು ಗಂಗಾಂಶಸಂಭೂತಳಾದ ಸಾವಿತ್ರಿಯ ಪಾಣಿಗ್ರಹಣವನ್ನು ಮಾಡಿ, ಮಾವನ ಅಪ್ಪಣೆಯನ್ನೂ, ಸಕಲ ಪರಿವಾರದ ಅಪ್ಪಣೆಯನ್ನೂ ತಕ್ಕೊಂಡು ಮುರುಗೋಡಕ್ಕೆ ಬಂದನು.

---

## ೯ನೆಯ ಪ್ರಕರಣ.

## ಮಾತಾ-ಪಿತೃ ವಿಯೋಗ.

ಹಿಂದೆ ಹೇಳಿದಂತೆ ಗಂಗಾಂಶಸಂಭೂತಳಾದ ಸಾವಿತ್ರಿಯ ಪಾಣಿಗ್ರಹಣವಾದ ಕೆಲದಿವಸಗಳಲ್ಲಿಯೇ ಲಿಂಗೋಪಂತ ಮಾಷ್ಟ್ಯಿ ಅವರ ಜನನವಾಯಿತು. ಅವರು ಮನೆಗೆ ಬಂದ ಒಳಿಕ ಸಂತೋಷದಿಂದ ಮಂಗಳದ ಸುಗುಣಾಬಾಯಿಯನ್ನು ಅತ್ತೆಯಮನೆಗೆ ಕಳಿಸಿಕೊಟ್ಟರು. ಸುಗುಣಾಬಾಯಿಯು ಬಂದದ್ದರಿಂದ ಮಾರ್ತಂಡ ದೀಕ್ಷಿತರು ಮೊದಲ್ಗೊಂಡು ಎಲ್ಲರಿಗೂ ಆನಂದವಾಯಿತು. ಮುಂದೆ ಶಕೆ ೧೬೨೩ ರಲ್ಲಿ ಸರಸ್ವತೀಮಾತೆಯು ಋತುಮತಿಯಾದಳು. ಆಗ ಮಾರ್ತಂಡ ದೀಕ್ಷಿತರು ವಿಧಿಪೂರ್ವಕವಾಗಿ ಗರ್ಭಾಧಾನ ಮಾಡಿಸಿದರು.

ಈ ಮಾತಿಗೆ ಒಂದು ವರುಷವು ಗತಿಸಿದ ಒಳಿಕ ಸರಸ್ವತೀಮಾತೆಯು ಗರ್ಭಿಣಿಯಾದಳು. ಗರ್ಭಲಾಂಛನಗಳು ಸ್ಪಷ್ಟವಾಗಿ ತೋರಹತ್ತಿದವು. ಶರೀರವು ಪುಷ್ಟವಾಯಿತು. ಸೌಂದರ್ಯವು ಹೆಚ್ಚಿತು. ಗರ್ಭವು ದಿನೇದಿನೇ ಶುಕ್ಲಪಕ್ಷದ ಚಂದ್ರನಂತೆ ಬೆಳೆಯಹತ್ತಿತು. ಒಂದು ದಿವಸ ಸರಸ್ವತೀಮಾತೆಯು

ಯಾವದೋ ಒಂದು ನಿಮಿತ್ತದಿಂದ ಸಿಟ್ಟಿಗೆದ್ದು, ಸಾಸಿವೆಯನ್ನು ಅರೆದು ಕುಡಿದಳು. ಆಗ ಹೊಟ್ಟೆಯಲ್ಲಿ ದಾಹವಾಗಹತ್ತಿತು. ಈ ಸುದ್ದಿಯು ಮಾರ್ತಂಡ ದೀಕ್ಷಿತರಿಗೆ ತಿಳಿಯಲು, ಅವರು ಅಲ್ಲಿಗೆ ಬಂದು ಸೊಸೆಯ ಅವಸ್ಥೆಯನ್ನು ಅವಲೋಕಿಸಿ, ಗಾಬರಿಯಾಗಿ "ಈ ಗರ್ಭಸ್ಥಶಿಶುವಿಗೆ ಅಪಾಯವು ಆಗದಿದ್ದರೆ ನಿನ್ನ ಹೆಸರು ಇಡುತ್ತೇನೆ"ಂದು ಸೂರ್ಯನನ್ನು ಪ್ರಾರ್ಥಿಸಿ, ಸೊಸೆಗೆ ವಿಭೂತಿಯನ್ನು ಹಚ್ಚಿದರು. ಆಗ ದಾಹವು ಶಾಂತವಾಯಿತು.

ಸರಸ್ವತೀಮಾತೆಗೆ ನವಮಾಸಗಳು ಪೂರ್ಣವಾಗಲು, ಶಕೆ ೧೬೦೫ ಶ್ರಾವಣ ಶುದ್ಧ ತೃತೀಯ ದಿವಸ ಶುಭಮುಹೂರ್ತದಲ್ಲಿ ಅವಳು ಗಂಡುಮಗನನ್ನು ಹೆತ್ತಳು. ಆಗ ಸಕಲರಿಗೂ ಆನಂದವಾಯಿತು. ಮಾರ್ತಂಡದೀಕ್ಷಿತರು ಮೊಮ್ಮಗನನ್ನು ನೋಡಿ ಸಂತೋಷಪಟ್ಟರು. ಅಷ್ಟರಲ್ಲಿ ಜ್ಯೋತಿಷಿಗಳು ಬಂದು, ಜಾತಕವನ್ನು ತೆಗೆದು ಲಗ್ನದ ಫಲವನ್ನು ಹೇಳಹತ್ತಿದರು. ಈ ಬಾಲಕನ ಜನ್ಮಸ್ಥಾನದಲ್ಲಿ ಉಚ್ಚಗ್ರಹಗಳು ಇರುವವು. ಈ ಲಗ್ನದ ಮೇಲೆ ಹುಟ್ಟಿದವನು ಅಪರಿಮಿತ ಧೈರ್ಯವುಳ್ಳವನೂ, ಆಚಾರಶೀಲನೂ, ಪಿತೃಸೇವಾತತ್ಪರನೂ ಆಗುವನು. ಎಂದು ಹೇಳಿ, ದಕ್ಷಿಣೆಯನ್ನು ತಕ್ಕೊಂಡು, ಸವಿಯೂಟಗಳಿಂದ ಸಂತುಷ್ಟರಾಗಿ ಬಾಲಕನನ್ನು ಆಶೀರ್ವದಿಸಿ, ತಮ್ಮ ಸ್ಥಳಕ್ಕೆ ಹೊರಟು ಹೋದರು. ಮುಂದೆ ಹನ್ನೆರಡನೇ ದಿವಸ ಮುತ್ತೈದೆಯರು ಮೊದಲೇ ಜೇಡಿಕೊಂಡಂತೆ, ಆ ಶಿಶುವಿಗೆ 'ದಿವಾಕರ' ಎಂದು ಹೆಸರನ್ನಿಟ್ಟು ಮಂಗಲಗೀತವನ್ನು ಹಾಡಿದರು. ಒಳಿಕ ಚಿದಂಬರದೀಕ್ಷಿತರಿಗೆ ಶಕೆ ೧೬೦೭ ಚೈತ್ರಶುದ್ಧ ಹುಣ್ಣಿವೆಯ ದಿವಸ ಶಂಕರನೆಂಬ ಮತ್ತೊಬ್ಬ ಮಗನು ಜನಿಸಿದನು. ಇಂತು ಈರ್ವರು ಮಕ್ಕಳಿಂದೊಡಗೂಡಿ ಚಿದಂಬರದೀಕ್ಷಿತರು ಪಿತೃಸೇವೆಯನ್ನು ಮಾಡಹತ್ತಿದರು.

ಒಂದು ದಿವಸ ಮಾರ್ತಂಡದೀಕ್ಷಿತರು ಚಿದಂಬರ ದೀಕ್ಷಿತರನ್ನು ಸಮೀಪಕ್ಕೆ ಕರೆದು:—ಚಿದಂಬರಾ, ಈ ಹೊತ್ತು ಇಷ್ಟಿಯಿರುವದು. ಕಾರಣ ನೆರೆಹಳ್ಳಿಗೆ ಹೋಗಿ ಬೆಣ್ಣೆಯನ್ನು ತಕ್ಕೊಂಡು ಬಾ. ನಾನು ಋತ್ವಿಜರನ್ನು ಕೂಡಿಕೊಂಡು ಇಷ್ಟಿಕಾರ್ಯದಲ್ಲಿ ತೊಡಗುತ್ತೇನೆ, ಎಂದು ಹೇಳಿದರು. ಆಗ ಚಿದಂಬರದೀಕ್ಷಿತರು ತಂದೆಯ ಕಾಲಿಗೆರಗಿ:—ತಂದೆಯೇ, ನನಗೆ ಈ ಹೊತ್ತು ಬೆಣ್ಣೆಗೆ ಹೋಗಲಿಕ್ಕೆ ಮನಸ್ಸಾಗಲೊಲ್ಲದು; ಆದರೆ ಪಿತ್ರಾಜ್ಞೆಯ ಮುಂದೆ ನನ್ನ ಮನಸ್ಸಿನ ಪಾಡೇನು? ತಮ್ಮಾಜ್ಞೆಯ ಮೇರೆಗೆ ನೆರೆಹಳ್ಳಿಗೆ ಹೋಗಿ ಬೆಣ್ಣೆಯನ್ನು ತಕ್ಕೊಂಡು ಬರುವೆನು, ಎಂದು ನುಡಿದು, ತಾಯಿಯ ಬಳಿಗೆ ಹೋಗಿ ವಿನಯ

ದಿಂದ:—ಅವ್ವಾ, ನಾನು ಬೀಗರನ್ನು ತರುವದಕ್ಕೆ ನೆರೆಹಳ್ಳಿಗೆ ಹೋಗುತ್ತೇನೆ. ಈ ಹೊತ್ತು ನಿನಗೆ ಯಾರಾದರೂ ಏನಾದರೂ ತಂದುಕೊಟ್ಟರೆ ಅದನ್ನು ತಕ್ಕೊಳ್ಳಬೇಡ. ಬಹಳ ಹೇಳುವದೇನು! ಅದನ್ನು ಮುಟ್ಟಲೂಬಾರದು, ಎಂದು ಹೇಳಿ, ನೆರೆಹಳ್ಳಿಗೆ ಹೊರಟು ಹೋದರು.

ಇತ್ತ ಮುರಗೋಡದಲ್ಲಿ ನೆರೆಮನೆಯ ಒಬ್ಬ ಪಾಪಿಷ್ಠಳಾದ ಸ್ತ್ರೀಯು ಒಂದು ವಿಷತುಂಬಿದ ಪಡವಲಕಾಯಿಯನ್ನು ತಕ್ಕೊಂಡು ಲಕ್ಷ್ಮೀಮಾತೆಯ ಬಳಿಗೆ ಬಂದು:—ಅವ್ವಾ, ಈ ಉತ್ತಮವಾದ ಪಡವಲಕಾಯಿಯನ್ನು ತಕ್ಕೊಳ್ಳಿರಿ. ಇಂದಿಗೆ ಇದರ ಪಲ್ಲೆಯು ನಿಮ್ಮೆಲ್ಲರಿಗೆ ಸಾಕಾಗುವದು. ಇದು ಎಳೇದಿರುವದರಿಂದ ಪಲ್ಲೆಯಾದರೂ ಚೆನ್ನಾಗಿ ಆಗುವದು. ಎಂದು ನುಡಿದು ಕಾಯಿಯನ್ನು ಕೈಯಲ್ಲಿ ಕೊಡಹೋದಳು. ಆಗ ಲಕ್ಷ್ಮೀಮಾತೆಯು ಕಾಲಕರ್ಮಸಂಯೋಗದಿಂದ ಮಗನ ಮಾತನ್ನು ಮರೆತು, ಆ ಪಡವಲಕಾಯಿಯನ್ನು ಇಸುಕೊಂಡಳು. ಕೂಡಲೆ ಅವಳಿಗೆ ನಂಜೇರಿ, ಅವಳು ದೊಪ್ಪನೆ ನೆಲಕ್ಕುರುಳಿ, ಕ್ಷಣಮಾತ್ರದಲ್ಲಿ ಪ್ರಾಣಬಿಟ್ಟಳು![ಶಕೆ ೧೭೧೦]ಅಹಹ! ಎಂಥ ದುರ್ಬುದ್ಧಿಯಿದು! ಸತ್ವಸ್ಥರನ್ನು ಪೀಡಿಸುವ ಪಾಪಿಷ್ಠರಿಗೆ ಸದ್ಗತಿಯುಂಟೇ? ಲಕ್ಷ್ಮೀಮಾತೆಯು ನೆಲಕ್ಕೆ ಉರುಳು-ಉರುಳುವಷ್ಟರಲ್ಲಿ ಆ ದುಷ್ಟ ಸ್ತ್ರೀಯು ತನ್ನ ನೀಚವಾದ ವಾಸನೆಯನ್ನು ನೆರವೇರಿಸಿ, ತನ್ನ ಮನೆಗೆ ಓಡಿಹೋದಳು! ಅವಳಿಗೆ ನರಕಭೋಗವು ಸಮೀಪಿಸಿದ್ದರಿಂದಲೇ ಇಂಥ ದುರ್ಬುದ್ಧಿಯುಂಟಾಯಿತು.

ಲಕ್ಷ್ಮೀಮಾತೆಯ ಪ್ರಾಣೋತ್ಕ್ರಮಣವಾಗುತ್ತಿರಲು, ಚಿದಂಬರದೀಕ್ಷಿತರು ಮನೆಗೆ ಬಂದು, ತಾಯಿಯ ಅವಸ್ಥೆಯನ್ನು ನೋಡಿ, ಲೋಕೋಪಚಾರಾರ್ಥವಾಗಿ ವಿಷಾದಪಟ್ಟು, ಚಿಂತೆ ಮಾಡುತ್ತ ತಂದೆಯ ಬಳಿಗೆ ಬಂದು, ಅವರಿಗೆ ತಾಯಿಯ ವರ್ತಮಾನವನ್ನು ಹೇಳಿ, ಅಪ್ಪಣೆಯಾದರೆ ತಾಯಿಯನ್ನು ಬದುಕಿಸುತ್ತೇನೆಂದು ಹೇಳಿದರು. ಅದನ್ನು ಕೇಳಿ ಮಾರ್ತಂಡ ದೀಕ್ಷಿತರು:—ಚಿದಂಬರಾ, ನಾನು ನಿನ್ನ ಕರ್ತೃತ್ವ ಶಕ್ತಿಯನ್ನು ಬಲ್ಲೆನು. ನೀನು ಈ ಹೊತ್ತು ಇವಳ ಪ್ರಾಣವನ್ನು ಬದುಕಿಸಿದರೆ, ಇನ್ನು ಮುಂದೆ ಜನರು ಶವಗಳನ್ನು ನಮ್ಮ ಬಾಗಿಲಲ್ಲಿ ತಂದು ಇಡುವರು. ಆಗ ಏನು ಮಾಡುವಿ? ಆದರೆ ನೀನು ಎಲ್ಲರನ್ನು ಬದುಕಿಸಲು ಅಸಮರ್ಥನೆಂದು ನಾನು ಅನ್ನುವದಿಲ್ಲ. 'ಜಾತಸ್ಯಧ್ರುವೋ ಮೃತ್ಯುಃ' ಹುಟ್ಟಿದವರಿಗೆ ಮರಣವಂತೂ ಸಿದ್ಧವಾದದ್ದೇ ಸರಿ. ಆದ್ದರಿಂದ ಇವಳನ್ನು ಬದುಕಿಸುವ ಎತ್ತುಗಡೆಯನ್ನು ಮಾಡಬೇಡ. ಪುತ್ರಧರ್ಮಾನು

ಸಾರವಾಗಿ ಉತ್ತರಕ್ರಿಯೆಯನ್ನು ಮಾಡು. ಇವಳ ಸ್ಮಶಾನಭೂಮಿಯು ಕೆಂಗೇರಿಯಲ್ಲಿ ಆಗತಕ್ಕದ್ದು, ಎಂದು ಹೇಳಿದರು. ಆಗ ಚಿದಂಬರ ದೀಕ್ಷಿತರು ತಂದೆಯ ಅಪ್ಪಣೆಯ ಮೇರೆಗೆ ಶಾಸ್ತ್ರೀಯ ...ಕವನ್ನು ಮಾಡಿ, ಅಗಣಿತ ದಾನ ಧರ್ಮಗಳನ್ನು ಮಾಡಿದರು. ಲಕ್ಷ್ಮೀಯಮ್ಮನ ದಹನಸ್ಥಳದಲ್ಲಿ ಮೂರು ತಿಂಗಳ ತರುವಾಯ ಒಂದು ಔದುಂಬರ ವೃಕ್ಷವು ಹುಟ್ಟಿ, ದೊಡ್ಡದಾಗಿ ಭಕ್ತರಿಗೆ ಚಮತ್ಕಾರಗಳನ್ನು ತೋರಹತ್ತಿತು.

ಮುಂದೆ ಕೆಲವು ಕಾಲಗತಿಸಿದ ಬಳಿಕ ಚಿದಂಬರದೀಕ್ಷಿತರು ತಮ್ಮ ಮಕ್ಕಳಾದ ದಿವಾಕರ, ಶಂಕರರ ಉಪನಯನಗಳನ್ನು ಮಾಡಬೇಕೆಂದು ಯೋಚಿಸಿ, ತಂದೆಯ ಅನುಮತಿಯಿಂದ ಶಕೆ ೧೬೧೩ರಲ್ಲಿ ಅವರ ಉಪನಯನಗಳನ್ನು ಬಹಳ ಸಮಾರಂಭದಿಂದ ಮಾಡಿದರು. ಈ ಉಪನಯನಗಳಲ್ಲಿ * ದಿವಾಕರನ ಉಪನಯನವನ್ನು ಕಾತ್ಯಾಯನ ಸೂತ್ರದಂತೆಯೂ ಶಂಕರನ ಉಪನಯನವನ್ನು ಆಶ್ವಲಾಯನ ಸೂತ್ರದಂತೆಯೂ ಸ್ವತಃ ಮಾರ್ತಂಡ ದೀಕ್ಷಿತರು ಮಾಡಿಸಿದರಂತೆ!

ಒಂದು ದಿವಸ ಮಾರ್ತಂಡ ದೀಕ್ಷಿತರು ಮನಸ್ಸಿನಲ್ಲಿ:—ನಾನು ಬಹಳ ವೃದ್ಧನಾಗಿರುವೆನು. ಇಂದಿನ ವರೆಗೆ ಚಿದಂಬರನ ಅನುಗ್ರಹದಿಂದ ಅಪಾರ ಸೌಖ್ಯವನ್ನು ಅನುಭವಿಸಿದೆನು. ಆತನು ನನಗೋಸ್ಕರ ತನ್ನ ಅವತಾರ ಕೃತ್ಯಗಳನ್ನು ಕೂಡಾ ಬಚ್ಚಿಟ್ಟಿರುವನು. ಆದ್ದರಿಂದ ಇನ್ನು ಮೇಲೆ ಚಿದಂಬರನು ತನ್ನ ಮಹಿಮೆಯನ್ನು ಪ್ರಕಟ ಮಾಡಲಿ, ಎಂದು ಯೋಚಿಸಿ, ತಾವು ಮಾಡಿದ ಗ್ರಂಥಗಳನ್ನೆಲ್ಲ ಪೂರ್ಣಮಾಡಿ, ಪ್ರತಿಯೊಂದು ಗ್ರಂಥದ ಕಡೆಯಲ್ಲಿ ತಮ್ಮ ಮುದ್ರಿಕೆಯನ್ನು ಹಾಕಿದರು. ಬಳಿಕ ಚಿದಂಬರ ದೀಕ್ಷಿತರನ್ನು ಸಮೀಪಕ್ಕೆ ಕರೆದು:—ಸತ್ಪುತ್ರಾ! ಚಿದಂಬರಾ, ನೀನು ಇಂದಿನಿಂದ ನಿನ್ನ ಮಹಿಮೆಯನ್ನು ವಿಶದವಾಗಿ ಪ್ರಕಟಮಾಡು. ಇನ್ನು ನಾನು ನಿನ್ನ ಚರಣಗಳಲ್ಲಿ ಸಂತೋಷದಿಂದ ಪ್ರವೇಶಮಾಡುವೆನು. ನನ್ನ ಸ್ಮಶಾನ ಭೂಮಿಯನ್ನು ಕೆಂಗೇರಿಯಲ್ಲಿ ನನ್ನ ಪತ್ನಿಯ ದಹನ ಸ್ಥಳದಲ್ಲಿ ಹುಟ್ಟಿದ ಔದುಂಬರದ ಈಶಾನ್ಯ ಮೂಲೆಗೆ ಇಪ್ಪತ್ತು ಮೊಳ ಅಂತರದ ಮೇಲೆ ಮಾಡು. ನಿನ್ನ ಜ್ಯೇಷ್ಠಪುತ್ರನಾದ ದಿವಾಕರನ * ಮದುವೆಯನ್ನು ನಾನು ಗಲಗಲಿಯ ದೇಶಪಾಂಡೆಯವರಿಗೆ ವಚನ

---

* ದಿವಾಕರನ ಉಪನಯನವು ಹೀಗೆ ಮಾಡುವದು ಹೇಗೆಂದು ಯಾರಾದರೂ ಶಂಕಿಸಬಹುದು, ಗರ್ಭಾಷ್ಟಮದಲ್ಲಿ ಉಪನಯನ ಮಾಡುವದು ಶಾಸ್ತ್ರಸಮ್ಮತವಾಗಿದೆ.

* ಈ ಮದುವೆಯ ಪೂರ್ವಾಪರ ವೃತ್ತಾಂತವು ಮುಂದೆ ಬಂದಿರುತ್ತದೆ.

ಕೊಟ್ಟದ್ದರಿಂದ, ಅವರ ಮನೆತನದ ಕನ್ಯೆಯನ್ನು ತಕ್ಕೊಂಡು ಮಾಡಬೇಕು. ನಿನ್ನ ತಮ್ಮನಾದ ಪ್ರಭಾಕರನನ್ನು ಕಾಪಾಡು. ಇನ್ನು ಮುಂದೆ ನೀನಿದ್ದಲ್ಲಿ ಜಾತ್ರೆಯು ವಿಶೇಷವಾಗಿ ಕೂಡುವದು. ಆದ್ದರಿಂದ ಎಲ್ಲರನ್ನು ಸರಿಯಾಗಿ ಕಾಪಾಡಿ, ಊಟ-ಉಡಿಗೆಗಳನ್ನು ಸಮಾಧಾನದಿಂದ ಮಾಡಿಸುತ್ತಿರು. ನೀನು ಸರ್ವಜ್ಞನೇ ಇರುವಿ! ಆದ್ದರಿಂದ ನಾನು ಹೆಚ್ಚಿಗೆ ಉಪದೇಶವನ್ನು ಮಾಡಲಾರೆನು. ಲೋಕ ರೂಢಿಯಂತೆ ನಾಲ್ಕು ಮಾತುಗಳನ್ನು ಹೇಳಿದೆನು, ಎಂದು ಹೇಳಿ, ತಾವು ಮಾಡಿದ ಗ್ರಂಥಗಳನ್ನೆಲ್ಲ ತೋರಿಸಿ, ಇದರಲ್ಲಿ ಹೇಳಿದಂತೆಯೇ ಧರ್ಮವನ್ನು ಸಾರಬೇಕು, ಎಂದು ಬೋಧಿಸಿದರು. ಆಗ ಚಿದಂಬರ ದೀಕ್ಷಿತರು ತಂದೆಗೆ ನಮಸ್ಕಾರ ಮಾಡಿ, ನಿಮ್ಮ ಆಜ್ಞೆಯಂತೆಯೇ ವರ್ತಿಸುವೆನು, ಎಂದು ಹೇಳಿ, ಕೈಜೋಡಿಸಿಕೊಂಡು ಮುಂಭಾಗದಲ್ಲಿ ಸುಮ್ಮನೆ ನಿಂತುಕೊಂಡರು. ಆಗ ಮಾರ್ತಂಡ ದೀಕ್ಷಿತರು ಅವರನ್ನು ಮುಂದಕ್ಕೆ ಕರೆದು, ಅವರ ತಲೆಯ ಮೇಲೆ ತಮ್ಮ ಎರಡೂ ಕೈಗಳನ್ನಿಟ್ಟು:—ನಿನಗೆ ಕಲ್ಯಾಣವಾಗಲಿ, ನಿನ್ನಿಂದ ಜನರಿಗೆ ಕಲ್ಯಾಣವಾಗಲಿ, ಎಂದು ಆಶೀರ್ವದಿಸಿದರು. ಬಳಿಕ ನೇಮದಂತೆ ನಿತ್ಯಾಹ್ನಿಕಗಳನ್ನು ನೆರವೇರಿಸಿ, ವೇದಿಯಲ್ಲಿ ದರ್ಭಗಳನ್ನು ಹಾಸಿ, ಅವುಗಳ ಮೇಲೆ ಕಂಬಳಿಯನ್ನೂ, ಎಳ್ಳನ್ನೂ ಪಸರಿಸಿ, ಅದರ ಮೇಲೆ ಮಾರ್ತಂಡ ದೀಕ್ಷಿತರು ವಜ್ರಾಸನವನ್ನು ಹಾಕಿ ಕುಳಿತುಕೊಂಡರು. ತರುವಾಯ ಅವರು ಕೈಯಲ್ಲಿ ಜಪಮಾಲೆಯನ್ನು ಧರಿಸಿ. ನಾನೇ ಪರಬ್ರಹ್ಮನೆಂದು ಭಾವಿಸಿ, ಪ್ರಾಣಾಯಾಮದಿಂದ ಪ್ರಾಣವನ್ನು ಎಳೆಯಹತ್ತಿದರು.

ಈ ಸುಮಾರಕ್ಕೆ ಕೆಂಗೇರಿಯಲ್ಲಿ ಒಂದು ಚಮತ್ಕಾರವಾಯಿತು. ಅದೇನಂದರೆ:—ಲಕ್ಷ್ಮೀಮಾತೆಯನ್ನು ದಹನ ಮಾಡಿದ ಸ್ಥಳದಲ್ಲಿ ಹುಟ್ಟಿದ ಔದುಂಬರ ವೃಕ್ಷವು ಈ ಅವಧಿಯಲ್ಲಿ ವಿಸ್ತಾರವಾಗಿ ಬೆಳೆದು, ತನ್ನ ನಿಬಿಡವಾದ ನೆರಳಿನಿಂದ ಜನರನ್ನು ಮೋದಗೊಳಿಸುತ್ತಿತ್ತು. ಅದರ ಹಣ್ಣುಗಳು ಮಧುರವಿದ್ದವು. ಅವುಗಳನ್ನು ತಿಂದವರ ಮೋದವು ಮೊದಲಿನ ಮೇಲೆಯು ಹೆಚ್ಚುತ್ತಿತ್ತು. ಈ ಗಿಡದ ಈಶಾನ್ಯ ದಿಕ್ಕಿನ ಟೊಂಗೆಯು ಸ್ವಲ್ಪ ಹೆಚ್ಚಿಗೆ ಗಡುತರವಾಗಿದ್ದು, ಆ ಟೊಂಗೆಯೊಳಗಿನ ಹಣ್ಣುಗಳು ಬಹಳ ರುಚಿಕರವಾಗಿದ್ದವು. ಈ ದೊಡ್ಡ ಟೊಂಗೆಯೊಳಗಿಂದ ಮಾರ್ತಂಡ ದೀಕ್ಷಿತರು ಮರಣ ಹೊಂದುವ ಮೊದಲು ಮೂರು ದಿವಸ ಸ್ವಚ್ಛವಾದ ನೀರಿನ ಹನಿಗಳು ತಟಕಿಕ್ಕಹತ್ತಿದ್ದವು. ಈ ಚಮತ್ಕಾರವನ್ನು ಜನರು ಮೂರನೇ ದಿವಸ ಚಿದಂಬರ ದೀಕ್ಷಿತರಿಗೆ ಅರುಹಿದರು.

ಆಗ ಅವರು ತಾಯಿಯು ಅಭಿಪ್ರಾಯವನ್ನು ತಿಳಕೊಂಡು, ಕೆಂಗೇರಿಗೆ ಹೋಗಿ, ಆ ಗಿಡಕ್ಕೆ ನಮಸ್ಕಾರಮಾಡಿ ಪ್ಲಾನವದನದಿಂದ.—ತಾಯಿ, ಶೋಕವಾಡ ಬೇಡ. ನನ್ನ ತಂದೆಯು ದೇಹವನ್ನಿಡುವನು. ಆದ್ದರಿಂದ ನಾನು ಪರದೇಶಿಯಾಗುವೆನೆಂದು ತಿಳಿದು ಅಳುತ್ತಿರುವಿಯಾ? ಅಳಬೇಡ, ನಿನ್ನ ಮನೋಗತವು ನನಗೆ ಗೊತ್ತಿದೆ. ಆದ್ದರಿಂದ ವಿನಂತಿಯನ್ನು ಮಾಡಿಕೊಳ್ಳುವೆನು. ತಂದೆಗಿಂತ ಮೊದಲು ನೀನು ಪರಲೋಕಕ್ಕೆ ತೆರಳಿ ಧನ್ಯಳಾದೆ ನೀನು ಹೋದಂದಿನಿಂದ ತಂದೆಯು ನನ್ನನ್ನು ಒಳ್ಳೇ ಪ್ರೀತಿಯಿಂದ ಕಾಪಾಡಿದನು. ನಾನಾದರೂ ಅವರ ವಚನಗಳನ್ನು ವೇದವಚನಗಳಂತೆ ಪಾಲಿಸಿದೆನು. ಅವರು ದೇಹವಿಟ್ಟ ಮೇಲೆ ಅವರ ಹೇಳಿಕೆಯಂತೆ ಅವರ ಸ್ಮಶಾನ ಭೂಮಿಯನ್ನು ನಿನ್ನ ಸಮೀಪದಲ್ಲಿಯೇ ಮಾಡುವೆನು. ತಾಯಿ, ಅಳಬೇಡ, ಎಂದು ಮಾತೆಯನ್ನು ಪ್ರಾರ್ಥಿಸಲು, ಒಮ್ಮೆಲೆ ನೀರು ಸ್ರವಿಸುವದು ಕಟ್ಟಾಯಿತು. ಈ ಅದ್ಭುತವನ್ನು ನೋಡಿ ಕೂಡಿದ ಜನರು ಆಶ್ಚರ್ಯಪಟ್ಟರು.

ಈ ಪ್ರಕಾರ ಚಿದಂಬರ ದೀಕ್ಷಿತರು ಕೆಂಗೇರಿಯಲ್ಲಿ ತಾಯಿಯನ್ನು ಪ್ರಾರ್ಥಿಸಿ, ಅವಳನ್ನು ಸಮಾಧಾನಗೊಳಿಸಿ ತಂದೆಯ ಬಳಿಗೆ ಬಂದರು. ಮಾರ್ತಂಡ ದೀಕ್ಷಿತರಂತೂ ಈ ಮೊದಲೇ ಪ್ರಾಣಾಯಾಮವನ್ನಾರಂಭಿಸಿದ್ದರಷ್ಟೇ? ಆದರೆ ಅವರು ಮಧ್ಯದಲ್ಲಿಯೇ ಮನಸ್ಸಿನಲ್ಲಿ:--ನನ್ನ ಮಗನು ಸಾಕ್ಷಾತ್ ಶಂಕರನಿರುವನು. ಇದು ಚನ್ನಾಗಿ ಜನರಿಗೆ ಮನವರಿಕೆಯಾಗುವಂತೆ ಅವನ ಕೈಯಿಂದ ಈಗ ಏನಾದರೊಂದು ಅದ್ಭುತ ಕಾರ್ಯವನ್ನು ಮಾಡಿಸಬೇಕೆಂದು ಯೋಚಿಸಿ, ತಮ್ಮ ಸಮಾಧಿಯನ್ನು ಇಳಿಸಿ ಚಿದಂಬರ ದೀಕ್ಷಿತರನ್ನು ಕುರಿತು:— ಈಗ ನನಗೆ ಭಾಗೀರಥಿಯ ನೀರು ಬೇಕಾಗಿರುವವು. ಆದ್ದರಿಂದ ಅವುಗಳನ್ನು ಕಾಶಿಯಿಂದ ತೆಗೆದುಕೊಂಡು ಬಾ, ಎಂದು ನುಡಿಯಲು, ಚಿದಂಬರ ದೀಕ್ಷಿತರು ಕೂಡಲೆ ತಮ್ಮ ಬೊಗಸೆಯನ್ನು ತುಂಬಿ:—ಇವೇ ಭಾಗೀರಥಿಯ ನೀರು. ಕಾಶಿಗೆ ಹೋಗಿ ತಂದಿರುವೆನು, ಎಂದು ಹೇಳಿ ಅವುಗಳನ್ನು ತಂದೆಯ ಕೈಯಲ್ಲಿ ಕೊಡಲು ತತ್‌ಕ್ಷಣವೇ ಮಾರ್ತಂಡ ದೀಕ್ಷಿತರ ಆಸನದಿಂದ ಭಾಗೀರಥಿಯು ಹರಿಯಲಾರಂಭಿಸಿತು. ಆಗ ಅವರು ಸಂತೋಷಹೊಂದಿ ಜನರನ್ನು ಕುರಿತು:— ಭಕ್ತಶಿಖಾಮಣಿಗಳೇ, ಈಗ ವರ್ತಿಸಿದ ಚಮತ್ಕಾರವನ್ನು ನೋಡಿದಿರಷ್ಟೇ? ನನ್ನ ಉದರದಿಂದ ನಿಜವಾಗಿ ಮಹೇಶನೇ ಜನಿಸಿರುವನು. ಇದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ಇನ್ನು ಮೇಲೆ ನಾವು ದೀರ್ಘಶಯನಕ್ಕೆ ಹೋಗುತ್ತೇವೆ.

ನೀವು ಸದ್ಧರ್ಮದಿಂದ ನಡೆದು, ಬಿಂಬನನ ಚರಣದಲ್ಲಿ ವಿಶ್ವಾಸವನ್ನಿಟ್ಟು, ಮೋಕ್ಷವನ್ನು ಪಡೆಯಿರಿ, ಎಂದು ಹೇಳಿ, ತಾವು ಹರೆ, ಸಾಂಬ ಎಂಬ ದೇವರ ನಾಮಗಳನ್ನು ಉಚ್ಚರಿಸುತ್ತ, ಬ್ರಹ್ಮಾಂಡದಲ್ಲಿ ಶ್ವಾಸ ನಿರೋಧವನ್ನು ಮಾಡಿ, ಯೋಗಬಲದಿಂದ ಬ್ರಹ್ಮರಂಧ್ರವನ್ನು ಭೇದಿಸಿ, ಶಕೆ ೧೭೩೪ ನೇ ಪ್ರಮಾಥಿ ಸಂವತ್ಸರದ ಜ್ಯೇಷ್ಠ ವದ್ಯ ನವಮಿ ದಿವಸ ಪ್ರಾತಃಕಾಲದಲ್ಲಿ † ಬ್ರಹ್ಮತ್ವವನ್ನು ಹೊಂದಿ ನಿಜಾನಂದದಲ್ಲಿ ಮಗ್ನರಾದರು. ಬಳಿಕ ಚಿದಂಬರ ದೀಕ್ಷಿತರು ಪುತ್ರಧರ್ಮಾನುಸಾರವಾಗಿ ತಂದೆಯ ಸಂಸ್ಕಾರವನ್ನು ಅವರ ಹೇಳಿಕೆಯಂತೆ ಕೆಂಗೇರಿಯಲ್ಲಿ ಮಾಡಿ, ಶಾಸ್ತ್ರೋಕ್ತವಾಗಿ ಉತ್ತರಕ್ರಿಯೆಯನ್ನು ಮಾಡಿದರು.

ಮಾರ್ತಂಡ ದೀಕ್ಷಿತರ ದಹನ ಸ್ಥಳದಲ್ಲಿ ಮೂರನೇ ದಿವಸ ಒಂದು ಚಮತ್ಕಾರವಾಯಿತು. ಅಲ್ಲಿಯ ಚಿತಾಭಸ್ಮವನ್ನು ದೂರ ಮಾಡುತ್ತಿರಲು, ಐದು ನಳನಳಿಸುವ ಔದುಂಬರಾಂಕುರಗಳು ತೋರಿದವು. ಅವುಗಳನ್ನೆಲ್ಲ ನೋಡಿ ಚಿದಂಬರ ದೀಕ್ಷಿತರಿಗೆ ಬಹು ಆನಂದವಾಯಿತು. ಅಂದಿನಿಂದ ಅವರು ಔದುಂಬರ ಪೂಜೆಯಲ್ಲಿ ಪ್ರೇಮವುಳ್ಳವರಾಗಿ, ಅವುಗಳ ಪೂಜೆಗಾಗಿ ಒಬ್ಬ ಬ್ರಾಹ್ಮಣನನ್ನು ನೇಮಿಸಿದರು; ಮುಂದೆ ಎಷ್ಟೋ ದಿವಸಗಳ ವರೆಗೆ ಈ ವೃಕ್ಷಗಳು ಭಕ್ತರಿಗೆ ಚಮತ್ಕಾರಗಳನ್ನು ತೋರಿಸುತ್ತಿದ್ದವು. ಇವೆಲ್ಲ ವೃಕ್ಷಗಳು ೧೯೦೦ನೇ ಇಸವಿಯಲ್ಲಿ ನಾಶ ಹೊಂದಿದವು. ಈಗ ಆ ಸ್ಥಳದಲ್ಲಿ ದೀಕ್ಷಿತರ ವಂಶದವರು ಬೇರೆ ಕೆಲವು ಔದುಂಬರ ಅಗಿಗಳನ್ನು ತಂದು ಹಚ್ಚಿ, ಅವುಗಳ ಜೋಪಾನವನ್ನು ಚೆನ್ನಾಗಿ ಮಾಡುತ್ತಿರುವರು. ಇದು ಅವರಿಗೆ ಭೂಷಣಾಸ್ಪದವೇ ಸರಿ. ಇರಲಿ. ಚಿದಂಬರ ದೀಕ್ಷಿತರು ತಂದೆಯ ಉತ್ತರಕಾರ್ಯವನ್ನು ಮಾಡುತ್ತಿರಲು, ಹದಿನಾಲ್ಕನೇ ದಿವಸ ಒಂದು ಚಮತ್ಕಾರವಾಯಿತು. ಆ ದಿವಸ ಮಧ್ಯಾಹ್ನದಲ್ಲಿ ಆಮಂತ್ರಿತರಾದ ನಾನೂರುಜನ ಬ್ರಾಹ್ಮಣರು ಭೋಜನಕ್ಕಾಗಿ ಕೂಡಿದರು. ಆಗ ಮಾರ್ತಂಡ ದೀಕ್ಷಿತರ ಶಿಷ್ಯನಾದ ಕಾಶೀರಾಜನು ಚಿದಂಬರ ದೀಕ್ಷಿತರ ಬಳಿಗೆ ಬಂದು:— ಪಾಕವು ಸಿದ್ಧವಾಗಿರುವದು; ಬ್ರಾಹ್ಮಣರೂ ಕೂಡಿರುವರು; ವೇಳೆಯಾದರೂ ಬಹಳವಾಗಿದೆ; ಆದ್ದರಿಂದ ಎಲೆಗಳನ್ನು ಹಾಕಲಿಕ್ಕೆ ಅಪ್ಪಣೆಯಾಗಬೇಕು, ಎಂದು ಬೇಡಿಕೊಂಡನು. ಅದಕ್ಕೆ ಚಿದಂಬರ ದೀಕ್ಷಿತರು:— ಈ ದಿವಸ ಅವಸರ ಮಾಡಬೇಡ ನಾನು ಹೇಳಿದಾಗ ಎಲೆಗಳನ್ನು ಹಾಕು, ಎಂದು ಹೇಳಿದರು. ಮುಂದೆ ಒಂದು ಮುಹೂರ್ತಕಾಲವು ಕ್ರಮಿಸಿ ಹೋದಮೇಲೆ ಮತ್ತೆ ಕಾಶೀರಾಜನು ಬಂದೇ

† ಮಾರ್ತಂಡ ದೀಕ್ಷಿತರಂತೆ ಬ್ರಹ್ಮತ್ವ ಹೊಂದುವವರಿಗೆ ಇಚ್ಛಾಮರಣಿಗಳೆನ್ನುತ್ತಾರೆ.

ಪ್ರಶ್ನೆಮಾಡಲು, ಆವನಿಗೆ ಮೊದಲಿನಂತೆಯೇ ಉತ್ತರ ದೊರೆಯಿತು. ಚಿದಂಬರ ದೀಕ್ಷಿತರು ಕಾಶೀರಾಜನು ಕೇಳಿದಾಗ ಮೊದಲಿನಂತೆಯೇ ಉತ್ತರವನ್ನು ಕೊಡುತ್ತ ಒಂಬತ್ತು ತಾಸು ವೇಳೆಯಾಗಲು, ದೀಕ್ಷಿತರು ಎಲೆಗಳನ್ನು ಹಾಕಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಅಪ್ಪಣೆಯಾದ ಕೂಡಲೆ ಕಾಶೀರಾಜನು ಎಲೆಗಳನ್ನು ಹಾಕಿಸಿ, ಯಾವತ್ತು ಪದಾರ್ಥಗಳನ್ನು ಬಡಿಸಿದನು. ಇನ್ನು ಬ್ರಾಹ್ಮಣರು ಭೋಜನಕ್ಕೆ ಕೂಡತಕ್ಕವರು, ಅಷ್ಟರಲ್ಲಿ ಪೂರ್ವದೇಶದ ನಾನೂರುಜನ ಬ್ರಾಹ್ಮಣರು ಅಕಸ್ಮಾತ್ತಾಗಿ ಬಂದು, ಅವರಾದರೂ ಚಿದಂಬರ ದೀಕ್ಷಿತರಿಂದ ಆಮಂತ್ರಿತರಾಗಿ ಭೋಜನಕ್ಕಾಗಿ ಎಲೆಯ ಮೇಲೆ ಕುಳಿತುಕೊಂಡರು. ಆಗ ಕಾಶೀರಾಜನು ಹೆದರಿ ಚಿದಂಬರ ದೀಕ್ಷಿತರ ಬಳಿಗೆ ಬಂದು:—ತಾವು ಈಗಲೇ ಉದಕವನ್ನು ಬಿಡಬಾರದು. ಬ್ರಾಹ್ಮಣರು ಮೊದಲಿಗಿಂತ ಇಮ್ಮಡಿ ಕೂಡಿರುವರು. ಕಾರಣ ಸ್ವಲ್ಪ ತಡೆದು ಉದುಕವನ್ನು ಬಿಟ್ಟರೆ, ಮತ್ತೆ ಅಡಿಗೆಯನ್ನು ಮಾಡಿಸುತ್ತೇನೆ. ಇಲ್ಲದಿದ್ದರೆ ಈ ಹೊತ್ತು ಅಪಕೀರ್ತಿ ಬರುವ ಸಂಭವವದೆ. ಎಂದು ಹೇಳಿಕೊಂಡನು. ಅದಕ್ಕೆ ದೀಕ್ಷಿತರು:—ನೀನು ಪಾಕದ ವಿಷಯದಲ್ಲಿ ಶಂಕಿಸಬೇಡ. ನನ್ನ ತಂದೆಯು ಮರಣಹೊಂದುವ ಮೊದಲು ಅನ್ನಪೂರ್ಣೆಯನ್ನು ನಿಶ್ಚಯವಾಗಿ ನನ್ನ ವಶಕ್ಕೆ ಕೊಟ್ಟು ಹೋಗಿರುವನು. ಆಕೆಯು ಈಗ ಪಾಕಶಾಲೆಯಲ್ಲಿ ಕುಳಿತಿರುವಳು; ಬೇಕಾದರೆ ತೋರಿಸುತ್ತೇನೆ ಬಾ, ಎಂದು ನುಡಿದು, ಚಿದಂಬರ ದೀಕ್ಷಿತರು ಕಾಶೀರಾಜನನ್ನು ಸಂಗಡ ಕರಕೊಂಡು ಪಾಕಶಾಲೆಗೆ ನಡೆದರು. ಕಾಶೀರಾಜನು ಸ್ವಲ್ಪ ದೂರಿಂದಲೇ ಪಾಕಶಾಲೆಯಲ್ಲಿ ಅರಿಶಿಣ-ಕುಂಕುಮಗಳಿಂದ ಮಂಡಿತಳಾಗಿ ಕುಳಿತುಕೊಂಡ ಅನ್ನಪೂರ್ಣೆಯನ್ನು ಕಣ್ಮುಟ್ಟ ನೋಡಿ, ಬೆರಗಾದನು. ದೀಕ್ಷಿತರು ಪಾಕಶಾಲೆಯ ಸಮೀಪಕ್ಕೆ ಬರಲು, ಆ ಲೋಕಮಾತೆಯು ಎದ್ದು ನಿಂತಳು. ಅವಳನ್ನು ನೋಡಿ ಕಾಶೀರಾಜನು ಬಹು ಸಂತೋಷಬಟ್ಟನು. ಬಳಿಕ ಕಾಶೀರಾಜನು ಬ್ರಾಹ್ಮಣ ಭೋಜನವನ್ನು ಯಥಾಸ್ಥಿತಿ ರೀತಿಯಿಂದ ಮಾಡಿಸಿದನು. ಆ ಹೊತ್ತು ಎಂಟುನೂರುಜನ ಬ್ರಾಹ್ಮಣರು ಊಟಮಾಡಿದಾಗ್ಯೂ ಪಾಕವು ಮೊದಲಿದ್ದಷ್ಟೇ ಉಳಿದಿತ್ತು! ಅದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು.



# ಮೂರನೆಯ ಭಾಗ.

## ಮುರುಗೋಡದಲ್ಲಿಯ ಪ್ರಕಟಾವತಾರ ಕಥನ.

### ೧ನೆಯ ಪ್ರಕರಣ.

### ಟೀಪೂವಿನ ಗರ್ವಹರಣ.




ದಿನ ಭಾಗದಲ್ಲಿ ವಿವರಿಸಿದಂತೆ ಚಿದಂಬರ ದೀಕ್ಷಿತರು ತಂದೆಯ ಔರ್ಧ್ವದೇಹಿಕ ಕರ್ಮಗಳನ್ನು ಯಥಾಸಾಂಗವಾಗಿ ನೆರವೇರಿಸಿ, ತಮ್ಮ ಅವತಾರಕೃತ್ಯಗಳನ್ನು ಸ್ವಚ್ಛಂದವಾಗಿ ಪ್ರಕಟಿಸ ತೊಡಗಿದರು. ತಂದೆಯು ಇರುವಾಗ ಚಿದಂಬರ ದೀಕ್ಷಿತರು ಹಲವು ಅಮಾನುಷಗಳನ್ನು ಮಾಡಿ ತೋರಿಸಿದರೂ, ಆಗ ಅವರು ಪಿತ್ರಾಜ್ಞಾಪರಿಪಾಲನೆಯ ಧರ್ಮವನ್ನು ಜಗತ್ತಿಗೆ ತೋರಿಸಬೇಕಾದ್ದರಿಂದ ಅವರ ಆ ಕೃತ್ಯಗಳು ಬಚ್ಚಿಟ್ಟ ಕಸ್ತೂರಿಯ ಸುವಾಸನೆಯನ್ನು ಹೋಲುತ್ತಿದ್ದವು ತಾವು ಅವತಾರಿಕರಾದಾಗ್ಯೂ ತಂದೆಗೆ ಪ್ರಾಧಾನ್ಯವನ್ನು ಕೊಟ್ಟು ತಂದೆಯಿರುವವರೆಗೆ ತಾವು ಶಿಷ್ಯರನ್ನು ಸಂಪಾದಿಸಲಿಲ್ಲ. ಜನರಿಗೆ ಬೋಧಮಾಡಿ ಪ್ರೌಢಿಯನ್ನು ತೋರಿಸಹೋಗಲಿಲ್ಲ; ಕೇವಲ ಪಿತೃಸೇವಾತತ್ಪರರಾಗಿ ಕಾಲಕಳೆದರು; ಆದರೆ ತಂದೆಯ ಪಶ್ಚಾತ್ ಅವರಿಗೆ ತಂದೆಯ ಆಶೀರ್ವಾದದಂತೆ ಸ್ವಾತಂತ್ರ್ಯವು ಪ್ರಾಪ್ತವಾದ್ದರಿಂದ, ಈಗ ಅವರು ತಮ್ಮ ಅವತಾರಕೃತ್ಯಗಳನ್ನು ಒಂದೊಂದೇ ಪ್ರಕಟಿಸಹತ್ತಿದರು. ದುಷ್ಟರನ್ನು ದಂಡಿಸಿ, ಭಕ್ತರನ್ನು ಸಂತೈಸಹತ್ತಿದರು. ಇಬ್ಬರು ಧರ್ಮಪತ್ನಿಯರಿಂದೊಡಗೂಡಿ ಗೃಹಸ್ಥಾಶ್ರಮವನ್ನು ಪರಿಪಾಲಿಸುತ್ತ ಶ್ರೌತಾಗ್ನಿಯನ್ನು ಸ್ವೀಕರಿಸಿದರು; ಪಾಠಶಾಲೆಯನ್ನೇರ್ಪಡಿಸಿ ಶಿಷ್ಯರನ್ನು ಅನುಗ್ರಹಿಸಹತ್ತಿದರು ಭಕ್ತಸ್ತೋಮವಾದರೂ ವಿಶೇಷವಾಗಿ ಕೂಡಹತ್ತಿತು. ಆಗಿನ ಅವರ ನಿತ್ಯಕ್ರಮವನ್ನು ನಮ್ಮ ವಾಚಕರಿಗಾಗಿ ಇಲ್ಲಿ ಕೊಡುವೆವು:—

ಚಿದಂಬರ ದೀಕ್ಷಿತರು ದಿನಾಲು ಉಷಃಕಾಲದಲ್ಲೆದ್ದು, ಎರಡು ಘಳಿಗೆಗಳವರೆಗೆ ದೇವರ ಸ್ತೋತ್ರವನ್ನು ಮಾಡುತ್ತಿದ್ದರು. ಆ ಮೇಲೆ ಭೂಮಾತೆಗೆ ನಮಸ್ಕಾರ ಮಾಡಿ, ಬಳಿಕ ವಿಧ್ಯುಕ್ತವಾಗಿ ಪ್ರಾತಃಸ್ಮರಣೆಯನ್ನು ಮಾಡುತ್ತ

ದ್ದರು. ತರುವಾಯ ಹಾಸಿಗೆಯನ್ನು ಬಿಟ್ಟು ಏಳುತ್ತಿದ್ದರು. ಅಷ್ಟರಲ್ಲಿ ಭಕ್ತ ಜನರು ದ್ವಾರದಲ್ಲಿ ಬಂದು, ದರ್ಶನಕ್ಕಾಗಿ ಆತನನ್ನು ಭೂಪಾಳಿ, ಪದ್ಯ, ಆರತಿಗಳಿಂದ ಹೊಗಳುತ್ತಿದ್ದರು. ದೀಕ್ಷಿತರು ಭಕ್ತರ ಕರುಣಾರಸವನ್ನು ಕೇಳಿ, ಹೊರಗೆಬಂದು, ಅವರಿಗೆ ದರ್ಶನವನ್ನು ಕೊಡುತ್ತಿದ್ದರು. ಅನಂತರದಲ್ಲಿ ಶೌಚವಿಧಿ ಮುಖಮಾರ್ಜನವನ್ನು ತೀರಿಸುತ್ತಿದ್ದರು. ಆಮೇಲೆ ಸ್ನಾನವನ್ನು ಮಾಡಿ, ಶುಭ್ರವಸ್ತ್ರಗಳನ್ನುಟ್ಟು, ಸರ್ವಾಂಗದಲ್ಲಿ ಭಸ್ಮವನ್ನು ಚರ್ಚಿಸುತ್ತಿದ್ದರು. ತರುವಾಯ ಅಗ್ನಿಯ ಉದ್ಧರಣವನ್ನು ಮಾಡಿ, ಅಂದರೆ ಪಂಚಕುಂಡಗಳಲ್ಲಿ ಅಗ್ನಿಯನ್ನು ಪ್ರಜ್ವಲಿಸಿ, ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ತೀರಿಸಿ, ಆ ಮೇಲೆ ಹೋಮವನ್ನು ಮಾಡುತ್ತಿದ್ದರು. ಬಳಿಕ ದೇವ, ದ್ವಿಜ, ಗೋಪೂಜೆಯನ್ನು ಮಾಡಿ, ಶಿಷ್ಯಾನುಗ್ರಹದ ಸಲುವಾಗಿ ಪಾಠಶಾಲೆಗೆ ಹೋಗುತ್ತಿದ್ದರು. ಅವರು ದರ್ಶನ ವ್ಯಾಜದಿಂದ ಶಿಷ್ಯರನ್ನು ಅಮೃತದೃಷ್ಟಿಯಿಂದ ನೋಡಿ ಅವರ ಹೃದಯದೊಳಗೆ ಮೇಧಾರಸವನ್ನು ಸುರುವಿ, ತರುವಾಯ ಯಾತ್ರಸ್ಥರಿಗೆ ದರ್ಶನಕೊಡುವದಕ್ಕಾಗಿ ಸಭೆಗೆ ಹೋಗುತ್ತಿದ್ದರು. ಆ ಸಭೆಯು ದರ್ಶನೋತ್ಕಂಠಿತರಾದ ಭಕ್ತಜನರಿಂದ ಬಹು ರಮಣೀಯವಾಗಿ ತೋರುತ್ತಿತ್ತು. ಸಭಾಜನರಲ್ಲಿ ಕೆಲವರು ಪಿಶಾಚಿಬಾಧೆಯನ್ನು ತಪ್ಪಿಸಿಕೊಳ್ಳಬೇಕೆಂತಲೂ, ಕೆಲವರು ಸಂತತಿಯನ್ನು ಪಡೆಯಬೇಕೆಂತಲೂ, ಬೇರೆ ಹಲವರು ದಾರಿದ್ರ್ಯವನ್ನು ದೂರಮಾಡಿಕೊಳ್ಳಬೇಕೆಂತಲೂ ಬಂದಿರುತ್ತಿದ್ದರು. ಶ್ರೀ ದೀಕ್ಷಿತರು ಸಭೆಯನ್ನು ಸೇರಲು ಸಭಿಕರು ಅವರಿಗೆ ಉತ್ಥಾನವನ್ನು ಕೊಟ್ಟು, ಬಳಿಕ ಅವರನ್ನು ನಮಸ್ಕರಿಸುತ್ತಿದ್ದರು. ಜಗದೀಕ್ಷಿತರು ಭಕ್ತರನ್ನು ಎಬ್ಬಿಸಿ, ಅವರಿಗೆ ಅಭಯವನ್ನಿತ್ತು, ಅವರ ಮನೋಬಯಕೆಗಳನ್ನು ದರ್ಶನಮಾತ್ರದಿಂದಲೇ ಪೂರ್ಣಮಾಡುತ್ತಿದ್ದರು. ದೀಕ್ಷಿತರು ದಿನಾಲು ಭಕ್ತರಿಗೆ ಮಾಡುವ ಉಪದೇಶವೇನಂದರೆ:-"ಸದಾ ಶುಭಂ ಬ್ರೂಯಾತ್" (ಯಾವಾಗಲೂ ಮಂಗಲವನ್ನು ನುಡಿಯಬೇಕು.) ಶಿವನಾಮಗಳನ್ನು ಉಚ್ಚರಿಸಬೇಕು. ವೇದಮಾರ್ಗದಲ್ಲಿ ವಿಶ್ವಾಸವಿಡಬೇಕು, ಸತ್ಯ ಮಾತಾಡಬೇಕು, ಸದಾ ಸದ್ಧರ್ಮದಿಂದ ನಡೆಯಬೇಕು.

ಈ ಪ್ರಕಾರ ಚಿದಂಬರ ದೀಕ್ಷಿತರು ನಿತ್ಯಕರ್ಮಗಳನ್ನು ಆಚರಿಸುತ್ತ, ತಮ್ಮ ಅಧಿಕಾರಯುಕ್ತ ವಾಣಿಯಿಂದ ಭಕ್ತರನ್ನು ಬೋಧಿಸುತ್ತ ಕಾಲಕ್ರಮಣ ಮಾಡುತ್ತಿದ್ದರು. ದಿನೇ ದಿನೇ ಅವರ ಕೀರ್ತಿಯು ಬೆಳೆಯಹತ್ತಿದ್ದರಿಂದ ಯಾತ್ರೆಯು ವಿಶೇಷವಾಗಿ ಕೂಡಹತ್ತಿತು. ಮಾಂಡಲಿಕ ರಾಜರೆಲ್ಲರೂ ಚಿದಂಬರನ

ಚರಣದಲ್ಲಿ ಮನಸ್ಸನ್ನರ್ಪಿಸಿ, ಮಾನಾಪಮಾನಗಳನ್ನು ಲೆಕ್ಕಿಸದೆ, ಅವರನ್ನು ಸೇವಿಸತೊಡಗಿದರು. ಭಕ್ತಾಭಿಮಾನಿಗಳಾದ ಚಿದಂಬರದೀಕ್ಷಿತರಾದರೂ ಯಾವಾಗಲೂ ಭಕ್ತರ ಬಯಕೆಗಳನ್ನು ಪೂರೈಸುತ್ತ, ಅವರಿಗೆ ಅದ್ಭುತಲೀಲೆಗಳನ್ನು ತೋರುತ್ತ, ತಮ್ಮ ಅವತಾರಕಾರ್ಯವನ್ನು ಮುಂದಕ್ಕೆ ಸಾಗಿಸಿದರು.

ಹೀಗಿರಲು ಒಂದು ದಿವಸ ಮಾವಂದಿರಾದ ಲಿಂಗೋಪಂತರು ಮುರಗೋಡಕ್ಕೆ ಬಂದು ಮಗಳಾದ ಸಗುಣಾಬಾಯಿಯನ್ನು ನಾಲ್ಕು ದಿವಸ ತವರುಮನೆಗೆ ಕಳಿಸಿಕೊಡಬೇಕೆಂದು ಅಳಿಯನನ್ನು ಕೇಳಿಕೊಂಡರು. ಆ ಮಾತಿಗೆ ಚಿದಂಬರ ದೀಕ್ಷಿತರು ಒಡಂಬಡಲು, ಲಿಂಗೋಪಂತರು ಮಗಳನ್ನು ಕರಕೊಂಡು ಮನೆಗೆ ಹೊರಟು ಹೋದರು.

ಇದೇ ಕಾಲಕ್ಕೆ ದಕ್ಷಿಣದಲ್ಲಿ ಶ್ರೀರಂಗಪಟ್ಟಣದಲ್ಲಿ ಟೀಪೂಸುಲ್ತಾನನೆಂಬ ಬಲಾಢ್ಯನಾದ ಯವನರಾಜನು ರಾಜ್ಯವಾಳುತ್ತಿದ್ದನು. ಅವನು ಪಾಪ-ಪುಣ್ಯಗಳನ್ನು ಲೆಕ್ಕಿಸದೆ, ಸೈನ್ಯದೊಂದಿಗೆ ದೇಶಗಳನ್ನು ಸುಲಿಯುತ್ತ ದೇವ-ದ್ವಿಜರನ್ನು ಪೀಡಿಸಹತ್ತಿದನು. ಒಂದು ದಿವಸ ಅವನು ಹೀಗೆಯೇ ದೇಶಗಳನ್ನು ಸುಲಿಯುತ್ತ, ಅನಾಚಾರಗಳನ್ನು ಮಾಡುತ್ತ ಲಿಂಗೋಪಂತ ಮಾಢಳ್ಳಿ ಇವರಿದ್ದ ಗ್ರಾಮಕ್ಕೆ ಬಂದನು. ಅವನು ಆ ಊರಲ್ಲಿ ಕಂಡಕಂಡವರ ಮನೆಗಳನ್ನು ಹೊಕ್ಕು ಜನರನ್ನು ಪೀಡಿಸಹತ್ತಿದನು. ಒಂದು ದಿವಸ ಸುಲ್ತಾನನು ಸ್ವತಃ ಲಿಂಗೋಪಂತನ ಮನೆಯನ್ನು ಹೊಕ್ಕನು. ಆಗ ಸರಸ್ವತೀ-ಮಾತೆಯು ಸುಲ್ತಾನನ ಈ ಅನ್ಯಾಯವನ್ನು ನೋಡಿ, ಕೈಯಲ್ಲಿ ಒಂದು ಒನಿಕೆಯನ್ನು ತಕ್ಕೊಂಡು ಆ ದುರಾತ್ಮನನ್ನು ದಂಡಿಸ ಹೋದಳು ಆಗ ಸರಸ್ವತೀಮಾತೆಯನ್ನು ನೋಡಿ ಸುಲ್ತಾನನು:—ಸೈನಿಕರೇ, ಏನು ನೋಡುವಿರಿ? ಇವಳ ಹೆಡಮುರಿಗೆಯನ್ನು ಕಟ್ಟಿರಿ, ಎಂದು ಹೇಳಿದನು. ಆಗ ಸೈನಿಕರು 'ಬೆಂಕಿಯನ್ನು ಮುಟ್ಟಬೇಕೋ ಮುಟ್ಟಬಾರದೋ' ಎಂಬ ವಿಚಾರವನ್ನು ತಿಳಿಯದೆ, ಉದ್ಧಟತನದಿಂದ ಸರಸ್ವತೀಮಾತೆಗೆ ಸ್ಪರ್ಶಮಾಡಲು, ಒಂದು ಚಮತ್ಕಾರವಾಯಿತು. ಅದೇನಂದರೆ.—ದೀಪದ ಹುಳವು ಭಕ್ಷ್ಯವೆಂದು ತಿಳಿದು ದೀವಿಗೆಯನ್ನು ಸ್ಪರ್ಶಮಾಡಿದರೆ, ಇಲ್ಲವೆ ಮೀನವು ಮಾಂಸವೆಂದು ತಿಳಿದು ಗಾಣವನ್ನು ಸ್ಪರ್ಶ ಮಾಡಿದರೆ ಆಗುವ ಪರಿಣಾಮದಂತೆ ಟೀಪುವಿನ ಸೈನಿಕರ ಪರಿಣಾಮವಾಯಿತು. ಎಲ್ಲ ಸೈನಿಕರು ವಿಹ್ವಳರಾಗಿ ಪ್ರಾಣಬಿಡಲಾರಂಭಿಸಿದರು. ಇದ್ದರಿಂದ ಸೈನ್ಯದಲ್ಲಿ ಹಾಹಾಕಾರವುಂಟಾಯಿತು. ಸ್ವಲ್ಪ ವೇಳೆಯಲ್ಲಿಯೇ ಚತುರಂಗ ಸೈನ್ಯವು ನಾಶಹೊಂದಿ, ಆ ರಣಾಂಗಣವು

ನಿಃಶಬ್ದವಾಯಿತು. ಇಷ್ಟರಲ್ಲಿ ಅಕಸ್ಮಾತ್ತಾಗಿ ಟೀಪೂಸುಲ್ತಾನನ ಎರಡೂ ಕಣ್ಣೊಳಗಿನ ಗುಡ್ಡೆಗಳು ಕಳಚಿ ನೆಲಕ್ಕೆ ಬಿದ್ದವು. ಆಗ ಸುಲ್ತಾನನು ವ್ಯಸನ ಪಟ್ಟು ಮನಸ್ಸಿನಲ್ಲಿ:—ಒಮ್ಮಿಂದೊಮ್ಮೆ ನನಗೆ ಈ ದುಃಸ್ಥಿತಿಯು ಉಂಟಾದ ಕಾರಣವೇನಿರಬಹುದು? ನಾನು ದಿಟ್ಟತನದಿಂದ ದೇವಾಲಯಗಳನ್ನು ಸುಲಿದೆನು. ಅವಿಚಾರದಿಂದ ಬಹು ಜನ ಬ್ರಾಹ್ಮಣರನ್ನು ಕೊಂದೆನು. ವ್ಯರ್ಥವಾಗಿ ಗೋ ಗಳನ್ನು ವಧಿಸಿದೆನು. ಈ ಮಹತ್ಪಾಪಗಳ ಪರಿಣಾಮವಾಗಿರಲಿಕ್ಕಿಲ್ಲವಷ್ಟೇ? ಏನೂ ತಿಳಿಯಲೊಲ್ಲದು. ಇನ್ನು ಇದಕ್ಕೆ ಯಾವ ಉಪಾಯವನ್ನು ಮಾಡಲಿ? ಈ ಸಂಕಟದೊಳಗಿಂದ ಪಾರುಮಾಡುವವರಾರು? ದೇವರೇ ಸರಿ!! ಎಂದು ಚಿಂತಿಸುವಷ್ಟರಲ್ಲಿ ಸಾಕ್ಷಾತ್ ಪರಮಾತ್ಮನು ಬ್ರಾಹ್ಮಣ ವೇಷವನ್ನು ತಳೆದು ಅಲ್ಲಿಗೆ ಬಂದನು. ಆಗ ಸುಲ್ತಾನನು ಕೃತಕರ್ಮಕ್ಕೆ ಪಶ್ಚಾತ್ತಾಪಬಟ್ಟು, ಹಸ ನ್ಮುಖನಾಗಿ ಬ್ರಾಹ್ಮಣನನ್ನು ಅಭಿವಂದಿಸಿ, ಅವನಿಗೆ ತನ್ನ ಯಾವತ್ತು ವೃತ್ತಾಂತ ವನ್ನು ಹೇಳಿದನು, ಹಾಗೂ ಇದರೊಳಗಿಂದ ಪಾರಾಗುವ ಹಂಚಿಕೆಯನ್ನು ಹೇಳ ಬೇಕೆಂದು ಅಂಗಲಾಚಿ ಬೇಡಿಕೊಂಡನು ಆಗ ಬ್ರಾಹ್ಮಣ ವೇಷಧಾರಿಯಾದ ಹರನು, ಸುಲ್ತಾನನಿಗೆ ಪಶ್ಚಾತ್ತಾಪವಾದದ್ದನ್ನು ನೋಡಿ, ಅಂತಃಕರಣಬಟ್ಟು ಸುಲ್ತಾನನನ್ನು ಕುರಿತು:—ಯವನಾಧಿಪತಿಯೆ, ಭೂಮಿಯಲ್ಲೆಲ್ಲ ಚಿದಂಬರ ದೀಕ್ಷಿತರು ತಮ್ಮ ಅಲೌಕಿಕ ಮಹಿಮೆಗಳನ್ನು ಪ್ರಕಟಮಾಡುತ್ತಿರಲು, ಅದನ್ನು ಅರಿಯದೆ ಅವರ ಕಾಂತೆಯನ್ನು ಪೀಡಿಸಲಾರಂಭಿಸಿದಿ ಅವಳ ಹೆಡಮುರಿಗೆ ಯನ್ನು ಕಟ್ಟಲಿಚ್ಛಿಸಿದಿ; ಮತ್ತೂ ನನ್ನ ಅಪರಾಧವೇನೆಂದು ತಿರುಗಿ ಕೇಳುವಿ ಯಲ್ಲ! ಆ ಸಾಧ್ವಿಯನ್ನು ಪೀಡಿಸುವವರು ಕ್ಷಣಮಾತ್ರದಲ್ಲಿ ಪರಲೋಕವನ್ನೈ ದುವರು. ಇದರಲ್ಲಿ ಸ್ವಲ್ಪಾದರೂ ಸಂಶಯವಿಲ್ಲ. ಯಾರ ಅಂಜಿಕೆಯಿಂದ ಗಾಳಿಯು ಬೀಸುತ್ತಿರುವದೋ, ಯಾರ ಅಂಜಿಕೆಯಿಂದ ದೇವಗಣವೆಲ್ಲವು ಅವರ ಚರಣ ಸರೋಜಗಳನ್ನು ನಮಿಸುವದೋ, ಯಾರ ಅಂಜಿಕೆಯಿಂದ ಚಂದ್ರ-ಸೂರ್ಯರು ದಿನಾಲು ಬೆಳಗುತ್ತಿರುವರೋ, ಯಾರ ಮಹಿಮೆಯಿಂದ ಕಾಲ ಕಾಲಕ್ಕೆ ಮಳೆಯು ಬೀಳುತ್ತಿರುವದೋ ಆ ಚಿದಂಬರ ದೀಕ್ಷಿತರ ಸಾಮರ್ಥ್ಯ ವನ್ನೂ, ಮಹಿಮೆಯನ್ನೂ ತಿಳಿಯದೆ, ಅವರ ಕಲತ್ರವನ್ನು ಕಾಡಲಿಚ್ಛಿಸಿದರೆ, ನಿನಗೆ ಹ್ಯಾಗೆ ಕಲ್ಯಾಣವಾದೀತು? ಇನ್ನು ನಿನಗೆ ಹಿತವಾಗಬೇಕೆಂಬ ಇಚ್ಛೆ ಯಿದ್ದರೆ, ಈ ಸರಸ್ವತಿಯನ್ನು ಬಿಟ್ಟುಕೊಟ್ಟು ಚಿದಂಬರ ದೀಕ್ಷಿತರಿಗೆ ಶರಣುಹೋಗು; ಅಂದರೆ ನಿನಗೆ ಕಲ್ಯಾಣವಾಗುವದು, ಎಂದು ಹೇಳಿ ನೋಡ

ನೋಡುವಷ್ಟರಲ್ಲಿ ಗುಪ್ತನಾದನು. ಆಗ ಸುಲ್ತಾನನು ದಿಗಿಲುಬಿದ್ದು, ಬ್ರಾಹ್ಮಣನ ವಚನದಲ್ಲಿ ವಿಶ್ವಾಸವನ್ನಿಟ್ಟು, ಸರಸ್ವತೀವಾತೆಯುನ್ನು ಲಿಂಗೋಪಂತಂಗೆ ಒಪ್ಪಿಸಿ, ತಾನು ದೀಕ್ಷಿತರ ದರ್ಶನಕ್ಕಾಗಿ ಹೊರಟನು. ಅವನು ದೀಕ್ಷಿತರ ಮನೆಯು ಸಮೀಪಿಸಿದ ಹಾಗೆ ದಿಂಡುರುಳಿಕೆಯುನ್ನು ಹಾಕಹತ್ತಿ, ಸ್ತೋತ್ರವನ್ನು ಮಾಡಹತ್ತಿದನು. ಆಗ ಕರುಣಾನಿಧಿಗಳಾದ ಚಿದಂಬರ ದೀಕ್ಷಿತರು ಸುಲ್ತಾನನು ಭಕ್ತಿಯಿಂದ ಮಾಡಿದ ಸ್ತೋತ್ರವನ್ನು ಕೇಳಿ, ಹೊರಭಾಗಕ್ಕೆ ಬಂದು:— ಯಾಕೆ? ಯುವನರಾಜನೇ, ದೇವ-ದ್ವಿಜ ಸಂಹಾರವನ್ನು ಬಿಟ್ಟು ಇಲ್ಲಿಗೆ ಏತಕ್ಕೆ ಬಂದಿರುವಿ? ಎನ್ನಲು, ಅದನ್ನು ಕೇಳಿ ಸುಲ್ತಾನನು ಹೆದರಿ ಗದಗದನೆ ನಡುಗುತ್ತ "ನಾನು ಅಪರಾಧಿಯಿರುವೆನು; ನನ್ನನ್ನು ಉದ್ಧರಿಸಬೇಕು; ನೀವೇ ನನ್ನ ತಾಯಿ-ತಂದೆಗಳು; ಬಂಧು-ಬಳಗದವರು" ಎಂದು ನುಡಿದು ಭೂಮಿಯು ಮೇಲೆ ಉರುಳಾಡಹತ್ತಿದನು. ಆಗ ದೀಕ್ಷಿತರು:—ಏಳು-ಏಳು ಯುವನಾಧಿಪತಿಯೇ, ಏಳು. ಹೆದರಬೇಡ; ನಿನಗೆ ಯಾವ ಸಂಕಟವು ಪ್ರಾಪ್ತವಾಗಿರುವದು? ಹೇಳು; ಅದಕ್ಕೆ ಏನಾದರೂ ಉಪಾಯುವನ್ನು ಮಾಡೋಣ, ಎಂದು ನುಡಿಯಲು, ಸುಲ್ತಾನನು ಎದ್ದು ನಿಂತು ಕೈಜೋಡಿಸಿಕೊಂಡು:—ದುರಾತ್ಮನಾದ ನಾನು ಅಜ್ಞಾನದಿಂದ ತಮ್ಮ ಕುಟುಂಬವನ್ನು ಹಿಡಿಯಲು ಸೇವಕರಿಗೆ ಆಜ್ಞಾಪಿಸಿದೆನು. ನನ್ನಂತೆ ಅಜ್ಞಾನಿಗಳಾದ ನನ್ನ ಸೇವಕರು ಆಕೆಲಸಕ್ಕೆ ಉದ್ಯುಕ್ತರಾದರು. ಆ ಕೂಡಲೆ ನನ್ನ ಚತುರಂಗ ಬಲವೆಲ್ಲವು ಮೃತವಾಯಿತು. ನಾನೂ ಕುರುಡನಾದೆನು. ಆದ್ದರಿಂದ ಪ್ರಭುಗಳೇ, ಕೃತಾಪರಾಧವನ್ನು ಕ್ಷಮಿಸಿ, ನನ್ನ ಮೇಲೆ ದಯಮಾಡಬೇಕು. ಇನ್ನು ಮೇಲೆ ಅನ್ಯಾಯುಗಳನ್ನು ಎಂದೂ ಮಾಡಲಿಕ್ಕಿಲ್ಲ, ಎಂದು ಹೇಳಿ ಹಾಗೆಯೇ ನಿಂತುಕೊಂಡನು. ಇತ್ತ ಕೂಡಿದ ಜನರೆಲ್ಲರೂ:— ಆದದ್ದು ಒಳ್ಳೇದಾಯಿತು. ಅನಾಯಾಸವಾಗಿ ಕಾರ್ಯ ಸಾಧಿಸಿತು. ಇನ್ನು ನಮ್ಮ ಗೋ-ಬ್ರಾಹ್ಮಣರ ಕಷ್ಟಗಳಾದರೂ ಬಯಲಾದವು! ಎಂದು ತಮ್ಮ ತಮ್ಮೊಳಗೆ ಗುಣುಗುಟ್ಟಹತ್ತಿದರು. ಅಷ್ಟರಲ್ಲಿ ಭಕ್ತಾಧೀನರಾದ ದೀಕ್ಷಿತರು ಸುಲ್ತಾನನ ಸಮೀಪಕ್ಕೆ ಹೋಗಿ:—ಕಣ್ಣುಗಳಿಗೆ ಏನಾಗಿದೆ? ನೋಡೋಣ, ಎಂದು ನುಡಿದು ಅವನನ್ನು ಕೃಪಾದೃಷ್ಟಿಯಿಂದ ಅವಲೋಕಿಸಿ ಆಶೀರ್ವದಿಸಲು, ಸುಲ್ತಾನನ ನೇತ್ರಗಳು ಮೊದಲಿನಂತೆ ಕಾಣಹತ್ತಿದವು. ಅತ್ತ ಸೈನ್ಯವಾದರೂ ಸಜೀವವಾಯಿತು. ಬಳಿಕ ಸುಲ್ತಾನನು:—ಮಹಾಪ್ರಭುಗಳೇ, ನನಗೆ ಇನ್ನೊಮ್ಮೆ ಈ ಪ್ರಕಾರದ ದುರ್ಬುದ್ಧಿಯು ಜನಿಸದಂತೆ ನನ್ನನ್ನು ಆಶೀರ್ವದಿಸ

ಬೇಕು, ಎಂದು ಬೇಡಿಕೊಂಡನು. ಆಗ ದೀಕ್ಷಿತರು:—ನೀನು ಹಿಂದಿನ ಜನ್ಮದಲ್ಲಿ ಒಬ್ಬ ತಪಸ್ವಿಯನ್ನು ಪೀಡಿಸಿದ್ದರಿಂದ, ಅವನ ಶಾಪವಶದಿಂದ ಈ ಜನ್ಮದಲ್ಲಿ ಯವನ ಕುಲದಲ್ಲಿ ಹುಟ್ಟಿ, ಅನಾಚಾರಗಳನ್ನು ಮಾಡುತ್ತಿರುವಿ. ಆದ್ದರಿಂದ ಇನ್ನು ಮೇಲೆಯಾದರೂ ದೇವ-ದ್ವಿಜರ ಸಂಹಾರವನ್ನು ಬಿಟ್ಟು, ಸದ್ಧರ್ಮದಿಂದ ನಡೆ; ಅಂದರೆ ನಿನ್ನ ಪಾಪಬುದ್ಧಿಯು ತೊಲಗುವದು, ಎಂದು ಹೇಳಿ, ಅವನಿಗೆ ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನಿತ್ತರು. ಆಗ ಸುಲ್ತಾನನು ದೀಕ್ಷಿತರನ್ನು ನಮಿಸಿ, ಅಲ್ಲಿಂದ ತನ್ನ ಸೈನ್ಯವು ಮೃತವಾದ ಸ್ಥಳಕ್ಕೆ ಬಂದನು. ಅಷ್ಟರಲ್ಲಿ ಸೈನ್ಯವೆಲ್ಲ ಸಜೀವವಾಗಿತ್ತು. ಅದನ್ನು ನೋಡಿ ಸಂತೋಷಬಟ್ಟು, ಸೈನಿಕರಿಗೆ ಆದ ವೃತ್ತಾಂತವನ್ನೆಲ್ಲ ಹೇಳಿ, ಅವರಿಂದ ಕೂಡಿಕೊಂಡು ದೀಕ್ಷಿತರನ್ನು ಹೊಗಳುತ್ತ, ತನ್ನ ರಾಜಧಾನಿಗೆ ಹೋಗಿ ನ್ಯಾಯದಿಂದ ರಾಜ್ಯಪರಿಪಾಲನೆಯನ್ನು ಮಾಡಹತ್ತಿದನು. ಇತ್ತ ಚಿದಂಬರ ದೀಕ್ಷಿತರಾದರೂ ತಮ್ಮ ಪತ್ನಿಯನ್ನು ಕರೆಸಿಕೊಂಡು ಸುಖವಾಗಿ ಪ್ರಪಂಚ ಮಾಡಹತ್ತಿದರು.

---

## ೬ನೆಯ ಪ್ರಕರಣ.

## ಜನ್ಮಾಂತರ ಕಥನ.

ಯಸ್ಯಪ್ರಸಾದೆ ಸತಿಭಕ್ತಿಭಾಜಾಂ ಭುಕ್ತಿಶ್ಚ ಮುಕ್ತಿಶ್ಚ ಭವತ್ಯಯತ್ನಾತ್ ||
ಯಸ್ಯಾವತಾರೇಽಭವದಾರ್ಯಸೌಖ್ಯಂ ತಮೇವದೇವಂ ಶರಣಂವ್ರಜಾಮಿ ||೧||

ಶ್ರೀ ಭಕ್ತಾನಂದ.

ಹಿಂದಕ್ಕೆ ವಿಜಯಪುರದಲ್ಲಿ ವೇದಪಾರಂಗತನೂ, ದೇವರಲ್ಲಿ ನಂಬಿಗೆಯುಳ್ಳವನೂ, ಧನಾಢ್ಯನೂ, ಅತಿಥಿಸೇವಾತತ್ಪರನೂ, ಸದ್ಧರ್ಮನಿರತನೂ, ದಯಾವಂತನೂ ಆದ ರಾಮಕೃಷ್ಣನೆಂಬವನೊಬ್ಬ ಬ್ರಾಹ್ಮಣನು ಸದ್ವರ್ತನದಿಂದ ಕಾಲಕ್ಷೇಪ ಮಾಡುತ್ತಿದ್ದನು. ಅವನಿಗೆ ಬಹಳ ದಿವಸಗಳಾದರೂ ಸಂತತಿಯಾಗಲಿಲ್ಲ. ಅದರಿಂದ ಅವನಿಗೆ ಯಾವತ್ತು ಸುಖಗಳು ದುಃಖಗಳೋಪಾದಿಯಲ್ಲಿ ತೋರಹತ್ತಿದವು. ಒಂದುದಿವಸ ರಾಮಕೃಷ್ಣನು ಚಿಂತಾವಿಷ್ಟನಾಗಿ ಏಕಾಂತದಲ್ಲಿ ಕುಳಿತು ಮನಸ್ಸಿನಲ್ಲಿ.-ನನಗೆ ಮಕ್ಕಳಿಲ್ಲದ್ದರಿಂದ ನನ್ನ ಜನ್ಮವು ವ್ಯರ್ಥವಾಯಿತು. ನಾನು ನಿರ್ಭಾಗ್ಯನು. ಇನ್ನುಮೇಲೆ ನನಗೆ ಸಂತತಿಯು ಹ್ಯಾಗೆ ಆಗುವದು? ಇದು ನನ್ನ ಪೂರ್ವಜನ್ಮದ ದೋಷವಿರಬಹುದೋ? ಪಿತೃಗಳಂತೂ ನನ್ನನ್ನು ಶಪಿಸುತ್ತಿ

ರುವರು. ನನ್ನ ಬಾಳುವೆಗೆ ಧಿಕ್ಕಾರವಿರಲಿ! ಇನ್ನು ನಾನು ಸಂತತಿಯ ಸಲುವಾಗಿ ಯಾರ ಸೇವೆಯನ್ನು ಮಾಡಲಿ? ನನ್ನ ಓರಿಗೆಯವರಿಗೆ ಮಕ್ಕಳಾಗಿ, ಅವರು ಚಕ್ಕಂದದಿಂದ ಇದ್ದಾರೆ. ನಾನು ದುರ್ದೈವಿಯು! ನಾನು ಯಾವ ಕರ್ಮವಿಪಾಕದಿಂದ ಅಪುತ್ರವಂತನಾದೆನೋ, ತಿಳಿಯೆನು; ಎಂದು ತನ್ನಲ್ಲಿ ತಾನೇ ಆಲೋಚಿಸುತ್ತ ಕುಳಿತುಕೊಂಡಿದ್ದನು. ಅಷ್ಟರಲ್ಲಿ ಅವನ ಹೆಂಡತಿಯು ಅಲ್ಲಿಗೆ ಒಂದು ಚಿಂತೆಯಿಂದ ವ್ಯಾಪ್ತನಾದ ಪತಿಯನ್ನು ನೋಡಿ ಅಳುತ್ತ —ಲೋಕದಲ್ಲಿ ಮಕ್ಕಳಿದ್ದವರು ಮಕ್ಕಳಿಲ್ಲದವರಿಗೆ ಹಂಗಿಸುವದು ವಾಡಿಕೆಯಾಗಿದೆ! ಬಂಜೆಯಾದ ನಾನು ಮುಂದಿಗೆ ಮೋರೆಯನ್ನು ಹೇಗೆ ತೋರಿಸಲಿ? ಸಂತತಿಯ ಸಲುವಾಗಿ ಯಾರಿಗೆ ಶರಣುಹೋಗಲಿ? ಯಾವ ಉಪಾಯವನ್ನು ಮಾಡಿದರೆ ನನಗೆ ಸಂತತಿಯಾದೀತು? ಭೂಮಿಯ ಮೇಲಿನ ಮಾಂತ್ರಿಕರೂ, ಭವಿಷ್ಯಜ್ಞರೂ ನನ್ನ ವಿಷಯದಲ್ಲಿ ಮೌನವನ್ನು ತಾಳಿದರೇ? ಪರಮೇಶ್ವರನಾದರೂ ಅದೇ ಮಾರ್ಗವನ್ನು ಸ್ವೀಕರಿಸಿದನೇ? ಉಪಾಯವಿಲ್ಲ!! ಹಣೇಬರಹವನ್ನು ಯಾರು ತಪ್ಪಿಸುವರು? ಇಂತು ನಿಂದಿತಳಾಗಿ ಇರುವದಕ್ಕಿಂತ ಪ್ರಾಣತ್ಯಾಗವನ್ನು ಮಾಡುವದು ಲೇಸು, ಎಂದು ಹಲುಬಿ, ದುಃಖಿಸಹತ್ತಿದಳು. ಆಗ ಪತ್ನಿಯ ದುಃಖವನ್ನು ನೋಡಿ ರಾಮಕೃಷ್ಣನ ದುಃಖೋದಧಿಯು ಉಕ್ಕೇರಿ, ಅವನು ಮೂರ್ಛಿತನಾದನು ಆಗ ಒಂದೇ ಕೋಲಾಹಲಧ್ವನಿಯುಂಟಾಯಿತು. ಅದನ್ನು ಕೇಳಿ, ಪುರವಾಸಿಗಳು ರಾಮಕೃಷ್ಣನ ಮನೆಯಲ್ಲಿ ಕೂಡಿದರು. ಅವರಲ್ಲಿ ಪರಮೇಶ್ವರನಾದರೂ ಆ ದಂಪತಿಗಳ ಬಳಲುವಿಕೆಯನ್ನು ಕಂಡು, ವೃದ್ಧ ಬ್ರಾಹ್ಮಣನ ವೇಷವನ್ನು ತಳೆದು ಅಲ್ಲಿಗೆ ಬಂದಿದ್ದನು. ಸ್ವಲ್ಪ ಗದ್ದಲವು ಕಡಿಮೆಯಾಗಿ, ರಾಮಕೃಷ್ಣನು ಎಚ್ಚತ್ತ ಬಳಿಕ ಅವನು ಮುಂದಕ್ಕೆ ಒಂದು, ದಂಪತಿಗಳನ್ನು ಕುರಿತು:—ಮನುಷ್ಯನಿಗೆ ಪುಣ್ಯಫಲೇಚ್ಛೆಯು ಮಾತ್ರ ಇರುತ್ತದೆ; ಆದರೆ ಅದಕ್ಕೆ ತಕ್ಕಂತೆ ಅವರ ಆಚರಣವಿರುವದಿಲ್ಲ. ಪಾಪದ ಫಲವು ಯಾರಿಗೂ ಬೇಡ; ಆದರೆ ಪಾಪಕರ್ಮ ಮಾಡದವರನ್ನು ಕಾಣುವದು ಅಪರೂಪ. ಸಂತತಿಯು ಪುಣ್ಯದ ಫಲವಾಗಿರುವದು. ಹೇ, ಬ್ರಾಹ್ಮಣ ದಂಪತಿಗಳಿರಾ, ನಿಮ್ಮ ಸಂತತಿಯು ನಿಮ್ಮ ಪೂರ್ವಜನ್ಮದ ಕರ್ಮಫಲದಿಂದ ನಾಶವಾದಂತೆ ತೋರುತ್ತದೆ. ಇರಲಿ. ನೀವು ಈಗ ಸಂತತಿಯನ್ನು ಬಯಸುತ್ತಿದ್ದರೆ, ಶ್ರೀ ಚಿದಂಬರ ದೀಕ್ಷಿತರ ದಾಸನವನ್ನು ತಕ್ಕೊಳ್ಳಿರಿ; ಅಂದರೆ ನಿಮ್ಮ ಮನೋರಥವು ಪೂರ್ಣವಾಗುವದು, ಎಂದು ಹೇಳಿ, ಕೂಡಲೆ ಬ್ರಾಹ್ಮಣ ವೇಷಧಾರಿಯಾದ ಪರಮಾತ್ಮನು ಗುಪ್ತನಾದನು.

ಇಂತು ತಮ್ಮನ್ನು ಬೋಧಿಸಿದ ಬ್ರಾಹ್ಮಣನು ನೋಡ-ನೋಡುವಷ್ಟರಲ್ಲಿ ಗುಪ್ತನಾಗಲು, ಆ ದಂಪತಿಗಳು ದಿಗಿಲುಬಿದ್ದು, ಏನೇ ಆಗಲಿ, ಬ್ರಾಹ್ಮಣನ ವಚನದಂತೆ ದೀಕ್ಷಿತರ ದರ್ಶನವನ್ನು ಒಮ್ಮೆ ತಕ್ಕೊಳ್ಳಬೇಕೆಂದು ಯೋಚಿಸಿ, ಮರುದಿವಸ ಪ್ರಾತಃಕಾಲಕ್ಕೆ ಶುಚಿರ್ಭೂತರಾಗಿ ದೀಕ್ಷಿತರ ದರ್ಶನಾರ್ಥವಾಗಿ ಪ್ರಯಾಣ ಮಾಡಿದರು. ಐದು ದಿವಸಗಳ ವರೆಗೆ ಮಾರ್ಗಕ್ರಮಿಸಿ, ಆರನೇ ದಿವಸ ಮುರಗೋಡಿಗೆ ಬಂದು, ಚಿದಂಬರ ದೀಕ್ಷಿತರ ಚರಣ ಸರೋಜಗಳನ್ನು ನೋಡಿ ಸಾಷ್ಟಾಂಗವೆರಗಿದರು. ಬಳಿಕ ಎದ್ದುನಿಂತು ಬದ್ಧಾಂಜಲಿಗಳಾಗಿ:—ಭಕ್ತರಕ್ಷಕನೇ, ಸಂತತಿಯ ಬಯಕೆಯಿಂದ ನಿನ್ನನ್ನು ಮರೆಹೊಕ್ಕಿರುವೆವು ನಮ್ಮ ಬಯಕೆಯನ್ನು ಪೂರ್ಣಮಾಡಿ, ನಮ್ಮನ್ನು ಕಾಪಾಡಬೇಕು, ಎಂದು ಬೇಡಿಕೊಂಡರು. ಆಗ ದೀಕ್ಷಿತರು ದಂಪತಿಗಳಿಗೆ ಅಭಯವನ್ನಿತ್ತು: ಆ ತಾಯಿ, ನಿನ್ನ ಪೂರ್ವಜನ್ಮದ ಕರ್ಮಫಲದಿಂದ ನಿನಗೆ ಸಂತತಿಯಾಗಲೊಲ್ಲದು. ಇನ್ನು ನೀನು ಪುತ್ರಪ್ರಾಪ್ತಿಗಾಗಿ ಉಪಾಯವನ್ನು ಬಯಸುತ್ತಿದ್ದರೆ, ಹೇಳುತ್ತೇನೆ ಕೇಳು. ಇಲ್ಲಿಂದ ನಾಲ್ಕು ಹರದಾರಿಯ ಮೇಲೆ ಸತ್ತಿಗೇರಿಯೆಂಬ ಗ್ರಾಮವಿರುವದು. ಅಲ್ಲಿ ಮಾರುತಿಯ ದೇವಾಲಯದ ಎದುರಿಗೆ ಒಂದು ಗಾಣಿಗರ ಮನೆಯಿರುವದು. ಆ ಮನೆಯಲ್ಲಿ ಮೊದಲು ಒಬ್ಬ ಧನಿಕನಾದ ಗಾಣಿಗನಿರುತ್ತಿದ್ದನು. ಅವನು ತಾನು ಗಳಿಸಿದ ಎಲ್ಲ ಸಂಪತ್ತಿಯನ್ನು ಹೆಂಡತಿಯ ಸ್ವಾಧೀನ ಮಾಡುತ್ತಿದ್ದನು. ಕಾಲಾಂತರದಿಂದ ಆ ಗಾಣಿಗನು ತೀರಿಕೊಂಡನು. ಆಗ ಅವನ ಹೆಂಡತಿಯು ಆ ಹಣವನ್ನೆಲ್ಲ ಒಂದು ಕೊಡದೊಳಗೆ ಹಾಕಿ, ಅದರ ಮೇಲೆ ತನ್ನ ಮೂಗುತಿಯನ್ನಿಟ್ಟು, ಮುಚ್ಚಳಮುಚ್ಚಿ ಆ ಕೊಡವನ್ನು ಒಲೆಯ ಬಳಿಯಲ್ಲಿದ್ದ ಒರಳಿನ ಕೆಳಗೆ ಹೂಳಿಟ್ಟಳು. ಅವಳಿಗೆ ಐದುಮಂದಿ ಗಂಡುಮಕ್ಕಳಿದ್ದರು. ಆದರೆ ಅವಳು ಹಣದ ಈ ವ್ಯವಸ್ಥೆಯನ್ನು ಯಾರಿಗೂ ಹೇಳಿದ್ದಿಲ್ಲ. ಮುಂದೆ ಕಾಲಾಂತರದಿಂದ ಅವಳಾದರೂ ತೀರಿಕೊಂಡಳು. ಬಳಿಕ ತಾಯಿಯ ಬಳಿಯಲ್ಲಿ ವಿಪುಲವಾದ ಹಣವದೆ, ಎಂದು ಮೊದಲೇ ಗೊತ್ತಿದ್ದ ಅವಳ ಮಕ್ಕಳು ದ್ರವ್ಯವನ್ನು ಬಹಳ ಕಡೆಯಲ್ಲಿ ಹುಡುಕಿದರು; ಆದರೆ ಅದು ಅವರಿಗೆ ದೊರೆಯದ್ದರಿಂದ ಅವರು ತಮ್ಮ ತಾಯಿಯನ್ನು ಶಪಿಸುತ್ತ ಈಗ್ಯೂ ಬಡತನದಿಂದ ಕಾಲಕಳೆಯುತ್ತಿರುವರು. ನೀನು ಪೂರ್ವಜನ್ಮದಲ್ಲಿ ಅವರ ತಾಯಿಯಾಗಿದ್ದು, ಈಗ ಬ್ರಾಹ್ಮಣ ಸ್ತ್ರೀಯಾಗಿ ಹುಟ್ಟಿರುವಿ? ಜನ್ಮಾಂತರದ ಪುತ್ರಶಾಪದಿಂದ ನಿನಗೆ ಸಂತತಿಯಾಗಲೊಲ್ಲದು. ಕಾರಣ ನೀನು ಈಗ ಸತ್ತಿಗೇರಿಗೆ ಹೋಗಿ, ಮೊದಲು ಮಾರುತಿಯನ್ನು ಪೂಜಿಸಿ, ಬಳಿಕ ನಿನ್ನ

ಮೊದಲಿನ ಮನೆಗೆ ಹೋಗು. ಅಲ್ಲಿ ಮಕ್ಕಳ ಸಹಾಯದಿಂದ ಮೇಲೆ ಹೇಳಿದ ಸ್ಥಳದಲ್ಲಿರುವ ದ್ರವ್ಯದ ಕೊಡವನ್ನು ಮೇಲಕ್ಕೆ ತೆಗೆದು, ಅದರ ಮುಚ್ಚಳವನ್ನು ತೆಗೆದಿಟ್ಟು ಪೆಟ್ಟಿಗೆಯಲ್ಲಿರುವ ಮೂಗುತಿಯನ್ನು ಮೂಗಿನಲ್ಲಿ ಧರಿಸಿ, ಬಳಿಕ ಎಲ್ಲ ದ್ರವ್ಯವನ್ನು ನಿನ್ನ ಪೂರ್ವಜನ್ಮದ ಮಕ್ಕಳಲ್ಲಿ ಸರಿಯಾಗಿ ಹಂಚಿಕೊಡು. ಅಂದರೆ ಅವರು ಸಂತೋಷಹೊಂದಿ, ನಿನ್ನನ್ನು ಕೊಂಡಾಡುವರು. ಅದರಿಂದ ನೀನು ಶಾಪಮುಕ್ತಳಾಗಿ ಸಂತತಿಯನ್ನು ಪಡೆಯುವಿ, ಎಂದು ಹೇಳಿದರು.

ಈ ಮೇರೆಗೆ ದೀಕ್ಷಿತರು ಹೇಳಿದ ತನ್ನ ಪೂರ್ವಜನ್ಮದ ವೃತ್ತಾಂತವನ್ನು ಕೇಳಿ ಆ ಬ್ರಾಹ್ಮಣಸ್ತ್ರೀಯು ಆಶ್ಚರ್ಯಭರಿತಳಾಗಿ, ದೀಕ್ಷಿತರನ್ನು ಮತ್ತೆ ನಮಸ್ಕರಿಸಿ, ಅವರ ಅಜ್ಞೆಯ ಮೇರೆಗೆ ಸತ್ತೀಗೇರಿಗೆ ಹೋಗಬೇಕೆಂದು ಹೊರಟಳು. ಆಗ ರಾಮಕೃಷ್ಣನೂ, ಯಾತ್ರಸ್ಥರೂ ಆ ಚಮತ್ಕಾರವನ್ನು ನೋಡುವದಕ್ಕಾಗಿ ಅವಳನ್ನು ಹಿಂಬಾಲಿಸಿದರು. ರಾಮಕೃಷ್ಣನ ಹೆಂಡತಿಯು ಸತ್ತೀಗೇರಿಗೆ ಹೋಗಿ, ಮೊದಲು ವಾಯುಸುತನನ್ನು ವಿಧ್ಯುಕ್ತವಾಗಿ ಪೂಜಿಸಿ, ಬ್ರಾಹ್ಮಣಸಂತರ್ಪಣೆಯನ್ನು ಮಾಡಿಸಿ, ತನ್ನ ಜನ್ಮಾಂತರದ ಮಕ್ಕಳನ್ನು ಸವಿಯೂಟಗಳಿಂದ ಸಂತೋಷಪಡಿಸಿದಳು, ಹಾಗು ತಾನಾದರೂ ಭೋಜನವನ್ನು ತೀರಿಸಿ, ತನ್ನ ಪೂರ್ವಜನ್ಮದ ಮಕ್ಕಳೊಡನೆ ತನ್ನ ಪೂರ್ವದ ಮನೆಯನ್ನು ಹೊಕ್ಕಳು. ಆ ಹೊತ್ತು ಅವಳು ಅಭ್ಯಂಗಸ್ನಾನವನ್ನು ಮಾಡಿ, ಪೀತಾಂಬರವನ್ನುಟ್ಟು, ಕೊರಳಲ್ಲಿ ಮುತ್ತಿನಮಾಲೆಯನ್ನು ಧರಿಸಿದ್ದಳು. ಅವಳ ಮುಖವು ಅರಿಶಿನ-ಕುಂಕುಮಗಳಿಂದ ಯುಕ್ತವಾದ್ದರಿಂದ ಮಂಗಲಕರವಾಗಿ ತೋರುತ್ತಿತ್ತು. ಅವಳು ಮನೆಯನ್ನು ಸೇರಿದ ಬಳಿಕ ಅದನ್ನು ಚನ್ನಾಗಿ ಅವಲೋಕಿಸುತ್ತ ಅಡಿಗೆಯ ಮನೆಯನ್ನು ಪ್ರವೇಶಿಸಿ. ತನ್ನ ಜನ್ಮಾಂತರದ ಮಕ್ಕಳ ಕೈಯಿಂದ ದ್ರವ್ಯಘಟವಿರುವ ಸ್ಥಳವನ್ನು ಅಗಿಸಿದಳು. ಚಿದಂಬರ ದೀಕ್ಷಿತರ ಹೇಳಿಕೆಯಂತೆ ಅಲ್ಲಿ ಒಂದು ಕೊಡವು ಹೊರಟಿತು. ಅದು ದೀಕ್ಷಿತರು ಹೇಳಿದ ಗುರ್ತಿನಿಂದ ಯುಕ್ತವಾದದ್ದನ್ನು ನೋಡಿ ಎಲ್ಲರೂ ಆಶ್ಚರ್ಯಗೊಂಡರು. ತರುವಾಯ ರಾಮಕೃಷ್ಣನ ಪತ್ನಿಯು ಆ ಕೊಡದ ಮುಚ್ಚಳವನ್ನು ತೆಗೆದು, ಒಳಬದಿಯಲ್ಲಿ ಹೊಳೆಯುತ್ತಿರುವ ಮೂಗುತಿಯನ್ನು ಮೂಗಿನಲ್ಲಿಟ್ಟುಕೊಂಡು ಕೊಡದೊಳಗಿನ ದ್ರವ್ಯವನ್ನೆಲ್ಲ ತನ್ನ ಐದು ಮಂದಿ ಮಕ್ಕಳಲ್ಲಿ ಸರಿಯಾಗಿ ಹಂಚಿಕೊಟ್ಟಳು. ಅದರಿಂದ ಅವರಿಗೆ ಸಂತೋಷವಾಯಿತು ಬಳಿಕ ಆ ವಿಪ್ರಸ್ತ್ರೀಯು ತನ್ನ ಮಕ್ಕಳಿಗೆ ಪೂರ್ವಜನ್ಮದ ವೃತ್ತಾಂತವನ್ನು ಹೇಳಲು, ದ್ರವ್ಯಪ್ರಾಪ್ತಿಯಿಂದ ಸಂತುಷ್ಟರಾದ ಆ ಮಕ್ಕಳಿಗೆ ಪೂರ್ವಜನ್ಮದ ವೃತ್ತಾಂತಶ್ರವಣ

ದಿಂದ ತಮ್ಮ ತಾಯಿಯ ಒಗ್ಗೆ ನಂಬಿಗೆಯುಂಟಾಗಿ, ಅವರ ಕಣ್ಣೊಳಗಿಂದ ಆನಂದಾಶ್ರುಗಳೂ, ದುಃಖಾಶ್ರುಗಳೂ ಉದುರಿದವು.

ಇಷ್ಟಾದ ಒಳಿಕ ಆ ವಿಪ್ರಸ್ತ್ರೀಯು ತನ್ನ ಪುತ್ರರನ್ನು ಸಮೀಪಕ್ಕೆ ಕರೆದು:- ಮಕ್ಕಳಿರಾ, ಬಡತನದಿಂದ ಒಳಲುತ್ತಿರುವ ನೀವು ನನ್ನನ್ನು ಇದುವರೆಗೆ ಶಪಿಸುತ್ತಿದ್ದಿರಿ. ಆದ್ದರಿಂದ ನನ್ನ ಸಂತತಿಗೆ ಪ್ರತಿಬಂಧವಾಗಿತ್ತು. ಕಾರಣ ಈಗ ನೀವು ನನ್ನನ್ನು 'ಪುತ್ರವಂತಳಾಗು' ಎಂದು ಆಶೀರ್ವದಿಸಿರಿ, ಎಂದು ಹೇಳಿದಳು. ಆಗ ಅವಳ ಮಕ್ಕಳು ಒಮ್ಮೆಲೆ ಎದ್ದು ನಿಂತು, ತಾಯಿಯನ್ನು ನಮಸ್ಕರಿಸಿ:— ನೀನು ಪುತ್ರವಂತೆಯಾಗು; ನಿನ್ನ ಸಂತತಿಯು ಆಚಂದ್ರಾರ್ಕ ಬಾಳಲಿ! ಎಂದು ಆಶೀರ್ವದಿಸಿದರು. ಆಗ ಆ ಸ್ತ್ರೀಯು ಮಕ್ಕಳನ್ನು ಹರಿಸಿ, ಅವರ ಅಪ್ಪಣೆಯನ್ನು ತಕೊಂಡು, ಮರಳಿ ಮಠಕ್ಕೆ ಹೋಗಿ ಗುರುಚರಣಸನ್ನಿಧಿಗೆ ಒಂದು ಆದ ವರ್ತಮಾನವನ್ನೆಲ್ಲ ಹೇಳಿದಳು. ಒಳಿಕ ದೀಕ್ಷಿತರು ರಾಮಕೃಷ್ಣಪತ್ನಿಯನ್ನು 'ಪುತ್ರವತಿಯಾಗು' ಎಂದು ಆಶೀರ್ವದಿಸಿ, ಎರಡು ನಾರಿಕೇಲಫಲಗಳನ್ನು ಅವಳ ಉಡಿಯಲ್ಲಿ ಹಾಕಿದರು; ಹಾಗು ಆ ದಂಪತಿಗಳಿಗೆ ತತ್ತ್ವೋಪದೇಶವನ್ನು ಮಾಡಿದರು. ಆಗ ಅವರಿಗೆ ಜ್ಞಾನವಾಗಿ ಅವರು ಪುನಃ ದೀಕ್ಷಿತರನ್ನು ನಮಸ್ಕರಿಸಿ:—ಸಂಸಾರವ್ಯಾಮೋಹವು ವ್ಯರ್ಥವಾದದ್ದೆಂದು ತಮ್ಮ ಉಪದೇಶದಿಂದ ಈಗ ನಮಗೆ ಮನವರಿಕೆಯಾಯಿತು. ಆದ್ದರಿಂದ ಇನ್ನು ಮೇಲೆ ನಮ್ಮ ಚಿತ್ತವು ಸರ್ವದಾ ನಿಮ್ಮ ಚರಣಗಳಲ್ಲಿ ರತವಾಗುವಂತೆ ನಮ್ಮನ್ನು ಆಶೀರ್ವದಿಸಬೇಕೆಂದು ಬೇಡಿಕೊಂಡರು. ಅದಕ್ಕೆ ದೀಕ್ಷಿತರು:—ನೀವಿಬ್ಬರು ನನ್ನ ಪರಮಭಕ್ತರು! ನೀವು ಸಾಂಪ್ರತಕ್ಕೆ ಪ್ರಪಂಚಸೌಖ್ಯವನ್ನನುಭವಿಸಿರಿ. ಮುಂದೆ ನಿಮಗೆ ನನ್ನ ಅನುಗ್ರಹದ ಪ್ರಭಾವದಿಂದ ಸದ್ಗತಿಯಾಗುವದು. ಇದರಲ್ಲಿ ಸ್ವಲ್ಪಾದರೂ ಸಂಶಯವಿಲ್ಲ. ನೀವು ನಿಶ್ಚಿಂತರಾಗಿ ಮನೆಗೆ ಹೋಗಬೇಕು. ನಿಮಗೆ ಸ್ವಲ್ಪಾವಕಾಶದಲ್ಲಿಯೇ ಸಂತತಿಯಾಗುವದು; ಎಂದು ಹೇಳಿದರು. ಅದನ್ನು ಕೇಳಿ, ಆ ದಂಪತಿಗಳು ತುಷ್ಟರಾಗಿ ಗುರ್ವಾಜ್ಞೆಯ ಮೇರೆಗೆ ಸ್ವಗ್ರಾಮಕ್ಕೆ ತೆರಳಿದರು. ಮುಂದೆ ಅವರಿಗೆ ಶ್ರೀ ಚಿದಂಬರಾನುಗ್ರಹದಿಂದ ಇಬ್ಬರು ಗಂಡುಮಕ್ಕಳಾದರು. ಇಷ್ಟೇ ಅಲ್ಲ, ಆ ದಂಪತಿಗಳು ಈ ಲೋಕದಲ್ಲಿ ಅಪಾರಸುಖವನ್ನನುಭವಿಸಿ, ಅಂತ್ಯದಲ್ಲಿ ಸದ್ಗತಿಯನ್ನು ಹೊಂದಿದರು. ಭಕ್ತವತ್ಸಲನಾದ ಚಿದಂಬರನ ದಯೆಯುಂಟಾದವರಿಗೆ ಯಾವ ಸಂಪತ್ತು ಕೊರತೆಯಾಗುವದು?

## ೩ನೆಯ ಪ್ರಕರಣ

## ದಾರಿದ್ರ್ಯ ವಿಚ್ಛೇದನ.

ತುಂಗಾತೀರದಲ್ಲಿ ಶಿವಭಕ್ತನೂ, ವೇದಶಾಸ್ತ್ರಸಂಪನ್ನನೂ ಆದ ನಾರಾಯಣಭಟ್ಟನೆಂಬವನೊಬ್ಬ ಧರ್ಮಿಷ್ಠ ಬ್ರಾಹ್ಮಣನು ಇದ್ದನು. ಅವನು ಬಹಳ ಬಡವನಿದ್ದನು ಕುಟುಂಬವು ದೊಡ್ಡದಿದ್ದದರಿಂದ ಅವನು ಎಷ್ಟು ದುಡಿದರೂ ಕುಟುಂಬದ ಹೊಟ್ಟೆಯು ತುಂಬುತ್ತಿದ್ದಿಲ್ಲ. ಹೀಗಿರಲು, ಬ್ರಾಹ್ಮಣನ ಕಷ್ಟವು ಹೆಚ್ಚಾಯಿತು. ಬರಗಾಲದಲ್ಲಿ ಅಧಿಕಮಾಸಬಂದಂತೆ ಇಂಥ ವಿಪತ್ಕಾಲದಲ್ಲಿಯೇ ನಾರಾಯಣಭಟ್ಟನ ಮಕ್ಕಳ ಲಗ್ನಗಳು ಸಮೀಪಿಸಿದವು. ಅವನಿಗೆ ಸ್ವಾಸ್ತಿವೃತ್ತಿಗಳೇನೂ ಇಲ್ಲದ್ದರಿಂದ ಸಾಹುಕಾರರೂ ಸಾಲವನ್ನು ಕೊಡಲೊಲ್ಲರು. ಆಗ ನಾರಾಯಣಭಟ್ಟನು ಚಿಂತಾಕ್ರಾಂತನಾಗಿ ಈ ಕಷ್ಟವನ್ನು ತಾಳಲಾರದೆ, ಸಂಸಾರದ ಆಶೆಯನ್ನು ತೊರೆದು ಪಂಢರಪುರಕ್ಕೆ ಹೋಗಿ, ತನ್ನ ಬಡತನವು ಹಿಂಗದಿದ್ದರೆ ಪ್ರಾಣತ್ಯಾಗವನ್ನೇ ಮಾಡುತ್ತೇನೆಂದು ನಿರ್ಧಾರವನ್ನು ಮಾಡಿ, ಪಾಂಡುರಂಗನ ಸೇವೆಯನ್ನು ಮಾಡತೊಡಗಿದನು. ಅವನು ದಿನಾಲು ಪ್ರಾತಃಕಾಲದಲ್ಲಿ ಪ್ರಾತರ್ವಿಧಿಯನ್ನೂ, ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನೂ ನೆರವೇರಿಸಿ, ಮಧ್ಯಾಹ್ನದವರೆಗೆ ವಿಠ್ಠಲನಾಮದ ಜಪವನ್ನು ಮಾಡುತ್ತ ಕುಳಿತುಕೊಳ್ಳುತ್ತಿದ್ದನು. ಅವನು ಮಧುಕರಿಯನ್ನು ಬೇಡಿ ತನ್ನ ಉದರನಿರ್ವಾಹವನ್ನು ಸಾಗಿಸುತ್ತಿದ್ದನು. ಭೋಜನಾನಂತರದಲ್ಲಿ ಕೂಡ ಅವನು ಮತ್ತೆ ಜಪಾಸಕ್ತನಾಗುತ್ತಿದ್ದನು. ಈ ಪ್ರಕಾರ ನಾರಾಯಣಭಟ್ಟನು ಒಮ್ಮನಸಿನಿಂದ ಒಂದು ವರುಷದವರೆಗೆ ಕಠಿಣವಾದ ತಪಸ್ಸನ್ನಾಚರಿಸಲು, ಭಕ್ತವತ್ಸಲನಾದ ಪಾಂಡುರಂಗನು ಅವನ ಭಕ್ತಿಗೆ ಮೆಚ್ಚಿ, ಒಂದು ದಿವಸ ನಾರಾಯಣಭಟ್ಟನ ಸ್ವಪ್ನದಲ್ಲಿ ಬಂದು:— ಬ್ರಾಹ್ಮಣೋತ್ತಮನೇ, ಧೈರ್ಯ ತಾಳು. ನಿನ್ನ ದಾರಿದ್ರ್ಯವು ಅಳಿದುಹೋಯಿತೆಂದು ತಿಳಿ. ಪ್ರತ್ಯಕ್ಷ ಪರಮೇಶ್ವರನೇ 'ಚಿದಂಬರ' ಎಂಬ ಹೆಸರಿನಿಂದ ಮುರಗೋಡದಲ್ಲಿ ಅವತರಿಸಿರುವನು. ನಾವಿಬ್ಬರೂ ಒಂದೇ. ನಮ್ಮಿಬ್ಬರಲ್ಲಿ ಏನೂ ಭೇದವಿಲ್ಲ. ಅಜ್ಞಾನಿಗಳು ಮಾತ್ರ ಭೇದವನ್ನು ಕಲ್ಪಿಸುತ್ತಾರೆ. ನೀನು ಮಾತ್ರ ಸ್ವಲ್ಪಾದರೂ ಸಂದೇಹಗೊಳ್ಳದೆ ಅಲ್ಲಿಗೆ ಹೋಗು; ಅಂದರೆ ನಿನ್ನ ಮನೋರಥವು ಕೈಗೂಡುವದು, ಎಂದು ಹೇಳಿದನು.

ನಾರಾಯಣಭಟ್ಟನು ಎಚ್ಚತ್ತಮೇಲೆ ಸ್ವಪ್ನದ ಸಂಗತಿಯನ್ನೆಲ್ಲ ಜ್ಞಾಪಕಕ್ಕೆ ತಂದು, ಮರುದಿವಸ ಪ್ರಾತಃಕಾಲಕ್ಕೆ ನಿತ್ಯಾಹ್ನಿಕಗಳನ್ನು ನೆರವೇರಿಸಿ, ದೇವಾಲಯಕ್ಕೆ ಹೋಗಿ, ಪಾಂಡುರಂಗನನ್ನು ಕುರಿತು:—ಹೇ ಪುಂಡಲೀಕವರದಾ, ಪಾಂಡುರಂಗನೇ, ನನ್ನ ಜಡತನವನ್ನು ದೂರಮಾಡಲಿಕ್ಕೆ ಅಸಮರ್ಥನಿರುವೆಯಾ? ಲಕ್ಷ್ಮೀಪತಿಯಿಂದಾಗುವ ಕಾರ್ಯವು ಮನುಷ್ಯನಿಂದ ಹ್ಯಾಗೆ ಕೈಗೂಡುವದು? ಆದ್ದರಿಂದ ಸುಮ್ಮನೆ ನನ್ನನ್ನು ಅತ್ತಕಡೆಗೆ ಕಳುಹಬೇಡ. ನೀನೇ ಅನುಗ್ರಹಿಸು, ಎಂದು ಬೇಡಿಕೊಂಡು, ಪಾಂಡುರಂಗನ ಆಜ್ಞೆಯನ್ನು ಲೆಕ್ಕಿಸದೆ ಮತ್ತೆ ಹಂಡಿತನದಿಂದ ಹಾಗೆಯೇ ಅನುಷ್ಠಾನವನ್ನು ಮಾಡತೊಡಗಿದನು. ಇದರಂತೆ ಮೂರು ರಾತ್ರಿಗಳು ಹೋಗಲು, ಪಾಂಡುರಂಗನು ಮತ್ತೆ ಬ್ರಾಹ್ಮಣನ ಸ್ವಪ್ನದಲ್ಲಿ ಬಂದು: ಭೂಸುರನೇ, ಹಂಡಿತನವನ್ನು ಬಿಡು. ದೇವರನ್ನು ಪೀಡಿಸಬಾರದು. ಕಂಡೆಯಾ! ಅದರಿಂದ ಹಾನಿಯುಂಟು. ನನ್ನ ಮಾತಿನ ಮೇಲೆ ವಿಶ್ವಾಸವಿಟ್ಟು, ನೀನು ಮುರಗೋಡಕ್ಕೆ ಹೋಗು, ಎಂದು ಹೇಳಿದನು. ಇದರಂತೆ ಅದೇ ರಾತ್ರಿಯಲ್ಲಿ ವಿಠ್ಠಲನು ತನ್ನ ಪೂಜಾರಿಯ ಸ್ವಪ್ನದಲ್ಲಿ ಬಂದು:—ದಿನಾಲು ಈ ದೇವಾಲಯದಲ್ಲಿ ತಪಸ್ಸನ್ನಾಚರಿಸುವ ಬ್ರಾಹ್ಮಣನನ್ನು ನಾಳಿನ ದಿವಸ ದೇವಾಲಯದಲ್ಲಿ ಬರಗೊಡದೆ ಬಲುಮೆಯಿಂದ ಹೊರಗೆ ಹಾಕಬೇಕು, ಎಂದು ಹೇಳಿದನು. ಮರುದಿವಸ ಮುಂಜಾವಿನಲ್ಲಿ ನಾರಾಯಣಭಟ್ಟನು ಎಂದಿನಂತೆ ದೇಗುಲಕ್ಕೆ ಬರಲು, ಪೂಜಾರಿಗಳು ಅವನನ್ನು ಒಳಗೆ ಬರಗೊಡಲಿಲ್ಲ ಆಗ ನಾರಾಯಣಭಟ್ಟನು ಹೀಗೆ ಯಾಕೆ? ಎಂದು ಕೇಳಲು, ಪೂಜಾರಿಗಳು:—ವಿಠ್ಠಲನ ಆಜ್ಞೆಯೇ ಹೀಗಾಗಿರುವದು, ಎಂದರು. ಆಗ ಬ್ರಾಹ್ಮಣನು ಹೆದರಿ, ಅನುಷ್ಠಾನವನ್ನು ಪೂರ್ಣಮಾಡಿ, ಮುರಗೋಡಕ್ಕೆ ಹೊರಟನು.

ನಾರಾಯಣಭಟ್ಟನು ಮಾರ್ಗಕ್ರಮಣ ಮಾಡುತ್ತ ಮಾಡುತ್ತ ಕೆಲವು ದಿವಸಗಳ ತರುವಾಯ ಮುರಗೋಡಕ್ಕೆ ಬಂದು, ದೀಕ್ಷಿತರನ್ನು ನಮಸ್ಕರಿಸಿ, ಬದ್ಧಾಂಜಲಿಯಾಗಿ ಮುಂಭಾಗದಲ್ಲಿ ಸುಮ್ಮನೆ ನಿಂತುಕೊಂಡನು. ಆಗ ದೀಕ್ಷಿತರು:—ದ್ವಿಜವರ್ಯನೇ, ನೀನು ಪಾಂಡುರಂಗನ ಹತ್ತರ ಹೋಗಿದ್ದಿಯಷ್ಟೇ? ಆತ ನನ್ನು ಬಿಟ್ಟು ಇಲ್ಲಿ ಮನುಷ್ಯನ ಬಳಿಗೆ ಏತಕ್ಕೆ ಬಂದಿರುವೆ? ದೇವರಿಂದಾಗುವ ಕಾರ್ಯವು ಮನುಷ್ಯನಿಂದ ಹೇಗಾಗುವದು? ಎಂದು ನುಡಿಯಲು, ಬ್ರಾಹ್ಮಣನು ಮನದೊಳಗೆ ಲಜ್ಜಿತನಾಗಿ, ಚಿದಂಬರನ ಚರಣಗಳ ಮೇಲೆ ಉರುಳಾಡಹತ್ತಿದನು. ಅವನ ಮೈಯೆಲ್ಲ ಬೆವರಿತು. ಕುತ್ತಿಗೆಯ ಶಿರಗಳು ಬಿಗಿದವು. ಬಾಯಿಂದ ಮಾತು

ಗಳೇ ಹೊರಡಲೊಲ್ಲವು. ಆಗ ಅವನು ಹಾಗೆಯೇ ಗಾಬರಿಯಿಂದ ನುಡಿಗುತ್ತ:— ದೀಕ್ಷಿತವರ್ಯರನೇ, ಕ್ಷಮಿಸು, ನಾನು ಅಪರಾಧಿಯಿರುವೆನು. ಪ್ರತ್ಯಕ್ಷ ಪಾಂಡು ರಂಗನು ಹೇಳುತ್ತಿರಲು, ಮಂದಮತಿಯಾದ ನಾನು ನಿನ್ನ ಮಹಿಮೆಯನ್ನು ತಿಳಿಯದೆ, ವ್ಯರ್ಥವಾಗಿ ನಿನ್ನನ್ನು ಜರೆದೆನು. ನಾನು ಬಹು ಪಾಪಿಯು. ಇರಲಿ. ಆಗಿ ಹೋದ ಮಾತಿಗೆ ಉಪಾಯವಿಲ್ಲ. ಇನ್ನು ಈ ದೀನನ ಮೇಲೆ ದಯೆಮಾಡಿ, ನನ್ನನ್ನು ಉದ್ಧರಿಸಬೇಕು, ಎಂದು ಬೇಡಿಕೊಂಡನು. ಆಗ ದಯಾನಿಧಿಗಳಾದ ಚಿದಂಬರ ದೀಕ್ಷಿತರಿಗೆ ದಯೆಯುಂಟಾಗಿ, ಅವರು ನಾರಾಯಣಭಟ್ಟನ ಕ್ಷೇಮ ವಾರ್ತೆಯನ್ನು ಕೇಳಿದರು. ಆಗ ನಾರಾಯಣಭಟ್ಟನು ತನ್ನ ಎಲ್ಲ ವೃತ್ತಾಂತ ವನ್ನು ಸಾದ್ಯಂತವಾಗಿ ಅರುಹಲು, ದೀಕ್ಷಿತರು ಹಾಸ್ಯಮಾಡಿ:—ಬಡವನಿಂದ ಬಡವನ ಬಡತನವು ಹೇಗೆ ದೂರಾಗುವದು? ಬಡವನ ಬಯಕೆಗಳು ನೀರ ಮೇಲಿನ ಗುಳ್ಳೆಗಳಂತೆ ಕ್ಷಣ ಹೊತ್ತಿನಲ್ಲಿ ನಾಶಹೊಂದತಕ್ಕಂಥವು. ನಾನಾ ದರೂ ಬಡವನಿರುವೆನು. ನನ್ನಿಂದ ನಿನ್ನ ದಾರಿದ್ರ್ಯವು ದೂರಾಗುವ ಬಗೆ ಹ್ಯಾಗೆ? ನಿನಗೆ ಒಂದು ಉಪಾಯವನ್ನು ಹೇಳುತ್ತೇನೆ. ಅದರಂತೆ ನೀನು ವರ್ತಿಸಿದರೆ ನಿನ್ನ ದಾರಿದ್ರ್ಯವು ಅಳಿದು ಹೋಗುವದಲ್ಲದೆ ನಿನಗೆ ಕಲ್ಯಾಣವಾಗುವದು. ನೀನು ಈ ದಿನ ಇಲ್ಲಿಯೇ ವಾಸಿಸು. ಶ್ರೀರಂಗಪಟ್ಟಣದಲ್ಲಿ ಪೂರ್ಣಯ್ಯನೆಂಬ ದಾನಶೌಂಡನಾದ ದಿವಾಣನು ಇರುವನು. ಅವನ ಬಳಿಗೆ ನೀನು ಹೋಗಿ ಐದು ಸಾವಿರ ರೂಪಾಯಿಗಳನ್ನು ಯಾಚಿಸಬೇಕು. ಅಂದರೆ ನಿನಗೆ ಅಷ್ಟು ಹಣವು ಪೂರ್ಣಯ್ಯನಿಂದ ನಿಶ್ಚಯವಾಗಿ ದೊರೆಯುವದು. ನನ್ನ ಮಾತಿನಲ್ಲಿ ವಿಶ್ವಾಸವಿರಲಿ. ಸುಮ್ಮ ಸುಮ್ಮನೆ ಅಲ್ಲದ ವಿಚಾರಗಳನ್ನು ಮನಸ್ಸಿನಲ್ಲಿ ತಂದು ಸಂಶಯಗ್ರಸ್ತನಾಗಬೇಡ, ಎಂದು ಹೇಳಿದರು.

ಮರುದಿವಸ ಬೆಳಿಗ್ಗೆ ನಾರಾಯಣ ಭಟ್ಟನು ಪ್ರಾತರ್ವಿಧಿಗಳನ್ನೆಲ್ಲ ತೀರಿಸಿ, ದೀಕ್ಷಿತರ ಅಪ್ಪಣೆಯ ಮೇರೆಗೆ ಶ್ರೀರಂಗಪಟ್ಟಣಕ್ಕೆ ಹೋಗಬೇಕೆಂದು ಹೊರ ಟನು. ಮಾರ್ಗದಲ್ಲಿ ಶುಭಶಕುನಗಳು ಆಗತೊಡಗಿದವು. ಸ್ವಲ್ಪ ದಾರಿಯು ಕ್ರಮಿಸಿ ಹೋದಬಳಿಕ ನಾರಾಯಣಭಟ್ಟನಿಗೆ ತನ್ನ ಆಪ್ತನೊಬ್ಬನು ಭೆಟ್ಟಿಯಾದನು. ಅವನು:— ನಾರಾಯಣ ಭಟ್ಟರೇ, ಇಂದಿಗೆ ನಾಲ್ಕಾರು ದಿವಸಗಳಿಂದ ಒಂದೇ ಸವನೆ ನಿಮ್ಮನ್ನು [illegible] ಭೆಟ್ಟಿಯಾಗುತ್ತ. ಒಳ್ಳೇದಾಯಿತು. ನೀವು ಕಳುಹಿದ ಐದು ಸಾವಿರ ರೂಪಾಯಿಗಳು ಮುಟ್ಟಿದವು. ಸಾಲವನ್ನೆಲ್ಲ ತೀರಿಸಿರುವೆನು. ಮಕ್ಕಳ ಮದುವೆಗಳೂ ನಿಶ್ಚಯವಾಗಿವೆ. ಆದ

ರಿಂದ ನೀವು ತೀವ್ರವಾಗಿ ಗ್ರಾಮಕ್ಕೆ ಬರಬೇಕೆಂದು ನುಡಿದನು. ಅದನ್ನು ಕೇಳಿ ನಾರಾಯಣ ಭಟ್ಟನು ದಿಗಿಲುಬಿದ್ದು:—ನಾನು ಒಂದು ಕಾಸನ್ನು ಸಹ ಕಳಿಸಿರುವದಿಲ್ಲ; ಹೀಗಿದ್ದು ನೀವು ಐದುಸಾವಿರ ರೂಪಾಯಿಗಳು ಮುಟ್ಟಿದವು, ಎಂದು ನುಡಿಯುತ್ತೀರಲ್ಲ! ಇದು ಹೇಗೆ? ಇದೆಲ್ಲ ಶ್ರೀ ಚಿದಂಬರ ದೀಕ್ಷಿತರ ಲೀಲೆಯೇ ಸರಿ! ಬ್ರಹ್ಮಾದಿ ದೇವತೆಗಳಿಗೆ ತಿಳಿಯಲಶಕ್ಯವಾದ ಆತನ ಅನಂತಲೀಲೆಗಳು ನಮ್ಮಂಥ ಪಾಮರರಿಗೆ ಹೇಗೆ ತಿಳಿಯುವವು? ನನ್ನ ಮೇಲೆ ಗುರುಗಳು ಗುಪ್ತಾನುಗ್ರಹವನ್ನು ಮಾಡಿದರು. ಒಳ್ಳೇದು, ನೀವು ಗ್ರಾಮಕ್ಕೆ ತೆರಳಿರಿ; ನಾನು ದೀಕ್ಷಿತರ ಅಪ್ಪಣೆಯ ಮೇರೆಗೆ ಶ್ರೀರಂಗಪಟ್ಟಣಕ್ಕೆ ಹೋಗಿ, ತೀವ್ರವೇ ಗ್ರಾಮಕ್ಕೆ ಬರುವೆನು, ಎಂದು ಹೇಳಿ ಅವನು ಶ್ರೀರಂಗಪಟ್ಟಣದ ಕಡೆಗೆ ಸಾಗಿದನು

ಇತ್ತ ಚಿದಂಬರ ದೀಕ್ಷಿತರು ನಾರಾಯಣಭಟ್ಟನಿಗೆ ದಾರಿದ್ರ್ಯ-ವಿಚ್ಛೇದನದ ಉಪಾಯವನ್ನು ಹೇಳಿದ ಬಳಿಕ ಪೂರ್ಣಯ್ಯನ ಸ್ವಪ್ನದಲ್ಲಿ ಹೋಗಿ:—ನಿನಗೆ ಸ್ವಲ್ಪ ದಿವಸಗಳಲ್ಲಿ ಒಂದು ಭಯಂಕರವಾದ ಸಂಕಟವು ಒದಗತಕ್ಕದ್ದಿರುತ್ತದೆ. ಅದರ ಪರಿಹಾರಕ್ಕೆ ಒಂದೇ ಉಪಾಯವಿರುವದು. ಅದನ್ನು ಮಾಡಿದರೆ ಮಾತ್ರ ನಿನಗೆ ಕಲ್ಯಾಣವಾಗುವದು. ಆ ಉಪಾಯವಾವುದೆಂದರೆ:—ನಾಳಿನ ದಿವಸ ಪ್ರಾತಃಕಾಲಕ್ಕೆ ಪ್ರಹರ ಹೊತ್ತಿಗೆ ತುಂಗಾತೀರದ ನಾರಾಯಣಭಟ್ಟನೆಂಬ ಒಬ್ಬ ಬ್ರಾಹ್ಮಣನು ನಿನ್ನಲ್ಲಿಗೆ ಬರುವನು. ಅವನು ಚಿದಂಬರ ದೀಕ್ಷಿತರ ಕಡೆಯಿಂದ ಬಂದಿರುತ್ತೇನೆಂದು ಹೇಳುತ್ತಾನೆ ಅವನು ಬಂದಕೂಡಲೆ ನೀನು ಅವನನ್ನು ನಮಸ್ಕರಿಸಿ, ಅವನಿಗೆ ಐದುಸಾವಿರ ರೂಪಾಯಿಗಳನ್ನು ಕೊಡಬೇಕು. ಅಂದರೆ ನಿನ್ನ ಸಂಕಟವು ದೂರಾಗುವದು. ನನ್ನ ಮಾತು ಮೀರಿದರೆ ನಿನಗೆ ಕಲ್ಯಾಣವಾಗಲಿಕ್ಕಿಲ್ಲ, ಎಂದು ಹೇಳಿದರು. ಮರುದಿವಸ ಪ್ರಾತಃಕಾಲಕ್ಕೆ ವೇಳೆಗೆ ಸರಿಯಾಗಿ ನಾರಾಯಣಭಟ್ಟನು ಪೂರ್ಣಯ್ಯನ ಕಡೆಗೆ ಹೋದದ್ದರಿಂದ ಅವನು ಆಶ್ಚರ್ಯಪಟ್ಟು, ಬ್ರಾಹ್ಮಣನನ್ನು ಸತ್ಕರಿಸಿ, ಸುಗ್ರಾಸ ಭೋಜನದಿಂದ ಅವನನ್ನು ಸಮಾಧಾನಗೊಳಿಸಿ, ಅವನಿಗೆ ಐದುಸಾವಿರ ರೂಪಾಯಿಗಳನ್ನೂ, ಅವುಗಳ ರಕ್ಷಣಾರ್ಥವಾಗಿ ಸೇವಕರನ್ನೂ ಸಂಗಡ ಕೊಟ್ಟು ಕಳುಹಿದನು. ಆಗ ನಾರಾಯಣಭಟ್ಟನು ಹರ್ಷಿತನಾಗಿ, ಚಿದಂಬರ ದೀಕ್ಷಿತರ ಮಹಿಮೆಗೆ ಮಹದಾಶ್ಚರ್ಯಪಟ್ಟು ಹಾಗೆಯೇ ಮುರಗೋಡಿಗೆ ಬಂದನು; ಮತ್ತು ಚಿದಂಬರ ದೀಕ್ಷಿತರನ್ನು ನಮಸ್ಕರಿಸಿ, ಅವರಿಗೆ ಆದ ವೃತ್ತಾಂತವನ್ನೆಲ್ಲ ಹೇಳಿದನು. ಆಗ ದೀಕ್ಷಿತರು:—ನಿನ್ನ ಭಾಗ್ಯವೇ ದೊಡ್ಡದು. ಅದ್ದರಿಂದಲೇ ನಿನಗೆ ನಿರಾಯಾಸವಾಗಿ ದ್ರವ್ಯಲಾಭ

ವಾಯಿತು. ಇದರಲ್ಲಿ ನಾನು ಮಾಡಿದ್ದೇನು? ಜನರು ವ್ಯರ್ಥವಾಗಿ ನನ್ನನ್ನು ಭಜಿಸುವರು. "ವಿಶ್ವಾಸಃ ಫಲದಾಯಕಃ" ಅವರ ನಂಬಿಗೆಯೇ ಅವರಿಗೆ ಫಲ ಕೊಡುವದು! ಎಂದು ಹೇಳಿ, ಆ ಬ್ರಾಹ್ಮಣನಿಗೆ ಮನೆಗೆ ಹೋಗಲಿಕ್ಕೆ ಅಪ್ಪಣೆ ಯನ್ನಿತ್ತರು. ಆಗ ನಾರಾಯಣಭಟ್ಟನು ಅಲ್ಲಿಂದ ಹೊರಟು ಪಂಢರಪುರಕ್ಕೆ ಹೋಗಿ ಪಾಂಡುರಂಗನನ್ನು ಪೂಜಿಸಿ, ವಿಠ್ಠಲನಿಗೆ ಎಲ್ಲ ಸಂಗತಿಯನ್ನು ತಿಳಿಸಿ, ಅಲ್ಲಿಂದ ಸ್ವಗ್ರಾಮಕ್ಕೆ ಹೊರಟುಹೋದನು.

---

## ೩ನೆಯ ಪ್ರಕರಣ.

## ವಿಷ್ಣುರೂಪದರ್ಶನವೂ, ಅಭಯ ವರದಾನವೂ.

ಮುರಗೋಡದಲ್ಲಿ ಚಿದಂಬರ ದೀಕ್ಷಿತರು ತಮ್ಮ ಅಗಾಧ ಮಹಿಮೆ ಗಳನ್ನು ಪ್ರಕಟ ಮಾಡುತ್ತಿರಲು, ಒಂದುದಿವಸ ಓರ್ವ ಆಚಾರ್ಯರು ದೀಕ್ಷಿ ತರ ದರ್ಶನಕ್ಕೆ ಬಂದು, ಸ್ವಮತಾಭಿಮಾನವು ಜಾಗ್ರತವಾದ್ದರಿಂದ ಬಹಳೇ ಅಧ್ಯತೆಯಿಂದ ದೀಕ್ಷಿತರ ಮುಂಭಾಗದಲ್ಲಿ ಕುಳಿತುಕೊಂಡರು. ಆಗ ದೀಕ್ಷಿ ತರು ಆಚಾರ್ಯರ ಅಂತರಂಗವನ್ನು ತಿಳಕೊಂಡು:—ಆಚಾರ್ಯರೇ, ಎಲ್ಲವೂ ಕ್ಷೇಮವಷ್ಟೇ? ನಾಳೆ ಹರಿವಾಸರವಿರುವದು. ಆದ್ದರಿಂದ ಪಾರಣೆಯನ್ನು ಮಹಾಪಙ್ಕ್ತಿಯಲ್ಲಿ ಮಾಡುವಿರೋ, ಅಥವಾ ಬೇರೆ ಕಡೆಗೆ ಅಡಿಗೆಯನ್ನು ಮಾಡಿ ಕೊಳ್ಳುವಿರೋ? ನಿರ್ದಾಕ್ಷಿಣ್ಯದಿಂದ ಹೇಳಿರಿ. ಅಂದರೆ ಅದರಂತೆ ವ್ಯವಸ್ಥೆ ಯನ್ನು ಮಾಡಿಸಲಿಕ್ಕೆ ಅನುಕೂಲವಾಗುವದು, ಎಂದು ನುಡಿದರು. ಅದಕ್ಕೆ ಆಚಾರ್ಯರು:—ನಾವು ವೈಷ್ಣವರು; ನಮಗೆ ಶೈವರಲ್ಲಿ ಭೋಜನವು ನಿಷೇಧ ವಾಗಿದೆ. ಆದ್ದರಿಂದ ನಾವು ಬೇರೆ ಕಡೆಯಲ್ಲಿಯೇ ಅಡಿಗೆಯನ್ನು ಮಾಡಿಕೊಳ್ಳು ತ್ತೇವೆ, ಎಂದು ಹೇಳಿದರು. ಆಗ ದೀಕ್ಷಿತರು: 'ಹಾಗೇ ಆಗಲಿ' ಎಂದು ನುಡಿದು, ಆಚಾರ್ಯರಿಗೆ ಬೇಕಾದ ಸಾಮಾನು ಕೊಡಿಸಿದರು. ಆಗ ಆಚಾರ್ಯರು ಆ ಸಾಹಿತ್ಯಗಳನ್ನು ತಕ್ಕೊಂಡು ತಾವು ಇಳಕೊಂಡ ಸ್ಥಳಕ್ಕೆ ಹೋದರು.

ಮರುದಿನ ಬೆಳಿಗ್ಗೆ ಆಚಾರ್ಯರು ಸ್ನಾನಮಾಡಿ, ಸಂಧ್ಯಾವಂದನೆಯನ್ನು ತೀರಿಸಿ ಆ ಮೇಲೆ ಪಾಕವನ್ನಾರಂಭಿಸಿದರು. ಅದು ಮುಗಿದಕೂಡಲೆ ದೇವತಾ ರ್ಚನವನ್ನು ಮಾಡಬೇಕೆಂದು ದೇವರ ಪೆಟ್ಟಿಗೆಯನ್ನು ಬಿಚ್ಚಲು, ಅದರಲ್ಲಿ ಒಂದೂ

ಶಾಲಿಗ್ರಾಮವಿದ್ದಿಲ್ಲ; ಅದನ್ನು ನೋಡಿ ಆಚಾರ್ಯರು ಬೆರಗಾದರು. ಬಳಿಕ ಅವರು ಈ ಮಾತನ್ನು ಯಾರಿಗೂ ಹೇಳದೆ, ಕಂಡಕಡೆಗೆಲ್ಲ ಶಾಲಿಗ್ರಾಮಗಳನ್ನು ಶೋಧಿಸಹತ್ತಿದರು. ಎಷ್ಟು ಶೋಧಿಸಿದರೂ ಅವು ದೊರೆಯಲಿಲ್ಲ; ಆದರೆ ಅಷ್ಟರಲ್ಲಿ ಆಚಾರ್ಯರ ಸುದೈವದಿಂದ ಅವರಿಗೆ ಸದ್ಬುದ್ಧಿಹುಟ್ಟಿ ಅವರು . ಈ ಸಂಗತಿಯನ್ನು ದೀಕ್ಷಿತರಿಗೆ ತಿಳಿಸಬೇಕೆಂದು ಅವರಿದ್ದೆಡೆಗೆ ಬಂದು, ಅವರನ್ನು ನಮಸ್ಕರಿಸಿ:—ದೀಕ್ಷಿತವರ್ಯರೇ, ನಮಗೆ ಸಾಂಪ್ರತದಲ್ಲಿ ಒಂದು ವಿಘ್ನವು ಒದಗಿ, ಭೋಜನಕ್ಕೆ ಪ್ರತಿಬಂಧವಾಗಿರುವದು. ನೀವು ಅದನ್ನಷ್ಟು ಹೋಗ ಲಾಡಿಸಿ, ನಮಗೆ ಭೋಜನಕ್ಕೆ ಮಾರ್ಗ ಮಾಡಿಕೊಡಬೇಕು, ಎಂದು ಬೇಡಿ ಕೊಂಡರು. ಆಗ ದೀಕ್ಷಿತರು:—ಆಚಾರ್ಯರೇ, ಇದೇನು? ತಾವು ಪರಮ ಪೂಜ್ಯರು. ತಮ್ಮಂಥ ಮಹನ್ ವಿಷ್ಣುಭಕ್ತರಿಗೆ ಸಂಕಟವು ಹೇಗೆ ಪ್ರಾಪ್ತ ವಾದೀತು? ಇರಲಿ. ತಮಗೆ ಉಂಟಾದ ಸಂಕಟವಾದರೂ ಯಾವದು? ಎಂದು ನುಡಿದರು. ಅದಕ್ಕೆ ಆಚಾರ್ಯರು:—ನಮ್ಮ ಶ್ರೀಶನು ನಮ್ಮನ್ನು ತೊರೆದು ಎಲ್ಲಿಯೋ ಹೋಗಿರುವನು. ಪ್ರತಿನಿತ್ಯ ಯಾವಾತನ ಪೂಜೆಯು ಹೊರತು ನಾವು ಅನ್ನ ಸ್ಪರ್ಶಮಾಡುವದಿಲ್ಲವೋ, ಆ ಶ್ರೀಶನೇ ಹೋದ ಮೇಲೆ ನಮಗೆ ಭೋಜನ ವೆಲ್ಲಿಯದು? ಎಂದು ನುಡಿದರು. ಅದಕ್ಕೆ ದೀಕ್ಷಿತರು:—ಆಚಾರ್ಯರೇ, ನಿಮ್ಮ ಶ್ರೀಶನು ಹೀಗೆ ಒಮ್ಮಿಂದೊಮ್ಮೆ ಅದೃಶ್ಯನಾದ ಕಾರಣವೇನಿರಬಹುದು? ಭಕ್ತರನ್ನು ಬಿಟ್ಟು ಶ್ರೀ ರಮಾಧವನು ಎಲ್ಲಿಗಾದರೂ ಹೋಗುವದುಂಟೇ? ಲಕ್ಷ್ಮೀಪತಿಯು ಭಕ್ತವಂಚಕನಲ್ಲ; ಅವನು ಭಕ್ತರಕ್ಷಕನೇ ಸರಿ! ಧೈರ್ಯ ತಾಳಿರಿ, ಹೆದರಬೇಡಿರಿ. ಬೇರೆ ಉತ್ತಮ ಶಾಲಿಗ್ರಾಮಗಳನ್ನು ಬೇಕಾದಷ್ಟು ತರಿಸಿ ಕೊಡುವೆನು; ಅವುಗಳನ್ನು ಪೂಜಿಸಿ, ಪಾರಣೆಯನ್ನು ತೀರಿಸಿರಿ, ಎಂದು ಹೇಳಲು, ಆಚಾರ್ಯರು:—ಅದನ್ನು ನಾವು ಅರಿಯೆವು! ಉಪನಯನವಾದಂದಿ ನಿಂದ ಇದುವರೆಗೂ ಪೂಜಿಸುತ್ತ ಬಂದ ಶಾಲಿಗ್ರಾಮವು ದೊರೆತರೇ ನಮ್ಮ ಭೋಜನವು; ಇಲ್ಲವಿದ್ದರೆ ಪ್ರಾಣತ್ಯಾಗವೇ ಸರಿ! ಎಂದು ಹೇಳಿದರು. ಆಗ ದೀಕ್ಷಿತರು ಆಚಾರ್ಯರ ಏಕನಿಷ್ಠೆಯ ವಿಷ್ಣುಭಕ್ತಿಯನ್ನು ನೋಡಿ, ಸಂತೋಷ ಬಟ್ಟು:-ಆಚಾರ್ಯರೇ, ನೀವು ನಮ್ಮ ಪಾಕಶಾಲೆಗೆ ಹೋಗಿ ಅಲ್ಲಿ ಎಲ್ಯಾದರೂ ನಿಮ್ಮ ಶ್ರೀಶನಿದ್ದರೆ ಶೋಧಿಸಿಕೊಳ್ಳಿರಿ, ಎಂದು ಹೇಳಲು, ಆಚಾರ್ಯರು ಪಾಕ ಶಾಲೆಗೆ ಹೋಗಿ, ಅಲ್ಲಿ ತಮ್ಮ ಶಾಲಿಗ್ರಾಮವನ್ನು ಶೋಧಿಸಹತ್ತಿದರು. ಆಗ ಅವು ದೀಕ್ಷಿತರ ದೇವಸಾಟದಲ್ಲಿ ಕಂಡವು. ಆಗ ಆಚಾರ್ಯರು ಆನಂತ

ಗೊಂಡು, ಹಾಗೆಯೇ ದೀಕ್ಷಿತರ ಒಳಿಗೆ ಬಂದು, ಆ ಸುದ್ದಿಯನ್ನು ಅವರಿಗೆ ಹೇಳಿದರು. ಆಗ ದೀಕ್ಷಿತರು:--ಆಚಾರ್ಯರೇ, ನೋಡಿರಿ. ನಿಮ್ಮ ಶ್ರೀಶನೇ ನಮ್ಮಲ್ಲಿ ಭೋಜನಕ್ಕೆ ಬಂದಿರುವನು, ಎಂದರು. ಆಗ ಆಚಾರ್ಯರು:-ಧಿಕ್ಕಾರವಿರಲಿ ನಮ್ಮ ಶ್ರೀಶ್ರೇಷ್ಠತ್ವಕ್ಕೆ! ವ್ಯರ್ಥವಾಗಿ ನಾವು ಮಾಯಾಪಾಶದಲ್ಲಿ ಸಿಕ್ಕು ನಿನ್ನ ಮಹಿಮೆಯನ್ನು ತಿಳಿಯದಾದೆವು! ವೃಥಾಭಿಮಾನದಿಂದ ಮಹಾಪ್ರಸಾದವನ್ನು ಧಿಕ್ಕರಿಸಿದೆವು! ಸ್ವತಃ ಲಕ್ಷ್ಮೀಕಾಂತನೇ ನಿಮ್ಮಲ್ಲಿಗೆ ಒಂದಬಳಿಕ ಯುಕಃಶ್ಚಿತರಾದ ನಮ್ಮಂಥವರ ಪಾಡೇನು? ಆದ್ದರಿಂದ ಮಹಾಪಙ್ತಿಯಲ್ಲಿಯೇ ಪ್ರಸಾದ ಗ್ರಹಣಕ್ಕೆ ನನಗೆ ಅಪ್ಪಣೆಯಾಗಬೇಕು; ಎಂದು ಬೇಡಿಕೊಂಡರು. ಅದಕ್ಕೆ ದೀಕ್ಷಿತರು:—ತಮ್ಮ ಇಚ್ಛೆಯಂತೆಯೇ ಆಗಲಿ! ಈಗ ಶ್ರೀಶನು ಸ್ವಸ್ಥಾನಕ್ಕೆ ಹೋಗಿರುವನು ನೀವು ತೀವ್ರವಾಗಿ ದೇವತಾರ್ಚನೆಯನ್ನು ಪೂರ್ಣಮಾಡಿ, ಇತ್ತ ಕಡೆಗೇ ಭೋಜನಕ್ಕೆ ಒರ್ರಿ, ಎಂದು ಹೇಳಿದರು.

ಆ ಮೇಲೆ ಆಚಾರ್ಯರು ಮನೆಗೆ ಹೋಗಿ ಪೂರ್ವಸ್ಥಿತಿಯಲ್ಲಿರುವ ಶ್ರೀಶನನ್ನು ನೋಡಿ, ಸಂತೋಷಪಟ್ಟು ಕೃತಕರ್ಮಕ್ಕೆ ಅನುತಾಪಗೊಂಡು, ದೇವತಾರ್ಚನವನ್ನು ತೀರಿಸಿ, ಭೋಜನಕ್ಕಾಗಿ ದೀಕ್ಷಿತರ ಮನೆಗೆ ಬಂದರು. ಅಷ್ಟರಲ್ಲಿ ದೀಕ್ಷಿತರು ಆಚಾರ್ಯರ ದ್ವೈತಾಂಧಃಕಾರವನ್ನು ಓಡಿಸುವದಕ್ಕಾಗಿಯೂ, ಹರಿಹರರಲ್ಲಿ ಭೇದವಿಲ್ಲೆಂದು ತೋರಿಸುವದಕ್ಕಾಗಿಯೂ ವಿಷ್ಣುರೂಪವನ್ನು ಧಾರಣಮಾಡಿ ಕುಳಿತಿದ್ದರು. ಆಚಾರ್ಯರು ಅದನ್ನು ನೋಡಿ ವಿಸ್ಮಿತರಾಗಿ, ವಿಷ್ಣುರೂಪಿಗಳಾದ ದೀಕ್ಷಿತರಿಗೆ ಅನನ್ಯಭಾವದಿಂದ ಸಾಷ್ಟಾಂಗವೆರಗಿ:-ಪೀತಾಂಬರಧಾರಿಯಾದ ಪದ್ಮನಾಭನೇ, ಕೌಸ್ತುಭಧಾರಿಯಾದ ಕೃಷ್ಣನೇ, ಶ್ರೀವತ್ಸಲಾಂಛನವುಳ್ಳ ಶ್ರೀಧರನೇ, ಸರ್ವಾಲಂಕಾರಗಳಿಂದ ಶೋಭಿಸುವ, ಹರಿ-ಹರರಲ್ಲಿ ಅಭೇದವನ್ನು ತೋರುವ ಈ ನಿನ್ನ ರಮಣೀಯವಾದ ವಿಷ್ಣುರೂಪವನ್ನು ಕಣ್ತುಂಬಾ ನೋಡಿದೆನು. ನೀನು ಸಾಕ್ಷಾತ್ ಪರಮೇಶ್ವರನಿದ್ದು, ವಿಷ್ಣುರೂಪವನ್ನು ಪ್ರಕಟಮಾಡಿದ್ದರಿಂದ, ಇದುವರೆಗೆ ನನ್ನಲ್ಲಿ ನೆಲೆಗೊಂಡ ಹರಿ-ಹರಭೇದಬುದ್ಧಿಯು ಅಡಗಿತು ಮೃಗಜಲವನ್ನೀಕ್ಷಿಸಿ ಮೃಗಗಳು ಮೋಹಗೊಳ್ಳುವಂತೆ, ನಾನು ಮಾಯಾ ಮೋಹಕ್ಕೆ ಒಳಗಾಗಿ ಉರಭಿಮಾನದಿಂದ ಹರಿ-ಹರರಲ್ಲಿ ಭೇದವನ್ನು ಭಾವಿಸಿದೆನು. ಹರಿ-ಹರ ಎಂಬೆರಡಕ್ಷರಗಳಲ್ಲಿ ಅಂತ್ಯಸ್ವರಗಳಾದ ಇಕಾರ ಅಕಾರಗಳಲ್ಲಿ ಮಾತ್ರ ಭೇದವಿರುತ್ತದೆಯೋ ಹೊರತು, ಆ ಅಕ್ಷರಗಳ ಸಾರ್ಥಕಗಳಾದ ರೂಪಗಳಲ್ಲಿ ಸ್ವಲ್ಪಾದರೂ ಭೇದವಿಲ್ಲೆಂಬುದು ನನಗೆ ಮನವರಿಕೆ

ಯಾಯಿತು, ಎಂದು ಹಲವು ಪ್ರಕಾರದಿಂದ ಹೊಗಳಿದರು. ಆಗ ದೀಕ್ಷಿತರು ವಿಷ್ಣುರೂಪವನ್ನು ಉಪಸಂಹರಿಸಿ, ಆಚಾರ್ಯರೊಡನೆ ಭೋಜನವನ್ನು ತೀರಿಸಿದರು. ಅಂದಿನಿಂದ ಆಚಾರ್ಯರು ಶೈವ ವೈಷ್ಣವರೆಂಬ ಭೇದವನ್ನು ಲಕ್ಷಿಸದೆ ದಿನಾಲು ದೀಕ್ಷಿತರಲ್ಲಿಯೇ ಭೋಜನ ಮಾಡುತ್ತಿದ್ದರು.

ಒಂದು ದಿವಸ ಆಚಾರ್ಯರು ದಿನಾಲು ದೀಕ್ಷಿತರಲ್ಲಿ ಪ್ರಸಾದಕ್ಕೆ ಆಗುವ ಅಮೃತಿಯ ಅಗಾಧರುಚಿಯನ್ನೂ, ಮಹಿಮೆಯನ್ನೂ ಅರಿತು, ಅದರಮೇಲೆ ಒಂದು ಶ್ಲೋಕವನ್ನು ರಚಿಸಿ, ಅದನ್ನು ದೀಕ್ಷಿತರಿಗೆ ತೋರಿಸಲು, ಅವರು ಸಂತೋಷಪಟ್ಟರು; ಹಾಗು ಆಚಾರ್ಯರ ಅಭಿಮಾನವು ಅಳಿದು ಹೋದದ್ದನ್ನು ನೋಡಿ, ಅವರನ್ನು ಅನುಗ್ರಹಿಸಿ ಅವರಿಗೆ ಸ್ವಗ್ರಾಮಕ್ಕೆ ಹೋಗಲಪ್ಪಣೆಯನ್ನಿತ್ತರು. ಆಗ ಆಚಾರ್ಯರು ದೀಕ್ಷಿತರನ್ನು ವಂದಿಸಿ, ಅವರ ಕೀರ್ತಿಯನ್ನೆಲ್ಲ ದೇಶಗಳಲ್ಲಿ ಪಸರಿಸುತ್ತ ತಮ್ಮ ಗ್ರಾಮಕ್ಕೆ ಹೊರಟು ಹೋದರು.

ಈ ಪ್ರಕಾರ ಮಹಾಮಹಿಮನಾದ ಚಿದಂಬರನು ಅನಂತಲೀಲೆಗಳನ್ನು ಪ್ರಕಟಿಸುತ್ತಿರಲು, ಒಂದು ದಿನ ಹಾವನೂರ ದೇಶಾಧಿಪತಿಯ ವಂಶಜನಾದ ಲಿಂಗಪ್ಪಗೌಡನೆಂಬವನು ಚಿದಂಬರ ಮಹಾಸ್ವಾಮಿಯ ಬಳಿಗೆ ಒಂದು ನಮಸ್ಕರಿಸಿ ಕುಳಿತನು. ಲಿಂಗಪ್ಪಗೌಡನು ದಾನಶೌಂಡನಾದ ಬಹದ್ದೂರ ಹನುಮಂತಗೌಡ ದೇಸಾಯಿಯ ಮೊಮ್ಮಗನು. ಆತನು ಚಿದಂಬರನನ್ನು ಮನಮುಟ್ಟಿ ಭಜಿಸುತ್ತಿದ್ದನು. ಹನುಮಂತಗೌಡನ ಕಾಲಕ್ಕೆ ಹಾವನೂರ ಸಂಸ್ಥಾನವು ಟೀಪುವಿನಿಂದ ಉಧ್ವಸ್ತವಾದ್ದರಿಂದ ಈ ಕಾಲಕ್ಕೆ ಲಿಂಗಪ್ಪಗೌಡನು ಬಡತನದಿಂದ ಬಳಲುತ್ತಿದ್ದನು. ತನ್ನಲ್ಲಿ ಭಕ್ತಿಯನ್ನಿಟ್ಟ ದೊಡ್ಡ ಮನೆತನದ ಈ ಭಕ್ತಶಿಖಾಮಣಿಯನ್ನು ನೋಡಿ, ದೀಕ್ಷಿತರ ಹೃದಯವು ಕರಗಿತು. ಅವರು ಲಿಂಗಪ್ಪಗೌಡನನ್ನು ಕುರಿತು:-"ನೀವು ಪೇಶ್ವೆಯವರ ಭೆಟ್ಟಿಗೆ ಹೋದರೆ ನಿಮ್ಮ ಕಲ್ಯಾಣವಾಗುವದು" ಎಂದು ಹೇಳಲು, ಲಿಂಗಪ್ಪಗೌಡನು ಸ್ವಾಮಿಯ ಅಪ್ಪಣೆಯಂತೆ ಪುಣೆಗೆ ಹೋದನು ಶ್ರೀ ಚಿದಂಬರ ಮಹಾಸ್ವಾಮಿಯ ಅನುಗ್ರಹಪ್ರಭಾವದಿಂದ ಪೇಶ್ವೆಯವರಿಗೂ ಲಿಂಗಪ್ಪಗೌಡನನ್ನು ಕಂಡು ಕನಿಕರಹುಟ್ಟಿ, ಹತ್ತಿಮತ್ತೂರ, ಅಗಡಿ, ನೆಗಳೂರ ಮೊದಲಾದ ಐದು ಗ್ರಾಮಗಳಲ್ಲಿ ಒಂದನ್ನು ವಂಶಪರಂಪರೆವಾಗಿ ಇನಾಮು ಹಾಕಿ ಕೊಡಬೇಕೆಂದು ಯೋಚಿಸಿ, ಇವುಗಳಲ್ಲಿ ಬೇಕಾದ ಒಂದು ಗ್ರಾಮವನ್ನು ಆರಿಸಿಕೊಳ್ಳೆಂದು ಲಿಂಗಪ್ಪಗೌಡನಿಗೆ ಹೇಳಿದರು. ಆಗ ಲಿಂಗಪ್ಪಗೌಡನು ಸಂತುಷ್ಟನಾಗಿ ಗುರುವಚನವನ್ನು ಕೇಳಬೇಕೆಂದು ಪುನಃ ಮುರಗೋ

ಡಕ್ಕೆ ಬಂದು, ಮಹಾಸ್ವಾಮಿಗೆ ವಿಜ್ಞಾಪಿಸಿಕೊಂಡನು. ಆಗ ದಯಾವಂತನಾದ ಚಿದಂಬರ ಮಹಾಸ್ವಾಮಿಯು ಮುಂದಿನ ಯೋಗವನ್ನು ಲಕ್ಷಿಸಿ:-ಲಿಂಗಪ್ಪಗೌಡರೇ, ಇಲ್ಲಿಗೆ ಬಂದದ್ದು ನೆಟ್ಟಗಾಯಿತು. ಅಗಡಿಯು ನನ್ನದದೆ; ಅದನ್ನೇ ನೀವು ಬೇಡಿಕೊಳ್ಳಿರಿ, ಅಗಡಿಯು ನನ್ನದಿರುವದು'' ಎಂದು ನುಡಿದರು. ಮಹಾಸ್ವಾಮಿಯ ಈ ವಚನವನ್ನು ಕೇಳಿ, ಲಿಂಗಪ್ಪಗೌಡನು ಸಂತೋಷಪಡುತ್ತಿರಲು, "ಗುರಿ ಹೊಡಿತು, ಘಮ್ ಅಂದಿತು, ಗುರಿಬಿದ್ದಿತು, ಅವಕಾಶವಾಯಿತು'' ಎಂದು ಮಹಾಸ್ವಾಮಿಯು ಕೂಗಿದನು. ಹೀಗೆ ಅಂದರೇನು? ಎಂಬ ಅರ್ಥವು ಯಾರಿಗೂ ಆಗಲಿಲ್ಲ. ಮಹಾಸ್ವಾಮಿಯನ್ನು ಕೇಳಿ ತಿಳಿಯುವ ಧೈರ್ಯವೂ ಯಾರಲ್ಲಿ ಇರಲಿಲ್ಲ; ಲಿಂಗಪ್ಪಗೌಡನು ಮಾತ್ರ ಚಿದಂಬರ ಸ್ವಾಮಿಯು ಅಗಡಿಯಲ್ಲಿ ಹುಟ್ಟಿ ಬರುವನೆಂದು ಊಹಿಸಿ ಹರುಷಗೊಂಡನು. ಹೀಗೆ ಲಿಂಗಪ್ಪಗೌಡನಲ್ಲಿ ಆನಂದವೂ, ಸಭಿಕರಲ್ಲಿ ಆಶ್ಚರ್ಯವೂ ಉಂಟಾಗಿರಲು ಮಹಾಸ್ವಾಮಿಯು ಮುಗುಳುನಗೆ ನಗುತ್ತ:-ಗೌಡರೇ, ಟೀಪುವಿನಿಂದ ನೊಂದುಕೊಂಡ ನೀವು ಇನ್ನು ಮುಂದೆ ಭಯಪಡುವ ಕಾರಣವಿಲ್ಲ. ನಿಮ್ಮ ದೈನ್ಯವು ದೂರವಾಯಿತು. ನಿಮ್ಮ ಭಕ್ತಿಯಿಂದ ನಾನು ಸಂತುಷ್ಟನಾಗಿರುವೆನು. ನೀವು ಅಗಡಿಯಲ್ಲಿ ದೇವದ್ವಿಜರ ಆರಾಧನೆಯನ್ನು ಮಾಡುತ್ತ ನಿರ್ಭಯದಿಂದ ವಾಸಮಾಡಿರಿ, ಎನ್ನಲು, ಲಿಂಗಪ್ಪಗೌಡನು ಮಹಾಸ್ವಾಮಿಯ ಅಭಯವರದಾನವನ್ನು ಸ್ಮರಿಸುತ್ತ ಪೇಶ್ವೆಯ ಬಳಿಗೆ ಹೊರಟು ಹೋದನು.

---

## ಹನೆರಡನೆಯ ಪ್ರಕರಣ.

## ರಾಮಶಾಸ್ತ್ರಿಯ ಕುಷ್ಟನಿವಾರಣವೂ, ಸಂಸಾರಚಂದ್ರನ ಪ್ರಾಣರಕ್ಷಣವೂ.

---

ಪುಣೆಯಲ್ಲಿ ಶ್ರೀಮಂತರ ಕೈಕೆಳಗೆ ವೇದಪಾರಂಗತನೂ, ಪಂಡಿತನೂ, ಧರ್ಮಶಾಸ್ತ್ರ ಬಲ್ಲವನೂ, ವ್ಯಾಕರಣ-ವೇದಾಂತ-ಮೀಮಾಂಸಶಾಸ್ತ್ರಗಳಲ್ಲಿ ಧುರೀಣನೂ, ಶ್ರೌತ-ಸ್ಮಾರ್ತಕರ್ಮಗಳಲ್ಲಿ ಪ್ರವೀಣನೂ, ಶುಚಿಯೂ, ಷಟ್ಕರ್ಮ ನಿರತನೂ, ಪರವಿದ್ಯಾಪರೀಕ್ಷಕನೂ, ರಾಮಾನುಜ ಪಂಥದವನೂ ಆದ ವೈಖಾನಸ ಶಾಖೆಯ 'ದ್ರವಿಡ' ಎಂಬ ಉಪನಾಮವುಳ್ಳ ರಾಮಶಾಸ್ತ್ರೀ ಎಂಬ ಹೆಸರಿನ

ಸದ್ಗೃಸ್ಥನು ಇರುತ್ತಿದ್ದನು. ಅವನು ಶ್ರೀಮಂತರ ದರ್ಶನಕ್ಕೆ ಬಂದ ದೊಡ್ಡ ದೊಡ್ಡ ಪಂಡಿತರ ವಿದ್ಯೆಗಳನ್ನು ಪರೀಕ್ಷಿಸಿ, ಅವರಿಗೆ ಯೋಗ್ಯವಾದ ಸಂಭಾವನೆಯನ್ನು ಕೊಡಿಸುತ್ತಿದ್ದನು. ಆ ಕಾಲದ ಪುಣ್ಯಪತ್ತನದೊಳಗಿನ ಯಾವತ್ತು ಪಂಡಿತರಲ್ಲಿ ಇವನೇ ಅಗ್ರಗಣ್ಯನಾಗಿದ್ದನು. ಇವನ ಕಡೆಗೆ ಧರ್ಮಾಧಿಕಾರಿಯ ಕೆಲಸವಿತ್ತು. ಇವನು ಅಯಾಚಿತವೃತ್ತಿಯುಳ್ಳವನೂ, ನಿಸ್ಪೃಹನೂ, ನಿರ್ಲೋಭಿಯೂ ಆಗಿದ್ದನು. ರಾಮಶಾಸ್ತ್ರಿಗಳು ಬಾಳಾಜಿ ಬಾಜಿರಾಯನ ಕಾಲಕ್ಕೆ ಛತ್ರ, ಚಾಮರ, ಅಂದೋಲಿಕಾ ಮುಂತಾದ ಎಷ್ಟೋ ಮರ್ಯಾದಿತ ಚಿಹ್ನೆಗಳನ್ನು ಸಂಪಾದಿಸಿದ್ದರು. ಇವರಿಗೆ ಬುದ್ಧಿವಂತರೂ, ವೇದ-ವೇದಾಂಗಗಳನ್ನು ಬಲ್ಲವರೂ ಆದ ಇಬ್ಬರು ಪುತ್ರರಿದ್ದರು.

ಇಂತು ಶಾಸ್ತ್ರಿಗಳು ಯಶಸ್ಸುಳ್ಳವರಾಗಿ ಸುಖದಿಂದ ಕಾಲಹರಣ ಮಾಡುತ್ತಿರಲು, ಒಂದು ದಿವಸ ಅಕಸ್ಮಾತ್ತಾಗಿ ಕಾಲಕರ್ಮಸಂಯೋಗದಿಂದ ಅವರ ಶರೀರದಲ್ಲಿ ಕುಷ್ಟರೋಗದ ಚಿಹ್ನಗಳು ಸ್ಪಷ್ಟವಾಗಿ ಕಂಡವು. ಆಗ ಅವರು ಬಹಳ ಲಜ್ಜಿತರಾಗಿ ಓಲಗಕ್ಕೆ ಸಹ ಹೋಗದಂತಾದರು. ಯಾಕಂದರೆ, ಸಂಭಾವಿತರಿಗೆ ಅವಮಾನವೇ ಮರಣವಾಗಿದೆ! ಹೀಗೆ ಶಾಸ್ತ್ರಿಗಳ ಮೇಲೆ ಒಮ್ಮಿಂದೊಮ್ಮೆ ಸಂಕಟಪ್ರಾಪ್ತವಾದದ್ದರಿಂದ ಅವರು ಅದೇ ಚಿಂತೆಯಿಂದ ಇನ್ನು ಈ ರೋಗವು ಹೇಗೆ ವಾಸಿಯಾದೀತೆಂಬ ಹೃದ್ರೋಗವನ್ನು ಹಚ್ಚಿಕೊಂಡು, ದಿನದಿನಕ್ಕೆ ಕೃಶರಾಗಹತ್ತಿದರು. ಶಾಸ್ತ್ರಿಗಳ ಕಷ್ಟಮಯವಾದ ಸ್ಥಿತಿಯನ್ನು ನೋಡಿ, ಅವರ ಹೆಂಡಿರು-ಮಕ್ಕಳೂ, ಆಪ್ತ-ಇಷ್ಟರೂ ಬಹಳ ದುಃಖಮಾಡಹತ್ತಿದರು. ಶಾಸ್ತ್ರಿಗಳಂತೂ ಅಸುವನ್ನೇ ತೊರೆಯಬೇಕೆಂದು ನಿಶ್ಚಯಿಸಿದರು; ಆದರೆ ಅಷ್ಟರಲ್ಲಿ ಅವರಿಗೆ ಭವರೋಗನಾಶಕರಾದ ಚಿದಂಬರ ದೀಕ್ಷಿತರ ಸ್ಮರಣೆಯಾಗಿ, ಅವರು ದೀಕ್ಷಿತರಿದ್ದೆಡೆಗೆ ಬರಬೇಕೆಂದು ಹೊರಟು ಮಾರ್ಗಕ್ರಮಣ ಮಾಡುತ್ತ ಕೆಲವು ದಿವಸಗಳ ತರುವಾಯ ಮುಗೋಡಕ್ಕೆ ಬಂದು ತಲ್ಪಿದರು. ಬಳಿಕ ಶಾಸ್ತ್ರಿಗಳು ಪುರವನ್ನು ಪ್ರವೇಶಿಸಿ, ದೀಕ್ಷಿತರ ಹೆಬ್ಬಾಗಲಿಗೆ ಬಂದು ವಿಶಿಷ್ಟಾದ್ವೈತಸಿದ್ಧಾಂತಗಳನ್ನುಚ್ಚರಿಸುತ್ತ ಸಮ್ಮನೆ ನಿಂತುಕೊಂಡರು. ಆಗ ಸರ್ವಜ್ಞರೂ, ದಯಾನಿಧಿಗಳೂ ಆದ ಚಿದಂಬರ ದೀಕ್ಷಿತರು ಜ್ಞಾನದೃಷ್ಟಿಯಿಂದ ಶಾಸ್ತ್ರಿಗಳ ಬರುವಿಕೆಯನ್ನೂ, ಅದರ ಕಾರಣವನ್ನೂ ತಿಳಕೊಂಡು, ಬಹಿರ್ಭಾಗಕ್ಕೆ ಬಂದು ಶಾಸ್ತ್ರಿಗಳ ಮ್ಲಾನಮುಖವನ್ನು ನೋಡಿ ಕನಿಕರಬಟ್ಟು ಅವರಿಗೆ ಯೋಗ್ಯಸನ್ಮಾನವನ್ನು ಮಾಡಬೇಕೆಂದು ಅವರನ್ನು ಸಮೀಪಕ್ಕೆ ಕರೆದರು. ಆಗ ಶಾಸ್ತ್ರಿಗಳ ಕಣ್ಣೊಳ

ಗಿಂದ ಅಶ್ರುಗಳು ಸ್ರವಿಸಹತ್ತಿದವು. ಅವರು ನಾಚಿಕೆಯಿಂದ ಮೋರೆಯನ್ನು ಕೆಳಗೆ ಮಾಡಿ, ಏನೂ ಮಾತಾಡದೆ ಸುಮ್ಮನೆ ನಿಂತುಕೊಂಡರು. ಆಗ ದೀಕ್ಷಿತರು:-ಶಾಸ್ತ್ರಿಗಳೇ, ಚಿಂತಿಸಬೇಡಿರಿ. ನಾಳೆ ಸೂರ್ಯೋದಯಕ್ಕೆ ನೀವು ನಮಗೆ ಭೆಟ್ಟಿಯಾಗಬೇಕು. ನಿಮ್ಮ ಬೇನೆಯ ಸಂಗತಿಯು ನಮಗೆ ಗೊತ್ತಾಗಿರುವದು. ಇನ್ನು ಅದರ ಸಂಬಂಧವಾಗಿ ಸ್ವಲ್ಪಾದರೂ ಚಿಂತಿಸಬೇಡಿರಿ. ಈಗ ಇಳಕೊಂಡ ಸ್ಥಳಕ್ಕೆ ಹೋಗಿ, ಶಿಧಾ(ಉಲುಪಿ)ತಕ್ಕೊಂಡು ಸುಖವಾಗಿ ಭೋಜನವನ್ನು ತೀರಿಸಬೇಕು, ಎಂದು ಹೇಳಿ, ತಾವು ತಮ್ಮ ಆಹ್ನಿಕಕಾರ್ಯಕ್ಕೆ ಹೊರಟುಹೋದರು.

ಇತ್ತ ಶಾಸ್ತ್ರಿಗಳು ದೀಕ್ಷಿತರ ಅಪ್ಪಣೆಯ ಮೇರೆಗೆ ತಾವು ಇಳಕೊಂಡ ಸ್ಥಳಕ್ಕೆ ಹೋಗಿ, ಅಡಿಗೆಯನ್ನು ಮಾಡಿಕೊಂಡು ಭೋಜನವನ್ನು ತೀರಿಸಿ, ನಾಳೆ ಗುರುಕೃಪೆಯು ನನ್ನ ಮೇಲೆ ಆಗುವದೇ? ಎಂಬ ಚಿಂತೆಯಲ್ಲಿ ಆ ದಿವಸವನ್ನು ಒಳ್ಳೇ ಕಷ್ಟದಿಂದ ಕಳೆದರು. ಮರುದಿವಸ ಬೆಳಿಗ್ಗೆ ಶಾಸ್ತ್ರಿಗಳು ದೀಕ್ಷಿತರ ಹೇಳಿಕೆಯಂತೆ ಸ್ನಾನ-ಸಂಧ್ಯಾದಿ ಕರ್ಮಗಳನ್ನು ತಿರಿಸಿಕೊಂಡು, ಚಿದಂಬರ ದೀಕ್ಷಿತರ ದರ್ಶನಕ್ಕೆ ಬಂದರು. ಆಗ ದೀಕ್ಷಿತರು ಒಬ್ಬರೇ ಕುಳಿತಿದ್ದರು. ಶಾಸ್ತ್ರಿಗಳು ಮುಗುಳು ನಗೆಯಿಂದ ಮನೋಹರವಾದ ದೀಕ್ಷಿತರ ಮೋರೆಯನ್ನು ನೋಡಿ, ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ, ಅವರನ್ನು ಪರಿಪರಿಯಿಂದ ಹೊಗಳಲಾರಂಭಿಸಿದರು. ಆಗ ದೀಕ್ಷಿತರು ದಯೆಯುಳ್ಳವರಾಗಿ ಶಾಸ್ತ್ರಿಗಳನ್ನು ಸಮೀಪಕ್ಕೆ ಕರೆದು ತಮ್ಮ ಕಮಂಡಲುದೊಳಗಿನ ವಾರಿಯನ್ನು ಅವರ ಮೈಮೇಲೆಲ್ಲ ಪ್ರೋಕ್ಷಿಸಿದರು. ಕೂಡಲೆ ಅವರ ಕುಷ್ಟರೋಗವು ಹೇಳಹೆಸರಿಲ್ಲದಂತಾಗಿ ಮೈಯು ಕಾಂತಿಯುಕ್ತವಾಯಿತು. ಆಗ ಶಾಸ್ತ್ರಿಗಳು ಆನಂದಸಾಗರದಲ್ಲಿ ಮುಳುಗಿ:-ಹೇ ಮೃತ್ಯುಂಜಯನೇ, ನನ್ನ ಪ್ರಾಣವನ್ನು ನೀನೇ ರಕ್ಷಿಸಿದಿ. ಇಷ್ಟು ದಿವಸ ನಿನ್ನ ಮಹಿಮೆಗಳನ್ನು ಕಿವಿಯಿಂದ ಕೇಳಿದ್ದೆನಷ್ಟೇ! ಈಗ ಪ್ರತ್ಯಕ್ಷ ಮನವರಿಕೆಯಾಯಿತು. ನೀನು ಕಷ್ಟದಾಯಕವಾದ ನನ್ನ ಕುಷ್ಟರೋಗವನ್ನು ಒಮ್ಮೆಲೆ ನಾಶಮಾಡಿದ್ದರಿಂದ ನಿನ್ನಲ್ಲಿ ದೇವತ್ವವು ಸಿದ್ಧವಾಯಿತು. ಹೇ ಸದಾಶಿವನೇ, ನನ್ನನ್ನು ಆಶೀರ್ವದಿಸಬೇಕೆಂದು ನುಡಿದು, ದೀಕ್ಷಿತರ ಮೂರ್ತಿಯನ್ನು ಅವಲೋಕಿಸುತ್ತ ನಿಂತುಕೊಂಡರು. ಆಗ ದೀಕ್ಷಿತರು ಶಾಸ್ತ್ರಿಗಳನ್ನು ಆಲಿಂಗಿಸಿ:-ಶಾಸ್ತ್ರಿಗಳೇ, ನೀವು ಮಾಡಿದ ಸ್ತೋತ್ರದಿಂದ ನಾನು ತುಷ್ಟನಾಗಿರುವೆನು. ನಿಮ್ಮ ನಂಬಿಗೆಯೇ ನಿಮಗೆ ಫಲಕೊಟ್ಟಿತು. ನಿಮ್ಮ ಮುಂದಣ ಎಲ್ಲ ಬಯಕೆಗಳು ಪೂರ್ಣವಾಗುವವು. ನೀವು ಇನ್ನು ಮುಂದೆ ಶ್ರೀಮಂತರ ಕೈಯಿಂದ ವಿದ್ಯಾದಾನ, ಅನ್ನದಾನ, ಅತಿಥಿ

ಸತ್ಕಾರ ಇವೇ ಮೊದಲಾದ ಪುಣ್ಯಕರವಾದ ಕೆಲಸಗಳನ್ನು ವಿಶೇಷವಾಗಿ ಮಾಡಿ ಸುತ್ತ, ಮಿಕ್ಕ ಆಯುಷ್ಯವನ್ನು ಸದ್ವರ್ತನದಿಂದ ಕಳೆಯಿರಿ. ಅಂದರೆ ನಿಮಗೆ ಆ ಪುಣ್ಯ ಪ್ರಭಾವದಿಂದ ತುಷ್ಟಿ-ಪುಷ್ಟಿಗಳೂ, ಆಯುರಾರೋಗ್ಯವೂ ಪ್ರಾಪ್ತವಾಗುವವು, ವ್ಯಾಸರಾದರೂ "ಪರೋಪಕಾರಾಯ ಪುಣ್ಯಾಯ ಪಾಪಾಯ ಪರಪೀಡನಂ" ಎಂದು ಹೇಳಿರುವರು ಆದ್ದರಿಂದ ನೀವು ಈ ಮಹದ್ವಾಕ್ಯವನ್ನು ಲಕ್ಷದಲ್ಲಿಟ್ಟು ವರ್ತಿಸಬೇಕು. ಅಂದರೆ ನಿಮಗೆ ಇಹಪರಗಳಲ್ಲಿ ಸುಖವಾಗುವದು. ನೀವು ಈಗ ಮಾಡಿದ ಸ್ತೋತ್ರವನ್ನು ನಿಮಗೆ ಸಂಕಟವೊದಗಿದಾಗ ಜಪಿಸಬೇಕು. ಅಂದರೆ ತತ್ಕಾಲಕ್ಕೆ ನಿಮ್ಮ ದುಃಖವು ಬಯಲಾಗುವದು, ಎಂದು ಹೇಳಿ, ಅವರಿಗೆ ಮಾನ-ಮರ್ಯಾದೆಗಳನ್ನು ಮಾಡಿ, ಭೋಜನವನ್ನು ಮಾಡಿಸಿ, ಊರಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಆಗ ಶಾಸ್ತ್ರಿಗಳು ಪುನಃ ದೀಕ್ಷಿತರ ಚರಣಕ್ಕೆರಗಿ, ಅವರ ಅಪ್ಪಣೆಯ ಮೇರೆಗೆ ಪುಣೆಗೆ ಹೋಗಿ ದೀಕ್ಷಿತರ ಹೇಳಿಕೆಯಂತೆ ಪರೋಪಕಾರದ ಕೆಲಸಗಳನ್ನು ಮಾಡುತ್ತ ಚಿರಕಾಲ ಸುಖವನ್ನನುಭವಿಸಿದರು.

ಕೆಲವು ವರ್ಷಗಳ ಹಿಂದೆ ಕಾಶ್ಮೀರದೇಶದಲ್ಲಿ ದಾನಶೀಲನೂ, ಉದಾರನೂ, ಶೂರನೂ ಆದ ಸಂಸಾರಚಂದ್ರನೆಂಬ ರಾಜನು ಮಕ್ಕಳೋಪಾದಿಯಲ್ಲಿ ಪ್ರಜೆಗಳನ್ನು ಪಾಲಿಸುತ್ತ ರಾಜ್ಯಕಾರಭಾರವನ್ನು ಸಾಗಿಸುತ್ತಿದ್ದನು. ಅವನಿಗೆ ಪತಿಮನೋರಮೆಯಾದ ಓರ್ವ ಪಟ್ಟದರಸಿಯಿದ್ದಳು. ಪ್ರಜೆಗಳು ಸಂಸಾರ ಚಂದ್ರನನ್ನು ತಂದೆಯಂತೆ ಭಾವಿಸಿ ಯಾವಾಗಲೂ ರಾಜನಿಷ್ಠೆಯಿಂದ ನಡೆಯುತ್ತಿದ್ದರು. ಇಂತು ಯಾವತ್ತು ಸುಖಗಳು ಸಂಸಾರಚಂದ್ರನಲ್ಲಿ ನೆಲೆಗೊಂಡಿದ್ದರೂ, ಅನಪತ್ಯವೆಂಬ ಚಿಂತೆಯು ಮಾತ್ರ ಅವನನ್ನು ಯಾವಾಗಲೂ ದಹಿಸುತ್ತಿತ್ತು. ಹೀಗಿರಲು ಅವನಿಗೆ ಯಕ್ಷ್ಮವೆಂಬ ಭಯಂಕರ ರೋಗವು ಉತ್ಪನ್ನವಾಗಿ ಅವನ ಚಿಂತಾಗ್ನಿಗೆ ಇಂಧನವು ದೊರೆತದ್ದರಿಂದ, ಅದು ವಿಶೇಷವಾಗಿ ಪ್ರಜ್ವಲಿಸಿತು. ಅರಸನು ತನ್ನ ಆರೋಗ್ಯತೆಯ ಸಲುವಾಗಿ ಬಹಳ ಉಪಾಯಗಳನ್ನು ಮಾಡಿದನು; ಆದರೆ ಅದರಿಂದ ಸ್ವಲ್ಪಾದರೂ ಗುಣವಾಗಲಿಲ್ಲ. ಆದ್ದರಿಂದ ಅವನಿಗೆ ಹೆಂಡಿರು-ಮಕ್ಕಳಲ್ಲಿಯೂ, ಆಪ್ತ-ಇಷ್ಟರಲ್ಲಿಯೂ, ದೇಶ-ಕೋಶಗಳಲ್ಲಿಯೂ, ದೇಹ-ಗೇಹಗಳಲ್ಲಿಯೂ ನಿರಾಶೆಯುಂಟಾಯಿತು.

ಇದೇ ಸ್ಥಿತಿಯಲ್ಲಿ ಕೆಲ ಕಾಲವು ಗತಿಸಲು, ಬೇನೆಯು ಬೆಳೆದದ್ದರಿಂದ ಸಂಸಾರಚಂದ್ರನು ಅದರ ನೋವನ್ನು ತಾಳಲಾರದೆ ಒಂದು ದಿವಸ ಪ್ರಾಣತ್ಯಾಗವನ್ನು ಮಾಡಬೇಕೆಂದು ಯೋಚಿಸಿ, ಯಾರಿಗೂ ತಿಳಿಯದಂತೆ ಮಧ್ಯರಾತ್ರಿಯ

ಸುಮಾರಕ್ಕೆ ಕೋಟೆಯ ಗೋಪುರವನ್ನೇರಿ ಕುಳಿತುಕೊಂಡನು ಅಷ್ಟರಲ್ಲಿ ಅವನಿಗೆ ಮೊದಲೇ ಹಲವರ ಮುಖದಿಂದ ಕೇಳಿದ ಶ್ರೀಚಿದಂಬರದೀಕ್ಷಿತರ ಚರಿತ್ರದ ಸ್ಮರಣೆಯಾಗಿ ಅವನು ಮನದಲ್ಲಿ:-ಹೇ ದಯಾನಿಧಿಯಾದ ಚಿದಂಬರನೇ, ನಿನ್ನನ್ನು ಮರೆಹೊಕ್ಕಿರುವೆನು ನೀನು ನಿಜವಾಗಿ ಪರಮೇಶ್ವರನಿದ್ದರೆ ನನ್ನನ್ನು ಈಗ ಕಾಪಾಡುತ್ತೀ. ನಾನಂತೂ "ಹಿಂದಕ್ಕೆ ಭಟ್ಟಪಾದಾಚಾರ್ಯರು ಗುಡ್ಡದಮೇಲಿಂದ ಧುಮುಕಿದಂತೆ" ಧುಮುಕಿ ಪ್ರಾಣಬಿಡುತ್ತೇನೆ. ನನಗೆ ಪರಲೋಕದಲ್ಲಿಯಾದರೂ ಸದ್ಗತಿಯನ್ನು ಕೊಡು, ಎಂದು ನುಡಿದು ಶಿವಚಿದಂಬರ-ಹರಚಿದಂಬರ ಎಂಬ ಮಂಗಲನಾಮಗಳನ್ನುಚ್ಚರಿಸುತ್ತ, ಗೋಪುರದ ಮೇಲಿಂದ ಕೆಳಗೆ ಧುಮುಕಿದನು. ಅವನು ಅಷ್ಟು ಎತ್ತರದ ಮೇಲಿಂದ ಧುಮುಕಿದ್ದರೂ, ಚಿದಂಬರ ನಾಮೋಚ್ಚಾರಣದ ಪ್ರಭಾವದಿಂದ ಅವನ ಪ್ರಾಣವು ಹೋಗದೆ, ಅವನು ಮೂರ್ಛೆಯನ್ನು ಮಾತ್ರ ಹೊಂದಿದನು. ಅಷ್ಟರಲ್ಲಿ ಭಸ್ಮೋದ್ಧೂಲಿತವಾದ ಶರೀರದಿಂದೊಪ್ಪುವ ಚಿದಂಬರ ದೀಕ್ಷಿತರು ಕಯ್ಯಲ್ಲಿ ಕಮಂಡಲುವನ್ನು ಧಾರಣಮಾಡಿ, ಸಂಸಾರಚಂದ್ರನ ಏಕನಿಷ್ಠೆಯ ಭಕ್ತಿಗೆ ಮೆಚ್ಚಿ, ಅಲ್ಲಿಗೆ ಪ್ರಕಟರಾದರು. ಇದೇ ಹೊತ್ತಿಗೆ ರಾಜನ ಅಸುವನ್ನು ಒಯ್ಯುವದಕ್ಕಾಗಿ ಯಮರಾಜನಾದರೂ ಅಲ್ಲಿಗೆ ಬಂದನು. ಆಗ ದೀಕ್ಷಿತರು ರಾಜನ ದೇಹವನ್ನು ಸ್ಪರ್ಶಮಾಡಿ ಯಮನನ್ನು ಕುರಿತು:-ಎಲೈ ಅಂತಕನೇ, ರಾಜನನ್ನು ಒಯ್ಯಬೇಡ ಅವನು ನನ್ನನ್ನೇ ನಂಬಿರುವನು. ನೀನು ಸ್ವಸ್ಥಳಕ್ಕೆ ಹೊರಟುಹೋಗು, ಎಂದು ನುಡಿದರು. ಅದನ್ನು ಕೇಳಿ, ಅಂತಕನು ಕೈಜೋಡಿಸಿಕೊಂಡು:-ಪರಾತ್ಪರನೇ, ನಾವೆಲ್ಲರೂ ನಿನ್ನ ಸೇವಕರೇ ಸರಿ; ಆದರೆ ಹೀಗೆ ಮಾಡುವದರಿಂದ ನಮ್ಮ ಕೆಲಸವು ಹೇಗೆ ಸಾಗಬೇಕು? ಹಿಂದಕ್ಕೊಮ್ಮೆ ಇದೇ ಪ್ರಕಾರ ನನ್ನ ಕೈಯೊಳಗಿಂದ ಒಂದು ವೃಷಭವನ್ನು ಬಿಡಿಸಿಕೊಂಡಿರಿ. ದಿವ್ಯ ಚಿತ್ತದ ಮುಂದೆ ನಮ್ಮ ಪಾಡಾವುದು? ಎಂದು ನುಡಿದು, ದೀಕ್ಷಿತರನ್ನು ನಮಸ್ಕರಿಸಿ, ಯಮಲೋಕಕ್ಕೆ ಹೊರಟುಹೋದನು. ಇತ್ತ ಚಿದಂಬರ ದೀಕ್ಷಿತರಾದರೂ ಅದೃಶ್ಯರಾದರು.

ಸಂಸಾರಚಂದ್ರನು ಮೂರ್ಛಾವಸ್ಥೆಯಲ್ಲಿಯೇ ಈ ಇಬ್ಬರ ಅದ್ಭುತ ಭಾಷಣವನ್ನು ಕೇಳಿ, ಎಚ್ಚತ್ತು ನೋಡುತ್ತಾನೆ, ಅಲ್ಲಿ ಯಾರೂ ಇದ್ದಿಲ್ಲ. ಆಗ ಅವನು ವಿಸ್ಮಯಗೊಂಡು, ಮನದೊಳಗೆ:-ನಾನು ಇಷ್ಟು ಎತ್ತರದಮೇಲಿಂದ ಧುಮುಕಿದಾಗ್ಯೂ ನನ್ನ ಪ್ರಾಣವು ಹೇಗೆ ಉಳಿಯಿತು? ಎಂದು ಆಲೋಚಿಸುತ್ತ ತನ್ನ ಮೈಯನ್ನು ನೋಡುತ್ತಿರಲು, ಅದು ಒಳ್ಳೇ ಕಾಂತಿಯುಳ್ಳದ್ದಾಗಿದ್ದು,

ರೋಗವು ಹೇಳಹೆಸರಿಲ್ಲದಂತಾಗಿತ್ತು. ಈ ಅದ್ಭುತವನ್ನು ಕಂಡು, ಮುಖದಿಂದ ಚಿದಂಬರನಾಮವನ್ನುಚ್ಚರಿಸುತ್ತ ಅರಮನೆಗೆ ಬಂದು, ಎಲ್ಲರನ್ನು ಎಚ್ಚರಗೊಳಿಸಿ, ಅವರಿಗೆ ತನ್ನ ಯಾವತ್ತು ವೃತ್ತಾಂತವನ್ನು ಹೇಳಿದನು. ಆಗ ಎಲ್ಲರಿಗೆ ಪರಮಾಶ್ಚರ್ಯವಾಯಿತು. ಇಂತು ಸಂಸಾರಚಂದ್ರನು ವ್ಯಾಧಿಮುಕ್ತನಾಗಿ, ಚಿದಂಬರನ ಚರಣದಲ್ಲಿ ವಿಶ್ವಾಸವನ್ನಿಟ್ಟು, ರಾಜ್ಯಕಾರಭಾರವನ್ನು ಸಾಗಿಸುತ್ತಿರಲು, ಅವನಿಗೆ ಚಿದಂಬರಾನುಗ್ರಹದಿಂದ ಒಬ್ಬ ಮಗನು ಜನಿಸಿದನು. ಆಗಂತೂ ಸಂಸಾರಚಂದ್ರನ ಸಂತೋಷಸಮುದ್ರವು ಹೊರಸೂಸಿತು. ಆಗ ರಾಜನು 'ಇದೆಲ್ಲ ಚಿದಂಬರಾನುಗ್ರಹದ ಫಲವೇ' ಎಂದು ಭಾವಿಸಿ, ಪುತ್ರೋತ್ಸವದ ಸುದ್ದಿಯನ್ನು ದೀಕ್ಷಿತರಿಗೆ ಅರುಹಬೇಕೆಂದು ಯೋಚಿಸಿ, ತನ್ನ ಪುರೋಹಿತನ ಕೈಯಲ್ಲಿ ಅತ್ಯಾದರದಿಂದ ಬರೆದ ಒಂದು ಪತ್ರವನ್ನೂ, ಅಗಣಿತ ಕಾಣಿಕೆಯನ್ನೂ ಕೊಟ್ಟು, ಅವನನ್ನು ದೀಕ್ಷಿತರ ಬಳಿಗೆ ಕಳುಹಿದನು.

ಪುರೋಹಿತನು ರಾಜಾಜ್ಞೆಯ ಮೇರೆಗೆ ದೀಕ್ಷಿತರ ಬಳಿಗೆ ಬಂದು, ಅವರನ್ನು ನಮಸ್ಕರಿಸಿ, ಕಾಣಿಕೆಯನ್ನೂ ರಾಜಾದೇಶವನ್ನೂ ಮುಂದಿಟ್ಟು, ರಾಜಧಾನಿಯಲ್ಲಿ ವರ್ತಿಸಿದ ಯಾವತ್ತು ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಸಭಿಕರಿಗೆ ಆಶ್ಚರ್ಯವಾಯಿತು. ಆಗ ದೀಕ್ಷಿತರು ಸಭಿಕರನ್ನು ಕುರಿತು:-ಸಭಿಕರೇ, ನೋಡಿರಿ, ರಾಜಪುರೋಹಿತನು ಏನು ಹೇಳುತ್ತಿರುವನು? ಇದು ನಿಜವಿರಬಹುದೋ? ಎನ್ನಲು, ಸಭಿಕರು:-ದೀಕ್ಷಿತವರ್ಯರೇ, ಇದರಲ್ಲಿ ಯಾವ ದೊಡ್ಡ ಆಶ್ಚರ್ಯವು? ನಿಮ್ಮ ನಾಮದ ಮಹಿಮೆಯು ಅತ್ಯಗಾಧವಾದದ್ದು! ಪೂರ್ವದಲ್ಲಿ ನಳ-ನೀಲ-ಜಾಂಬುವಂತ ಮೊದಲಾದ ಕಪಿಗಳು ರಾಮ ನಾಮದ ಬಲದಿಂದ ಸೇತುವೆಯನ್ನು ಕಟ್ಟಲಿಲ್ಲವೇ? ತಾವು ನಿರ್ವಿಕಾರಿಗಳೂ, ನಿರ್ಗುಣರೂ ಇರುವಿರಿ. ತಮ್ಮ ನಾಮವು ಮಾತ್ರ ಸಗುಣವಾಗಿರುವದು. ಆದ್ದರಿಂದ ಅದು ಯಾವ ಕಾಲಕ್ಕೆ ಏನು ಮಾಡೀತೆಂಬದು ಯಾರಿಗೂ ತಿಳಿಯಲಾರದು! ಎಂದು ನುಡಿದರು. ಬಳಿಕ ದೀಕ್ಷಿತರು ಆದೇಶವನ್ನು ಸ್ವೀಕರಿಸಿ, ಕಾಣಿಕೆಯು ನಮ್ಮದೇ ಆಗಿ ನಿಮ್ಮ ಹತ್ತಿರ ಇರಲಿ, ಎಂದು ಹೇಳಿ ಪುರೋಹಿತನನ್ನು ಸತ್ಕರಿಸಿ, ರಾಜನಿಗೆ ಕೊಡುವದಕ್ಕಾಗಿ ಸ್ವಲ್ಪ ಪ್ರಸಾದವನ್ನು ಕೊಟ್ಟು, ಪುರೋಹಿತನನ್ನು ರಾಜಧಾನಿಗೆ ಕಳುಹಿದರು. ಪುರೋಹಿತನು ರಾಜಧಾನಿಗೆ ಬಂದ ಬಳಿಕ ಪ್ರಸಾದವನ್ನು ರಾಜನಿಗೆ ಕೊಟ್ಟು, ದೀಕ್ಷಿತರ ಆಶೀರ್ವಾದವನ್ನು ಅರುಹಿದನು. ಅಂದಿನಿಂದ ಸಂಸಾರಚಂದ್ರನು ಚಿದಂಬರ ಚರಣದಲ್ಲಿ ಅನನ್ಯ ಭಕ್ತಿಯನ್ನಿಟ್ಟು, ಇಹಪರಗಳಲ್ಲಿ ಚಿರಕಾಲ ಸುಖವನ್ನನುಭವಿಸಿದನು.

---

## ೭ನೆಯ ಪ್ರಕರಣ

## ಮಾಂತ್ರಿಕ ಗರ್ವಭಂಗವೂ, ದ್ವಿಜ ಗರ್ವಹರಣವೂ.

ಹಿಮಾಲಯ ವಾಸಿಯಾದ ಒಬ್ಬ ಮಾಂತ್ರಿಕನು ಮಂತ್ರಶಾಸ್ತ್ರವನ್ನು ಓದಿ, ಪ್ರವೀಣನಾಗಿ ಮಂತ್ರಸಿದ್ಧಿಯನ್ನು ಪಡಕೊಂಡು, ಗರ್ವದಿಂದ ಉಬ್ಬಿ, ಕೆಲವು ಶಿಷ್ಯರನ್ನು ಕೂಡಿಕೊಂಡು ದಿಗ್ವಿಜಯಾರ್ಥವಾಗಿ ಹೊರಟನು. ಅವನು ಹೋದ ಹೋದಲ್ಲೆಲ್ಲ ಪಂಡಿತರನ್ನೂ, ಮಾಂತ್ರಿಕರನ್ನೂ ಮಂತ್ರಸಾಮರ್ಥ್ಯದಿಂದ ಗೆಲ್ಲುತ್ತ, ಅವರಿಂದ ವಿಪುಲವಾದ ಹಣವನ್ನೂ, ಜಯಪತ್ರಗಳನ್ನೂ ಸಂಪಾದಿಸುತ್ತ ದೇಶಗಳನ್ನು ಸಂಚರಿಸುತ್ತಿದ್ದನು. ಒಂದು ದಿವಸ ಅವನು ಚಿದಂಬರ ದೀಕ್ಷಿತರ ಕೀರ್ತಿಯನ್ನು ಕೇಳಿ, ಅವರನ್ನು ಗೆದ್ದು ಜಯಪತ್ರವನ್ನು ದೊರಕಿಸಬೇಕೆಂದು ಯೋಚಿಸಿ, ಮುರಗೋಡಿಗೆ ಬಂದನು. ಮಾಂತ್ರಿಕನ ಬರುವಿಕೆಯನ್ನು ನೋಡಿ ಮುರಗೋಡದ ಜನರು ಭಯಪಟ್ಟರು. ಯಾಕಂದರೆ ಆ ಮಾಂತ್ರಿಕನ ಕ್ರೂರತನವು ಮೊದಲೇ ಅವರಿಗೆ ಗೊತ್ತಾಗಿತ್ತು. ಆದ್ದರಿಂದ ಅವರು ದೀಕ್ಷಿತರ ಬಳಿಗೆ ಬಂದು:-ಪ್ರಭುಗಳೇ ಈ ಹೊತ್ತು ಒಬ್ಬ ಹಿಮಾಲಯ ವಾಸಿಯಾದ ಕ್ರೂರಮಾಂತ್ರಿಕನು ತಮ್ಮ ಪರೀಕ್ಷಾರ್ಥವಾಗಿ ಇಲ್ಲಿಗೆ ಬಂದಿರುವನು. ಆದ್ದರಿಂದ ಅವನನ್ನು ಸಾಮೋಪಚಾರದಿಂದ ಕಳುಹಿಸುವದೇ ವಿಹಿತವು. ಅವನ ಕೂಡ ಪ್ರಸಂಗನಡಿಸಿದರೆ ಯಾವ ಅನರ್ಥವು ಒದಗೀತೆಂಬದು ತಿಳಿಯುವದಿಲ್ಲ ಎಂದು ನುಡಿಯಲು, ದೀಕ್ಷಿತರು:-ಹೆದರಬೇಡಿರಿ ಶರಣಾಗತರಕ್ಷಕನಾದ ಪರಮೇಶ್ವರನು ಸಮರ್ಥನಿರುವನು! ಎಂದು ಹೇಳುತ್ತಿರುವಷ್ಟರಲ್ಲಿ ಮಾಂತ್ರಿಕನ ಶಿಷ್ಯರು ಅಲ್ಲಿಗೆ ಬಂದು:-ಎಲೈ ದೀಕ್ಷಿತನೇ, ಏನಿದು? ಜನರಲ್ಲಿ ಸುಮ್ಮಸುಮ್ಮನೆ ಅಲ್ಲದ ದೊಡ್ಡಿಸ್ತನವನ್ನು ಏಕೆಬೆಳಿಸಿರುವಿ? ನಿನ್ನ ಹುಳುಕನ್ನು ಹೊರಗೆಡುವಕ್ಕಾಗಿ ಇದುವರೆಗೆ ಯಾರೂ ದೊರೆತಿಲ್ಲವೆಂಬಂತೆ ತೋರುತ್ತದೆ ಈಗ ನಿನ್ನ ಕರ್ತೃತ್ವಶಕ್ತಿಯನ್ನು ಹೊರಗೆಡವು ನೋಡೋಣ! ನಮ್ಮ ಒಡೆಯನು ನಿನ್ನ ಕಲೆಗಳನ್ನು ಹರಣ ಮಾಡಬೇಕೆಂದು ಇಲ್ಲಿಗೆ ಬಂದಿರುವನು. ನೀನು ಈಶ್ವರನೇ ನಿಜವಾಗಿದ್ದರೆ ಆ ಮಂತ್ರಪ್ರತೀಕಾರವನ್ನು ಮಾಡು. ಇಲ್ಲದಿದ್ದರೆ ಈಗ ನಮ್ಮೊಡೆಯನಿಗೆ ಶರಣು ಬಂದು, ಅವನನ್ನು ಸನ್ಮಾನಿಸು ಎಂದು ಕಠೋರಮಾತುಗಳನ್ನಾಡಲು, ದೀಕ್ಷಿತರು ನಕ್ಕು:-ನಾನಂತೂ ನಿಷ್ಕಳೆಯುಳ್ಳ ಯಃಕಶ್ಚಿತ್ತ ಮಾನವನು. ಅಂದಬಳಿಕ

ನಿಮ್ಮೊಡೆಯನು ನನ್ನ ಹತ್ತರ ವಸ್ತುಹರಣಮಾಡುವನು? ತಿಳಿದೂತಿಳಿದು ಒಡವರ ಮನೆಗೆ ಕನ್ನಹಾಕಿದರೆ ಅಲ್ಲಿ ಹಣವು ದೊರೆಯುವದೇ? ವ್ಯರ್ಥವಾಗಿ ಜಲ್ಪಿಸಬೇಡಿರಿ. ನಿಮ್ಮೊಡೆಯನು ಯಾವ ಹೇತುವಿನಿಂದ ಇಲ್ಲಿಗೆ ಬಂದಿರುವನೋ, ಆ ಹೇತುವನ್ನು ಸಾಮರ್ಥ್ಯವಿದ್ದರೆ ಸಾಧ್ಯಮಾಡಿಕೊಂಡು ಹೋಗಲಿ ಎಂದು ನುಡಿದರು. ಅದನ್ನು ಕೇಳಿ ಶಿಷ್ಯರು ಕೋಪಗೊಂಡು ತಮ್ಮ ಒಡೆಯನಹತ್ತರ ಬಂದು ನಡೆದಸಂಗತಿಯನ್ನೆಲ್ಲ ಹೇಳಿದರು. ಆಗ ಮಾಂತ್ರಿಕನು ಸಿಟ್ಟಿಗೆದ್ದು, ಕಲಾಹರಣವೆಂಬ ಮಂತ್ರದ ಪುರಶ್ಚರಣವನ್ನಾರಂಭಿಸಿದನು. ಆದರೆ ಅನಂತಕಲೆಗಳುಳ್ಳ ಚಿದಂಬರನ ಕಲಾಹರಣವೇ ಆಗಲೊಲ್ಲದು! ಎಂದಿಗಾದರೂ ಗಾಳಿಯ ಮೊಟ್ಟೆಯನ್ನು ಕಟ್ಟಲಿಕ್ಕೆ ಯಾರಾದರೂ ಸಮರ್ಥರಾಗುವರೋ? ಮಾಂತ್ರಿಕನ ಎರಡು ಪುರಶ್ಚರಣಗಳು ಮುಗಿದವು. ಆದಾಗ್ಯೂ ಒಂದು ಕಲೆ ಸಹ ಹರಣವಾಗಲಿಲ್ಲ. ಆಗ ಮಾಂತ್ರಿಕನ ಮನಸ್ಸು ಸ್ವಲ್ಪ ಸಂಶಯಗ್ರಸ್ತವಾಯಿತು. ಮಂತ್ರಗಳು ನಿಸ್ಸಾರವಾಗಲೊಲ್ಲವು. ಆಗ ಆ ಚಂಡಿಮಾಂತ್ರಿಕನು ಇಷ್ಟಕ್ಕೇ ಚಿದಂಬರ ಮಹಿಮೆಯನ್ನರಿಯದೆ, ಪುಸ್ತಕವನ್ನು ತೆಗೆದು ಮಂತ್ರವನ್ನು ಜಪಿಸಬೇಕು, ಎಂದು ಆಲೋಚಿಸುವಷ್ಟರಲ್ಲಿ ಅವನ ಕಣ್ಣುಗಳು ಹೋದವು. ಆಗ ಮಾತ್ರ ಮಾಂತ್ರಿಕನು ಹತಗರ್ವವುಳ್ಳವನಾಗಿ ದೀಕ್ಷಿತರಿಗೆ ಶರಣು ಬಂದನು. ಆಗ ದೀಕ್ಷಿತರು ಅವನ ಮೈಮೇಲೆ ಕೈಯಾಡಿಸಿ, ಅವನ ಮಂತ್ರಸಾಮರ್ಥ್ಯವನ್ನೆಲ್ಲ ಸ್ಪರ್ಶಮಾತ್ರದಿಂದಲೇ ಹೀರಿಕೊಂಡರು. ಆಗ ಆ ಮಾಂತ್ರಿಕನು ಅಜ್ಞಾನದಿಂದ ವ್ಯಾಪ್ತನಾಗಿ:-ನಾನು ಪಾಪಿಯುಂತೂ ಸರಿಯೇ! ಆದರೆ ಇನ್ನು ಮುಂದೆ ನನ್ನ ಗತಿಯೇನು? ಎನಲು, ದೀಕ್ಷಿತರು:-ಕೃತಕರ್ಮದಂತೆ ಫಲವನ್ನು ಅನುಭೋಗಿಸು, ಅದಕ್ಕೆ ನಾನೇನುಮಾಡಲಿ? ಎಂದರು. ಆಗ ಮಾಂತ್ರಿಕನು:-ಭಕ್ತರಕ್ಷಕನೇ, ಅರಸನೇ ಪ್ರಜೆಗಳನ್ನು ಪೀಡಿಸಹತ್ತಿದರೆ, ತಾಯಿಯೇ ಮಗನನ್ನು ಹೊಡೆಯಹತ್ತಿದರೆ ಬಂಧುಗಳೇ ಭಗಿನಿಯರನ್ನು ಮಾರಹತ್ತಿದರೆ ಅವರು ಯಾರಿಗೆ ಶರಣು ಹೋಗಬೇಕು? ನಾನಂತೂ ನಿನ್ನ ಮರೆಹೊಕ್ಕಿರುವೆನು! ನೀನು ಈ ಪ್ರಕಾರ ನನ್ನನ್ನು ಉಪೇಕ್ಷಿಸಿದರೆ ನಾನು ಯಾರಿಗೆ ಶರಣುಹೋಗಲಿ? ಹೇ ದಯಾಸಾಗರನೇ, ಮಕ್ಕಳ ಸಹಸ್ರಾಪರಾಧಗಳನ್ನು ಮಾತೆಯು ಕ್ಷಮಿಸುವಂತೆ, ನೀನು ನನ್ನ ಯಾವತ್ತೂ ಅಪರಾಧಗಳನ್ನು ಕ್ಷಮಿಸಿ, ನನ್ನನ್ನು ಉದ್ಧರಿಸು, ಎಂದು ಹಲವು ಬಗೆಯಿಂದ ಸ್ತುತಿಸಲು, ಶತ್ರುಮಿತ್ರರಲ್ಲಿ ಸಮಪ್ರೇಮವುಳ್ಳ ದೀಕ್ಷಿತರು ಮಾಂತ್ರಿಕನನ್ನು ಕೃಪಾದೃಷ್ಟಿಯಿಂದ ನೋಡಲು, ಅವನ ಕಣ್ಣುಗಳು ಮೊದಲಿ

ನಂತೆ ಕಾಣಹತ್ತಿದವು. ಆಗ ಅವನು ಎದ್ದು ನಿಂತು, ದೀಕ್ಷಿತರಿಗೆ ಸಾಷ್ಟಾಂಗ ವೆರಗಿ:-ತಮ್ಮ ಸಮಾಗಮಸುಖವನ್ನು ಅನುಭವಿಸುವ ಇಚ್ಛೆಯುಂಟು! ಅಪ್ಪಣೆ ಯಾಗಬೇಕು, ಎಂದು ನುಡಿದನು. ಆಗ ದೀಕ್ಷಿತರು ಅವನಿಗೆ ತಮ್ಮ ಶಿಷ್ಯ ವೃಂದದಲ್ಲಿ ಇರಲು ಅನುಗ್ರಹಿಸಿದರು. ಆ ಮೇಲೆ ಆ ಮಾಂತ್ರಿಕನು ಆಮರಣ ಚಿದಂಬರಸೇವೆಯನ್ನು ಮಾಡುತ್ತ ಚಿರಕಾಲ ಸುಖವನ್ನನುಭವಿಸಿದನು. ಆ ಮಾಂತ್ರಿಕನ ಶಿಷ್ಯರಾದರೂ ಕೃತಕರ್ಮಕ್ಕೆ ಅನುತಾಪಗೊಂಡು, ಶ್ರೀ ಸೇವೆ ಯನ್ನು ಮಾಡುತ್ತ ಅಲ್ಲಿಯೇ ಉಳಕೊಂಡರು. ಹಿಂದಕ್ಕೆ ವೈರಭಾವದಿಂದ ರಾವಣನೂ, ಜಾರಕರ್ಮದಿಂದ ಗೋಪಿಕಾ ಸ್ತ್ರೀಯರೂ, ಪ್ರೇಮಭಾವದಿಂದ ಉದ್ಧವನೂ ಸದ್ಗತಿಯನ್ನು ಹೊಂದಿದಂತೆ ಈ ಮಾಂತ್ರಿಕನು ಸದ್ಗತಿಯನ್ನು ಹೊಂದಿದನು. ಸಾರಾಂಶ ಸತ್ಪುರುಷರ ಸಹವಾಸವನ್ನು ಯಾವ ದೃಷ್ಟಿಯಿಂದ ಮಾಡಿದರೂ ಕಲ್ಯಾಣವಾಗುವದು.

ಒಂದು ದಿವಸ ತೆಲಗು ದೇಶದ ನಾರಾಯಣಭಟ್ಟನೆಂಬೊಬ್ಬ ಬ್ರಾಹ್ಮ ಣನು ಚಿದಂಬರ ದೀಕ್ಷಿತರ ದರ್ಶನವನ್ನು ತೆಗೆದುಕೊಳ್ಳಬೇಕೆಂದು ಆಲೋಚಿಸಿ, ಮುರಿಗೋಡಕ್ಕೆ ಬಂದನು ಆಗ ದೀಕ್ಷಿತರು ಅವನ ಕುಶಲವಾರ್ತೆಯನ್ನು ಕೇಳಿ, ಈ ಹೊತ್ತು ಮಹಾಪಙ್ಕ್ತಿಯಲ್ಲಿಯೇ ಪ್ರಸಾದಕ್ಕೆ ಬರಬೇಕೆಂದು ಹೇಳಿ ದರು. ಆಗ ನಾರಾಯಣಭಟ್ಟನು ಇಳಕೊಂಡ ಸ್ಥಳಕ್ಕೆ ಹೋಗಿ ಸ್ನಾನವನ್ನು ಮಾಡಿ, ನಿತ್ಯಕರ್ಮಗಳನ್ನು ನೆರವೇರಿಸಿ, ದೀಕ್ಷಿತರ ಮನೆಗೆ ಭೋಜನಕ್ಕಾಗಿ ಹೋದನು. ಅಷ್ಟರಲ್ಲಿ ಎಲೆಗಳು ಬಡಿಸಲ್ಪಟ್ಟಿದ್ದವು. ನಾರಾಯಣಭಟ್ಟನು ಪಾತ್ರೆ ಯಲ್ಲಿ ಬಡಿಸಿದ ನುಚ್ಚನ್ನು ನೋಡಿ:-ದೀಕ್ಷಿತರೇ, ನಾನು ನುಚ್ಚನ್ನು ತಿನ್ನುವ ದಿಲ್ಲ. ನನಗೆ ಅಕ್ಕಿಯ ಅನ್ನವು ಬೇಕು ಎಂದು ನುಡಿದನು. ಬೇಡಿದ ಕೂಡಲೆ ತನ್ನ ಸರ್ವಸ್ವವನ್ನಾದರೂ ಕೊಡಲಿಕ್ಕೆ ಸಿದ್ಧನಾಗಿರುವವನ ಬಳಿಯಲ್ಲಿ ಜಿಹ್ವಾ ಸ್ವಾದಕ್ಕಾಗಿ ಅಕ್ಕೀ ಅನ್ನವನ್ನು ಬೇಡುವ ಆ ಬ್ರಾಹ್ಮಣನ ಅಜ್ಞಾನವನ್ನು ಎಷ್ಟೆಂದು ಹೇಳಬೇಕು? ಕಾಮಧೇನುವಿನ ಹತ್ತರಹೋಗಿ, ಕಜ್ಜಾಯವನ್ನು ಬೇಡಿದಂತೆ ಅವನ ಯಾಚನೆಯು ಹಾಸ್ಯಾಸ್ಪದವಲ್ಲವೇ? ಆಗ ದೀಕ್ಷಿತರು ನಾರಾ ಯಣಭಟ್ಟನನ್ನು ಕುರಿತು:-ಪಙ್ಕ್ತಿಭೇದ ಮಾಡುವದು ಮಹಾಪಾಪವು! ಅದರಿಂದ ನರಕವೇ ಪ್ರಾಪ್ತವಾಗುತ್ತದೆ. ಕಾರಣ ನೀನು ಅಕ್ಕಿಯನ್ನು ತಕ್ಕೊಂಡು, ಬೇರೆ ಕಡೆಗೆ ಹೋಗಿ ಅಡಿಗೆಯನ್ನು ಮಾಡಿಕೊಂಡು ನಿನ್ನ ಕ್ಷುಧೆಯನ್ನು ತೃಪ್ತಿ ಬಡಿಸಿಕೋ ಎಂದು ಹೇಳಿ, ಅವನಿಗೆ ಬಂದು ಬೊಗಸೆ ಅಕ್ಕಿಯನ್ನು ಕೊಟ್ಟರು,

ಆಗ ನಾರಾಯಣಭಟ್ಟನು ಅವನ್ನು ಒಯ್ದು ತನ್ನಲ್ಲಿಯ ಪಾತ್ರೆಯಲ್ಲಿ ಹಾಕಲು, ಅವು ಅಕ್ಷಯವಾದವು. ಅದನ್ನು ನೋಡಿ ನಾರಾಯಣಭಟ್ಟನು ಸಂತೋಷ ಬಟ್ಟು, ಗರ್ವಿತನಾಗಿ ಬ್ರಾಹ್ಮಣಸಂತರ್ಪಣೆಯನ್ನಾರಂಭಿಸಿದನು. ಈ ಸುದ್ದಿಯು ನಾಲ್ಕೂ ಕಡೆಗೆ ಹಬ್ಬಲು, ದಿನೇ ದಿನೇ ಬ್ರಾಹ್ಮಣರ ಸಂಖ್ಯೆಯು ಹೆಚ್ಚಾಗ ಹತ್ತಿತು. ಆದ್ದರಿಂದ ಅಡಿಗೆ, ನೀರುಗಳ ಕೆಲಸವು ಬೆಳೆಯಿತು. ಆಗ ನಾರಾಯಣಭಟ್ಟನು ಬೇಸತ್ತು ಬ್ರಾಹ್ಮಣರನ್ನು ಹಳಿಯಹತ್ತಿದನು. ಅವನು ಬ್ರಾಹ್ಮಣರಿಗೆ:-ನೀವು ಆಯತವಾಗಿ ಮಧ್ಯಾಹ್ನಕ್ಕೆ ಒರುವಿರಿ? ಹಾಗು ಆಕಂಠಭೋಜನವನ್ನು ಮಾಡಿ, ಹಾಗೆಯೇ ಹೋಗುವಿರಿ. ನಿಮಗೆ ಮಾಡುವವರಾರು? ದೀಕ್ಷಿತರಲ್ಲಿ ಈ ಸುಖವು ಹ್ಯಾಗೆ ದೊರೆಯುವದು? ಚಿದಂಬರ ದೀಕ್ಷಿತರಲ್ಲಿ ಏನು ಮಹತ್ವವದೆ? ಅವರಲ್ಲಿ ಸುಚ್ಚು-ಬಕ್ಕರಿಗಳನ್ನು ಉಣ್ಣುವದರಲ್ಲಿ ಸಾಕು ಸಾಕಾಗುವದು. ಅವರಂತೆ ನಮ್ಮಲ್ಲಿ ಕದನ್ನವಾಗುವದಿಲ್ಲ. ಆದ್ದರಿಂದ ನೀವು ಬಿದ್ದ ಕೆಲಸಗಳನ್ನು ಮಾಡಿಕೊಂಡು ಇಲ್ಲಿಯೇ ಸುಖವಾಗಿ ಇರಬೇಕು, ಎಂದು ಹೇಳಿದನು. ಆಗ ಬ್ರಾಹ್ಮಣರು ಚಿದಂಬರ ನಿಂದೆಯನ್ನು ಕೇಳಿ, ಕೋಪಗೊಂಡು, ದೀಕ್ಷಿತರ ಬಳಿಗೆ ಬಂದು, ಅವರಿಗೆ ನಾರಾಯಣಭಟ್ಟನ ಗರ್ವೋಕ್ತಿಯನ್ನು ಹೇಳಿದರು. ಆಗ ದೀಕ್ಷಿತರು:-ಎಲೈ ಭೂಸುರರೇ, ಮನುಷ್ಯನ ಮೂಲಸ್ವಭಾವವು ಎಂದಿಗೂ ಬದಲಾಗಲಾರದು. ಪ್ರತಿಯೊಬ್ಬರ ಆಚರಣವು ಅವರವರ ಸ್ವಭಾವಕ್ಕನುಗುಣವಾಗಿಯೇ ಇರುವದು. ಆದ್ದರಿಂದ ನಾರಾಯಣಭಟ್ಟನ ಗರ್ವೋಕ್ತಿಯ ವಿಚಾರವು ನಮಗೇತಕ್ಕೆ? ನೀವು ಮಾತ್ರ ಇಂದಿನಿಂದ ನಮ್ಮಲ್ಲಿಯೇ ಭೋಜನಕ್ಕೆ ಬರ್ರಿ. ಮಿಷ್ಟಾನ್ನಕ್ಕೆ ಮರುಳಾಗಬೇಡಿರಿ. ಮನುಷ್ಯನಿಗೆ ಸ್ವಾದನ್ನವೂ ಕದನ್ನವೂ ಸರಿಯಾಗಿಯೇ ತೃಪ್ತಿಯನ್ನುಂಟುಮಾಡುವವು. ಹೊತ್ತಿಗೆ ಸರಿಯಾಗಿ ಎಂಥ ಅನ್ನ ದೊರೆತರೂ ಅದು ಅಮೃತವೇ ಸರಿ; ಆದರೆ ಹೊತ್ತು ಮೀರಿ ದೊರೆತ ಸ್ವಾದನ್ನವು ಕೂಡ ಕದನ್ನವಾಗುವದು, ಎಂದು ಹೇಳಿದರು. ಅಂದಿನಿಂದ ಬ್ರಾಹ್ಮಣರೆಲ್ಲರು ದೀಕ್ಷಿತರ ಮನೆಯಲ್ಲಿಯೇ ಭುಂಜಿಸಹತ್ತಿದರು.

ಒಂದುದಿವಸ ಚಿದಂಬರ ದೀಕ್ಷಿತರು ನಾರಾಯಣಭಟ್ಟನ ಗರ್ವಹರಣ ಮಾಡಬೇಕೆಂದು ಯೋಚಿಸಿ, ಶುಕ್ಲವೃತ್ತಿಯ ನೆವದಿಂದ ಆತನ ಮನೆಗೆ ಹೋಗಿ, 'ಭವತಿ ಭಿಕ್ಷಾಂ ದೇಹಿ' ಎಂದು ನುಡಿದರು. ಆಗ ನಾರಾಯಣಭಟ್ಟನು ಚಿದಂಬರ ದೀಕ್ಷಿತರು ತನ್ನ ಮನೆಗೆ ಶುಕ್ಲವೃತ್ತಿಗೆ ಬಂದದ್ದನ್ನು ನೋಡಿ, ಕೊಬ್ಬೇರಿ, ಒಳಗಿನಿಂದ ಒಂದು ಬೊಗಸೆ ಅಕ್ಕಿಯನ್ನು ತಂದು, ಚಿದಂಬರ ದೀಕ್ಷಿತರ ಪಾತ್ರೆ

ಯಲ್ಲಿ ಹಾಕಲು, ದೀಕ್ಷಿತರು ಸುಮ್ಮನೆ ಮನೆಗೆ ತೆರಳಿದರು. ಇತ್ತ ನಾರಾಯಣಭಟ್ಟನ ಅಕ್ಷಯ ಪಾತ್ರೆಯು ಕಟ್ಟಾಯಿತು. ಅದನ್ನು ನೋಡಿ ಆತನು ಬೆದರಿ ಮನಸ್ಸಿನಲ್ಲಿ:-ಇದು ದೀಕ್ಷಿತರ ಲೀಲೆಯು. ಅವರು ನನ್ನ ಗರ್ವಹರಣಕ್ಕಾಗಿ ಈ ಉಪಾಯವನ್ನು ಯೋಜಿಸಿದರು, ಎಂದು ಆಲೋಚಿಸಿ, ಅನುತಾಪಪಟ್ಟು ಹತಗರ್ವವುಳ್ಳವನಾಗಿ ದೀಕ್ಷಿತರಿದ್ದೆಡೆಗೆ ಬಂದು:-ದಯಾನಿಧಿಗಳಾದ ದೀಕ್ಷಿತರೇ, ನಾನು ಅಪರಾಧಿಯಿರುವೆನು. ಬ್ರಾಹ್ಮಣರನ್ನು ವ್ಯರ್ಥವಾಗಿ ಹಳಿದೆನು. ನಿಮ್ಮ ಮಹಿಮೆಯನ್ನರಿಯದೆ, ನಿಮಗೂ ದುರ್ಭಾಷಣಗಳನ್ನು ಆಡಿದೆನು. ಈಗ ಈ ದೀನನನ್ನು ನಿಮ್ಮ ಹೊರತು ಯಾರು ಉದ್ಧರಿಸುವರು? ಹೇಗಾದರೂ ಮಾಡಿ ನನ್ನ ಅಪರಾಧಗಳನ್ನು ಕ್ಷಮಿಸಿ, ನನ್ನನ್ನು ಕಾಪಾಡಬೇಕು, ಎಂದು ಬೇಡಿಕೊಂಡನು. ಆಗ ದೀಕ್ಷಿತರು:-ನಾನೇನು ಮಾಡಲಿ? ನಿನ್ನ ಕರ್ಮದ ಫಲವನ್ನು ನೀನು ಅನುಭವಿಸು. ನಿನಗೆ ಬ್ರಾಹ್ಮಣಪೀಡೆಯಿಂದ ಈ ಸ್ಥಿತಿಯುಂಟಾಯಿತು. ಒಂದುವೇಳೆ ಬ್ರಾಹ್ಮಣರು ಕೆಟ್ಟ ಮಾತುಗಳನ್ನಾಡಿದರೂ ಅವುಗಳನ್ನು ತಡಕೊಂಡು, ತಿರುಗಿ ಅವರನ್ನೇ ವಂದಿಸಬೇಕು ಬ್ರಾಹ್ಮಣರ ಅವಮರ್ಯಾದೆ ಮಾಡುವದರಿಂದ ಜ್ಞಾನವೂ, ಸಂಪತ್ತಿಯೂ, ವೈಭವಗಳೂ ನಾಶವಾಗುವವು. ಕಾರಣ ನೀನು ಈಗ ಬ್ರಾಹ್ಮಣರಿಗೆ ಶರಣುಹೋಗು; ಅಂದರೆ ನಿನಗೆ ಕಲ್ಯಾಣವಾಗುವದು, ಎಂದು ಬೋಧಿಸಿದರು ಆಗ ನಾರಾಯಣಭಟ್ಟನು ಬ್ರಾಹ್ಮಣರಿಗೆ ಶರಣುಹೋದನು. ಬ್ರಾಹ್ಮಣರಾದರೂ ಅವನನ್ನು ಆಶೀರ್ವದಿಸಿದರು. ಆಗ ಬ್ರಾಹ್ಮಣರ ಆಶೀರ್ವಾದದಿಂದ ಪಾಪಮುಕ್ತನಾದ ನಾರಾಯಣಭಟ್ಟನನ್ನು ಸಮೀಪಕ್ಕೆ ಕರೆದು, ಅವನನ್ನು ಆಶೀರ್ವದಿಸಿ:-ಇನ್ನು ಮನೆಗೆ ಹೋಗು, ಎಂದು ಹೇಳಿದರು ಆಗ ನಾರಾಯಣಭಟ್ಟನು ದೀಕ್ಷಿತರನ್ನು ನಮಸ್ಕರಿಸಿ, ಅವರ ಚರಣಗಳನ್ನು ಮನಸಿನಲ್ಲಿ ಧ್ಯಾನಿಸುತ್ತ ತನ್ನ ಊರಿಗೆ ಹೊರಟುಹೋದನು.

---

## ೭ನೆಯ ಪ್ರಕರಣ.

### ತ್ರ್ಯಂಬಕಶಾಸ್ತ್ರಿಗಳ ಗರ್ವಹರಣವೂ, ಶಿಲಾಸುವರ್ಣಕರಣವೂ.

ಒಂದಾನೊಂದು ದಿವಸ ಅಗಡಿಯ ಪುರೋಹಿತ ರಾಮಶಾಸ್ತ್ರಿಗಳು ಸಂಗಡ ಕುಟುಂಬದವರನ್ನು ಕರಕೊಂಡು ತಮ್ಮ ಬಡತನ ಸ್ಥಿತಿಯನ್ನು ದೀಕ್ಷಿತರಿಗೆ ನಿವೇದನಮಾಡಿ, ತತ್ಪರಿಹಾರಾರ್ಥವಾಗಿ ಏನಾದರೊಂದು ಉಪಾಯವನ್ನು ಕೇಳಿ

ಕೊಳ್ಳಬೇಕೆಂಬ ಹೇತುವಿನಿಂದ ಮುರಗೋಡಿಗೆ ಬಂದರು. ಆಗ ದೀಕ್ಷಿತರು ಅವರ ಕ್ಷೇಮವಾರ್ತೆಯನ್ನು ಕೇಳಿ:-ಶಾಸ್ತ್ರಿಗಳೇ, ನಿಮ್ಮ ಮುಖದಿಂದ ಪುರಾಣ ವನ್ನು ಕೇಳಬೇಕೆಂಬ ಇಚ್ಛೆಯುಂಟು. ಅವನ್ನು ಪೂರ್ಣ ಮಾಡುವಿರಾ? ಎನಲು ಶಾಸ್ತ್ರಿಗಳು:-ಮಹದಾಜ್ಞೆಯಂತೆಯೇ ಆಗಲಿ ಎಂದರು.

ಭೋಜನೋತ್ತರದಲ್ಲಿ ರಾಮಶಾಸ್ತ್ರಿಗಳು ಪುರಾಣ ಹೇಳುವದಕ್ಕಾಗಿ ಆಸ್ಥಾನಕ್ಕೆ ಬಂದು, ಆಸನದಲ್ಲಿ ಕುಳಿತುಕೊಂಡರು. ಜನಸಮೂಹವೂ ತಕ್ಕಷ್ಟು ಕೂಡಿತು; ಆದರೆ ಸ್ವವಿದ್ಯಾಭಿಮಾನವುಳ್ಳ † ತ್ರ್ಯಂಬಕ ಶಾಸ್ತ್ರಿಗಳು ಮಾತ್ರ ಬಂದಿದ್ದಿಲ್ಲ. ಅದನ್ನು ಕಂಡು ಅಂತರಜ್ಞರಾದ ದೀಕ್ಷಿತರು ತ್ರ್ಯಂಬಕ ಶಾಸ್ತ್ರಿಗಳ ಗರ್ವಹರಣ ಮಾಡಬೇಕೆಂದು ಬಗೆದು, ಅವರನ್ನು ಕರೆಯುವದಕ್ಕಾಗಿ ತಮ್ಮ ಶಿಷ್ಯನಾದ ಗೋವಿಂದನನ್ನು ಅವರ ಮನೆಗೆ ಕಳಿಸಿದರು. ಗೋವಿಂದನು ಶಾಸ್ತ್ರಿಗಳ ಮನೆಗೆ ಹೋಗಿ:—ನಾನು ಚಿದಂಬರ ದೀಕ್ಷಿತರ ಶಿಷ್ಯನಾದ ಗೋವಿಂದನು. ತಮ್ಮನ್ನು ಪುರಾಣಶ್ರವಣಕ್ಕೆ ಕರೆಯಬಂದಿದ್ದೇನೆ, ಎಂದು ಕರ್ನಾಟಕಭಾಷೆಯಿಂದ ನುಡಿದನು; ಅದನ್ನು ಕೇಳಿ, ತ್ರ್ಯಂಬಕಶಾಸ್ತ್ರಿಗಳು:- ಎನೋ ಗೋವಿಂದಾ, ನೀನು ದೀಕ್ಷಿತರ ಶಿಷ್ಯನೆಂದು ಹೇಳುತ್ತೀ; ಹಾಗು ಪ್ರಾಕೃತಮಾತುಗಳನ್ನಾಡುತ್ತಿರುವಿಯಲ್ಲ? ಛೀ; ನಿಮ್ಮ ಗುರುಗಳೇನು? ನೀನು ಶಿಷ್ಯನೇನು? ಎಂದು ನುಡಿದು, ಆ ಶಿಷ್ಯನ ಅವಮರ್ಯಾದೆಯನ್ನು ಮಾಡಿದರು. ಆಗ ಗೋವಿಂದನು ಖಿನ್ನಮನಸ್ಕನಾಗಿ ದೀಕ್ಷಿತರ ಬಳಿಗೆ ಬಂದು, ಶಾಸ್ತ್ರಿಗಳು ನುಡಿದದ್ದನ್ನೆಲ್ಲ ಸಾಗ್ರವಾಗಿ ಹೇಳಿದನು. ಆಗ ತಮ್ಮ ಅವಮಾನವಾದದ್ದನ್ನು ಕೇಳಿ, ದೀಕ್ಷಿತರು ಗೋವಿಂದನ ಮುಖದಲ್ಲಿ ಭಸ್ಮವನ್ನು ಹಾಕಿದರು. ಕೂಡಲೆ ಅವನು ಗುರುಕೃಪೆಯಿಂದ ಸರ್ವಜ್ಞನಾದನು. ಆ ಮೇಲೆ ಅವನು ಮತ್ತೆ ಗುರುಗಳ ಅಪ್ಪಣೆಯು ನೇರೆಗೆ ತ್ರ್ಯಂಬಕಶಾಸ್ತ್ರಿಗಳ ಮನೆಗೆ ಹೋಗಿ, ಪ್ರಾಸ, ಯಮಕ ಬದ್ಧವಾದ ಸಂಸ್ಕೃತಭಾಷೆಯಿಂದ ಕರೆಯಲು, ಶಾಸ್ತ್ರಿಗಳು ಬೆರಗಾಗಿ ಕೂಡಲೆ ಪುರಾಣಶ್ರವಣಕ್ಕೆ ಬಂದರು. ತ್ರ್ಯಂಬಕಶಾಸ್ತ್ರಿಗಳು ಬಂದದ್ದನ್ನು ನೋಡಿ, ಪುರಾಣಿಕರಾದ ರಾಮಶಾಸ್ತ್ರಿಗಳು ಹೆದರಿದರು. ಅವರು ಅಂಜುತ್ತಂಜುತ್ತ ಮಂಗಲಾಚರಣವನ್ನು ಆರಂಭಮಾಡಲು ತ್ರ್ಯಂಬಕಶಾಸ್ತ್ರಿಗಳು:-ಹಾ! ಪುರಾಣಿಕರೇ, ನನ್ನ ಮುಂದೆ ಪುರಾಣವನ್ನು ಬಹು ಜಾಗರೂಕತೆಯಿಂದ ಹೇಳಿರಿ; ಎಂದು ನುಡಿಯಲು, ರಾಮಶಾಸ್ತ್ರಿಗಳ ಕೈಕಾಲುಗಳೇ ಹೋದವು. ಅವರು ಚಿದಂಬರ

† ಇವರೊಬ್ಬರು ಮುರಗೋಡಸ್ಥರಾದ ಶಾಸ್ತ್ರಿಗಳು.

ದೀಕ್ಷಿತರ ಮೋರೆಯನ್ನು ನೋಡಹತ್ತಿದರು. ಆಗ ಚಿದಂಬರ ದೀಕ್ಷಿತರು ಪುರಾಣಿಕರ ಹುನ್ನೋಗತವನ್ನು ತಿಳಿದು, ಅವರನ್ನು ಸಮೀಪಕ್ಕೆ ಕರೆದು, ಅವರ ಬಾಯಿಯಲ್ಲಿ ವಿಭೂತಿಯನ್ನು ಹಾಕಲು, ಅವರಿಗೆ ಸರ್ವಶಾಸ್ತ್ರಗಳ ಜ್ಞಾನ ವಾಯಿತು. ಬಳಿಕ ರಾಮಶಾಸ್ತ್ರಿಗಳು ಪುರಾಣವನ್ನು ಆರಂಭಿಸಿ, 'ಚಿದಂಬರ' ಈ ಶಬ್ದದ ಅರ್ಥವನ್ನು ವ್ಯಾಕರಣಶಾಸ್ತ್ರಾನುಸಾರವಾಗಿ ಹದಿನೆಂಟು ಪ್ರಕಾರ ದಿಂದ ಹೇಳಿದರು. ಅದನ್ನು ಕೇಳಿ, ತ್ರ್ಯಂಬಕಶಾಸ್ತ್ರಿಗಳು ಹತಗರ್ವವುಳ್ಳವ ರಾಗಿ ದೀಕ್ಷಿತರನ್ನು ಕುರಿತು:-ಮಹಾಪ್ರಭೋ, ನಾನು ತಮ್ಮ ಮಹಿಮೆಯನ್ನು ತಿಳಿಯದೆ, ಕೊಬ್ಬಿನಿಂದ ತಮ್ಮನ್ನು ವ್ಯರ್ಥವಾಗಿ ದೂಷಿಸಿದೆನು. ನನಗೆ ಈ ಅಪರಾಧಸಂಬಂಧವಾಗಿ ಎಂಥ ದೊಡ್ಡ ಶಿಕ್ಷೆಯಾದರೂ ಅದು ಅಲ್ಪವೇ? ಹೇ ಭಕ್ತರಕ್ಷಕನೇ, ನನ್ನ ಕೃತಾಪರಾಧಗಳನ್ನೆಲ್ಲ ಕ್ಷಮಿಸಿ, ತಮ್ಮ ಶಿಷ್ಯವೃಂದದಲ್ಲಿ ನನ್ನ ಸಮಾವೇಶವಾಗುವಂತೆ ಅನುಗ್ರಹಿಸಬೇಕು. ಇಷ್ಟೇ ನನ್ನ ವಿಜ್ಞಾಪನೆ ಯುಂಟು, ಎಂದು ಬೇಡಿಕೊಂಡನು. ದೀಕ್ಷಿತರು ಆ ಮಾತನ್ನು ಮನ್ನಿಸಲು, ತ್ರ್ಯಂಬಕ ಶಾಸ್ತ್ರಿಗಳು ಹರುಷಗೊಂಡು ಅಂದಿನಿಂದ ಸಮಾಧಾನಚಿತ್ತವುಳ್ಳವ ರಾಗಿ ಶಿಷ್ಯವೃತ್ತಿಯಿಂದ ಕಾಲಹರಣ ಮಾಡಹತ್ತಿದರು.

ಮುಂದೆ ಕೆಲವು ದಿವಸಗಳ ತರುವಾಯ ದೀಕ್ಷಿತರು ರಾಮಶಾಸ್ತ್ರಿಗಳಿಗೆ ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಆಗ ಶಾಸ್ತ್ರಿಗಳು ಮನಸ್ಸಿ ನಲ್ಲಿ:-ಬಡತನವು ದೂರಾದೀತೆಂದು ಗುರುಸನ್ನಿಧಿಗೆ ಬಂದೆನು; ಆದರೆ ದೈವಗೇಡಿ ಯಾದ ನನಗೆ ಏನೂ ಲಾಭವಾಗಲಿಲ್ಲ. ನಮ್ಮ ಹಣೇಬರಹವೇ ಹೀಗಿದ್ದ ಬಳಿಕ ಯಾರಿಗೆ ದೋಷ ಕೊಡತಕ್ಕದ್ದು? ಎಂದು ಚಿಂತಿಸುತ್ತಿರಲು, ಅಂತರಜ್ಞರಾದ ದೀಕ್ಷಿತರು ಅವರ ಮನೋಭಿಪ್ರಾಯವನ್ನು ತಿಳಕೊಂಡು, ಅವರನ್ನು ಕಳಿಸುವ ದಕ್ಕಾಗಿ ತಾವೊಬ್ಬರೇ ಗೋಸ್ವರ ಕೇಳುವಷ್ಟು ದೂರದ ವರೆಗೆ ಅವರ ಸಂಗಡ ಹೋಗಿ, ಅಲ್ಲಿ ಅವರನ್ನು ಒತ್ತಟ್ಟಿಗೆ ಕರೆದೊಯ್ದು, ಅವರ ತಲೆಯ ಮೇಲಿನ ಶಾಲು ತಕ್ಕೊಂಡು, ಅದರಲ್ಲಿ ರಹಸ್ಯವಾಗಿ ಒಂದು ಕಲ್ಲನ್ನು ಕಟ್ಟಿ:-ಶಾಸ್ತ್ರಿಗಳೇ, ಮನೆಗೆ ಹೋಗುವವರೆಗೆ ಇದನ್ನು ಬಿಚ್ಚಬೇಡಿರಿ, ಎಂದು ಹೇಳಿ, ತಾವು ಮರಳಿ ಮುರಗೋಡಿಗೆ ಹೋಗುವದಕ್ಕಾಗಿ ಹೊರಟರು. ಆಗ ಶಾಸ್ತ್ರಿಗಳು ಹಿರಿ ಹಿರಿ ಹಿಗ್ಗಿ, ದೀಕ್ಷಿತರನ್ನು ಅಭಿವಂದಿಸಿ ಮುಂದಕ್ಕೆ ಸಾಗಿದರು.

ಸಾಧಾರಣವಾಗಿ ಸ್ತ್ರೀಯರಿಗೆ ದುಡ್ಡಿನ ಮೇಲೂ, ವಸ್ತ್ರ-ಒಡಿವೆಗಳ ಮೇಲೂ ಆಶೆಯು ಬಹಳ! ಈ ಸ್ತ್ರೀಧರ್ಮಕ್ಕನುಗುಣವಾಗಿ ರಾಮಶಾಸ್ತ್ರಿಗಳ

ಪತ್ನಿಯು ದೀಕ್ಷಿತರು ಏನು ಕೊಟ್ಟಿರುವರೆಂಬದನ್ನು ತಿಳಕೊಳ್ಳಬೇಕೆಂಬ ಇಚ್ಛೆ ಯಿಂದ ಅರ್ಧಮಾರ್ಗದಲ್ಲಿ ಪತಿಗೆ:-ದೀಕ್ಷಿತರು ನಿಮಗೆ ಏನು ಕೊಟ್ಟಿರುವರು? ಎಂದು ಕೇಳಲು, ಶಾಸ್ತ್ರಿಗಳು:-ಮನೆಗೆ ಹೋದಬಳಿಕ ತೋರಿಸುತ್ತೇನೆ, ಎನ್ನಲು ಪತ್ನಿಯು:-ಇಲ್ಲ, ಈಗಲೇ ತೋರಿಸಿರಿ, ಎಂದು ಹಟಹಿಡಿದಳು; ಆದರೆ ಮಧ್ಯ ಮಾರ್ಗದಲ್ಲಿ ಆ ಪದಾರ್ಥವನ್ನು ನೋಡಲಿಕ್ಕೆ ಗುರುಗಳ ಅಪ್ಪಣೆಯಿಲ್ಲದ್ದರಿಂದ ಆ ಗಂಡ-ಹೆಂಡಿರು ಹೀಗೆಯೇ ಬಡಿದಾಡುತ್ತ ದೊಡ್ಡವಾಡದ ವರೆಗೆ ಬಂದರು. ಅಲ್ಲಿ ಶಾಸ್ತ್ರಿಗಳು ಸ್ನಾನಕ್ಕೆ ಹೋದ ಸಮಯದಲ್ಲಿ ಅವರ ಪತ್ನಿಯು ಗಂಟುಬಿಚ್ಚಿ ನೋಡಿದಳು ಆಗ ಅದರಲ್ಲಿ ಕಲ್ಲು ಕಂಡಿತು. ಕೂಡಲೆ ಅವಳು ಸಿಟ್ಟಾಗಿ, ಅದನ್ನು ಒತ್ತಟ್ಟಿಗೆ ಇಂಬಾಗಿ ಬಿಸುಟಿದಳು. ಅಷ್ಟರಲ್ಲಿ ಶಾಸ್ತ್ರಿಗಳು ಅಲ್ಲಿಗೆ ಬಂದು:-ಓಹೋ! ಇದೇನು ಮಾಡಿದೆ? ನೀನು ಮಹಾಪಾಪಿಷ್ಠೆಯು. ನಿನಗೆ ಧಿಕ್ಕಾರವಿರಲಿ, ಎಂದು ಪತ್ನಿಯನ್ನು ಬಯ್ದು ಗುರುವಿಶ್ವಾಸಿಗಳಾದ ಶಾಸ್ತ್ರಿಗಳು ಬೀಸಾಟಿದ ಕಲ್ಲನ್ನು ತಂದು, ಕೈಯಲ್ಲಿ ತಕ್ಕೊಂಡು ನೋಡಹತ್ತಿದರು. ಆಗ ಅವರಿಗೆ ಅದರಲ್ಲಿ ಸುವರ್ಣದ ಕಣಗಳು ಕಂಡವು; ಆದ್ದರಿಂದ ಅವರು ಆ ಕಲ್ಲನ್ನು ಒಡೆದು ನೋಡಲು, ಅರ್ಧಕಲ್ಲು ಭಂಗಾರವಾಗಿತ್ತು. ಶಾಸ್ತ್ರಿಗಳು ಅದನ್ನು ಪತ್ನಿಗೆ ತೋರಿಸಿ:-ಊರತನಕ ಹಾಗೇ ಹೋಗಿದ್ದರೆ ಎಲ್ಲ ಕಲ್ಲು ಬಂಗಾರದ್ದಾಗು ತ್ತಿತ್ತು; ಹಾಯ್ ಹಾಳು ಮಾಡಿದೆ! ಛೇ! ನಿನ್ನ ಕಡೆಗಾದರೂ ದೋಷವೇನು? ನಮ್ಮ ದೈವದಲ್ಲಿ ಇಷ್ಟೇ ಲಭ್ಯಾಂಶವಿತ್ತು. ಉಪಾಯವಿಲ್ಲ. ಅರ್ಧಕಲ್ಲು ಬಂಗಾರ ವಾದದ್ದಾದರೂ ನಮ್ಮ ಮೇಲೆ ಶ್ರೀ ಚಿದಂಬರ ದೀಕ್ಷಿತರ ಅನುಗ್ರಹವೆಂತಲೇ ಹೇಳಬಹುದು, ಎಂದು ನುಡಿದು, ಪತ್ನೀಸಮೇತರಾಗಿ ಸ್ವಗ್ರಾಮಕ್ಕೆ ಹೋಗಿ ಸುಖದಿಂದ ಕಾಲಹರಣ ಮಾಡಹತ್ತಿದರು.

---

## ೪ನೆಯ ಪ್ರಕರಣ.

## ಮುದುಕನ ಮದುವೆ.

ಒಂದು ಸಮಯದಲ್ಲಿ ತೊಂಭತ್ತು ವರ್ಷದ ಒಬ್ಬ ವೃದ್ಧ ಬ್ರಾಹ್ಮಣನು ಮನಸಿನಲ್ಲಿ ಮದುವೆಯ ಆಶೆಯನ್ನು ಧರಿಸಿ, ದೀಕ್ಷಿತರ ದರ್ಶನಕ್ಕೆ ಬಂದನು. ಆಗ ದೀಕ್ಷಿತರು ಆ ವೃದ್ಧನ ಮನೋಭಿಪ್ರಾಯವನ್ನು ಜ್ಞಾನದೃಷ್ಟಿಯಿಂದ ತಿಳ ಕೊಂಡು:-ಎಲೈ ಭೂಸುರನೇ, ನೀನು ಯಾವ ಇಚ್ಛೆಯಿಂದ ಇಲ್ಲಿಗೆ ಬಂದಿರುವಿ?

ಸಂಶಯವನ್ನು ಬಿಟ್ಟು ಹೇಳು, ಎಂದು ನುಡಿಯಲು, ಆ ವೃದ್ಧ ಬ್ರಾಹ್ಮಣನು ಮನದೊಳಗೆ ನಾಚಿಕೊಂಡು, ಸಭಿಕರ ಮೋರೆಯನ್ನವಲೋಕಿಸುತ್ತ ಸುಮ್ಮನೆ ಕುಳಿತುಕೊಂಡನು. ಆಗ ದೀಕ್ಷಿತರು:-ನೀನು ಲಗ್ನದ ಇಚ್ಛೆಯಿಂದ ಇಲ್ಲಿಯ ವರೆಗೆ ಬಂದಿರುವಿಯಷ್ಟೇ? ಅದಕ್ಕೆ ದಾಕ್ಷಿಣ್ಯವೇಕೆ? ಇದ್ದ ಸಂಗತಿಯನ್ನೆಲ್ಲ ನಿಃಸಂಶಯವಾಗಿ ಹೇಳು, ಎನ್ನಲು, ಬ್ರಾಹ್ಮಣನು:-ಸರ್ವಜ್ಞರಾದ ತಮಗೆ ಹೇಳುವದೇನು? ಎನಲು, ದೀಕ್ಷಿತರು:-ಒಳ್ಳೇದು, ಇನ್ನುಮೇಲೆ ನೀನು ಲಗ್ನದ ಚಿಂತೆಯನ್ನು ತ್ಯಜಿಸು. ನಿನ್ನ ಲಗ್ನವನ್ನು ನಾವು ಮಾಡಿಸುವೆವು. ನಂಬಿಗೆಯು ಮಾತ್ರ ಇರಲಿ. ಈಗ ನೀನು ಮಾಡತಕ್ಕ ಕಾರ್ಯವೇನಂದರೆ:-ಇಲ್ಲಿಂದ ನಾಲ್ಕು ಹರದಾರಿಗಳ ಮೇಲೆ ಮುನೋಳ್ಳಿಯೆಂಬ ಗ್ರಾಮವಿರುವದು. ಅಲ್ಲಿ ನಾರಾಯಣ ಭಟ್ಟನೆಂಬ ಒಬ್ಬ ಸತ್ವಸ್ಥ ಬ್ರಾಹ್ಮಣನಿರುವನು. ಅವನಲ್ಲಿ ಸುಶೀಲೆಯೂ, ಸುಂದರಿಯೂ ಆದ ಒಬ್ಬ ಕನ್ಯೆಯಿರುವಳು. ನೀನು ಅಲ್ಲಿಯವರೆಗೆ ಹೋಗಿ, ನಾರಾಯಣಭಟ್ಟನ ಬಳಿಯಲ್ಲಿ ಕನ್ಯೆಯನ್ನು ಯಾಚಿಸಬೇಕು. ಅವನು ನಿಶ್ಚಯ ವಾಗಿ ಈ ಮಾತಿಗೆ ಒಪ್ಪಿಕೊಳ್ಳುವನು. ಆ ಮೇಲೆ ಗೃಹಸ್ಥಾಶ್ರಮವನ್ನು ಸ್ವೀ ಕರಿಸಿ, ಸುಖವಾಗಿ ಕಾಲಹರಣಮಾಡು, ಎಂದು ಹೇಳಿದರು. ಆ ಮೇಲೆ ಆ ವೃದ್ಧನು ಕನ್ಯಾರ್ಥಿಯಾಗಿ ಮುನೋಳ್ಳಿಗೆ ಹೋಗಬೇಕೆಂದು ಹೊರಟನು. ಅದೇದಿವಸ ಮುನೋಳ್ಳಿಯಲ್ಲಿ ಒಂದು ಚಮತ್ಕಾರವಾಗಿತ್ತು. ಅದೇನಂದರೆ:-ನಾರಾಯಣಭಟ್ಟನ ಮಗಳು ರೋಗಾದಿಗಳೇನೂ ಇಲ್ಲದೆ ಅಕಸ್ಮಾತ್ತಾಗಿ ಪಂಚತ್ವ ವನ್ನೈದಿದ್ದಳು. ತಾಯಿ-ತಂದೆಗಳು ಆ ಶವವನ್ನು ಮುಂಭಾಗದಲ್ಲಿಟ್ಟುಕೊಂಡು ಶೋಕಮಾಡುತ್ತ ಕುಳಿತಿದ್ದರು. ಆ ಸಮಯದಲ್ಲಿಯೇ ಆ ವೃದ್ಧ ಬ್ರಾಹ್ಮ ಣನು ನಾರಾಯಣಭಟ್ಟನ ಮನೆಗೆ ಹೋಗಿ, ಅವನನ್ನು ಕುರಿತು:—ನೀನು ನಿನ್ನ ಮಗಳನ್ನು ನನಗೆ ಕೊಟ್ಟು, ಮದುವೆಯನ್ನು ಮಾಡಿಕೊಡಬೇಕೆಂದು ನಿನಗೆ ಶ್ರೀ ಚಿದಂಬರ ದೀಕ್ಷಿತರ ಆಜ್ಞೆಯಾಗಿದೆ; ಕಾರಣ ತೀವ್ರವಾಗಿ ವಾಞ್ಛ ಯವಾಗಲಿ, ಎಂದು ನುಡಿದನು. ಆಗ ನಾರಾಯಣಭಟ್ಟನು:—ಬ್ರಾಹ್ಮ ಣನೇ, ನೀನು ಹೇಳುವ ಮಾತು ನಿಜವೋ? ಗುರ್ವಾಜ್ಞೆಯು ಎಂದಿಗೂ ಅಸತ್ಯವಾಗಲಾರದ! ಆದರೆ ಕನ್ಯೆಯು ಮಾತ್ರ ಈ ಹೊತ್ತು ಮೃತಳಾಗಿ ದ್ದಾಳೆ. ಇನ್ನು ನಿನಗೆ ಯಾರನ್ನು ಕೊಡಲಿ? ಎಂದು ನುಡಿದನು. ಆಗ ವೃದ್ಧನು:—ಪೂಜ್ಯನೇ, ನನ್ನನ್ನು ನಿರಾಶೆಯೆಂಬ ಸಮುದ್ರದಲ್ಲಿ ಮುಳುಗಿಸ ಬೇಡ. ಗುರುಗಳ ವಚನವು ಕಾಲತ್ರಯದಲ್ಲಿಯೂ ಅಸತ್ಯವಾಗಲಾರದು. ನಾನು

ಗುರುಗಳಿಗೆ ಈ ಎಲ್ಲ ವೃತ್ತಾಂತವನ್ನು ಅರುಹಿ ಬರುವೆನು. ಅಲ್ಲಿಯವರೆಗೆ ಇವಳನ್ನು ಸಂಸ್ಕರಿಸಬೇಡ, ಎಂದು ಹೇಳಿ, ಶೀಘ್ರವಾಗಿ ಗುರುಗಳ ಸಮೀಪಕ್ಕೆ ಬಂದು:—ತಮ್ಮ ಅಪ್ಪಣೆಯು ಮೇರೆಗೆ ಮುನೋಳ್ಳಿಗೆ ಹೋಗಿ, ನಾರಾಯಣಭಟ್ಟನ ಬಳಿಯಲ್ಲಿ ಕನ್ನೆಯನ್ನು ಯಾಚಿಸಿದೆನು; ಆದರೆ ಈ ಹೊತ್ತೇ ಅವಳು ಮೃತಳಾಗಿರುವಳೆಂದು ಅವನು ಹೇಳಿದನು. ನಾನು ಬರುವವರೆಗೆ ಅವಳನ್ನು ಸಂಸ್ಕರಿಸಬೇಡ, ಎಂದು ಹೇಳಿ, ಈ ಯಾವತ್ತು ಸಂಗತಿಯನ್ನು ತಮಗೆ ತಿಳಿಸಬೇಕೆಂದು ನಾನು ಬಂದಿರುವೆನು, ಎಂದು ಹೇಳಿದಳು ಅದನ್ನು ಕೇಳಿ ದೀಕ್ಷಿತರು:—ಇಗೋ ಈ ವಿಭೂತಿಯನ್ನು ತೆಗೆದುಕೊಳ್ಳು. ಇದನ್ನು ಆ ಕನ್ಯೆಯ ಮುಖದಲ್ಲಿ ಹಾಕು; ಅಂದರೆ ಅವಳು ಸಚೇತನಳಾಗುವಳು. ಬಳಿಕ ಲಗ್ನನಿಶ್ಚಯವನ್ನು ಮಾಡಿಕೊಂಡು ಮರಳಿ ಇಲ್ಲಿಗೆ ಬಾ, ಅಂದರೆ ನಿನಗೆ ವಿಪುಲದ್ರವ್ಯವನ್ನು ಕೊಡುವೆನು. ಆ ಮೇಲೆ ವಿವಾಹವನ್ನು ಮಾಡಿಕೊಳ್ಳು, ಎಂದು ನುಡಿಯಲು, ಆ ವೃದ್ಧನು ಸಂತೋಷಹೊಂದಿ ವಿಭೂತಿಯನ್ನು ತಕ್ಕೊಂಡು ಒತ್ತರದಿಂದ ನಾರಾಯಣಭಟ್ಟನ ಮನೆಗೆ ಬಂದನು; ಹಾಗು ಶವದ ಮೇಲಿನ ವಸ್ತ್ರವನ್ನು ಬದಿಗೆ ಮಾಡಿ, ಅದರ ಬಾಯಿಯಲ್ಲಿ ಗುರುದತ್ತ ವಿಭೂತಿಯನ್ನು ಹಾಕಿದನು. ಕೂಡಲೆ ಆ ವಧುವು "ನಿದ್ದೆಯಿಂದ ಏಳುವವರ ಹಾಗೆ" ಒಮ್ಮೆಲೆ ಎದ್ದು, ಕುಳಿತುಕೊಂಡಳು. ಆಗ ತಾಯಿ-ತಂದೆಗಳಿಗೂ, ವಿಶೇಷವಾಗಿ ಆ ವೃದ್ಧ ಬ್ರಾಹ್ಮಣನಿಗೂ ಆನಂದವಾಯಿತು. ತರುವಾಯ ಅವನು ನಾರಾಯಣಭಟ್ಟನಿಗೆ:-ಹಾ! ಇನ್ನು ತಡವೇಕೆ? ತೀವ್ರವಾಗಿ ವಾಗ್ನಿಶ್ಚಯವನ್ನು ಮಾಡಿರಿ, ಎಂದು ನುಡಿದನು. ಆಗ ಆ ಕನ್ಯೆಯ ತಾಯಿಯು ಬ್ರಾಹ್ಮಣನ ಮಾತುಗಳನ್ನು ಕೇಳಿ, ಗಂಡನನ್ನು ಕುರಿತು:—ಏನು? ಇಂಥ ವೃದ್ಧನಿಗೆ ಕನ್ಯೆಯನ್ನು ಕೊಡುವದು ಉಚಿತವೇ? ಇವನಿಗೆ ಕನ್ಯೆಯನ್ನು ಕೊಟ್ಟರೆ ಇವಳಿಗೆ ಯಾವ ಸೌಖ್ಯವಾಗುವದು? ನಾನಂತೂ ಈ ಜರಠನಿಗೆ ಕನ್ಯೆಯನ್ನು ಕೊಡಗೊಡುವದಿಲ್ಲ, ಎನ್ನಲು, ನಾರಾಯಣಭಟ್ಟನು: ಪ್ರಿಯೆ, ಯಾವನ ವಿಭೂತಿಯ ಪ್ರಭಾವದಿಂದ ಕನ್ಯೆಯು ಜೀವಿಸಿದಳೋ ಅವನ ವಚನವನ್ನು ನಾವು ಉಲ್ಲಂಘಿಸಿದರೆ ನಮಗೆ ಕ್ಷೇಮವಾಗುವದೇ? ಆ ಮಹಾಸ್ವಾಮಿಯ ವಚನದಂತೆ ವರ್ತಿಸುವದರಲ್ಲಿಯೇ ನಮಗೆ ಕಲ್ಯಾಣವಾಗುವದೆಂದು ಪರಿಪರಿಯ ವಚನಗಳಿಂದ ಹೆಂಡತಿಯನ್ನು ಸಮಾಧಾನಗೊಳಿಸಿ, ಕನ್ಯಾರ್ಥಿಯಾದ ಬ್ರಾಹ್ಮಣನಿಗೆ:—ದ್ವಿಜವರ್ಯನೇ, ನಿನಗೆ ಕನ್ಯಾದಾನವನ್ನು ಮಾಡಿಕೊಡುವೆನು. ಶೀಘ್ರವಾಗಿ ಲಗ್ನದ ಸಿದ್ಧತೆಯನ್ನು ಮಾಡಿಕೊಂಡು ಬಾ,

ಎನ್ನಲು, ಆ ವೃದ್ಧನಿಗೆ ವಿಶೇಷ ಆನಂದವಾಯಿತು. ಬಳಿಕ ಅವನು ಮತ್ತೆ ಗುರು ಸನ್ನಿಧಿಗೆ ಬಂದು ವರ್ತಿಸಿದ ವೃತ್ತಾಂತವನ್ನೆಲ್ಲ ಹೇಳಿದಳು. ಆಗ ದೀಕ್ಷಿತರು ಮಂದಹಾಸ್ಯಮಾಡಿ ಬ್ರಾಹ್ಮಣನಿಗೆ ವಿಪುಲದ್ರವ್ಯವನ್ನೂ, ಸಂಗಡ ತಮ್ಮ ಪರಿವಾರದ ಜನರನ್ನೂ ಕೊಟ್ಟರು. ಆಗ ಆ ವೃದ್ಧ ಬ್ರಾಹ್ಮಣನು ಮುದಿತನಾಗಿ, ಅವರೆಲ್ಲರಿಂದ ಕೂಡಿಕೊಂಡು ಮನೋಳ್ಳಿಗೆ ಹೋಗಿ, ಒಳ್ಳೇ ಸಂಭ್ರಮದಿಂದ ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಪತ್ನಿಯಿಂದೊಡಗೂಡಿ ಪುನಃ ಮುರುಗೋಡಕ್ಕೆ ಬಂದು, ದೀಕ್ಷಿತರ ಆಶೀರ್ವಾದವನ್ನು ಹೊಂದಿ, ಅವರ ಅಪ್ಪಣೆಯ ಮೇರೆಗೆ ಸ್ವಗ್ರಾಮಕ್ಕೆ ಹೋಗಿ ಸುಖವಾಗಿ ಕಾಲಹರಣ ಮಾಡಹತ್ತಿದನು. ಮುಂದೆ ಅವನಿಗೆ ಶ್ರೀ ಚಿದಂಬರಾನುಗ್ರಹದಿಂದ ಸ್ವಲ್ಪ ದಿವಸಗಳಲ್ಲಿ ಒಬ್ಬ ಮಗನು ಜನಿಸಿದನು. ಆಗಂತೂ ಆ ವೃದ್ಧನಿಗೆ ಆದ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಅವನು ಅಂದಿನಿಂದ ಚಿದಂಬರನ ಚರಣದಲ್ಲಿ ವಿಶೇಷ ಲೀನನಾಗಿ ತನ್ನ ಮಿಕ್ಕ ಆಯುಷ್ಯವನ್ನು ಒಳ್ಳೇ ಸೌಖ್ಯದಿಂದ ಕಳೆದು, ಅಂತ್ಯದಲ್ಲಿ ಸದ್ಗತಿಯನ್ನು ಹೊಂದಿದನು.

---

## ೯ನೆಯ ಪ್ರಕರಣ.

## ಕೆಲವು ಸಂಕ್ಷಿಪ್ತ ಮಹಿಮೆಗಳು.

೧ ದಾರಿದ್ರ್ಯ ವಿಮೋಚನ:—ಮುರಗೋಡದಲ್ಲಿ ಚಿದಂಬರ ದೀಕ್ಷಿತರು ತಮ್ಮ ಅದ್ಭುತ ಮಹಿಮೆಗಳನ್ನು ಪ್ರಕಟಮಾಡುತ್ತಿರಲು, ಅವರಿಗೆ ಮೃತ್ಯುಂಜಯನೆಂಬ ಮೂರನೇ ಮಗನು ಜನಿಸಿದನು. ಆಗ ದೀಕ್ಷಿತರು ಆನಂದೋತ್ಸವಗಳನ್ನು ಮಾಡಿದರು. ಹೀಗಿರಲು, ಒಂದು ದಿವಸ ಒಬ್ಬ ಶೂದ್ರನು ಬಡತನಕ್ಕೆ ಬೇಸತ್ತು, ಚಿದಂಬರ ದೀಕ್ಷಿತರ ಕೀರ್ತಿಯನ್ನು ಕೇಳಿ, ಅವರ ದರ್ಶನಾರ್ಥವಾಗಿ ಮುರುಗೋಡಕ್ಕೆ ಬಂದನು. ಆಗ ಅಂತರಜ್ಞರಾದ ದೀಕ್ಷಿತರು ಅವನ ಅಂತರಂಗವನ್ನು ತಿಳಕೊಂಡು, ಆ ಶೂದ್ರನನ್ನು ಕುರಿತು:- ನೀನು ಬಂದ ಕಾರಣವು ನನಗೆ ಗೊತ್ತಾಯಿತು. "ಕಿವಿಯಲ್ಲಿ ನತ್ತು ಇಟ್ಟುಕೊಂಡು ಸುತ್ತೆಲ್ಲ ಶೋಧಿಸುವಂತೆ" ನಿನ್ನ ಮನೆಯಲ್ಲಿಯೇ ಹಣವನ್ನಿಟ್ಟುಕೊಂಡು ವ್ಯರ್ಥವಾಗಿ ಸಂಕಟಕ್ಕೆ ಒಳಗಾಗಿರುವಿ! ನಿನ್ನ ಅಜ್ಜನು ದೇವರ ಜಗುಲಿಯ ಈಶಾನ್ಯದಿಕ್ಕಿಗೆ ವಿಪುಲ ಹಣವನ್ನು ಹೂಳಿಟ್ಟಿರುವನು. ಆದ್ದರಿಂದ

ನೀನು ಅಲ್ಲಿಯ ಭೂಮಿಯನ್ನು ಅಗಿದು, ಅಲ್ಲಿದ್ದ ದ್ರವ್ಯವನ್ನೆಲ್ಲ ತಕ್ಕೊಂಡು ಸುಖವಾಗಿ ಪ್ರಪಂಚಮಾಡು, ಎಂದು ಹೇಳಿ, ಅವನಿಗೆ ಊರಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಆಗ ಆ ಶೂದ್ರನು ಸಂತೋಷಹೊಂದಿ ದೀಕ್ಷಿತರ ಅಪ್ಪಣೆಯ ಮೇರೆಗೆ ತನ್ನ ಗ್ರಾಮಕ್ಕೆ ಹೋಗಿ, ಅವರು ಹೇಳಿದಂತೆ ಜಗುಲಿಯ ಈಶಾನ್ಯದಿಕ್ಕಿಗೆ ಬಹಳ ಆಳವಾಗಿ ಭೂಮಿಯನ್ನು ಅಗಿದನು; ಆದರೆ ಅವನಿಗೆ ದ್ರವ್ಯವು ದೊರೆಯಲಿಲ್ಲ. ಆಗ ಅವನು ಖಿನ್ನನಾಗಿ ಮತ್ತೆ ಮುರುಗೋಡಕ್ಕೆ ಬಂದು, ದ್ರವ್ಯವು ಸಿಗಲಿಲ್ಲವೆಂದು ದೀಕ್ಷಿತರಿಗೆ ಹೇಳಿದನು. ಆಗ ದೀಕ್ಷಿತರು:—ದ್ರವ್ಯವು ಅಲ್ಲಿಯೇ ಇರುವದು. ನೀನು ಅಗಿಯಲಿಕ್ಕೆ ಸ್ವಲ್ಪ ತಪ್ಪಿರುವಿ, ಆದ್ದರಿಂದ ಈಗ ಅಗಿದ ಸ್ಥಳದ ಉತ್ತರದಿಕ್ಕಿಗೆ ಒಂದು ಗೇಣಿನಮೇಲೆ ನಾಲ್ಕು ಮೊಳ ಭೂಮಿಯನ್ನು ಆಳವಾಗಿ ಅಗಿದರೆ, ನಿನಗೆ ನಿಶ್ಚಯವಾಗಿ ದ್ರವ್ಯಲಾಭ ವಾಗುವದು, ಎಂದು ಹೇಳಿದರು. ಆಗ ಆ ಭಾವಿಕನಾದ ಶೂದ್ರನು ದೀಕ್ಷಿತರ ವಚನದಲ್ಲಿ ವಿಶ್ವಾಸವನ್ನಿಟ್ಟು, ಮತ್ತೆ ತನ್ನ ಗ್ರಾಮಕ್ಕೆ ಹೋಗಿ ಅವರು ಹೇಳಿದ ಸ್ಥಳದಲ್ಲಿ ಅಗಿಯಲು, ವಿಪುಲದ್ರವ್ಯವು ದೊರೆಯಿತು. ಆಗ ಆ ಶೂದ್ರನು ಹರ್ಷಿತ ನಾಗಿ ಮನಸಿನಲ್ಲಿ ಚಿದಂಬರನನ್ನು ಸ್ತುತಿಸುತ್ತ, ಆ ದ್ರವ್ಯವನ್ನೆಲ್ಲ ತಕ್ಕೊಂಡು ಮುರಗೋಡಕ್ಕೆ ಬಂದು, ಅದನ್ನು ದೀಕ್ಷಿತರ ಮುಂದಿಟ್ಟು ನಮಸ್ಕಾರಮಾಡಿ ದನು. ಆಗ ದೀಕ್ಷಿತರು:—ಇದು ನಿನ್ನ ಹಣವು. ನಾವು ತಕ್ಕೊಂಡು ಮಾಡ ತಕ್ಕದ್ದೇನು? ಈ ಹಣವನ್ನೆಲ್ಲ ನೀನೇ ತಕ್ಕೊಂಡು ಹೋಗುವದು ಉಚಿತವು; ಆದರೆ ನೀನು ಇಂದಿನಿಂದ ದೇವ-ದ್ವಿಜರಲ್ಲಿ ನಂಬಿಗೆಯುಳ್ಳವನಾಗಿ ಅನ್ನದಾನ ವನ್ನು ಮಾಡುತ್ತಿರು, ಎಂದು ಹೇಳಿದರು. ಕೂಡಲೆ ಆ ಶೂದ್ರನು ಅದರೊಳಗಿನ ಅರ್ಧ ಹಣವನ್ನು ದೇವ-ದ್ವಿಜರಿಗೆ ಹಂಚಿ, ಮಿಕ್ಕ ಅರ್ಧ ಹಣವನ್ನು ತಕ್ಕೊಂಡು ತನ್ನ ಗ್ರಾಮಕ್ಕೆ ಹೋಗಿ ಅಲ್ಲಿಯಾದರೂ ದೀಕ್ಷಿತರ ಅಪ್ಪಣೆಯ ಮೇರೆಗೆ ದಿನಾಲು ದಾನ-ಧರ್ಮಗಳನ್ನು ಮಾಡುತ್ತ ಸುಖದಿಂದ ಕಾಲಹರಣ ಮಾಡಹತ್ತಿದನು.

* * * * *

೨ ಹುಲಿಯಿಂದ ಹುಡುಗನನ್ನು ಕಾಪಾಡಿದ್ದು:—ಗೋದಾ ತೀರವಾಸಿಯಾದ ಒಬ್ಬ ಬ್ರಾಹ್ಮಣನು ತನಗೆ ಸಂತತಿಯಾದರೆ, ಕುಟುಂಬ ಸಹಿತ ನಾಗಿ ದೀಕ್ಷಿತರ ದರ್ಶನಕ್ಕೆ ಬರುತ್ತೇನೆಂದು ಹರಿಕೆ ಹೊತ್ತಿದ್ದನು. ಹರಿಕೆಯ ನ್ನು ಹೊತ್ತ ಸ್ವಲ್ಪ ದಿವಸಗಳಲ್ಲಿಯೇ, ಅವನಿಗೆ ಶ್ರೀ ಚಿದಂಬರ ಕೃಪೆಯಿಂದ ಒಬ್ಬ ಮಗನು ಜನಿಸಿದನು. ಆಗ ಅವನಿಗೆ ಸಂತೋಷವಾಯಿತು; ಹಾಗು ಮೊದಲು

ಹರಿಕೆ ಹೊತ್ತಂತೆ ದೀಕ್ಷಿತರ ದರ್ಶನಕ್ಕಾಗಿ ಮುರಗೋಡಕ್ಕೆ ಬರಬೇಕೆಂದು ಹೊರಟನು. ಬರಬರುತ್ತ ಮಧ್ಯಮಾರ್ಗದಲ್ಲಿಯೇ ಅಸ್ತಮಾನವಾದ್ದರಿಂದ ಅವನು ಅಲ್ಲೇ ಸಮೀಪದಲ್ಲಿದ್ದ ಶಿವಾಲಯದಲ್ಲಿ ವಸತಿ ಮಾಡಿದನು; ಆದರೆ ಸಮೀಪದಲ್ಲಿ ಊರು ಇಲ್ಲದ್ದರಿಂದಲೂ, ಸುತ್ತಲೂ ಕಟ್ಟಡವಿಯು ವಿಸ್ತಾರವಾಗಿ ಹಬ್ಬಿಕೊಂಡದ್ದರಿಂದಲೂ, ಅವರೆಲ್ಲರಿಗೂ ಭಯವುಂಟಾಗಹತ್ತಿತು; ಆದರೆ ಮಾಡು ತ್ತಾರೇನು? ಹಾಗೇ ಎಲ್ಲರೂ ಘಟ್ಟಿ ಮನಸು ಮಾಡಿಕೊಂಡು, ಊಟ-ಉಡಿಗೆ ಗಳನ್ನೆಲ್ಲ ತೀರಿಸಿ ಮನಸ್ಸಿನಲ್ಲಿ ಮಹಾದೇವನನ್ನು ಧ್ಯಾನಿಸುತ್ತ ಮಲಗಿಕೊಂಡರು.

ಮಧ್ಯರಾತ್ರಿಯ ಸಮಯವು, ನಾಲ್ಕೂ ಕಡೆಗೆ ಸ್ವಚ್ಛವಾದ ಬೆಳದಿಂಗಳು ಪಸರಿಸಿತ್ತು; ಆದರೆ ಮೇಲೆ ಹೇಳಿದ ಸ್ಥಳದಲ್ಲಿ ಮಾತ್ರ ಗಿಡಗಳ ಸಂದಣಿಯ ಮೂಲ ಕವಾಗಿ ಬೆಳದಿಂಗಳದ ಪ್ರವೇಶವೇ ಆಗಿದ್ದಿಲ್ಲ. ಸುತ್ತುಮುತ್ತೆಲ್ಲ ಕಗ್ಗತ್ತಲೆಯು ಹರಡಿಕೊಂಡಿತ್ತು. ಬ್ರಾಹ್ಮಣ ಕುಟುಂಬವೆಲ್ಲ ಗಾಢ ನಿದ್ರಾವಶವಾಗಿತ್ತು. ಇಷ್ಟರಲ್ಲಿ ಒಂದು ಬುಭುಕ್ಷಿತ ಹುಲಿಯು ಮನುಷ್ಯರ ನಾತ ಹಿಡಿದು, ಶಿವಾ ಲಯದ ಸಮೀಪಕ್ಕೆ ಬಂತು; ಹಾಗು ಹರಿಕೆಯಿಂದ ಹುಟ್ಟಿ ಎಲ್ಲರಿಗೂ ಸಂತೋ ಷವನ್ನಿತ್ತ ಆ ಹುಡುಗನನ್ನು ಹಲ್ಲಿನಿಂದ ಹಿಡಿಯಿತು. ಕೂಡಲೆ ಆ ಮಗುವು ಚಟ್ಟನೇ ಚೀರಲು, ದಂಪತಿಗಳು ಎಚ್ಚತ್ತು ನೋಡುತ್ತಾರೆ, ಹುಲಿಯು ಹುಡುಗ ನನ್ನು ಹಿಡಿದದೆ. ಆಗ ಕೇಳುವದೇನು? ಎಲ್ಲರೂ ಗಾಬರಿಯಾಗಿ ಚಿದಂಬರ ನಾಮವನ್ನು ಉಚ್ಚಸ್ವರದಿಂದ ಉಚ್ಚರಿಸಹತ್ತಿದರು. ಆಗ ಆ ಹುಲಿಯು ಚಿದಂ ಬರ ನಾಮೋಚ್ಚಾರವನ್ನು ಕೇಳಿ, ಒಮ್ಮೆಲೆ ಆ ಬಾಲಕನನ್ನು ಬಿಟ್ಟು, ಅಡವಿ ಯೊಳಗೆ ಓಡಿಹೋಯಿತು. ಆಗ ದಂಪತಿಗಳು ಆನಂದಗೊಂಡು, ಬೆಳಗಾದ ಮೇಲೆ ಬಾಲಕನನ್ನು ಸಂಗಡ ಕರಕೊಂಡು, ಗುರುಗಳ ಸನ್ನಿಧಿಗೆ ಬಂದು, ಅವ ರನ್ನು ನಮಸ್ಕರಿಸಿ, ಅವರ ಚರಣದ ಮೇಲೆ ಹುಡುಗನನ್ನಿಟ್ಟು, ಮಾರ್ಗದಲ್ಲಿ ವರ್ತಿಸಿದ ಸಂಗತಿಯನ್ನೆಲ್ಲ ದೀಕ್ಷಿತರಿಗೆ ಹೇಳಿದರು. ಆಗ ದೀಕ್ಷಿತರು:—ದಂಪ ತಿಗಳಿರಾ, ನಿಮ್ಮ ವಿಶ್ವಾಸವೇ ನಿಮಗೆ ಫಲಕೊಟ್ಟಿತು, ಎಂದು ನುಡಿದು, ಅವರೆಲ್ಲ ರನ್ನು ಆಶೀರ್ವದಿಸಿದರು. ಆಗ ಗುರುಕೃಪೆಯಿಂದ ಸಂತುಷ್ಟವಾದ ಬ್ರಾಹ್ಮಣ ಪರಿವಾರದವರು ಮತ್ತೆ ಗುರುಗಳನ್ನು ಅಭಿವಂದಿಸಿ, ಅವರ ಅಪ್ಪಣೆಯನ್ನು ಪಡ ಕೊಂಡು ಸ್ವಗ್ರಾಮಕ್ಕೆ ಸುಖರೂಪವಾಗಿ ಹೋದರು.

+ + + + + + +

೩ **ಜಲಸುವರ್ಣ ಕರಣ:**—ಒಂದಾನೊಂದು ದಿವಸ ಒಬ್ಬ ಬಡ ಬ್ರಾಹ್ಮಣನು ಚಿದಂಬರದೀಕ್ಷಿತರ ಕೀರ್ತಿಯನ್ನು ಕೇಳಿ, ಅವರಿದ್ದೆಡೆಗೆ ಹೋಗಿ, ಅವರಿಗೆ ತನ್ನ ಹೀನ-ದೀನಸ್ಥಿತಿಯನ್ನು ನಿವೇದಿಸಬೇಕೆಂದು ಯೋಚಿಸಿ, ದೀಕ್ಷಿತರನ್ನು ಹುಡುಕುತ್ತ ಮುರಗೋಡಕ್ಕೆ ಬಂದನು. ಆ ಹೊತ್ತು ಪರ್ವಕಾಲವಿದ್ದದರಿಂದ ಚಿದಂಬರ ದೀಕ್ಷಿತರು ಸ್ನಾನಾರ್ಥವಾಗಿ ಮುರಗೋಡದಿಂದ ಎರಡು ಹರದಾರಿಯ ಮೇಲಿರುವ ಮಲಾಪಹಾರಿ (ಮಲಪ್ರಭಾ) ಎಂಬ ಹೊಳೆಗೆ ಹೋಗಿದ್ದರು. ಈ ಸುದ್ದಿಯು ಬ್ರಾಹ್ಮಣನಿಗೆ ತಿಳಿಯಲು, ದರ್ಶನೋತ್ಕಂಠಿತನಾದ ಆ ವಿಪ್ರನು ಹಾಗೆಯೇ ಗುರುಗಳ ಸಮೀಪಕ್ಕೆ ಸಾಗಿದನು. ಆ ಕಾಲಕ್ಕೆ ಶ್ರೀ ಗುರುಗಳು ನಾಭಿಮಾತ್ರ ಜಲದಲ್ಲಿ ನಿಂತು, ಸ್ನಾನಮಾಡುತ್ತಿದ್ದರು. ಬ್ರಾಹ್ಮಣನು ದೀಕ್ಷಿತರನ್ನು ನೋಡಿ, ಮುದಿತನಾಗಿ, ಅವರನ್ನು ಸಾಷ್ಟಾಂಗಪೂರ್ವಕವಾಗಿ ಅಭಿವಂದಿಸಿ:—ಪ್ರಭುವೇ, ತಮ್ಮ ಕೀರ್ತಿಯನ್ನು ಕೇಳಿ ದೂರದೇಶದಿಂದ ಇಲ್ಲಿಗೆ ಬಂದಿರುವೆನು. ನಾನು ಬಹಳ ಬಡವನಿದ್ದು, ಕುಟುಂಬವತ್ಸಲನಿರುವೆನು. ನಮ್ಮೆಲ್ಲರಿಗೆ ದಿನಾಲು ಹೊಟ್ಟೆತುಂಬ ಆಹಾರ ದೊರೆಯುವದು ದುರ್ಲಭವಾಗಿದೆ. ಅಲ್ಲದೆ ಮಕ್ಕಳ ಉಪನಯನ-ವಿವಾಹಾದಿ ಕಾರ್ಯಗಳನ್ನಾದರೂ ಇದೇ ವರುಷದಲ್ಲಿ ಮಾಡಬೇಕಾಗಿದೆ. ಈ ಪ್ರಕಾರದ ತೊಂದರೆಯಲ್ಲಿ ತೊಳಲಾಡುತ್ತಿರುವ ನನ್ನನ್ನು ಅನುಗ್ರಹಿಸಿ, ಈ ಮಹಾ ಸಂಕಟದೊಳಗಿಂದ ಮುಕ್ತಮಾಡಬೇಕೆಂದು ಬೇಡಿಕೊಂಡನು. ಆಗ ದೀಕ್ಷಿತರು ಬ್ರಾಹ್ಮಣನ ಮಾತಿಗೆ ಕನಿಕರಪಟ್ಟು:—ದ್ವಿಜನೇ, ನನ್ನ ಯಾವ ಕೀರ್ತಿಯನ್ನು ಕೇಳಿ ಇಲ್ಲಿಯ ವರೆಗೆ ಬಂದಿರುವಿ? ನಾನೂ ನಿನ್ನಂತೆಯೇ ಬಡಬ್ರಾಹ್ಮಣನಿರುವೆನು! ಆದಾಗ್ಯೂ ನಾನು ಈಗ ಕೊಡುವ ಅಲ್ಪ ದಾನದಿಂದ ನೀನು ಸಂತೋಷಹೊಂದುವಿಯಾ? ಎನ್ನಲು, ಬ್ರಾಹ್ಮಣನು:—ಗುರುಗಳೇ, ತಮ್ಮ ಆಶೀರ್ವಾದವೇ ನನಗೆ ಕಾಮಧೇನುವು, ಎಂದು ನುಡಿದನು. ಆಗ ದೀಕ್ಷಿತರು ಬ್ರಾಹ್ಮಣನ ಭಾವನೆಯನ್ನು ತಿಳಿದು, ತಮ್ಮ ಕೈಯೊಳಗಿನ ಕಲಶವನ್ನು ನೀರಿನಿಂದ ಪೂರ್ಣವಾಗಿ ತುಂಬಿ, ಅದನ್ನು ಆ ವಿಪ್ರನ ಉಡಿಯಲ್ಲಿ ಸುರುವಲು, ಉಡಿಯೊಳಗಿನ ಉದಕವೆಲ್ಲ ತತಾಲಕ್ಕೆ ಬಂಗಾರವಾಯಿತು. ಅದನ್ನು ನೋಡಿ ಬ್ರಾಹ್ಮಣನು ಆನಂದಭರಿತನಾಗಿ ದೀಕ್ಷಿತರನ್ನು ಕೊಂಡಾಡಹತ್ತಿದನು. ಆಗ ದೀಕ್ಷಿತರು ಆತನನ್ನು ಆಶೀರ್ವದಿಸಿ:—ಬ್ರಾಹ್ಮಣನೇ, ಈ ಕೃತ್ಯವನ್ನು ಎಲ್ಲಿಯೂ ಪ್ರಕಟ ಮಾಡಬೇಡ. ಇದು ಪ್ರಕಟವಾದ ದಿವಸ ನಿನಗೆ ಅಳಿಗಾಲವು ಬಂತೆಂದು ತಿಳಿ, ಎಂದು ಹೇಳಿ, ಅವನಿಗೆ ಮನೆಗೆ ಹೋ

ಗಳಿಕ್ಕೆ ಅಪ್ಪಣೆಯನ್ನು ಕೊಟ್ಟು, ತಾವು ಆಹ್ನಿಕವನ್ನು ಮುಗಿಸಿ, ಮರಳಿ ಮುರಗೋಡಿಗೆ ಬಂದರು ಅತ್ತ ಬ್ರಾಹ್ಮಣನು ಬಂದ ಕಾರ್ಯವು ಕೈಗೂಡಿದ್ದರಿಂದ ಹರ್ಷಿತನಾಗಿ, ದೀಕ್ಷಿತರ ಗುಣಗಳನ್ನು ಹೊಗಳುತ್ತ ಸ್ವಸ್ಥಾನಕ್ಕೆ ಹೋಗಿ ಸುಖದಿಂದ ಸಂಸಾರವನ್ನು ಸಾಗಿಸಹತ್ತಿದನು.

† † † † † †

೪ ಮೃತಪುತ್ರ ಸಂಜೀವನ:—ಒಂದು ದಿವಸ ಗೋದಾತೀರವಾಸಿಯಾದ ಬಾಳಕೃಷ್ಣನೆಂಬ ಬ್ರಾಹ್ಮಣನು ಕುಟುಂಬಸಹಿತವಾಗಿ ಚಿದಂಬರ ದೀಕ್ಷಿತರ ದರ್ಶನಕ್ಕೆ ಬರಬೇಕೆಂದು ಹೊರಟನು. ಅವನು ಮಾರ್ಗಕ್ರಮಣ ಮಾಡುತ್ತಿರಲು, ಅವನಿಗೆ ಮುರಗೋಡದಿಂದ ನಾಲ್ಕು ಹರದಾರಿಯ ಮೇಲಿರುವ ಸತ್ತೀಗೇರಿ ಎಂಬ ಗ್ರಾಮದ ಬಳಿಯಲ್ಲಿ ಅಸ್ತಮಾನವಾದ್ದರಿಂದ ಅವನು ಅಲ್ಲಿಯೇ ಉಳುಕೊಂಡನು. ಆ ರಾತ್ರಿಯಲ್ಲಿ ಅವನಿಗೆ ಒಂದು ದುರ್ಧರ ಪ್ರಸಂಗವು ಒದಗಿತು. ಅದೇನಂದರೆ:—ಅವನ ಚಿಕ್ಕ ಮಗುವಿಗೆ ಒಮ್ಮಿಂದೊಮ್ಮೆ ಭಯಂಕರವಾದ ಮೈಲಿಗಳೆದ್ದವು. ಅದರ ಕಾವಿಗೆ ಮಗುವು ಚಡಪಡಿಸಹತ್ತಿತು. ಆಗ ಬಾಳಕೃಷ್ಣನು ಬಹಳವಾಗಿ ಹೆದರಿದನು. ಮಗುವು ಮೂರುದಿವಸಗಳ ವರೆಗೆ ಒಂದೇಸವನೆ ಒದ್ದಾಡಿ, ನಾಲ್ಕನೇ ದಿವಸ ಮೃತವಾಯಿತು. ಆಗ ಆ ದಂಪತಿಗಳಿಗೆ ಬಹಳ ದುಃಖವಾಯಿತು. ಅವರು ಆ ಮೃತಪುತ್ರನನ್ನು ಸಮೀಪದಲ್ಲಿರುವ ಒಂದು ಹೊಲದೊಳಗೆ ಹುಗಿದು, ತಾವು ಅಲ್ಲಿ ಮೂರುದಿವಸ ಇದ್ದು, ನಾಲ್ಕನೇ ದಿವಸ ಸ್ನಾನ ಮಾಡಿ ಶುಚಿರ್ಭೂತರಾಗಿ ಮುರಗೋಡಿಗೆ ಬಂದರು. ಎಂದಿನಂತೆ ದೀಕ್ಷಿತರ ಬಳಿಯಲ್ಲಿ ಯಾತ್ರಸ್ಥರ ಸಂದಣಿಯಾಗಿತ್ತು. ಅವರಲ್ಲಿ ಈ ದೀನ ದಂಪತಿಗಳನ್ನು ಕೇಳುವವರಾರು? ಚಿದಂಬರ ದೀಕ್ಷಿತರು ಸರ್ವಾಂತರ್ಯಾಮಿಗಳಾದವರಲ್ಲವೆ? ಅವರು ದಂಪತಿಗಳ ದೃಢಭಾವವನ್ನು ತಿಳಕೊಂಡು, ಯಾತ್ರಿಕರ ಗದ್ದಲದಲ್ಲಿ ಆ ದಂಪತಿಗಳನ್ನು ಮುಂದಕ್ಕೆ ಕರೆದು, ಅವರ ಕ್ಷೇಮವನ್ನು ಕೇಳಲಾರಂಭಿಸಿದರು. ಆಗ ದಂಪತಿಗಳ ದುಃಖೋದಧಿಯು ಉಕ್ಕೇರಿತು. ಕುತ್ತಿಗೆಯ ಶಿರಗಳು ಬಿಗಿದು, ಕಣ್ಣೊಳಗಿಂದ ದುಃಖಾಶ್ರುಗಳು ಸ್ರವಿಸಹತ್ತಿದವು. ಆಗ ದೀಕ್ಷಿತರು:—ವ್ಯರ್ಥವಾಗಿ ಯಾಕೆ ರೋದಿಸುವಿರಿ? ನಿಮ್ಮ ಶೋಕದ ಕಾರಣವನ್ನಾದರೂ ಹೇಳಿರಿ. ಅದಕ್ಕೆ ಏನಾದರೂ ಪ್ರತೀಕಾರ ಮಾಡುವಂತೆ ಇದ್ದರೆ, ಮಾಡೋಣ, ಎಂದು ನುಡಿದರು. ಅದಕ್ಕೆ ಬಾಳಕೃಷ್ಣನು:—"ನಾವಿಬ್ಬರು ಚಿಕ್ಕ ಮಗುವನ್ನು ಸಂಗಡ ಕರಕೊಂಡು ದರ್ಶನಾರ್ಥವಾಗಿ ಇಲ್ಲಿಗೆ ಬರುತ್ತಿರಲು,

ಮಾರ್ಗದಲ್ಲಿ ಸತ್ತೀಗೇರಿ ಎಂಬ ಗ್ರಾಮದ ಬಳಿಯಲ್ಲಿ ಅದು ಮೈಲಿಗಳೆದ್ದು ಮೃತ ವಾಯಿತು, ಎಂದು ಹೇಳಿದನು. ಆಗ ದೀಕ್ಷಿತರು:—ವ್ಯಾಧಿಪೀಡಿತನಾದ ಶಿಶು ವನ್ನು ಮೃತವಾಯಿತೆಂದು ಭಾವಿಸಿ, ಅದನ್ನು ಹುಗಿದು ಬಂದಿರುವಿ. ಅದು ನಿಜ ವಾಗಿ ಮೃತವಾಗಿಲ್ಲ. ಸದ್ಯಕ್ಕೆ ಆ ಶಿಶುವು ನೀನು ಹುಗಿದ ಹೊಲದಲ್ಲಿ ಆಡುತ್ತಿ ರುವದು. ಹೋಗು, ಅದನ್ನು ತಕ್ಕೊಂಡು ಬಾ, ಎಂದು ನುಡಿಯಲು, ಗುರು ಮುಖದಿಂದ ಹೊರಟ ಅಮೃತತುಲ್ಯವಾಣಿಯನ್ನು ಕೇಳಿ ಬಾಳಕೃಷ್ಣನು ತುಂಬಾ ಸಂತೋಷಪಟ್ಟು, ಶಿಶುವನ್ನು ತರುವದಕ್ಕಾಗಿ ಸತ್ತೀಗೇರಿಗೆ ಹೋಗಿ ನೋಡು ತ್ತಾನೆ, ಗುರುಗಳ ಹೇಳಿಕೆಯಂತೆ ಶಿಶುವು ನಿಜವಾಗಿ ಆಡುತ್ತಿತ್ತು. ಆಗ ಕೇಳುವದೇನು? ಎಲ್ಲರೂ ಆನಂದಾಶ್ಚರ್ಯಗೊಂಡು, ದೀಕ್ಷಿತರನ್ನು ಹೊಗಳ ಹತ್ತಿದರು. ಬಾಳಕೃಷ್ಣನಂತೂ ಬಹು ಮೋದಗೊಂಡು ಶಿಶುವನ್ನು ತಕ್ಕೊಂ-ಡು,ಗುರುಸನ್ನಿಧಿಗೆ ಬಂದು, ಅದನ್ನು ಗುರುಚರಣದ ಮೇಲಿಟ್ಟು ಗುರುಸ್ತೋತ್ರ ವನ್ನಾರಂಭಿಸಿದನು. ಆಗ ದೀಕ್ಷಿತರು ಶಿಶುವನ್ನೂ, ಅದರ ಮಾತಾ-ಪಿತೃಗಳ ನ್ನೂ ಆಶೀರ್ವದಿಸಿ ಅವರಿಗೆ ಊರಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಬಳಿಕ ಬಾಳಕೃಷ್ಣನೂ, ಅವನ ಪತ್ನಿಯೂ ಗುರುಗಳಿಗೆ ಅಭಿವಂದಿಸಿ, ಸುತ ನಿಂದೊಡಗೂಡಿ, ಸ್ವಗ್ರಾಮಕ್ಕೆ ಹೊರಟು ಹೋಗಿ, ಚರಾಚರ ಪ್ರಾಣಿಗಳಿಗೆ ಒಡೆ ಯರಾದ ಚಿದಂಬರ ದೀಕ್ಷಿತರ ಚರಣಗಳನ್ನು ಧ್ಯಾನಿಸುತ್ತ,ತಮ್ಮ ಆಯುಷ್ಯದ ಉಳಿದ ಭಾಗವನ್ನು ಸುಖಮಯವಾಗಿ ಮಾಡಿಕೊಂಡರು.

* * * * * * * * * * * * * * *

೫ ಶೂದ್ರ ಸಂರಕ್ಷಣವು:—ಒಂದಾನೊಂದು ದಿವಸ ಇಬ್ಬರು ಶೂದ್ರ ಸಹೋದರರು ಶ್ರೀ ಚಿದಂಬರ ದೀಕ್ಷಿತರ ದರ್ಶನಾರ್ಥವಾಗಿ ಮುರಗೋ ಡಿಗೆ ಬರುತ್ತಿರಲು, ಮಾರ್ಗದಲ್ಲಿ ಒಂದು ಹುಲಿಯು ಒಮ್ಮಿಂದೊಮ್ಮೆ ಜಿಗಿಯುತ್ತ ಗರ್ಜಿಸುತ್ತ ಅವರ ಸಮೀಪಕ್ಕೆ ಬಂದು, ತನ್ನ ಸ್ವಭಾವಕ್ಕನುಗುಣವಾಗಿ ಅವರೊ ಳಗಿನವನೊಬ್ಬನ ಕುತ್ತಿಗೆಯನ್ನು ಹಿಡಿಯಿತು. ಅದನ್ನು ನೋಡಿ, ಮತ್ತೊಬ್ಬ-ಅವನ ತಮ್ಮನು ಗಾಬರಿಯಾಗಿ:—"ನನ್ನ ಅಣ್ಣನನ್ನು ಕೊಂದರೆ ನಿನಗೆ ಚಿದಂ ಬರ ದೀಕ್ಷಿತರ ದುರಾಯಿ" (ಆಣೆ) ಎನ್ನಲು, ಹುಲಿಯು ದುರಾಯಿಯನ್ನು ಕೇಳಿ, ಕೂಡಲೆ ಕಂಠವನ್ನು ಬಿಟ್ಟು ಅಲ್ಲೇ ಸಮೀಪದಲ್ಲಿ ಸುಮ್ಮನೆ ಕುಳಿತು ಕೊಂಡಿತು. ಆಗ ತಮ್ಮನು ಸ್ವಲ್ಪ ಧೈರ್ಯವನ್ನು ತಳೆದು, ಮುಂದುವರಿದು, ಅಣ್ಣನ ಕೊರಳಿಗೆ ದೋತರವನ್ನು ಸುತ್ತಿ ಅವನನ್ನು ದೀಕ್ಷಿತರ ಬಳಿಗೆ ಕರಕೊಂ

ಡು ಬಂದು, ಅವನನ್ನು ದೀಕ್ಷಿತರ ಪಾದಗಳ ಮೇಲೆ ಹಾಕಿ, ತಾನು ಮುಂಭಾಗದಲ್ಲಿ ಕೈಜೋಡಿಸಿಕೊಂಡು ನಿಂತನು. ಆಗ ಸರ್ವಸಾಕ್ಷಿಗಳಾದ ದೀಕ್ಷಿತರು:—ನೋಡಿರಿ, ಈಗ ದುರ್ಬುದ್ಧಿಯುಳ್ಳ ದುಷ್ಟರ ಪ್ರಾಬಲ್ಯವೇ ವಿಶೇಷವಾಗಿರುವದು. ನಿರುಪದ್ರವಪ್ರಾಣಿಗಳನ್ನು ದುರಾಯಿಯಿಂದ ವ್ಯರ್ಥವಾಗಿ ಘಾಸಿಗೊಳಿಸುತ್ತಾರೆ. ಸಾಂಪ್ರತದಲ್ಲಿ ಈ ಶೂದ್ರರಾದರೂ ಇದೇ ಕೃತ್ಯವನ್ನು ಕೈಕೊಂಡು ಮಾರ್ಗದಲ್ಲಿ ಒಂದು ಹುಲಿಯನ್ನು ಪ್ರತಿಬಂಧಿಸಿ ಬಂದಿರುವರು. ಅದು ಆ ಸ್ಥಳದಲ್ಲಿ ಅನ್ನ-ನೀರುಗಳಿಲ್ಲದೆ ಅಸುವನ್ನು ತೊರೆದರೆ, ಆ ದೋಷಕ್ಕೆ ಯಾರು ಪಾತ್ರರು? ಶೂದ್ರರೇ, ಈ ಬಗೆಯಾಗಿ ಪ್ರಾಣಿಗಳನ್ನು ಪೀಡಿಸುವದು ಉಚಿತವೇ? ಹೋಗಿರಿ, ಮೊದಲು ದುರಾಯಿಯಿಂದ ಹುಲಿಯನ್ನು ಮುಕ್ತಮಾಡಿ ಬನ್ನಿರಿ, ಎಂದು ನುಡಿಯಲು, ಎಲ್ಲರೂ ಈ ಅಶ್ರುತಪೂರ್ವವೃತ್ತಾಂತವನ್ನು ಕೇಳಿ ಆಶ್ಚರ್ಯಚಕಿತರಾದರು. ಶೂದ್ರರು ದುರಾಯಿಯನ್ನು ಬಿಡಿಸಲಿಕ್ಕೆ ಹೊರಟರು. ಯಾತ್ರಸ್ಥರೂ ಈ ಚಮತ್ಕಾರವನ್ನು ನೋಡಬೇಕೆಂದು ಅವರನ್ನು ಹಿಂಬಾಲಿಸಿದರು. ಶೂದ್ರರು ಮೊದಲಿನ ಸ್ಥಳಕ್ಕೆ ಹೋಗಿ ನೋಡುತ್ತಾರೆ, ಹುಲಿಯು ಹಾಗೇ ನಿಂತುಕೊಂಡಿತ್ತು. ಆಗ ಅವರು:—ಪುಂಡರೀಕನೇ, ನೀನು ಧನ್ಯನು; ಅದಕ್ಕಂತಲೇ ನಿನ್ನ ಮೇಲೆ ವಿಶ್ವಂಭರನ ಕೃಪೆಯು ಪೂರ್ಣವಾಗಿರುವದು. ನಾನು ನನ್ನ ದುರಾಯಿಯನ್ನು ತಿರುಗಿ ತಕ್ಕೊಂಡಿದ್ದೇನೆ. ನೀನು ಸುಖವಾಗಿ ಸ್ವಸ್ಥಳಕ್ಕೆ ಹೋಗು, ಎಂದು ನುಡಿಯಲು, ಹುಲಿಯು ಹರ್ಷಗೊಂಡು ತನ್ನ ಗವಿಯ ಕಡೆಗೆ ಹೋಯಿತು. ಇತ್ತ ಯಾತ್ರಿಕರೆಲ್ಲರು ಗುರುಗಳ ಸನ್ನಿಧಿಗೆ ಬಂದು, ಒದಗಿದ ವೃತ್ತಾಂತವನ್ನು ಹೇಳಿದರು. ಬಳಿಕ ಗುರುಗಳು ಆ ಶೂದ್ರ ಸಹೋದರರನ್ನು ಆಶೀರ್ವದಿಸಿ, ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಆಗ ಅವರು ಗುರುಗಳಿಗಭಿವಂದಿಸಿ, ತಮ್ಮೂರಿಗೆ ಹೊರಟು ಹೋದರು.

* * * * *

೬ **ಬಡವನ ಕಾಶೀಯಾತ್ರೆ**:—ಒಂದು ದಿವಸ ಕಾಶೀಯಾತ್ರೆಯನ್ನು ಮಾಡಬೇಕೆಂಬ ಲವಲವಿಕೆಯುಳ್ಳ ಒಬ್ಬ ಪೂರ್ವದೇಶದ ಬಡಬ್ರಾಹ್ಮಣನು ಕುಟುಂಬಸಹಿತನಾಗಿ ದೀಕ್ಷಿತರಿದ್ದೆಡೆಗೆ ಬಂದನು. ದೀಕ್ಷಿತರು ಬ್ರಾಹ್ಮಣನ ಬರುವಿಕೆಯ ಕಾರಣವನ್ನರಿತು, ಅವನಿಗೆ:—ಎಲ್ಲವೂ ಕ್ಷೇಮವಷ್ಟೇ? ಯಾಕೆ ಬರೋಣವಾಯಿತು? ಮುಂತಾದ ಕುಶಲ ಪ್ರಶ್ನೆಗಳನ್ನು ಕೇಳಿದರು. ಅದಕ್ಕೆ ಬ್ರಾಹ್ಮಣನು ಏನೂ ಮಾತಾಡದೆ ಸುಮ್ಮನೆ ನಿಂತುಕೊಂಡನು. ಆಗ ದೀಕ್ಷಿತರು

ಅವನಿಗೆ:—ಯಾಕೆ ಮಾತಾಡಲೊಲ್ಲಿರಿ? ನಿಮ್ಮ ಇಚ್ಛೆಯು ನಮಗೆ ತಿಳಿಯಿತು. ಕಾಶೀಯಾತ್ರೆಯನ್ನು ಮಾಡಬೇಕೆಂಬ ಹೇತುವಿನಿಂದ ಇಲ್ಲಿಗೆ ಬಂದಿರುವಿರಲ್ಲವೇ? ಎಂದು ನುಡಿಯಲು, ಬ್ರಾಹ್ಮಣನು ಕೈಜೋಡಿಸಿ:--ಪ್ರಭುಗಳೇ, ಎಲ್ಲಿಯ ಕಾಶೀ ಯಾತ್ರೆಯು! "ಉತ್ಪದ್ಯಂತೆ ವಿಲೀಯಂತೆ ದರಿದ್ರಾಣಾಂ ಮನೋರಥಃ" ದರಿದ್ರರ ಮನೋರಥಗಳು ಹುಟ್ಟುತ್ತಲೂ, ನಾಶವಾಗುತ್ತಲೂ ಇರುವವು ನಾನು ಬಹಳ ಬಡವನಿರುವೆನು. ಅಂದಬಳಿಕ ನನ್ನ ಇಚ್ಛೆಯಿದ್ದರೂ ಯಾತ್ರೆಯಾಗುವ ಬಗೆಯೇನು? ದೀಕ್ಷಿತರು, ನಿರುತ್ಸಾಹಪೂರಿತವಾದ ಈ ಬಗೆಯ ಬ್ರಾಹ್ಮಣನ ಮಾತುಗಳನ್ನು ಕೇಳಿ:—ನಿರಾಶನಾಗಬೇಡ, ಧೈರ್ಯತಾಳು, ಸದಾಶಿವನು ಸಮರ್ಥನಿರುವನು. ಅದಕ್ಕೆ ಇಷ್ಟೊಂದು ಚಿಂತೆಯಾಕೆ? ಮನೆಗೆ ಹೋಗಿ ಯಾತ್ರೆಯ ಸಂಕಲ್ಪವನ್ನು ಮಾಡಿ, ಇಲ್ಲಿಗೆ ಬಾ; ನಿನಗೆ ಹತ್ತುವಷ್ಟು ಹಣವನ್ನು ಕೊಡುವೆನು, ಎಂದು ನುಡಿಯಲು, ಬ್ರಾಹ್ಮಣನು ಮೋದಗೊಂಡು, ಕೂಡಲೆ ಮನೆಗೆ ಹೋಗಿ ಸಂಕಲ್ಪವನ್ನು ಮಾಡಿ, ಮರಳಿ ಗುರುಗಳ ಸನ್ನಿಧಿಗೆ ಬಂದನು. ಆಗ ಗುರುಗಳು ಆತನಿಗೆ ಎರಡೇ ಹೊನ್ನುಗಳನ್ನು ಕೊಟ್ಟು, ಇಷ್ಟೇ ಭಂಡವಲ ದಿಂದ ನಿನ್ನ ಯಾವತ್ತು ಕಾರ್ಯಗಳು ಕೈಗೂಡುವವೆಂದು ಹೇಳಿದರು. ಬಳಿಕ ಬ್ರಾಹ್ಮಣನು ಗುರುವಚನದಲ್ಲಿ ವಿಶ್ವಾಸವನ್ನಿಟ್ಟು, ಮರುದಿವಸವೇ ಯಾತ್ರೆಗೆ ಹೊರಟನು ಹೋಗ ಹೋಗುತ್ತ ಮಾರ್ಗದಲ್ಲಿ ಒಂದು ಚಮತ್ಕಾರವಾಯಿತು. ಅದೇನಂದರೆ:—ಒಂದು ಪುಣ್ಯಕ್ಷೇತ್ರದಲ್ಲಿ ಬ್ರಾಹ್ಮಣನು ದೀಕ್ಷಿತರು ಕೊಟ್ಟ ಆ ಎರಡೂ ಹೊನ್ನುಗಳನ್ನು ದಾನಮಾಡಿದನು. ಹೇಳಲು ಆಶ್ಚರ್ಯವೇನಂದರೆ, ಬ್ರಾಹ್ಮಣನ ಹತ್ತರ ಪುನಃ ಎರಡು ಹೊನ್ನುಗಳು ಸಿದ್ಧವಾದವು. ಅದನ್ನು ನೋಡಿ, ಬ್ರಾಹ್ಮಣನಿಗಂತೂ ಮಿತಿಮೀರಿ ಆಶ್ಚರ್ಯವಾಯಿತು. ಅವನು ಮತ್ತೆ ಆ ಹೊಸ ಹೊನ್ನುಗಳನ್ನು ದಾನಮಾಡಲು, ತಿರುಗಿ ಮತ್ತೆರಡು ಹೊನ್ನುಗಳು ಸಿದ್ಧವಾದವು. ಹೊನ್ನುಗಳು ಹೀಗೆ ಅಕ್ಷಯ್ಯವಾಗುವದನ್ನು ನೋಡಿ, ಬ್ರಾಹ್ಮಣ ಕುಟುಂಬವು ಆನಂದಸಾಗರದಲ್ಲಿ ಅಲೆದಾಡತೊಡಗಿತು. ಬ್ರಾಹ್ಮಣನು ಹಾಗೆಯೇ ಮುಂದಕ್ಕೆ ಸಾಗಿದನು. ಅವನು ಹೋದಹೋದಲ್ಲಿ ಅಮಿತವಾಗಿ ದಾನ-ಧರ್ಮ ಗಳನ್ನು ಮಾಡುತ್ತ, ಯಥಾವಿಧಿಯಿಂದ ತ್ರಿಸ್ಥಳಿಯಾತ್ರೆಯನ್ನು ತೀರಿಸಿ, ತಿರುಗಿ ದೀಕ್ಷಿತರ ಸನ್ನಿಧಿಗೆ ಬಂದನು. ಆಗ ದೀಕ್ಷಿತರು:—ಬ್ರಾಹ್ಮಣನೇ, ಯಾತ್ರೆಯು ಪೂರ್ಣವಾಯಿತೋ? ನಾವು ಕೊಟ್ಟ ಎರಡು ಹೊನ್ನುಗಳು ತೀರಿರುವವೋ? ಎಂದು ಕೇಳಲು, ಬ್ರಾಹ್ಮಣನು ಆಶೆಯ ಪಿಶಾಚ್ಚದಿಂದ ಗ್ರಸ್ತನಾಗಿ ಮನಸಿನಲ್ಲಿ:-

ಹೊನ್ನುಗಳು ಅವೆ ಎಂದು ಹೇಳಿದರೆ, ತಿರುಗಿ ಬೇಡಬಹುದು; ಹೀಗಾಯಿತೆಂದರೆ ನಾನು ಪುನಃ ದಾರಿದ್ರ್ಯದೇವತೆಯ ಕೂಡ ಕಾಲಕಳೆಯಬೇಕಾಗುವದು. ಆದ್ದರಿಂದ ಹೊನ್ನುಗಳು ಇಲ್ಲವೆಂದು ಹೇಳುವದೇ ಉಚಿತವು, ಎಂದು ಆಲೋಚಿಸಿ, ಹೊನ್ನುಗಳು ಈ ಹೊತ್ತೇ ತೀರಿದವೆಂದು ಹೇಳಿದನು. ವಾಚಕರೆ, ಬ್ರಾಹ್ಮಣನ ಅಜ್ಞಾನಕ್ಕೆ ನೀವು ನಗದೆ ಇರಲಾರಿರಿ. ಯಾಕಂದರೆ ಸರ್ವಸ್ವವನ್ನು ಕೊಡಲು ಸಿದ್ಧನಾದ ಸದಾಶಿವನು ಬ್ರಾಹ್ಮಣನಿಗೆ ಕೊಟ್ಟ ಎರಡು ಹೊನ್ನುಗಳನ್ನು ಮರಳಿ ಬೇಡಿಯಾನು, ಎಂಬ ಮಾತು ನಿಮಗಾದರೂ ಸರಿದೋರುವದೋ? ಎಲ್ಲ ಪ್ರಾಪಂಚಿಕರ ಹಣೇಬರಹವು ಇದೇ! ಮಾಯೆಯಿಂದ ಮೋಹಿತರಾಗಿ ಏನಾದರೊಂದು ನುಡಿದರಾಯಿತು! ದೀಕ್ಷಿತರು ಬ್ರಾಹ್ಮಣನ ಮಾತಿಗೆ ತಥಾಸ್ತು! ಎಂದು ನುಡಿಯಲು ತತ್ಕಾಲಕ್ಕೆ ಹೊನ್ನುಗಳು ಇಲ್ಲದಂತಾದವು. ಆಗ ಬ್ರಾಹ್ಮಣನು ಖಿನ್ನಮನಸ್ಕನಾಗಿ:-ದಯಾನಿಧಿಯೇ, ನಾನು ಅಪರಾಧಿಯು; ದ್ರವ್ಯಲೋಭದಿಂದ ತಮ್ಮೆದುರಿಗೆ ಅಸತ್ಯಭಾಷಣಮಾಡಿದೆನು. ತಾಯಿ-ತಂದೆಗಳು ಮಕ್ಕಳ ಅಪರಾಧಗಳನ್ನು ಕ್ಷಮಿಸದಿದ್ದರೆ, ಅವುಗಳನ್ನು ಕ್ಷಮಿಸುವವರಾರು? ಕೃತಾಪರಾಧವನ್ನು ಕ್ಷಮಿಸಿ, ನನ್ನ ಮೇಲೆ ದಯಮಾಡಬೇಕು, ಎಂದು ಭಕ್ತಿಪೂರ್ವಕವಾಗಿ ಬೇಡಿಕೊಂಡನು. ಆಗ ದಯಾಹೃದಯರಾದ ದೀಕ್ಷಿತರು ಸತ್ಯಭಾಷಣದ ಮಹತ್ವವನ್ನೂ ಅಸತ್ಯಭಾಷಣದಿಂದಾಗುವ ಹಾನಿಯನ್ನೂ ವಿಶದವಾಗಿ ವಿವರಿಸಿ, ಮತ್ತೆ ಎರಡು ಹೊನ್ನುಗಳನ್ನು ಕೊಟ್ಟು ಅವನಿಗೆ ಊರಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಆಗ ಬ್ರಾಹ್ಮಣನು ಹರ್ಷಿತನಾಗಿ, ಗುರುಗಳಿಗೆ ಅಭಿವಂದಿಸಿ, ತಮ್ಮೂರಿಗೆ ಹೊರಟು ಹೋಗಿ, ಗುರುದತ್ತದ್ರವ್ಯದಿಂದ ದಾನ-ಧರ್ಮಗಳನ್ನು ಮಾಡುತ್ತ ಸದ್ಧರ್ಮದಿಂದ ನಡೆದನು.

* * * * *

೭ ಶೂರ ಶಿಲೇದಾರ:—ಒಬ್ಬ ಶೂರ ಶಿಲೇದಾರನು ಬಡತನದಿಂದ ವ್ಯಾಪ್ತನಾಗಿ ಕುಟುಂಬದೊಂದಿಗೆ ಚಿದಂಬರ ದೀಕ್ಷಿತರ ದರ್ಶನಾರ್ಥವಾಗಿ ಮುರುಗೋಡಕ್ಕೆ ಬಂದನು. ದೀಕ್ಷಿತರು ಅವನನ್ನು ನೋಡಿ:—ಬಂದೆಯಾ? ಒಳ್ಳೇದಾಯಿತು. ಸುಖವನ್ನು ಸಂಪಾದಿಸಬೇಕೆಂಬ ಆಶೆಯಿದ್ದರೆ, ನಮ್ಮ ಅಪ್ಪಣೆಯಾಗುವವರೆಗೆ ನೀನು ಎಲ್ಲಿಯೂ ಹೋಗಕೂಡದು. ಎಂಥ ಕಠಿಣಪ್ರಸಂಗವು ಪ್ರಾಪ್ತವಾದರೂ ಇಲ್ಲಿಯೇ ಇರಬೇಕು; ಅಂದರೆ ನಿನಗೆ ಮುಂದೆ ಕಲ್ಯಾಣವುಂಟು, ಎಂದು ಹೇಳಿದರು. ಅದಕ್ಕೆ ಶಿಲೇದಾರನು:—ಒಳ್ಳೇದು, ಎಂದು ಒಪ್ಪಿಕೊಂಡು ಗುರುಸನ್ನಿಧಿಯಲ್ಲಿ ನಿಂತುಕೊಂಡನು.

ಕುಟುಂಬವು ದೊಡ್ಡದು, ಗಳಿಕೆಯಂತೂ ಇಲ್ಲೇ ಇಲ್ಲ. ಪಾಪ ಮಾಡು ತ್ತಾನೇನು!? ಬಳಿಯಲ್ಲಿದ್ದ ಅಲ್ಪ ಸ್ವಲ್ಪ ಹಣದಿಂದ ಮೂರು-ನಾಲ್ಕು ತಿಂಗಳು ವರೆಗೆ ಹಾಗು ಹೀಗೂ ಮಾಡಿ, ಉದರ ನಿರ್ವಾಹವನ್ನು ಸಾಗಿಸಿದನು. ಎಷ್ಟು ಕಾಲವು ಗತಿಸಿದರೂ ಗುರುಗಳ ಅಪ್ಪಣೆಯು ಆಗಲೊಲ್ಲದು. ಶಿಲೇದಾರನು ಭಾವಿಕನೂ, ದೃಢನಿಶ್ಚಯವುಳ್ಳವನೂ ಇದ್ದದರಿಂದ ಗುರುಗಳ ವಚನವನ್ನು ಪಾಲಿಸುವದಕ್ಕಾಗಿ ಮನೆಯೊಳಗಿನ ವಸ್ತ್ರ-ಒಡವೆಗಳನ್ನೂ, ಪಾತ್ರೆ-ಪ್ರಾವರಣ ಗಳನ್ನೂ ಮಾರಿ, ಬಂದ ಹಣದಿಂದ ಮತ್ತೂ ಎರಡು ತಿಂಗಳು ಅಂತೂ ಇಂತು ಕಾಲಹರಣ ಮಾಡಿದನು ಆದರೂ ಅಪ್ಪಣೆಯಾಗಲೊಲ್ಲದು. ಈಗ ಮಾತ್ರ ಅವನ ಧೈರ್ಯಪರ್ವತವು ಕುಸಿಬಿತ್ತು. ಅವನು ಚಿಂತಾಕ್ರಾಂತನಾಗಿ ಮುಂದುಗಾಣದೆ ಮನಸಿನಲ್ಲಿ:- ಇನ್ನು ಮಾತ್ರ ಗುರುಗಳಿಗೆ ಈ ಸಂಗತಿಯನ್ನು ಅರುಹದೆ ಹೋದರೆ, ನಮ್ಮೆಲ್ಲರ ಪ್ರಾಣಾಂತ ಸಮಯವೇ ಒದಗುವದೆಂದು ಆಲೋಚಿಸಿ, ಹಾಗೇ ಗುರುಗಳಿದ್ದಲ್ಲಿಗೆ ಹೋಗಿ, ಭಕ್ತಿಭಾವದಿಂದ ಅವರನ್ನು ನಮಸ್ಕರಿಸಿ, ತನ್ನ ವೃತ್ತಾಂತವನ್ನೆಲ್ಲ ವಿಶದವಾಗಿ ಹೇಳಿದನು. ಆಗ ದೀಕ್ಷಿತರು ಶಿಲೇದಾರನ ಭಕ್ತಿ ಗೂ, ವಿಶ್ವಾಸಕ್ಕೂ ಮೆಚ್ಚಿ:-"ಈ ಹೊತ್ತು ಸಾಯಂಕಾಲಕ್ಕೆ ಇಲ್ಲಿಂದ ಹೊರಟು ಹೋಗಲಿಕ್ಕೇಬೇಕೆ"ಂದು ಹೇಳಿದರು. ಅದಕ್ಕೆ ಗುರುವಚನ ವಿಶ್ವಾಸಿಯಾದ ಶಿಲೇದಾರನು ಒಡಂಬಟ್ಟು, ಮನಸಿನಲ್ಲಿ ಯಾವ ಕುತರ್ಕಕ್ಕೂ ಆಸ್ಪದ ಕೊಡದೆ ಸಂತೋಷದಿಂದ ಗುರುಗಳಿಗೆ ಮತ್ತೆ ಅಭಿವಂದಿಸಿ, ಮನೆಗೆ ಹೊರಟು ಬಂದನು; ಹಾಗು ಮನೆಯೊಡತಿಗೂ, ಹಿರಿಯರಿಗೂ ಗುರ್ವಾದೇಶವನ್ನು ಅರುಹಿ ಸ್ವಗ್ರಾ ಮಕ್ಕೆ ತೆರಳುವ ಸಿದ್ಧತೆಯನ್ನು ಮಾಡಲನುವಾದನು.

ಆಷಾಢಮಾಸದ ದಿವಸಗಳು. ಸಾಯಂಕಾಲದ ಸಮಯವು. ಆಕಾಶವು ಕಾರ್ಮೋಡಗಳಿಂದ ಕವಿದಿತ್ತು. ಮಳೆಬರುವ ಚಿಹ್ನಗಳು ಸ್ಫುಟವಾಗಿ ತೋರು ತ್ತಿದ್ದವು; ಆದರೆ ಮಾಡುತ್ತಾನೇನು? ಗುರುಗಳ ಅಪ್ಪಣೆಯಾದ್ದರಿಂದ ಆಗಲೇ ಹೊರಡಬೇಕಾಯಿತು; ಒಂದೆರಡು ಹರದಾರಿ ದಾರಿಯನ್ನು ಕ್ರಮಿಸುವಷ್ಟರಲ್ಲಿ ಕಗ್ಗತ್ತಲೆಯು ತನ್ನ ರೌದ್ರರೂಪವನ್ನು ವ್ಯಕ್ತ ಮಾಡಹತ್ತಿತು. ಮಳೆಯು ಆರಂಭವಾಗಿ ಸರವಿನ ಮೇಲೆ ಸರವುಗಳು ಬರಹತ್ತಿದವು. ದಾರಿಯು ಕಣ್ಣೊ ಳಗೆ ಬೊಟ್ಟುಹಾಕಿದರೂ ಕಾಣಲೊಲ್ಲದು. ಶಿಲೇದಾರನ ಪರಿವಾರವೆಲ್ಲ ದಾರೀ ತಪ್ಪಿ ಅಡವೀಬಿತ್ತು. ವನ್ಯಪಶುಗಳ ಘನ್ನಧ್ವನಿಯೂ, ಮೇಘಗರ್ಜನೆಯೂ ಬಾರಿಬಾರಿಗೆ ಭೀತಿಯನ್ನುಂಟುಮಾಡಹತ್ತಿದವು; ಆದರೆ ಶಿಲೇದಾರನ ಧೈರ್ಯವು

ಅಪೂರ್ವವಿರುವದರಿಂದ ಅವನು ಯಾತಕ್ಕೂ ಹೆದರದೆ, ತನ್ನ ಕುಟುಂಬದವರಿಗೆ ಆಗಿಂದಾಗ್ಗೆ ಧೈರ್ಯಕೊಡುತ್ತ ಹಾಗೆಯೇ ಮುಂದಕ್ಕೆ ಹೋಗುತ್ತಿರಲು, ಅವನಿಗೆ ಅಲ್ಲೇ ಸಮೀಪದಲ್ಲಿ ಒಂದು ಶಿವಾಲಯವು ದೃಗ್ಗೋಚರವಾಯಿತು. ಆಗ ಅವನು ಇಲ್ಲಿಯೇ ಬೆಳಗಾಗುವ ವರೆಗೆ ವಾಸಿಸಬೇಕೆಂದು ಆಲೋಚಿಸಿ, ಎಲ್ಲರೊಂದಿಗೆ ಶಿವಾಲಯವನ್ನು ಸೇರಿದನು. ದೇಗುಲದ ಬಾಗಿಲವು ಸಣ್ಣದಿದ್ದದರಿಂದ ಕುದುರೆಗೆ ಮಾತ್ರ ಒಳಗೆ ಸೇರಲಿಕ್ಕೆ ಅನುವಾಗಲಿಲ್ಲ; ಆದ್ದರಿಂದ ಕುದುರೆಯನ್ನು ಹೊರಭಾಗಕ್ಕೇ ಕಟ್ಟಬೇಕಾಯಿತು. ಶಿಲೇದಾರನು ಅಲ್ಲೇ ದೇವಾಲಯದ ಬಳಿಯಲ್ಲಿ ಕುದುರೆಯನ್ನು ಕಟ್ಟುವದಕ್ಕಾಗಿ ಒಂದು ಗೂಟವನ್ನು ಹೊಡೆಯಲುದ್ಯುಕ್ತನಾದನು. ಶಿಲೇದಾರನ ಊರ್ಜಿತಾವಸ್ಥೆಯ ಕಾಲವು ಸಮೀಪಿಸಿತು. ಅವನು ನೆಲದೊಳಗೆ ಗೂಟಹೊಡೆಯುತ್ತಿರಲು, ಆ ಸ್ಥಳದಲ್ಲಿ ಝುಣ-ಝುಣ ಸಪ್ಪಳವಾಗಹತ್ತಿತು. ಆಗ ಅವನು ಅದೇ ಸ್ಥಳವನ್ನು ಅಧಿಕವಾಗಿ ಅಗಿಯಲು, ಅವನಿಗೆ ಹೊನ್ನಿನಿಂದ ತುಂಬಿದ ಒಂದು ಹಂಡೆಯು ಹಸ್ತಗತವಾಯಿತು. ಆಗ ಕೇಳುವದೇನು? ಶಿಲೇದಾರನಿಗೂ, ಅವನ ಕುಟುಂಬದವರಿಗೂ ಅತಿಶಯವಾಗಿ ಆನಂದವಾಯಿತು. ಇಷ್ಟೇ ಅಲ್ಲ; ಅವರೆಲ್ಲರು ಅನನ್ಯಭಾವದಿಂದ ಅಂಬಿಕಾಧವನನ್ನು ಸ್ತುತಿಸತೊಡಗಿದರು. ಬೆಳಗಾಗುವ ವರೆಗೆ ಅವರೆಲ್ಲರು ಅಲ್ಲೇ ಉಳಕೊಂಡು, ಬೆಳಗಾದ ಮೇಲೆ ಆ ಹಣವನ್ನೆಲ್ಲ ಕುದುರೆಯ ಮೇಲೆ ಹೇರಿಕೊಂಡು ಮರಳಿ ಮುರಗೋಡಿಗೆ ಬಂದು, ವರ್ತಿಸಿದ ವೃತ್ತಾಂತವನ್ನೆಲ್ಲ ಗುರುಗಳಿಗರುಹಿದರು. ಆಗ ಗುರುಗಳು:—ನಿಮ್ಮ ನಿಶ್ಚಯವೇ ದೊಡ್ಡದು. ಆದ್ದರಿಂದ ನೀವೆಲ್ಲರು ಈ ಲಾಭಕ್ಕೆ ಅರ್ಹರಾದಿರಿ. ಹೀಗೆಯೇ ನಿಶ್ಚಯದ ಬಲದಿಂದ ದೇವರನ್ನು ಒಲಿಸಿಕೊಂಡು, ಈ ಪ್ರಪಂಚವೆಂಬ ದುಃಖೋದಧಿಯೊಳಗಿಂದ ಪಾರಾಗಬೇಕು ಎಂದು ಬೋಧಿಸಿ, ಅವರಿಗೆ ಸ್ವಗ್ರಾಮವನ್ನು ಕುರಿತು ಹೋಗಲಿಕ್ಕೆ ಆಜ್ಞಾಪಿಸಿದರು. ಆಗ ಅವರೆಲ್ಲರು ಗುರುಗಳನ್ನು ನಮಸ್ಕರಿಸಿ ತಮ್ಮೂರಿಗೆ ಹೊರಟುಹೋಗಿ ಸುಖದಿಂದ ಸಂಸಾರವನ್ನು ಸಾಗಿಸತೊಡಗಿದರು

\+ \+ \+ \+ \+ \+ \+

೮ **ಹನ್ನೆರಡನೂರು ಹೊನ್ನುಗಳು**:-ಒಬ್ಬ ಬಡಬ್ರಾಹ್ಮಣನು ತನ್ನ ದಾರಿದ್ರ್ಯ ನಿವಾರಣಾರ್ಥವಾಗಿ ಗಿರಿಯಲ್ಲಿ ಎರಡು ವರ್ಷಗಳ ವರೆಗೆ ಶ್ರೀ ಲಕ್ಷ್ಮೀರಮಣನ ಅನುಷ್ಠಾನವನ್ನು ಮಾಡುತ್ತಿದ್ದನು. ಒಂದುದಿವಸ ಅವನಿಗೆ "ನೀನು ಚಿದಂಬರ ದೀಕ್ಷಿತರ ಕಡೆಗೆ ಹೋಗು; ಅಂದರೆ ನಿನ್ನ ಇಚ್ಛೆಯು ಪೂರ್ಣವಾಗು

ವದು" ಎಂದು ದೃಷ್ಟಾಂತವಾಯಿತು. ಆಗ ಬ್ರಾಹ್ಮಣನು ಅನಂತನ ಆಜ್ಞೆಯ ಮೇರೆಗೆ ಮುರಗೋಡಿಗೆ ಬಂದು, ದೀಕ್ಷಿತರ ದರ್ಶನವನ್ನು ತಕ್ಕೊಂಡು, ಗಿರಿಯಲ್ಲಾದ ದೃಷ್ಟಾಂತವನ್ನು ಅವರಿಗೆ ಹೇಳಿದನು. ಹಾಗು ನನಗೆ ಹನ್ನೆರಡು ಮಂದಿ ಮಕ್ಕಳಿರುವರು; ಅದ್ದರಿಂದ ಪ್ರತಿಯೊಬ್ಬರಿಗೆ ನೂರು ಹೊನ್ನಿನಂತೆ, ಹನ್ನೆರಡು ನೂರು ಹೊನ್ನುಗಳನ್ನು ಕೊಟ್ಟು, ನನ್ನನ್ನು ಈ ದಾರಿದ್ರ್ಯದಿಂದ ದೂರಮಾಡಬೇಕು, ಎಂದು ಬೇಡಿಕೊಂಡನು. ಆಗ ದೀಕ್ಷಿತರು:--ನಾನೂ ಬಡ ಬ್ರಾಹ್ಮಣನೇ. ನನ್ನ ಹತ್ತರ ಇಷ್ಟು ಹೊನ್ನುಗಳು ಎಲ್ಲಿಂದ ಬರುವವು? ಇರಲಿ. ನೋಡೋಣವಂತೆ! ಸದ್ಯಕ್ಕೆ ವೇಳೆಯು ಬಹಳವಾಗಿರುವದು; ಕಾರಣ ಮೊದಲು ಸ್ನಾನಾದಿಕರ್ಮಗಳನ್ನು ತೀರಿಸಿ, ಭೋಜನ ಮಾಡಬೇಕು. ಆ ಮೇಲೆ ಏನಾದರೂ ಕೊಡುವೆನು, ಎಂದು ಹೇಳಿದರು. ಆಗ ಬ್ರಾಹ್ಮಣನು:-ಮೊದಲು ಹೊನ್ನುಗಳನ್ನು ಕೊಡಿರಿ; ಆ ಮೇಲೆ ಭೋಜನ ಮಾಡುವೆನು. ಹೀಗಾಗದಿದ್ದರೆ ಪುನಃ ಗಿರಿಗೆ ಹೋಗಿ, ತಿನುಷ್ಠಾನವನ್ನು ಆರಂಭಿಸುವೆನು, ಎಂದು ನುಡಿದನು. ಆಗ ದೀಕ್ಷಿತರು:-ಹೀಗೆ ಹಟಹಿಡಿಯುವದು ಒಳಿತಲ್ಲ! ನಿನ್ನ ಇಚ್ಛೆಯ ಮೇರೆಗೆ ನಾಳಿನ ದಿವಸ ಏನಾದರೂ ವ್ಯವಸ್ಥೆಯನ್ನು ಮಾಡೋಣ, ಎಂದು ಹೇಳಿ, ಜುಲುಮೆಯಿಂದ ಆ ಹೊತ್ತು ಆ ಬ್ರಾಹ್ಮಣನನ್ನು ಇಟ್ಟುಕೊಂಡರು. ಮರುದಿವಸ ಮಧ್ಯಾಹ್ನಕ್ಕೆ ಬ್ರಾಹ್ಮಣನನ್ನು ಒಂದು ಬಾವಿಯ ಸಮೀಪಕ್ಕೆ ಕರೆಯಿಸಿ, ಅವನ ಕೈಯೊಳಗಿನ ತಂಬಿಗೆಯನ್ನು ತಕ್ಕೊಂಡು, ಬಾವಿಯೊಳಗೆ ಬೀಸಾಟಿ:—ಹೂ! ತಡಮಾಡಬೇಡ. ತಂಬಿಗೆಯನ್ನು ತಕ್ಕೊಂಡು ಬಾ, ಅಂದರೆ ನಿನ್ನ ಇಚ್ಛಿತವು ಪೂರ್ಣವಾಗುವದು, ಎಂದು ಅಂದರು. ಅದಕ್ಕೆ ಬ್ರಾಹ್ಮಣನು:—ನಾನು ಅಂಜುಬುರುಕನು! ಬಾವಿಯಲ್ಲಿ ಹೇಗೆ ಇಳಿಯಲಿ? ತಾವೇ ಅದನ್ನು ತೆಗಿಸಿಕೊಡಬೇಕು, ಎಂದನು. ಆಗ ದೀಕ್ಷಿತರು:—ನೀರು ಸ್ವಲ್ಪ ಅವೆ. ಹೆದರಬೇಡ. ನೀನೇ ಒಳಗೆ ಇಳಿಯಲಿಕ್ಕೆ ಬೇಕು. ನಿನಗೆ ಬಹಳ ಲಾಭವಾಗುವದು. ಕಾರಣ ನನ್ನ ಮಾತಿನ ಮೇಲೆ ವಿಶ್ವಾಸವನ್ನಿಟ್ಟು, ಬಾವಿಯೊಳಗೆ ಇಳಿಯಬೇಕು, ಎನಲು, ಬ್ರಾಹ್ಮಣನು ಧೈರ್ಯಗೊಂಡು ಒಳಗೆ ಇಳಿದನು. ಬಾವಿಯಲ್ಲಿ ನೀರು ಕಟಿಪ್ರಮಾಣದಲ್ಲಿದ್ದವು. ಆಗ ಅವನಿಗೆ ತುಂಬಾ ಧೈರ್ಯವುಂಟಾಗಿ ಅವನು ತನ್ನ ಪಾತ್ರೆಯನ್ನು ಶೋಧಿಸಹತ್ತಿದನು. ಅದು ಅವನಿಗೆ ತೀವ್ರವೇ ದೊರೆಯಿತು. ಆಗ ಅವನು ಅದನ್ನು ಮೇಲಕ್ಕೆತ್ತಿ ನೋಡುತ್ತಾನೆ, ಅದರಲ್ಲಿ ಹೊನ್ನುಗಳು ತುಂಬಿದ್ದವು. ಅವುಗಳನ್ನು ನೋಡಿ, ಬ್ರಾಹ್ಮಣನಿಗೆ ಪರಮಾನಂದವಾಯಿತು.

ಬಳಿಕ ಅವನು ತಂಬಿಗೆಯನ್ನು ಮೇಲಕ್ಕೆ ತಂದು, ಗುರುಸನ್ನಿಧಿಯಲ್ಲಿಟ್ಟು, ಅದರೊಳಗಿನ ಹೊನ್ನುಗಳನ್ನು ಎಣಿಸಹತ್ತಿದನು. ಆಗ ಆ ತಂಬಿಗೆಯಲ್ಲಿ ವಿಪ್ರೇಚ್ಛೆಯಂತೆ ಹನ್ನೆರಡುನೂರು ಹೊನ್ನುಗಳೇ ಹೊರಟವು. ಬ್ರಾಹ್ಮಣನು ಈ ಅದ್ಭುತವನ್ನು ನೋಡಿ, ವಿಸ್ಮಿತನಾಗಿ ದೀಕ್ಷಿತರನ್ನು ಸ್ತುತಿಸತೊಡಗಿದನು. ಆಗ ದೀಕ್ಷಿತರು ಸವಿಮಾತುಗಳಿಂದ ಅವನನ್ನು ಸಮಾಧಾನಗೊಳಿಸಿ, ಆಶೀರ್ವಾದವನ್ನು ಕೊಟ್ಟು, ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನಿತ್ತರು. ಆಗ ಬ್ರಾಹ್ಮಣನು ಪ್ರಣಾಮಪೂರ್ವಕವಾಗಿ ಪುನಃ ಶ್ರೀಗಳನ್ನು ಸ್ತುತಿಸಿ, ಅವರ ಆಜ್ಞೆಯ ಮೇರೆಗೆ ಸ್ವಸದನಕ್ಕೆ ಹೊರಟು ಹೋದನು.

†‡† ‡†‡ †‡† ‡†‡ †‡†

**೮ ಸವಣೂರ ನಬಾಬನು:**—ಒಂದು ದಿವಸ ಸವಣೂರ ನಬಾಬನು ದೀಕ್ಷಿತರ ದರ್ಶನಾರ್ಥವಾಗಿ ಮುರಗೋಡಿಗೆ ಬಂದನು. ಎಂದಿನಂತೆ ದೀಕ್ಷಿತರ ಬಳಿಯಲ್ಲಿ ಯಾತ್ರಸ್ಥರ ಸಂದಣಿಯಾಗಿತ್ತು; ಆದರೆ ದೀಕ್ಷಿತರು ಅವರೆಲ್ಲರನ್ನು ಒತ್ತಟ್ಟಿಗೆ ಸರಿಸಿ, ನಬಾಬನ ಯೋಗಕ್ಷೇಮವನ್ನು ವಿಚಾರಿಸತೊಡಗಿದರು. ಇದರಿಂದ ಅಲ್ಲಿಯ ಬ್ರಾಹ್ಮಣರಿಗೆ ಕುಸ ವಿಷಾದವಾಯಿತು. ದಿನಾಲು ಇದರಂತೆಯೇ ನಡೆಯಲು, ಒಂದು ದಿವಸ ಎಲ್ಲ ಬ್ರಾಹ್ಮಣರೂ ಒತ್ತಟ್ಟಿಗೆ ಕಲೆತು, ಈ ಮಾತನ್ನು ದೀಕ್ಷಿತರಿಗೆ ಕೇಳಬೇಕೆಂದು ಯೋಚಿಸಿ, ಅವರಿದ್ದೆಡೆಗೆ ಹೋಗಿ:—ನಬಾಬನು ಯವನನು. ದಿನಾಲು ಮೊಟ್ಟಮೊದಲು ಅವನ ದರ್ಶನ ತಕ್ಕೊಳ್ಳುವದು ಸರಿಯೇ? ಎನಲು, ದೀಕ್ಷಿತರು ಮನಸ್ಸಿನಲ್ಲಿ ಬ್ರಾಹ್ಮಣರ ಅಜ್ಞಾನಕ್ಕೆ ನಕ್ಕು:— ಒಳ್ಳೇದು. ನಿಮ್ಮ ಮನಸಿಗೆ ಬರದಿದ್ದರೆ ನಾಳಿನಿಂದ ನಿಮ್ಮ ಅಂಬೋಣದಂತೆಯೇ ವರ್ತಿಸೋಣ, ಎಂದು ನುಡಿದು, ಅದೇಕಾಲಕ್ಕೆ ನಬಾಬನನ್ನು ಕರೆಯಿಸಿ:-ನೀನು ಇಲ್ಲಿಗೆ ಬಂದು ಬಹು ದಿವಸಗಳಾದವು. ರಾಜರು ರಾಜ್ಯವನ್ನು ಬಿಟ್ಟು ಬೇರೆ ಕಡೆಯಲ್ಲಿರುವದು ಒಳಿತಲ್ಲ! ಕಾರಣ ನೀನು ನಿನ್ನ ರಾಜ್ಯಕ್ಕೆ ಹೋಗು. ನಿನ್ನ ಹೇತುವಿನಂತೆ ನಾನ ನಿನಗೆ ಅಲ್ಲಿಯೇ ದಿನಾಲು ದರ್ಶನ ಕೊಡುವೆನು. ನಿನ್ನ ಅರಮನೆಯ ಹಿಂಭಾಗದಲ್ಲಿರುವ ಔದುಂಬರ ವೃಕ್ಷಕ್ಕೆ ಕಟ್ಟೆಯನ್ನು ಕಟ್ಟಿಸಿ, ದಿನಾಲು ಅದರ ಪೂಜೆಯನ್ನು ಮಾಡಬೇಕು; ಅಂದರೆ ನಿನಗೆ ಅಲ್ಲಿಯೇ ದರ್ಶನವಾಗುವದು. ಇನ್ನು ನಿನ್ನ ಗ್ರಾಮಕ್ಕೆ ಹೋಗಬೇಕು, ಎಂದು ನುಡಿಯಲು, ನಬಾಬನು ಗುರ್ವಾಜ್ಞೆಯ ಮೇರೆಗೆ ತನ್ನೂರಿಗೆ ಹೊರಟುಹೋದನು; ಹಾಗು ಅವರ ಹೇಳಿಕೆಯಂತೆ ಕಟ್ಟೆಯನ್ನು ಕಟ್ಟಿಸಿ, ಪೂಜೆಯನ್ನು ಮಾಡತೊಡಗಿದನು.

ಅವನಿಗೆ ಅಲ್ಲಿಯೇ ದಿನಾಲು ದರ್ಶನವಾಗಹತ್ತಿತು. ಆಗ ನಬಾಬನು ಪೋದ ಗೊಂಡು, ಆ ಔದುಂಬರ ವೃಕ್ಷದ ಬಳಿಯಲ್ಲಿ ಒಂದು ದೇವಾಲಯವನ್ನು ಕಟ್ಟಿಸಿ, ಅದಕ್ಕೆ ಶ್ರೀ ಚಿದಂಬರೌದುಂಬರ ದೇವಸ್ಥಾನವೆಂದು ಹೆಸರಿಟ್ಟನ; ಹಾಗು ಅದರ ಪೂಜೆಯು ತನ್ನ ಪಶ್ಚಾತ್ತಾದರೂ ನಿರಾತಂಕವಾಗಿ ಸಾಗಬೇಕೆಂಬ ಹೇತುವಿನಿಂದ ನೂರಾಐವತ್ತು ರೂಪಾಯಿ ಉತ್ಪನ್ನವುಳ್ಳ ಭೂಮಿಯನ್ನು ಉಂಬಳಿಹಾಕಿ ಕೊಟ್ಟನು. ಮುಂದೆ ಎಷ್ಟೋ ದಿವಸಗಳವರೆಗೆ ಆ ಔದುಂಬರ ವೃಕ್ಷವು ಭಕ್ತರಿಗೆ ಚಮತ್ಕಾರಗಳನ್ನು ತೋರಿಸುತ್ತಿತ್ತು. ಇಂತು ನಬಾಬನ ಭಕ್ತಿರೂಪ ಪುಷ್ಪದ ಪರಿಮಳವು ನಾಲ್ಕೂಕಡೆಗೆ ಹಬ್ಬಿ ತುಸ ದಿವಸಗಳಲ್ಲಿ ಯವನ ನಿಂದಕರಾದ ಮುರಗೋಡಸ್ಥ ಬ್ರಾಹ್ಮಣರ ನಾಸಾಂಧ್ರವನ್ನು ಸೇರಿತು. ಆಗ ಅವರು ಲಜ್ಜಿತರಾದರು. ಎಷ್ಟು ಅಜ್ಞಾನವಿದು? ಅಜಾಮಿಳನು ಬ್ರಾಹ್ಮಣನೋ? ವಾಲ್ಮೀಕಿಯಾದರೂ ಬ್ರಾಹ್ಮಣನೋ? ಅಲ್ಲ, ಅಂದಬಳಿಕ ಅವರ ಉದ್ಧಾರವು ಹೇಗಾಯಿತು? ಭಕ್ತರಾಗಲಿಕ್ಕೆ ಜಾತಿಯ ನಿರ್ಬಂಧವಿರುವದೇ? ಇಲ್ಲ-ಇಲ್ಲ! ನಿಜವಾಗಿ ಇಲ್ಲ!! ನಿರ್ಮಲವಾದ ಭಕ್ತಿಯೊಂದಿದ್ದರೆ ಸಾಕು. ಅನಂತನು ನಿರಾಯಾಸದಿಂದ ಭಕ್ತರ ಅಧೀನನಾಗುವನು. ಇದರಲ್ಲಿ ಎಳ್ಳಷ್ಟಾದರೂ ಸಂದೇಹವಿಲ್ಲ!

† † † † † †

**೧೦ ವ್ಯಸನ-ಶ್ವೇತಕುಷ್ಠಗಳ ನಿವಾರಣ:**—ಒಬ್ಬ ದೈವಜ್ಞ ಗೃಹಸ್ಥನು ಅಫುವಿನ ವ್ಯಸನಾಧೀನನಾಗಿ, ತುಸ ದಿವಸಗಳಲ್ಲಿಯೇ ಅಶನವನ್ನು ಕಾಣದಂತಾದನು. ಆಗ ಅವನಿಗೆ ತುಸ ಎಚ್ಚರವುಂಟಾಗಿ, ಅವನು ವ್ಯಸನ ನಿರಾಕರಣದ ಮಾರ್ಗವನ್ನು ಶೋಧಿಸತೊಡಗಿದನು. ಅಷ್ಟರಲ್ಲಿ ಚಿದಂಬರ ದೀಕ್ಷಿತರ ಕೀರ್ತಿಯು ಅವನ ಕರ್ಣರಂಧ್ರವನ್ನು ಸೇರಿತು. ಆಗ ಅವನು ಸತ್ವರದಿಂದ ದೀಕ್ಷಿತರಿದ್ದೆಡೆಗೆ ಹೋಗಿ, ತನ್ನ ಯಾವತ್ತು ವೃತ್ತಾಂತವನ್ನು ಅವರಿಗೆ ಅರುಹಿದನು. ಆಗ ಅವರು:—ಎಲೈ ಗೃಹಸ್ಥನೇ, ಅಂಜಬೇಡ. ನಿನಗೆ ಒಂದು ಸೇರು ಅಫುವನ್ನು ಕೊಡುವೆನು. ಅದನ್ನು ದಿನಾಲು ತುಸ ತುಸ ತಿನ್ನುತ್ತ ಹೋಗು; ಅಂದರೆ ನಿನ್ನ ವ್ಯಸನವು ಹೇಳಹೆಸರಿಲ್ಲದಂತಾಗುವದು, ಎಂದು ಹೇಳಲು, ಆ ಗೃಹಸ್ಥನಿಗೆ ಬಲು ಆನಂದವಾಯಿತು. ಬಳಿಕ ಅವನು ಅಫುವನ್ನು ಇಸಕೊಂಡು ಹೋಗಿ, ದಿನಾಲು ತುಸ ತುಸ ಸೇವಿಸಹತ್ತಿದನು. ಆಗ ಅವನಿಗೆ ಸ್ವಸ್ಥತೆಯುಂಟಾಗಿ, ಅಫುಸೇವನದಲ್ಲಿ ವೈರಾಗ್ಯವುಂಟಾಯಿತು.

ಆಗ ಮತ್ತೆ ಅವನು ಗುರುಸನ್ನಿಧಿಗೆ ಬಂದು, ಸಾಷ್ಟಾಂಗವೆರಗಿ ಸಮಸ್ತ ಸಂಗತಿಯನ್ನು ನಿವೇದಿಸಿದನು. ಆಗ ಗುರುಗಳು ಅವನನ್ನು ಅನುಗ್ರಹಿಸಿದರು. ಆ ಮೇಲೆ ಅವನು ಅಲ್ಲೇ ಗುರುಸನ್ನಿಧಿಯಲ್ಲಿ ವಾಸಿಸಿ, ತನ್ನ ಜನ್ಮಸಾರ್ಥಕವನ್ನು ಮಾಡಿಕೊಂಡನು.

ಒಂದುದಿವಸ ಒಬ್ಬ ಶ್ವೇತಕುಷ್ಟವುಳ್ಳ ಬ್ರಾಹ್ಮಣನು ದೀಕ್ಷಿತರ ದರ್ಶನಕ್ಕೆ ಬಂದನು. ಆಗ ದೀಕ್ಷಿತರು, ಅವನ ಮನೋಭಾವವನ್ನರಿತು, ಕುಳಿತ ಜನರಿಗೆ ಚಮತ್ಕಾರವನ್ನು ತೋರಿಸಬೇಕೆಂಬ ಹೇತುವಿನಿಂದ, ತಮ್ಮ ಸೇವಕರ ಕೈಯಿಂದ ಆ ಬ್ರಾಹ್ಮಣನನ್ನು ಊರಿಂದ ಎರಡು ಹರಿದಾರಿಗಳ ವರೆಗೆ ಓಡಿಸಿ ಬಿಟ್ಟರು. ಬ್ರಾಹ್ಮಣನಿಗೆ ವಿಷಾದವಾಯಿತು. ನಾನೊಂದು ಯೋಚಿಸಿದರೆ ದೈವವೊಂದು ಯೋಚಿಸಿತು ಏನುಮಾಡಲಿ! ಎಂದು ಚಿಂತಾಕ್ರಾಂತನಾಗಿ, ವ್ಯೈಬಿವರಿದ್ದುದರಿಂದ ಒರಿಸಿಕೊಳ್ಳುತ್ತ ಒಂದು ಗಿಡದ ನೆರಳಿಗೆ ಕುಳಿತುಕೊಂಡನು. ಬೇನೆಯ ವ್ಯಥೆಯು ಕಡಿಮೆಯಾಯಿತು. ಅಕಸ್ಮಾತ್ತಾಗಿ ತನ್ನ ಪ್ರಕೃತಿಯಲ್ಲಿ ಹೆಚ್ಚು ಕಡಿಮೆಯಾದದ್ದನ್ನು ನೋಡಿ, ತನ್ನ ಸರ್ವಾಂಗವನ್ನು ನೋಡಹತ್ತಿದನು. ಬೇನೆಯು ಹೇಳ ಹೆಸರಿಲ್ಲದಂತಾಗಿತ್ತು. ಅದನ್ನು ನೋಡಿ ಬ್ರಾಹ್ಮಣನಿಗೆ ಆನಂದವಾಯಿತು. ಅವನು ಇದೆಲ್ಲ ದೀಕ್ಷಿತರ ಮಹಿಮೆಯೇ, ಎಂದು ಭಾವಿಸಿ, ಮತ್ತೆ ಮುರಗೋಡಕ್ಕೆ ಬಂದು, ದೀಕ್ಷಿತರಿಗೆ ನಮಸ್ಕಾರ ಮಾಡಿ, ಅವರನ್ನು ಸ್ತುತಿಸಲಾರಂಭಿಸಿದನು. ಆಗ ದೀಕ್ಷಿತರು ಅವನನ್ನು ಅನುಗ್ರಹಿಸಿ, ಊರಿಗೆ ಕಳುಹಿದರು.

---

## ೧೦ನೆಯ ಪ್ರಕರಣ

## ದಿವಾಕರ ದೀಕ್ಷಿತರ ಮದುವೆಯೂ ಪರಶು-ರಾಮಪಂತನಿಗೆ ಹಿತೋಪದೇಶವೂ.

ಗಾಲವಪುರ(ಗಲಗಲಿ)ದಲ್ಲಿ ಅತ್ರಿಗೋತ್ರದ ನಾರಾಯಣ, ಲಕ್ಷ್ಮಣಶೆಂಬ ಇಬ್ಬರು ಅಣ್ಣತಮ್ಮಂದಿರು ಸದ್ವರ್ತನದಿಂದ ಕಾಲವನ್ನು ಕ್ರಮಿಸುತ್ತಿದ್ದರು. ಇವರು ಆ ಗ್ರಾಮದ ದೇಶಪಾಂಡೆಯರು. ಇವರು ಕಾಲಕಾಲಕ್ಕೆ ಮುರಗೋಡಕ್ಕೆ ಸಹಕುಟುಂಬವಾಗಿ ಬಂದು, ಮಲ್ಲಾರ(ಮಾರ್ತಾಂಡ)ದೀಕ್ಷಿತರನ್ನು ಭಜಿಸುತ್ತಿದ್ದರು. ಒಂದುಸಾರೆ ಇವರು ದರ್ಶನಕ್ಕಾಗಿ ಮುರಗೋಡಿಗೆ

ಬಂದಾಗ, ಮಾರ್ತಂಡ ದೀಕ್ಷಿತರು ಚಿಕ್ಕವನಾದ ಲಕ್ಷ್ಮಣನ ಮೂರು ವರ್ಷದ ಮಗಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಅವಳ ಕೈಯಲ್ಲಿ ಮಹಾಫಲವನ್ನೂ ಸಕ್ಕರೆಯನ್ನೂ ಕೊಟ್ಟು, ನಾರಾಯಣನಿಗೆ:-ದೇಶಪಾಂಡೆಯವರೇ, ಈ ಹುಡುಗೆಯು ನಮಗೆ ಮಾನ್ಯಳು! ಇವಳು ದೈವವುಳ್ಳವಳಿರುವಳು. ಇವಳಿಗೂ ದಿವಾಕರನಿಗೂ ಮದುವೆಯಾಗಬೇಕೆಂದು ಬ್ರಹ್ಮ ಸೂತ್ರವಿರುವದು. ದಿವಾಕರನು ಸ್ವಲ್ಪ ಕಪ್ಪು ಇದ್ದು, ನಮ್ಮ ಹಿರಿಯ ಸೊಸೆಯು ತುಸ ಶೀಡಕ ಸ್ವಭಾವದವಳಿರುವಳು; ಆದ್ದರಿಂದ ದಿವಾಕರನಿಗೆ, ಕನ್ಯೆಯನ್ನು ಕೊಡಲಿಕ್ಕೆ ಜನರು ಹಿಂಜರಿಯುತ್ತಾರೆ; ಕಾರಣ ನೀನೇ ಕನ್ಯೆಯನ್ನು ಕೊಡಲಿಕ್ಕೆ ಬೇಕೆಂದು ಹೇಳಿದರು. ಆಗ ನಾರಾಯಣನು:-ಹುಡುಗೆಯ ವಯಸ್ಸು ಬಹಳ ಸಣ್ಣದು. ಇನ್ನೂ ಐದಾರು ವರ್ಷಗಳಾಗಲಿ, ಎಂದನು. ಅದಕ್ಕೆ ದೀಕ್ಷಿತರು:—ಹಾಗೆಯೇ ಆಗಲಿ, ಎಂದು ನುಡಿದು, ಅವರಿಗೆ ಸ್ವಸ್ಥಾನಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟು, ತಾವು ಚಿದಂಬರ ದೀಕ್ಷಿತರನ್ನು ಕರೆದು:-ಗಲಗಲಿಯ ಲಕ್ಷ್ಮಣ ದೇಶಪಾಂಡೆಯವರ ಮಗಳ ಸಂಗಡ ದಿವಾಕರನ ಮದುವೆಯನ್ನು ಮಾಡಬೇಕು. ಒಂದುವೇಳೆ ಅವರು ನನ್ನ ಪಶ್ಚಾತ್ ಕನ್ಯೆಯನ್ನು ಕೊಡುವದಿಲ್ಲೆಂದು ಹಟಹಿಡಿದರೂ ನೀನು ಗಡಿಬಿಡಿ ಮಾಡಿ, ಬೇರೆ ಕಡೆಗೆ ಮದುವೆಯನ್ನು ಮಾಡಬೇಡ, ಎಂದು ಹೇಳಿದ್ದರು.

ಈಗ ದಿವಾಕರ ದೀಕ್ಷಿತರು ತಕ್ಕಷ್ಟು ದೊಡ್ಡವರಾದ್ದರಿಂದ ಚಿದಂಬರ ದೀಕ್ಷಿತರು ಅವರ ಮದುವೆಯನ್ನು ಮಾಡಬೇಕೆಂದು ನಿಶ್ಚಯಿಸಿ, ತಂದೆಯ ಅಪ್ಪಣೆಯನ್ನು ಲಕ್ಷ್ಯಕ್ಕೆ ತಂದು, ಗಲಗಲಿಯ ದೇಶಪಾಂಡೆಯವರಿಗೆ ಲಗ್ನ ಸಂಬಂಧದ ಸೂಚನೆಯನ್ನು ಕಳುಹಿದರು. ಇದು ಲಕ್ಷ್ಮಣನಿಗೂ ಅವನ ಹೆಂಡತಿಗೂ ಸರಿದೋರಲಿಲ್ಲ. ಆದ್ದರಿಂದ ಅವರು, "ನಾವು ಕನ್ಯೆಯನ್ನು ಕೊಡುವದಿಲ್ಲ" ಎಂದು ಹೇಳಿಕಳುಹಿದರು. ದೇಶಪಾಂಡೆಯವರು ಮೂರ್ಖರಲ್ಲವೇ? ಈ ಪ್ರಕಾರ ಮನೆಗೆ ಬಂದ ಕಾಮಧೇನುವನ್ನು ಗೊಡ್ಡಾಕಳುವೆಂದು ಭ್ರಮೆಪಟ್ಟು ದೂಡಬಹುದೇ?

ದೇಶಪಾಂಡೆಯವರು ದೀಕ್ಷಿತರಿಗೆ ಹೇಳಿ ಕಳುಹಿದ ಬಳಿಕ ಬೇರೆ ಕಡೆಗೆ ವರನನ್ನು ನೋಡತೊಡಗಿದರು. ಒಂದು ಕಡೆಯಲ್ಲಿ ಗೋತ್ರವು ಕೂಡಿಬಂದರೆ ಪ್ರವರಗಳ ಪ್ರತಿಬಂಧವು. ಮತ್ತೊಂದು ಕಡೆಯಲ್ಲಿ ಪ್ರವರ ಪ್ರತಿಬಂಧವು ಹೋದರೂ ಏಕನಾಡಿಯಾಗಬೇಕು. ಈ ಪ್ರಕಾರ ಒಂದಿಲ್ಲೊಂದು ರೀತಿಯಿಂದ ಏನಾದರೂ ಕೊರತೆಯುಂಟಾಗಿ, ಯಾವ ಸ್ಥಳವೂ ಕೂಡಿ ಬರಲೊಲ್ಲದು. ಆಗ

ನಾರಾಯಣನು ಹೀಗೆ ಯಾಕಾಗುತ್ತದೆಂಬುದರ ಕಾರಣವನ್ನು ಯೋಚಿಸತೊಡ ಗಿದನು. ಆಗ ಅವನಿಗೆ ಮಾರ್ತಂಡ ದೀಕ್ಷಿತರಿಗೆ ಕೊಟ್ಟ ವಚನದ ಸ್ಮರಣೆಯಾಗಿ ಅವನು ಎಲ್ಲರಿಗೂ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ, ವರ ನಿಶ್ಚಯು ಕ್ಕಾಗಿ ಲಕ್ಷ್ಮಣನನ್ನು ಕರಕೊಂಡು ಮುರಗೋಡಕ್ಕೆ ಬಂದನು. ಈ ಸುದ್ದಿಯು ಚಿದಂಬರ ದೀಕ್ಷಿತರಿಗೆ ತಿಳಿಯಲು, ನಮಗೆ ನಿಮ್ಮ ಕನ್ಯೆಯು ಕಾರಣವಿಲ್ಲೆಂದು ಹೇಳಿ ಕಳಿಸಿದರು. ಇದರಿಂದ ನಾರಾಯಣನಿಗೆ ಬಹಳ ವ್ಯಸನವಾಯಿತು. ಬಳಿಕ ಅವನು ಚಿದಂಬರ ದೀಕ್ಷಿತರ ತಮ್ಮಂದಿರಾದ ಪ್ರಭಾಕರ ದೀಕ್ಷಿತರ ಮಧ್ಯಸ್ಥಿ ಕೆಯಿಂದ ದೀಕ್ಷಿತರಿಗೆ ಭೆಟ್ಟಿಯಾಗಿ, ಕನ್ಯೆಯನ್ನು ತಕ್ಕೊಳ್ಳಬೇಕೆಂದು ಪರಪರಿ ಯಿಂದ ಬೇಡಿಕೊಂಡನು. ಆಗ ಚಿದಂಬರ ದೀಕ್ಷಿತರು ತಂದೆಯ ಮಾತನ್ನು ಲಕ್ಷ್ಯಕ್ಕೆ ತಂದು, ನಾರಾಯಣನ ಮಾತಿಗೆ ಒಪ್ಪಿ, ಮುಹೂರ್ತವನ್ನು ನಿಶ್ಚಯಿಸಿ, ಅವರಿಗೆ ತಮ್ಮ ಗ್ರಾಮಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಆಗ ದೇಶ ಪಾಂಡೆಯವರಿಗೆ ಆನಂದವಾಯಿತು. ಅವರು ಅದೇ ದಿವಸ ಅಲ್ಲಿಂದ ಹೊರಟು ಊರಿಗೆ ಬಂದು, ಮದುವೆಯ ಸಿದ್ಧತೆಯನ್ನು ಒಳ್ಳೇ ಭರದಿಂದ ಮಾಡ ತೊಡಗಿದರು.

ಮುಹೂರ್ತವು ಸಮೀಪಿಸಲು, ಚಿದಂಬರ ದೀಕ್ಷಿತರು ಪರಿವಾರದೊಂದಿಗೆ ಗಾಲವಪುರಕ್ಕೆ ಬಂದರು. ವಿವಾಹದ ಮುನ್ನಾದಿವಸ ಎದುರುಗೊಳ್ಳುವ ಹಾಗು ಸೀಮಾಂತಪೂಜನದ ಕಾರ್ಯಗಳು ಯಥಾ ಸಾಂಗವಾದವು. ಮರುದಿನವೇ ವಿವಾಹವು. ದೀಕ್ಷಿತರ ಮನೆಯು ಮದುವೆಯಿಂದ ಬಳಿಕ ಕೇಳುವದೇನು? ನಾಲ್ಕೂ ಕಡೆಗೆ ಆನಂದವು ತುಂಬಿಕೊಂಡಿತ್ತು. ಪ್ರತಿಯೊಬ್ಬರು ತಮ್ಮ ತಮ್ಮ ಕಾರ್ಯಗಳಲ್ಲಿ ಮುಳುಗಿ ಹೋಗಿದ್ದರು. ಮುತ್ತೈದೆಯರು ಅರಿಶಿನ-ಕುಂಕುಮ-ಮಂತ್ರಾಕ್ಷತೆಗಳ ಕರಂಡಕಗಳನ್ನೂ, ಬೆಳ್ಳಿಯ ಬಟ್ಟಲಗಳನ್ನೂ ತಕ್ಕೊಂಡು, ಗ್ರಾಮವಾಸಿಗಳಾದ ಸುವಾಸಿನಿಯರಿಗೆ ಔತಣ ಹೇಳಲಿಕ್ಕೆ ಅಡ್ಡಾಡುತ್ತಿದ್ದರು. ಅಡಿಗೆಯವರು ಅಡಿಗೆಯನ್ನು ಮಾಡಲು ತೊಡಗಿದ್ದರು.

ವೇಳೆಗೆ ಸರಿಯಾಗಿ ಪುಣ್ಯಾಹವಾಚನ, ದೇವತಾಸ್ಥಾಪನ ಮೊದಲಾದ ಕಾರ್ಯಗಳು ತೀರಿದವು. ಮುಹೂರ್ತವು ಸಮೀಪಿಸಿದ್ದರಿಂದ ಪುರೋಹಿತರು ಮದುಮಗನನ್ನು ಕರೆಯಲಿಕ್ಕೆ ಕಳುಹಿರೆಂದು ಹೇಳಿದರು. ಆಗ ವಧುಪಕ್ಷದವರು ಒಳ್ಳೇ ವಿಜೃಂಭಣೆಯಿಂದ ವರನನ್ನು ಕರಕೊಂಡು ವಿವಾಹಗೃಹಕ್ಕೆ ಬಂದರು. ವಿವಾಹ ಮಂಟಪವು ಕದಳೀ ಕಂಬಗಳಿಂದಲೂ, ತಳಿರ್ತೋರಣಗಳಿಂದಲೂ,

ಚಿತ್ರ-ವಿಚಿತ್ರವಾದ ಪಟಗಳಿಂದಲೂ, ಆಮಂತ್ರಿತರಾದ ಪುರವಾಸಿಗಳಿಂದಲೂ ಕಂಗೊಳಿಸುತ್ತಿತ್ತು. ಶುಭಲಗ್ನವು ಸಮೀಪಿಸಿರಲು, ಪುರೋಹಿತರು ಮಂಗಲಾಷ್ಟಕದ ಘೋಷದಲ್ಲಿ ವಧೂ-ವರರ ಮೇಲೆ ಅಕ್ಷತೆಗಳನ್ನು ಹಾಕಿ ಮಂಗಲವನ್ನು ಮಾಡಿದರು. ಅನಂತರ ಕನ್ಯಾದಾನ, ಲಾಜಾಹೋಮಾದಿ ವಿಧಿಗಳು ತೀರಿದವು. ಬಳಿಕ ಬ್ರಾಹ್ಮಣರಿಗೆ ವಿಪುಲವಾದ ದಕ್ಷಿಣೆಯನ್ನು ಕೊಟ್ಟು ಸಂತೋಷಗೊಳಿಸಿದರು; ಹಾಗು ಮಿಕ್ಕವರಿಗೆ ತಾಂಬೂಲ-ಪರಿಮಲ ದ್ರವ್ಯಗಳನ್ನು ಕೊಟ್ಟು, ಆ ಹೊತ್ತಿನ ಕಾರ್ಯವನ್ನು ಕೊನೆಗಾಣಿಸಿದರು. ಮುಂದೆ ನಾಲ್ಕಾರು ದಿವಸ ಭೋಜನ ಮೊದಲಾದ ಸಮಾರಂಭಗಳಾದವು. ಈ ಲಗ್ನದಲ್ಲಿ ದೀಕ್ಷಿತರು ವರೋಪಚಾರವನ್ನು ತಕ್ಕೊಳ್ಳಲಿಲ್ಲ. ಚಿದಂಬರ ದೀಕ್ಷಿತರು ಸೊಸೆಗೆ 'ಯಮುನಾ' ಎಂದು ಹೆಸರನ್ನಿಡಿಸಿದರು. ಲಗ್ನ ಕಾರ್ಯಗಳೆಲ್ಲ ತೀರಿದ ಬಳಿಕ ದೀಕ್ಷಿತರು ಬೀಗರ ಅಪ್ಪಣೆಯನ್ನು ತಕ್ಕೊಂಡು ಪರಿವಾರದೊಡನೆ ಮುರಗೋಡಕ್ಕೆ ಬಂದರು.

ಈ ಕಾಲಕ್ಕೆ ಪೇಶವೆಯವರ ಸರದಾರನಾದ * ಪಟವರ್ಧನ ಪರಶುರಾಮಪಂತನು ಮಿರಜೆಯಲ್ಲಿದ್ದನು. ೨ನೇ ಬಾಜೀರಾಯನು ಪಟ್ಟವೇರಿದ ಸುದ್ದಿಯು ಇವನಿಗೆ ತಿಳಿಯಲು, ಇವನು ಒಂದು ಕಾರಣದಿಂದ ಅವನನ್ನು ಮಿರಜೆಗೆ ಕರಕೊಂಡು ಬಂದನು. ಯೋಗಾಯೋಗವು ವಿಚಿತ್ರವಾದದ್ದು! ಯಾವದೋ ಒಂದು ನಿಮಿತ್ತದಿಂದ ಮಿರಜೆಯಲ್ಲಿ ಬಾಜೀರಾಯನಿಗೂ, ಪರಶುರಾಮಪಂತನಿಗೂ ಯುದ್ಧಕ್ಕೆ ಆರಂಭವಾಯಿತು. ಈ ಕಾಳಗದಲ್ಲಿ ಬಾಜೀರಾಯನು ಮೋಸದಿಂದ ಪಂತನನ್ನು ಸೆರೆಹಿಡಿದು, ಪುಣೆಗೆ ಒಯ್ದು ಸೆರೆಮನೆಯಲ್ಲಿಟ್ಟನು. ಈ ಕಾಲಕ್ಕೆ ಪರಶುರಾಮಪಂತನ ಮಗನಾದ ರಾಮಚಂದ್ರಪಂತನು ಶ್ರೀ ಚಿದಂಬರ ದೀಕ್ಷಿತರ ಬಳಿಯಲ್ಲಿ ಕಾರಭಾರಿಯಾಗಿದ್ದನು. ಅವನಿಗೆ ತಂದೆಯು ಸೆರೆಸಿಕ್ಕ ಸುದ್ದಿಯು ತಿಳಿಯಲು, ಬಹಳ ವ್ಯಸನವಾಯಿತು. ಆ ಮೇಲೆ ಅವನು ಈ ಸುದ್ದಿಯನ್ನು ದೀಕ್ಷಿತರಿಗೆ ಹೇಳಿದನು. ಆಗ ದೀಕ್ಷಿತರು:—ರಾಮಚಂದ್ರಪಂತ, ಚಿಂತೆಮಾಡಬೇಡ. ಇನ್ನು ಆರು ತಿಂಗಳಲ್ಲಿ ನಿನ್ನ ತಂದೆಯು ಬಿಡುಗಡೆಯಾಗುವದು. ನೀನು ಇದೇ ವರ್ತಮಾನವನ್ನು ಪತ್ರದ್ವಾರದಿಂದ ನಿನ್ನ ತಂದೆಗೆ ತಿಳಿಸು, ಎಂದು ಹೇಳಿ, ಅವನನ್ನು ಸಮಾಧಾನಗೊಳಿಸಿದರು; ಹಾಗೂ ಅದೇ ಹೊತ್ತು ರಾತ್ರಿಯಲ್ಲಿ ಪರಶುರಾಮನ ಕನಸಿನಲ್ಲಿ ಹೋಗಿ:—ಏನೂ ಚಿಂತೆ ಮಾಡಬೇಡ.

* ಇವರ ಜನ್ಮ ಶಕೆ ೧೬೬೨ ಶ್ರಾವಣ ಶುದ್ಧ ಅಷ್ಟಮಿಯು ದಿವಸವಾಯಿತು.

ಆರುತಿಂಗಳಲ್ಲಿ ನಿನ್ನ ಬಿಡುಗಡೆಯಾಗುವದು. ನಿನ್ನ ಮಗನಿಂದ ಒಂದು ಪತ್ರವು ಬಂದೀತು. ನೀನು ಅದರಂತೆ ವರ್ತಿಸು. ನಾನೇ ಆ ಪತ್ರವನ್ನು ಬರೆಸಿರುವೆನೆಂದು ತಿಳಿ, ಎಂದು ಹೇಳುತ್ತಿರಲು, ಪರುಶುರಾವನು ಎಚ್ಚತ್ತನು. ಒಳಿಕ ದೀಕ್ಷಿತರ ದೃಷ್ಟಾಂತವನ್ನು ಜ್ಞಾಪಕಕ್ಕೆ ತಂದು, ಬಿಡುಗಡೆಯ ಮಾರ್ಗವನ್ನು ನಿರೀಕ್ಷಿಸುತ್ತ ಕಾಲಹರಣ ಮಾಡಹತ್ತಿದನು.

ಕೊಲ್ಲಾಪುರದವರಿಗೂ ಪಟವರ್ಧನರಿಗೂ ಮೊದಲಿನಿಂದ ದ್ವೇಷವು ಇದ್ದೇ ಇತ್ತು. ಅವರು ಈ ಸಂಧಿಯನ್ನು ಸಾಧಿಸಿ, ಕೈ ಸಾಧಿಸಿದಷ್ಟು ಕೆಲಸವನ್ನು ಮಾಡಿಕೊಂಡರು. ಹತ್ತು ವರ್ಷಗಳಿಂದ ಪಟವರ್ಧನರ ವಶದಲ್ಲಿದ್ದ ಬುಧರಗಡವನ್ನು ಅವರು ಮೊದಲು ವಶಮಾಡಿಕೊಂಡರು. ತರುವಾಯ ಚಿಕ್ಕೋಡಿ, ಮನೋಳ್ಳಿ ತಾಲೂಕುಗಳನ್ನು ನಿಪ್ಪಾಣಿಯ ಒಡೆಯನಾದ ಭಾಸ್ಕರರಾಯನಿಂದ ಕಸುಕೊಂಡರು. ಆ ಮೇಲೆ ಕರ್ನಾಟಕದೊಳಗಿನ ದೊಡ್ಡ ದೊಡ್ಡ ಪಟ್ಟಣಗಳನ್ನು ಸುಲಿದು, ಸಂಕೇಶ್ವರದ ಬಳಿಯಲ್ಲಿರುವ ವಲ್ಲಭಗಡವನ್ನೂ ನಿಪ್ಪಾಣಿಯ ಉತ್ತರದಿಕ್ಕಿಗಿರುವ ಸೌಂದಲಗಿಯ ಕೋಟೆಯನ್ನೂ ತಕ್ಕೊಂಡರು. ಅನಂತರ ಸನ್ ೧೭೯೭ರಲ್ಲಿ ಗೋಕಾಕದ ಮೇಲೆ ದೌಡುಮಾಡಿ, ಆ ಪ್ರಾಂತದೊಳಗಿಂದ ೧೨,೦೦೦ ರೂ ಕಪ್ಪನ್ನು ತಕ್ಕೊಂಡು ಕಿತ್ತೂರದ ಕಡೆಗೆ ಸಾಗಿದರು. ಅಲ್ಲಿಂದ ಮತ್ತೆ ಕಪ್ಪನ್ನು ತಕ್ಕೊಳ್ಳುತ್ತ ಕೊಣ್ಣೂರಿಗೆ ಬಂದರು ಅಲ್ಲಿಯ ದೇಸಾಯಿಯವರು ಇವರ ವಿರುದ್ಧವಾಗಿ ವರ್ತಿಸಿದ್ದರಿಂದ ಅವರನ್ನು ಕೊಂದು ಹಾಗೆಯೇ ಪಾಚ್ಛಾಪುರದ ಕಡೆಗೆ ಸಾಗಿದರು.

ಕೊಲ್ಲಾಪುರದವರು ಈ ಪ್ರಕಾರ ಪುಂಡಶನವನ್ನು ನಡೆಸಿರಲು, ಸಾತಾರೆಯ ಅರಸರು ಕೆಲವು ತುಂಟಜನರ ಮಾತು ಕೇಳಿ, ಪೇಶವೆಯವರ ವಿರುದ್ಧವಾಗಿ ಬಂಡಾಯವನ್ನೆಬ್ಬಿಸಿದರು. ಈ ಸುದ್ದಿಯು ಪೇಶವೆಯವರಿಗೆ ತಿಳಿಯಲು, ಅವರು ಬಂಡಾಯವು ಯಾವ ರೀತಿಯಿಂದ ಶಾಂತವಾದೀತೆಂದು ಯೋಚಿಸತೊಡಗಿದರು. ಇದಕ್ಕೆ ಅವರ ಸರದಾರರಾದ † ರಾಸ್ತೆಯವರು:—ಪರಶುರಾಮಪಂತರ ಹೊರತು ಈ ಕಾರ್ಯವು ಯಾರಿಂದಲೂ ನೀಗಲಾರದು. ಕಾರಣ ಅವರನ್ನು ಸೆರೆಮನೆಯಿಂದ ಬಿಡಿಸಿ, ಅತ್ತಕಡೆಗೆ ಕಳುಹಬೇಕೆಂದು ಹೇಳಿದರು. ಈ ಮಾತು ಪೇಶವೆಯವರಿಗೆ ಸರಿದೋರಿದ್ದರಿಂದ, ಅವರು ಪರಶುರಾಮನ ಬಿಡುಗಡೆಮಾಡಿ

† ಇವರ ವಾಸಸ್ಥಾನವು ವಾಯಿಗ್ರಾಮವು. ಇವರ ಶಾಖೆಯು ತೈತ್ತರೀಯ. ಇವರು ಶೂರರಿದ್ದು, ಇವರಿಗೂ, ಪರಶುರಾಮಪಂತನಿಗೂ ಆಪ್ತತ್ವವಿತ್ತು.

ಅವನ ಕೈಕೆಳಗೆ ಬಹಳ ಸೈನ್ಯವನ್ನು ಕೊಟ್ಟು, ಅವನನ್ನು ಸಾತಾರೆಯ ಮೇಲೆ ಕಳುಹಿದರು

ಶೂರನೂ ಸ್ವಾಮಿಭಕ್ತನೂ ಆದ ಪರಶುರಾಮಪಂತನು ಪೇಶವೆಯವರ ಅಪ್ಪಣೆಯ ಮೇರೆಗೆ ಸಾತಾರೆಗೆ ಹೋಗಿ, ಬಂಡುಗಾರರನ್ನು ದಂಡಿಸಿ, ಅರಸನನ್ನು ಮೆತ್ತಗೆ ಮಾಡಿ, ಈ ಗೆಲುವಿನ ಸುದ್ದಿಯನ್ನು ಪೇಶವೆಯವರಿಗೆ ತಿಳಿಸಲು ಪುಣೆಗೆ ಹೋಗಬೇಕೆಂದು ಹೊರಟು, ಮೊದಲು ಸೈನ್ಯದೊಂದಿಗೆ ದೀಕ್ಷಿತರ ದರ್ಶನಾರ್ಥವಾಗಿ ಬಂದನು. (ಶಕೆ ೧೬೭೦ ಕಾಲಯುಕ್ತ್ಯಾಕ್ಷಿ ಸಂವತ್ಸರ)

ಪರಶುರಾಮಪಂತನು ಬಂದ ಬಳಿಕ, ದೀಕ್ಷಿತರಿಗೆ ಭೆಟ್ಟಿಯಾಗಿ, ಅವರಿಗೆ ತನ್ನ ಯಾವತ್ತು ವೃತ್ತಾಂತವನ್ನು ಹೇಳಿದನು. ಆಗ ದೀಕ್ಷಿತರು:—ಹಣೇ ಬರಹದಲ್ಲಿದ್ದಂತೆ ಆಗತಕ್ಕದ್ದೇ ನಿಜ; ಅದನ್ನು ಯಾರೂ ತಪ್ಪಿಸಲಾರರು. ನಿನಗೆ ಇಂದಿನಿಂದ ತುಸ ದಿವಸಗಳಲ್ಲಿಯೇ ಕೊಲ್ಹಾಪುರದವರ ಮೇಲೆ ಯುದ್ಧಕ್ಕೆ ಹೋಗುವ ಪ್ರಸಂಗವು ಬರತಕ್ಕದ್ದದೆ. ಆಗ ನೀನು ಯುದ್ಧಕ್ಕೆ ಹೋಗಕೂಡದು. ಈಗ ನಿನ್ನ ವೇಳೆಯು ವಿಷಮವದೆ. ಬಹಳ ಹೇಳುವದೇನು? ನೀನು ಕೊಲ್ಹಾಪುರದವರ ರಾಜ್ಯದಲ್ಲಿ ಸಹ ಇರಕೂಡದು. ಇದರ ವಿರುದ್ಧವಾಗಿ ವರ್ತಿಸಿದರೆ ಪ್ರಾಣಹಾನಿಯಾಗುವದೆಂದು ಹೇಳಿ, ಅವನಿಗೂ ಅವನ ಸೈನ್ಯದವರಿಗೂ ಸನ್ಮಾನಮಾಡಿ, ಪುಣೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ‡ ಸಿದ್ಧೋಜಿಯನ್ನು ಮಾತ್ರ ತಮ್ಮ ಬಳಿಯಲ್ಲಿಟ್ಟುಕೊಂಡರು. ಅನಂತರ ಪರಶುರಾಮನು ಮಗನಿಗೆ ಭೆಟ್ಟಿಯಾಗಿ, ಪುಣೆಗೆ ಹೊರಟುಬಂದು, ಪೇಶವೆಯವರಿಗೆ ಸಮಸ್ತ ವೃತ್ತಾಂತವನ್ನು ಹೇಳಿದನು.

ಸಾತಾರೆಯ ಬಂಡಾಯವು ಶಾಂತವಾದ ಬಳಿಕ ಚತರಸಿಂಗನು ಕೊಲ್ಹಾಪುರದವರಿಗೆ ಕೂಡಿದ್ದರಿಂದ ಅವರ ಪುಂಡಾಟಕ್ಕೆ ಮತ್ತಿಷ್ಟು ಕಳೆಯೇರಿತು. ಅವರು ತಾಸಗಾವಿಯನ್ನು ಸುಲಿದು, ಪರಶುರಾಮಪಂತನ ಶ್ರೀಗಂಧದ ಅರಮನೆಯನ್ನು ಸುಟ್ಟರು; ಇಷ್ಟೇ ಅಲ್ಲ, ಅವರು ವಾರಣಾತೀರದಲ್ಲಿ ರಾಸ್ತೆ ಮತ್ತು ಪ್ರತಿನಿಧಿಗಳ ದಂಡನ್ನು ತುಂಡರಿಸಿದರು. ಇಂತು ಕೊಲ್ಹಾಪುರದವರ ಪ್ರಸ್ಥವು ಬೆಳೆಯತೊಡಗಿತು. ಈ ಸುದ್ದಿಯು ಪೇಶವೆಯವರಿಗೆ ತಿಳಿಯಲು, ಅವರು

‡ ಘಟಪ್ರಭೆಯ ಉತ್ತರದಿಕ್ಕಿಗಿರುವ ನಿಪ್ಪಾಣಿಯೆಂಬ ಸಂಸ್ಥಾನದ ಒಡೆಯನು. ಇವನ ಪೂರ್ವಜರು ಯಾವತ್ತು ಸಂಪತ್ತಿಯನ್ನು ಕಳಕೊಂಡಿದ್ದರು. ಆದ್ದರಿಂದ ಇವನಿಗೆ ಬಹಳ ಬಡತನವುಂಟಾಗಿತ್ತು. ಆದ್ದರಿಂದ ಅವನು ಪರಶುರಾಮಪಂತನ ಆಶ್ರಯಕ್ಕೆ ಹೋಗಿ ನಿಂತಿದ್ದನು.

ಕೊಲ್ಲಾಪುರದವರನ್ನು ಶಿಕ್ಷಿಸುವದಕ್ಕಾಗಿ, ಸ೯ ೧೭೯೯ ರಲ್ಲಿ ಪರಶುರಾಮ ಪಂತನ ಸಹಾಯಕ್ಕೆ ಟೀಪುವಿನ ಮೇಲೆ ಕಳಿಸಲಿಕ್ಕೆ ಸಿದ್ಧಮಾಡಿದ ಸೈನ್ಯವನ್ನು ಕೊಟ್ಟು ಕಳುಹಿದರು; ಹಾಗು ಮಳೆಗಾಲವು ಮುಗಿದ ಬಳಿಕ ಪೇಶ್ವೆ, ಸಿಂಧೆ ಮೊದಲಾದವರು ಸಂಗಡ ೩೦೦೦೦ ಕುದುರೆಯ ಸವಾರರನ್ನೂ, ೬೦೦೦ ಕಾಲಾಳುಗಳನ್ನೂ ತಕ್ಕೊಂಡು, ಪರಶುರಾಮಪಂತನ ಸಹಾಯಕ್ಕೆ ಹೋಗ ಬೇಕೆಂದು ಗೊತ್ತುಮಾಡಿದರು.

ಕೊಲ್ಲಾಪುರದವರ ಪುಂಡಾಟಕ್ಕೆ ಕ್ರೋಧಗೊಂಡ ಪರಶುರಾಮನು, ಪೇಶವೆಯುವರ ಅಪ್ಪಣೆಯ ಮೇರೆಗೆ ಕೊಲ್ಲಾಪುರದ ಮೇಲೆ ಸಾಗಿಹೋಗುವ ದಕ್ಕಾಗಿ ಅಗ್ಗಿಯೇ ಹೊರಟನು. ಅವನಿಗೆ ದೈವವಿಪಾಕದಿಂದ ದೀಕ್ಷಿತರ ವಚನಗಳ ವಿಸ್ಮರಣೆಯಾಯಿತು. ಅವನು ಹುರಿದುಂಬಿದ ಹುಲಿಯಂತೆ ಕೊಲ್ಲಾಪುರ ಸೀಮೆಯನ್ನು ಸೇರಿ, ಕೈಗೆ ಸಿಕ್ಕವರನ್ನು ಕೊಲ್ಲುತ್ತ, ತಮ್ಮ ಮೊದಲಿನ ಸೀಮೆಯನ್ನು ವಶಮಾಡಿಕೊಳ್ಳಹತ್ತಿದನು. ಮೊದ ಮೊದಲು ಅವನಿಗೆ ಜಯ ವಾಯಿತು. ಅವನು ಹಾಗೆಯೇ ಯುದ್ಧಮಾಡುತ್ತಿರಲು, ಅವನ ಮರಣ ಕಾಲವು ಸಮೀಪಿಸಿತು. ಗುರ್ವಾಜ್ಞೆಯನ್ನು ಉಲ್ಲಂಘಿಸಿದ ಫಲವನ್ನು ಅನು ಭವಿಸುವ ಪ್ರಸಂಗವು ಬಂದಿತು. ಪಟ್ಟಣಕುಡಿಯೆಂಬ ಗ್ರಾಮದ ಬಳಿಯಲ್ಲಿ ಶತ್ರುಪಕ್ಷದವರು ಪರಶುರಾಮಪಂತನನ್ನು ಸುತ್ತುಗಟ್ಟಿದರು. ಈ ಪ್ರಸಂಗ ದಲ್ಲಿ ಪಂತನು ಶೌರ್ಯದಿಂದ ಕಾದಿದರೂ ದೈವದ ಅನನುಕೂಲತೆಯ ಮೂಲಕ ಶಕೆ ೧೭೨೧ ಭಾದ್ರಪದ ವದ್ಯ ಚತುರ್ಥಿಯದಿವಸ ವೈರಿಗಳಿಂದ ಕೊಲ್ಲಲ್ಪಟ್ಟನು.

---

## ೧೧ನೆಯ ಪ್ರಕರಣ.

## ಮುರಗೋಡ ತ್ಯಾಗ.

ಸದ್ಯಕ್ಕೆ ಪರಸಗಡ ತಾಲೂಕಿನೊಳಗೆ ಮುರುಗೋಡದ ಪೂರ್ವದಿಕ್ಕಿಗೆ ಐದು ಮೈಲುಗಳ ಅಂತರದ ಮೇಲಿರುವ ತಲ್ಲೂರವೆಂಬ ಚಿಕ್ಕಸಂಸ್ಥಾನವು ಶಕೆ ೧೭೧೮ರ ಸುಮಾರಕ್ಕೆ ಮುನ್ನೋಳ್ಳಿ ತಾಲೂಕಿನೊಳಗಿದ್ದು, ಕರವೀರ ಸರ ಕಾರದ ವಶದಲ್ಲಿತ್ತು. ಅಲ್ಲಿಯ ಅಧಿಕಾರಿಯ ಹೆಸರು ದೇಸಾಯಿ. ಅವನು ಈ ಸುಮಾರಕ್ಕೆ ಮುರಗೋಡದಲ್ಲಿಯೇ ಇರುತ್ತಿದ್ದನು. ಅವನ ಬಳಿಯಲ್ಲಿ ಲಿಂಗಪ್ಪ ನೆಂಬ ಒಬ್ಬ ಭಾವಿಕ ಬ್ರಾಹ್ಮಣನು ಕಾರಭಾರಿಯಾಗಿದ್ದನು. ಲಿಂಗಪ್ಪನು

ದಿನಾಲು ದೀಕ್ಷಿತರ ದರ್ಶನತಕ್ಕೊಳ್ಳದೆ ಅನ್ನಗ್ರಹಣವನ್ನು ಮಾಡುತ್ತಿದ್ದಿಲ್ಲ. ಹೀಗಿರಲು ಕೆಲವೊಂದು ಕಾರಣ ಮೂಲಕ ದೇಸಾಯರಿಗೂ, ಲಿಂಗಪ್ಪನಿಗೂ ಮಾತಿನಲ್ಲಿ ಮತ ಭೇದವುಂಟಾಯಿತು. ಲಿಂಗಪ್ಪನು ನಿಸ್ಪೃಹಿಯಿದ್ದದರಿಂದ ಅವನು ದೇಸಾಯರ ವಿರುದ್ಧವಾಗಿ ತನ್ನ ಅಭಿಪ್ರಾಯವನ್ನು ಕೊಟ್ಟನು. ಈ ದ್ವೇಷಾನಲಕ್ಕೆ ಮತ್ತೊಬ್ಬ ದೇಸಾಯಿಯು ಪುಟಹಾಕಿದ್ದರಿಂದ ಅದು ವಿಶೇಷ ವಾಗಿ ಪ್ರಜ್ವಲಿಸಿ, ಲಿಂಗಪ್ಪನನ್ನು ಕೊಲ್ಲಲುದ್ಯುಕ್ತವಾಯಿತು.

ಒಂದುದಿವಸ ಲಿಂಗಪ್ಪನು ಚಿದಂಬರದೀಕ್ಷಿತರ ದರ್ಶನಕ್ಕಾಗಿ ಹೋದ ಸಮಯದಲ್ಲಿ ದೇಸಾಯಿಯರ ಕಡೆಯಿಂದ ಒಬ್ಬ ಪರಿಚಾರಕನು ಅವನನ್ನು ಕರೆಯಲಿಕ್ಕೆ ಬಂದನು. ಆಗ ಲಿಂಗಪ್ಪನು ಆ ಮನುಷ್ಯನಿಗೆ ಈಗ ಬರುತ್ತೇನೆಂದು ಹೇಳಿ ಕಳುಹಿದನು; ಹಾಗು ದೀಕ್ಷಿತರನ್ನು ಕುರಿತು:-ನನ್ನ ಒಡೆಯನಿಂದ ಆಮಂತ್ರಣ ಬಂದದೆ; ಕಾರಣ ನಾನು ಹೋಗಿಬರುತ್ತೇನೆಂದು ಹೇಳಿದನು. ಆಗ ದೀಕ್ಷಿತರು:-ಲಿಂಗಪ್ಪಾ, ಈ ಹೊತ್ತು ನೀನು ದೇಸಾಯಿಯರ ಮನೆಗೆ ಹೋಗಕೂಡದು. ಇಲ್ಲಿಯೇ ಉಳಕೊಳ್ಳಬೇಕೆಂದು ಹೇಳಿದರು. ಅದಕ್ಕೆ ಲಿಂಗಪ್ಪನು:-ಇದುವರೆಗೆ ದೇಸಾಯರ ಅನ್ನವನ್ನುಂಡು, ಈಗ ಅವರು ಕರೆಯುತ್ತಿರಲು, ನಾನು ಹೋಗದಿರುವದು ಯೋಗ್ಯವೇ? ಎನ್ನಲು, ದಿಕ್ಷಿತರು:-ಪ್ರತಿಯೊಬ್ಬರು ಎಲ್ಲಿಯ ವರೆಗೆ ತಮ್ಮ ಕರ್ತವ್ಯಕರ್ಮವನ್ನು ನಿಷ್ಪಾಪ ದೃಷ್ಟಿಯಿಂದ ಮಾಡುತ್ತಾರೋ, ಅಲ್ಲಿಯ ವರೆಗೆ ಅವರು ತಮ್ಮ-ತಮ್ಮ ಪದವಿಗೆ ತಕ್ಕವರಾಗುವರು. ಈಗ ದೇಸಾಯಿಯರ ಬುದ್ಧಿಯಲ್ಲಿಯೂ, ಕರ್ತವ್ಯಕರ್ಮದಲ್ಲಿಯೂ ಅನೀತಿಯು ಪ್ರವೇಶವಾಗಿರುವದು. ಅವರು ಸೇವ್ಯ-ಸೇವಕಭಾವವನ್ನು ಮರೆತಿರುವರು; ಆದ್ದರಿಂದ ನೀನು ಅಲ್ಲಿಗೆ ಹೋಗಕೂಡದು, ಎಂದರು. ಆಗ ಲಿಂಗಪ್ಪನು:-ಏನೇ ಆಗಲಿ, ನಾನಂತೂ ಹೋಗಿಬರುತ್ತೇನೆ. ಸ್ವಾಮಿದ್ರೋಹವನ್ನು ಕಟ್ಟಿಕೊಳ್ಳುವದಿಲ್ಲ. ದಯಮಾಡಿ ನನಗೆ ಅಪ್ಪಣೆಯನ್ನು ಕೊಡಬೇಕೆಂದು ಬೇಡಿಕೊಂಡನು. ಆಗ ದೀಕ್ಷಿತರು:-ನಾನಂತೂ ಹೋಗಬೇಡೆಂದು ಹೇಳಿರುವೆನು. ಇನ್ನು ನಿನ್ನ ಮನಸಿಗೆ ಬಂದಂತೆ ಮಾಡು, ಎಂದು ಹೇಳಿದರು. ಆಗ ಲಿಂಗಪ್ಪನು ಯಾವ ಅನ್ಯವಿಚಾರಗಳಿಗೂ ಮನಸಿನೊಳಗೆ ಸ್ಥಳಕೊಡದೆ, ಒಮ್ಮೆಲೆ ಎದ್ದು, ದೀಕ್ಷಿತರಿಗೆ ವಂದಿಸಿ, ದೇಸಾಯರ ಅರಮನೆಗೆ ಹೊರಟು ಹೋದನು.

ಬೆಕ್ಕು, ಇಲಿಯ ಮಾರ್ಗವನ್ನು ನಿರೀಕ್ಷಿಸುತ್ತ ಕೂಡ್ರುವಂತೆ ದೇಸಾಯಿಯರು ಲಿಂಗಪ್ಪನ ಮಾರ್ಗವನ್ನು ನೋಡುತ್ತ ಕುಳಿತುಕೊಂಡಿದ್ದರು. ಲಿಂಗ

ಪ್ಪನು ನಿಶ್ಚಯದಂತೆ, ನಿರ್ಭಯದಿಂದ ಅರಮನೆಯನ್ನು ಹೊಕ್ಕು ತನ್ನ ಸ್ಥಳದಲ್ಲಿ ಹೋಗಿ ಕುಳಿತುಕೊಂಡನು. ಆಗ ದೇಸಾಯರು ಮೊದಲೇ ಗೊತ್ತುಮಾಡಿದಂತೆ, ಲಿಂಗಪ್ಪನನ್ನು ಒಂದು ಏಕಾಂತಸ್ಥಳಕ್ಕೆ ಕರೆದೊಯ್ದು, ಅಲ್ಲಿ ಅವನನ್ನು ಕೊಲೆಗಡಕರಿಂದ ಕೊಲ್ಲಿಸಿದರು.

ಬೆಕ್ಕು ಹಾಲು ಕುಡಿಯುವಾಗ ತನ್ನ ತುಡುಗತನವನ್ನು ಜನರು ನೋಡಬಾರದೆಂಬದಾಗಿ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತದೆ; ಆದರೆ ಅದರ ಆ ಕುಕರ್ಮವು ಜನರಿಗೆ ತಿಳಿಯುವದಿಲ್ಲವೇ? ಅದರಂತೆ ದೇಸಾಯರು ಲಿಂಗಪ್ಪನ ವಧೆಯನ್ನು ರಹಸ್ಯವಾಗಿ ಮಾಡಿದರೂ, ಸ್ವಲ್ಪಾವಕಾಶದಲ್ಲಿಯೇ ಅದು ಹೊರಬಿತ್ತು. ಆಗ ದೇಸಾಯರು ಇನ್ನುಮೇಲೆ ತಮ್ಮ ಅಮರ್ಯಾದೆಯಾಗುತ್ತದೆಂದು ತಿಳಿದು, ಪಲಾಯನ ಸೂಕ್ತವನ್ನು ಜಪಿಸಿದರು. ಈ ಕೊಲೆಯ ಸುದ್ದಿಯು ಕೊಲ್ಹಾಪುರದವರಿಗೆ ತಿಳಿಯಲು, ಅವರು ದೇಸಾಯರನ್ನು ದಂಡಿಸುವದಕ್ಕಾಗಿ ತಲ್ಲೂರಿಗೆ ಬಂದರು; ಆದರೆ ದೇಸಾಯರು ಓಡಿಹೋದ ವರ್ತಮಾನವು ತಿಳಿಯಲು, ಅವರು ದೇಸಾಯರನ್ನು ಶೋಧಮಾಡಿ ತರಿಸಿ, ಕಾಳಗದ ನಿಮಿತ್ತದಿಂದ ಅವರಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಟ್ಟರು. ಇರಲಿ

ಮಧ್ಯಾಹ್ನದ ಸಮಯವು, ದಿವಾಕರನು ತನ್ನ ಪ್ರಖರವಾದ ಕರಗಳಿಂದ ಬೆಂಕಿಯನ್ನು ಸುರಿಸುತ್ತಾನೋ ಏನೋ ಎಂಬಂತೆ ಭಾಸವಾಗುತ್ತಿತ್ತು. ದೀಕ್ಷಿತರು ಮೊದಲ್ಗೊಂಡು ಸಮಸ್ತ ಕರ್ಮನಿಷ್ಠರು ಮಧ್ಯಾಹ್ನಕರ್ಮವನ್ನು ಮಾಡುವದರಲ್ಲಿ ತೊಡಗಿದ್ದರು ಕೆಲವರು ದೇವರ ಪೂಜೆಯನ್ನೂ, ಕೆಲವರು ವೈಶ್ವದೇವವನ್ನೂ, ಬೇರೆ ಕೆಲವರು ಸಂಧ್ಯಾವಂದನೆ-ದೇವತಾರ್ಚನೆಯನ್ನೂ, ಮತ್ತೆ ಹಲವರು ಅತಿಥಿ ಮಾರ್ಗಪ್ರತೀಕ್ಷೆಯನ್ನೂ ಮಾಡುತ್ತ ಕುಳಿತುಕೊಂಡಿದ್ದರು. ಇಷ್ಟರಲ್ಲಿ ಲಿಂಗೋಪಂತರ ಕೊಲೆಯ ಸುದ್ದಿಯು ನಾಲ್ಕೂಕಡೆಗೆ ವಾಯುವೇಗದಿಂದ ಪಸರಿಸಿತು. ದೀಕ್ಷಿತರು ಈ ಸುದ್ದಿಯನ್ನು ಕೇಳಿ, ಶಿಷ್ಯರನ್ನು ಕುರಿತು:- ಇಲ್ಲಿ ಬ್ರಹ್ಮಹತ್ಯೆಯಾಯಿತು; ಆದ್ದರಿಂದ ಇನ್ನು ಮೇಲೆ ಇಲ್ಲಿರುವದು ಸರಿಯಲ್ಲ. ಕೆಲವುಕಾಲ ಈ ಭೂಮಿಯ ತ್ಯಾಗವನ್ನು ಮಾಡಲೇಬೇಕು. ಇಲ್ಲಿ ಅನ್ನಗ್ರಹಣವನ್ನು ಮಾಡಕೂಡದು, ಎಂದು ಹೇಳಿದರು. ಬಳಿಕ ಅದೇ ಕಾಲಕ್ಕೆ ಎಲ್ಲರೂ ಹೊರಡುವದನ್ನು ನಿಶ್ಚಯಿಸಿ, ಮುರಗೋಡದ ಗಡಿಯನ್ನು ದಾಟಿ, ಒಂದು ಪ್ರಶಸ್ಥವಾದ ಸ್ಥಳದಲ್ಲಿ ವಸತಿಯನ್ನು ಮಾಡಿದರು. ಶಾ. ಶಕೆ ೧೭೧೮.

# ನಾಲ್ಕನೆಯ ಭಾಗ.

## ದ್ವಾದಶಾಬ್ದಗಳ ಪರ್ಯಟನ.

### ೧ನೆಯ ಪ್ರಕರಣ.

### ದೇವಲಾಪುರವಾಸವೂ, ಅನ್ನನಿಂದಕರ ಪಶ್ಚಾತ್ತಾಪವೂ.

ಹಿಂದಿನ ಭಾಗದಲ್ಲಿ ಹೇಳಿದಂತೆ ದೀಕ್ಷಿತರು ಮುರಗೋಡವನ್ನು ಬಿಟ್ಟು, ಒಂದೆರಡು ವರ್ಷ ಅಲ್ಲಲ್ಲಿ ಸಂಚರಿಸಿ, ಶಕೆ ೧೭೨೦ರಲ್ಲಿ ದೇವಲಾಪುರದಲ್ಲಿ ಬಂದು ನಿಂತುಕೊಂಡರು. ಇದೇ ಕಾಲಕ್ಕೆ ನಾಲ್ಕು ಕಡೆಗೆ ಬರಗಾಲವು ತನ್ನ ಭಯಂಕರ ಸ್ವರೂಪವನ್ನು ಪ್ರಕಟಮಾಡಿದ್ದರಿಂದ ಜನರ ದುಃಖಕ್ಕೆ ಪಾರವಿಲ್ಲದಂತಾಯಿತು. ಹೊಟ್ಟೆಯೊಂದು ತುಂಬಿದರೆ ಸಾಕು, ಎಲ್ಲಿಯ ಮನೆಮಾರು, ಎಲ್ಲಿಯ ಮಕ್ಕಳು, ಎಂದು ಜನರು ಪತ್ನಿ-ಪುತ್ರರ ಪರಿವೆಯಿಲ್ಲದೆ ದಾರಿದೊರೆತತ್ತ ಹೋಗ ಹತ್ತಿದರು. ಹೊಟ್ಟೆತುಂಬ ಆಹಾರವು ದೊರೆಯದ್ದರಿಂದ ಜನರು ಪಟಪಟನೆ ಸಾಯಹತ್ತಿದರು. ಇಂಥ ಕಠಿಣಕಾಲದಲ್ಲಿ ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯು ನಾಲ್ಕುಕಡೆಗೆ ಹಬ್ಬಿದ್ದರಿಂದ, ಸುತ್ತಲಿನ ಜನರೆಲ್ಲರು ದೇವಲಾಪುರಕ್ಕೆ ಬರಹತ್ತಿದರು. ತುಸ ದಿವಸಗಳಲ್ಲಿಯೇ ಅಸಂಖ್ಯ ಜನರ ಜಾತ್ರೆಯು ದೀಕ್ಷಿತರ ಬಳಿಯಲ್ಲಿ ಕೂಡಿತು.

ಈ ಸಮಯಕ್ಕೆ ದೇವಲಾಪುರವು ಕಿತ್ತೂರದ ಅಧಿಕಾರಕ್ಕೆ ಒಳಪಟ್ಟಿತ್ತು. ಇಲ್ಲಿ ಒಂದೇ ಬಾವಿಯಿದ್ದು, ಈ ಊರು ಸಣ್ಣ ಹಳ್ಳಿಯಲ್ಲಿ ಎಣಿಸಲ್ಪಡುತ್ತಿತ್ತು. ಯಾತ್ರಸ್ಥರ ಸಂಖ್ಯೆಯು ದಿನದಿನಕ್ಕೆ ಬೆಳೆಯಹತ್ತಿದ್ದರಿಂದ, ಬಾವಿಯ ನೀರು ಸಾಕಾಗಲೊಲ್ಲವು. ಜನರು ನೀರು-ನೀರು ಎಂದು ಹಂಬಲಿಸಹತ್ತಿದರು. ಆಗ ದೀಕ್ಷಿತರು ಆ ಬಾವಿಗೆ ಹೋಗಿ, ಅದನ್ನು ಪೂಜಿಸಿ, ಭಾಗೀರಥಿಯನ್ನು ಪ್ರಾರ್ಥಿಸಲು, ತತ್‌ಕ್ಷಣವೇ ಬಾವಿಯು ತುಂಬಿ ಹರಿಯಹತ್ತಿತು. ಇದನ್ನು ನೋಡಿ

ಜನರಿಗೆ ಆನಂದಾಶ್ಚರ್ಯಗಳುಂಟಾದವು. ಮುಂದೆ ಜನರು ಆನಂದದಿಂದ ದೀಕ್ಷಿತರ ಬಳಿಯಲ್ಲಿ ನುಚ್ಚು-ಭಕ್ಕರಿಗಳನ್ನು ಸೇವಿಸುತ್ತ ಕಾಲಕಳೆಯಹತ್ತಿದರು.

ಹೀಗಿರಲು ಒಂದು ದಿವಸ ಕೊಂಕಣದ ನಾಲ್ಕುಮಂದಿ ತುಂಟ ಬ್ರಾಹ್ಮಣರು ದೀಕ್ಷಿತರ ಸತ್ವವನ್ನು ಹರಣಮಾಡಬೇಕೆಂದು ಯೋಚಿಸಿ, ದೇವಲಾಪುರಕ್ಕೆ ಬಂದರು. ಆಗ ಅಂತರಜ್ಞರಾದ ಚಿದಂಬರ ದೀಕ್ಷಿತರು ಬ್ರಾಹ್ಮಣರ ಭಾವವನ್ನರಿತು, ಅವರನ್ನು ಸಮೀಪಕ್ಕೆ ಕರೆದು:—ದ್ವಿಜೋತ್ತಮರೇ, ಬರ್‍ರಿ, ಎಲ್ಲವೂ ಕ್ಷೇಮವಿದೆಯೋ? ಹೊತ್ತು ಬಹಳವಾಗಿರುವದು. ಇನ್ನು ತಡವೇಕೆ? ಏಳಿರಿ, ಸ್ನಾನಾದಿ ವಿಧಿಗಳನ್ನು ತೀರಿಸಿ, ತೀವ್ರವಾಗಿ ಭೋಜನಕ್ಕೆ ಬರಬೇಕು, ಎಂದು ಹೇಳಿದರು. ಆಗ ಬ್ರಾಹ್ಮಣರು ದೀಕ್ಷಿತರ ಆಜ್ಞೆಯ ಮೇರೆಗೆ ಸ್ನಾನಾದಿಕರ್ಮಗಳನ್ನು ತೀರಿಸಿ, ಭೋಜನಕ್ಕಾಗಿ ಪಾತ್ರೆಯ ಮೇಲೆ ಕುಳಿತುಕೊಂಡರು. ಬಳಿಕ ಬಡಿಸುವವರು ಎಂದಿನಂತೆ ನುಚ್ಚು-ಭಕ್ಕರಿಗಳನ್ನು ತಂದು ಬಡಿಸಿದರು. ಅದನ್ನು ನೋಡಿ ಕೊಂಕಣದಿಂದ ಅದೇ ಹೊಸದಾಗಿ ಬಂದ ಆ ಬ್ರಾಹ್ಮಣರು:—ದೀಕ್ಷಿತರೇ, ಇದೇನು? ಇದು ಶ್ವಾನ ಆಹಾರವು. ಇದನ್ನು ನಾವು ತಿನ್ನಲಾರೆವು! ಎಂದು ನುಡಿದು, ತಮ್ಮ ಮುಂದಿನ ಎಲೆಗಳನ್ನು ಒಂದು ಬದಿಗೆ ದೂಡಿದರು. ಆಗ ದೀಕ್ಷಿತರು:—ಪಾಪ! ಮಹತ್ಪಾಪ!- ಅನ್ನವನ್ನು ಸರ್ವಥಾ ಹಳಿಯಬಾರದು. ಅನ್ನವೇ ಪರಬ್ರಹ್ಮವಿರುವದು. ಹವ್ಯ-ಕವ್ಯಗಳಿಗೆ ಅನ್ನವೇ ಮುಖ್ಯವಾಗಿರುವದು. ಮುನಿಗಳೂ, ಸುರರೂ ಯಾವಾಗಲೂ ಅನ್ನವನ್ನೇ ಹೊಗಳುತ್ತಿರುವರು. ಯಾವತ್ತು ಜೀವಿಗಳಿಗೆ ಅನ್ನವೇ ಪ್ರಾಣವಾಗಿರುವದು. ಆದ್ದರಿಂದ ಅನ್ನದ ಮಹತ್ವವನ್ನು ಎಷ್ಟೆಂದು ವರ್ಣಿಸಬೇಕು? ನಾವಾದರೂ ದಿನಾಲು ಇಂಥ ಅನ್ನವನ್ನೇ ಸೇವಿಸುತ್ತಿರುವೆವು. ಆದ್ದರಿಂದ ಅನ್ನವನ್ನು ತ್ಯಜಿಸದೆ ಭೋಜನವನ್ನು ಮಾಡಬೇಕೆಂದು ಹೇಳಿದರು. ಅದನ್ನು ಕೇಳಿ ಬ್ರಾಹ್ಮಣರು:—ನೀನು ದೊಡ್ಡವನು. ಏನಾದರೂ ಸುಗ್ರಾಸ-ಭೋಜನವು ದೊರಕೀತೆಂಬ ಆಶೆಯಿಂದ ಇಲ್ಲಿಗೆ ಬಂದರೆ, ನೀನು ನಮಗೆ ಈ ತರದ ಕದನ್ನವನ್ನು ಕೊಟ್ಟೆ. ಇದರ ಮೇಲಿಂದ ನಿನ್ನ ದೊಡ್ಡಿಸ್ತನವು ತೋರಿಬಂತು. ನಿನ್ನ ಈ ಕೀರ್ತಿಯನ್ನು ದಶದಿಕ್ಕುಗಳಲ್ಲಿ ಬೀರುತ್ತ ಹೋಗುವೆವು, ಎಂದು ನುಡಿದು ಗುರುವಚನವನ್ನು ತಿರಸ್ಕರಿಸಿ, ಪಾತ್ರೆಯ ಮೇಲಿಂದ ಎದ್ದರು. ಆಗ ದೀಕ್ಷಿತರು ಪುನಃ ಅವರಿಗೆ ಅನ್ನದ ಮಹತ್ವವನ್ನು ಪರಿಪರಿಯಿಂದ ಹೇಳಿದರೂ, ಅದಕ್ಕೆ ಲಕ್ಷ್ಯಗೊಡದೆ, ಅವರು ಹಾಗೆಯೇ ತಾವು ಇಳಕೊಂಡ ಸ್ಥಳವಾದ ಪ್ರಾಣದೇವರ

ಗುಡಿಗೆ ಹೋಗಬೇಕೆಂದು ಹೊರಟರು. "ವಿನಾಶ ಕಾಲೆ ವಿಪರೀತ ಬುದ್ಧಿಃ" ಮಾಡತಕ್ಕದ್ದೇನು? ಮಾರ್ಗದಲ್ಲಿ ಅವರೊಳಗಿನ ಇಬ್ಬರಿಗೆ ಒಮ್ಮಿಂದೊಮ್ಮೆ ದೇಹಭಾನವೇ ಇಲ್ಲದಾಯಿತು. ಅವರು ಶರೆಗುಡುಕರಂತೆ ಕಂಡಕಂಡಲ್ಲಿ ಹೊರಳಾಡಹತ್ತಿದರು. ಮೈಗೆ ವಿಷ್ಟೆಯನ್ನು ಬಡಕೊಳ್ಳಹತ್ತಿದರು. ತಮ್ಮ ಮೂತ್ರವನ್ನು ತಾವೇ ಕುಡಿಯಲಾರಂಭಿಸಿದರು. ತಮ್ಮ ಮೈಮೇಲಿನ ಅರಿವೆ ಗಳನ್ನು ಹರಿಯುತ್ತ, ಸಿಕ್ಕವರಿಗೆ ಕಲ್ಲುಗಳನ್ನು ಒಗೆಯುತ್ತ, ಬೈಯುತ್ತ ಅಡ್ಡಾಡ ಹತ್ತಿದರು. ಇವರ ತ್ರಾಸಕ್ಕೆ ಜನರು ಬೇಸತ್ತು, ಇವರನ್ನು ಪ್ರಾಣದೇವರ ಗುಡಿಗೆ ಒಯ್ದು, ಅಲ್ಲಿ ಕಂಬಕ್ಕೆ ಕಟ್ಟಿಹಾಕಿದರು; ಇಂತು ಅನ್ನನಿಂದಕರಾದ ಆ ದ್ವಿಜರಿಗೆ ದುರವಸ್ಥೆಯು ಪ್ರಾಪ್ತವಾಯಿತು.

ಈ ಪ್ರಕಾರ ತಮ್ಮ ಸ್ನೇಹಿತರ ದುರವಸ್ಥೆಯನ್ನು ನೋಡಿ, ಮಿಕ್ಕ ಇಬ್ಬರು ಬ್ರಾಹ್ಮಣರು ಆದ ಸಂಗತಿಯನ್ನೆಲ್ಲ ಹುಚ್ಚು ಹಿಡಿದ ಬ್ರಾಹ್ಮಣರ ಅಣ್ಣನ ಮುಂದೆ ಹೇಳಿದರು. ಅವನು ಬುದ್ಧಿವಂತನಿದ್ದದರಿಂದ ಆದ ಸಂಗತಿಯ ಬಗ್ಗೆ ಶಾಂತರೀತಿಯಿಂದ ವಿಚಾರ ಮಾಡಿ, ದೀಕ್ಷಿತರಿದ್ದೆಡೆಗೆ ಬಂದು, ಅವರನ್ನು ನಮ ಸ್ಕರಿಸಿ:-ನಾನೂ, ನನ್ನ ತಮ್ಮಂದಿರೂ ಬಹು ಅಜ್ಞಾನಿಗಳು. ನಮ್ಮೆಲ್ಲರನ್ನು ರಕ್ಷಿಸಬೇಕು, ಎಂದು ಹೇಳಿಕೊಂಡು, ದೀಕ್ಷಿತರ ಮುಂದೆ ಹೊರಳಾಡಹತ್ತಿ ದನು. ಆಗ ದೀಕ್ಷಿತರು ಅವನನ್ನು ಎಬ್ಬಿಸಿ:-ಅನ್ನ ನಿಂದಕರ ಅಪರಾಧಕ್ಕೆ ಕ್ಷಮೆ ಯಿಲ್ಲ. ಅವರ ಹಾಡು ಹೀಗೆಯೇ ಆಗತಕ್ಕದ್ದು. ಕರ್ಮದಂತೆ ಫಲವಾಗಿದೆ. ಇದರಲ್ಲಿ ಗೌಣವೇನು? ನಿನ್ನ ತಮ್ಮಂದಿರರಿಗೆ ಗುಣವಾಗಬೇಕೆಂಬ ಇಚ್ಛೆಯಿದ್ದರೆ, ನಿನ್ನ ತಮ್ಮಂದಿರು ಇರುವ ಗುಡಿಯೊಳಗಿನ ಪ್ರಾಣದೇವರಿಗೆ ನಡಕೋ; ಅಂದರೆ ನಿನ್ನ ತಮ್ಮಂದಿರರಿಗೆ ಗುಣವಾಗುವದು, ಎಂದು ಹೇಳಿದರು. ಬಳಿಕ ಅವನು ಗುರುವಚನದ ಮೇರೆಗೆ ಪ್ರಾಣದೇವರ ಗುಡಿಗೆ ಹೋಗಿ, ತನ್ನ ತಮ್ಮಂದಿರನ್ನು ಕಂಬದಿಂದ ಬಿಚ್ಚಿ, ಅವರಿಗೆ ಸ್ನಾನ ಮಾಡಿಸಿ, ಅವರನ್ನು ಪ್ರಾಣದೇವರ ಪಾದ ಗಳ ಮೇಲೆ ಹಾಕಿ, ಅವರ ಕಡೆಯಿಂದ ನೂರು ಪ್ರದಕ್ಷಿಣೆಗಳನ್ನು ಹಾಕಿಸಿದನು. ಈ ಪ್ರಕಾರ ಮೂರುದಿವಸಗಳ ವರೆಗೆ ಮಾಡಲು, ಆ ಬ್ರಾಹ್ಮಣರಿಗೆ ಗುಣ ವಾಯಿತು. ಅವರು ಮೂರನೇ ದಿವಸ ಮಧ್ಯಾಹ್ನಕ್ಕೆ ಎಚ್ಚರಹೊಂದಿ:-ನಮಗೆ ನುಚ್ಚು-ಭಕ್ಕರಿ ಬೇಕೆಂದು ಬೇಡಹತ್ತಿದರು. ಆಗ ಅಣ್ಣನು ತಮ್ಮಂದಿರನ್ನು ಕರಕೊಂಡು, ದೀಕ್ಷಿತರ ಬಳಿಗೆ ಬಂದನು. ಆಗ ಅವರೆಲ್ಲರೂ ದೀಕ್ಷಿತರನ್ನು ನಮಸ್ಕರಿಸಿ, ತಮ್ಮ ತಪ್ಪನ್ನು ಒಪ್ಪಿಕೊಂಡು, ಇನ್ನು ಮೇಲೆ ಅನ್ನವನ್ನು

ಎಂದೂ ನಿಂದಿಸಲಿಕ್ಕಿಲ್ಲವೆಂದು ಆಣೆಯನ್ನಿಟ್ಟುಕೊಂಡರು. ಆಗ ದೀಕ್ಷಿತರು ಎಲ್ಲರನ್ನು ಕರಕೊಂಡು ಸುಖವಾಗಿ ಭೋಜನ ಮಾಡಿದರು. ಆ ಮೇಲೆ ಅಣ್ಣನು ತಮ್ಮಂದಿರರಿಗೆ ಗುಣವಾದರೆ, ದೀಕ್ಷಿತರ ಬಳಿಯಲ್ಲಿ ನೂರುಮಂದಿ ಬ್ರಾಹ್ಮಣರ ಭೋಜನವನ್ನು ಮಾಡಿಸುವೆನೆಂದು, ಈ ಮೊದಲೇ ಕೊಟ್ಟ ಹರಿಕೆಯ ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿ, ದೀಕ್ಷಿತರು:-ನಿನ್ನ ಕುಲಸ್ವಾಮಿಯ ಹತ್ತರ ಭೋಜನವನ್ನು ಮಾಡಿಸು, ಎಂದು ಹೇಳಿ, ಅವರನ್ನು ಅನುಗ್ರಹಿಸಿ, ತಮ್ಮ ಊರಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಆ ಮೂವರು ಗುರುಗಳಿಗೆ ವಂದಿಸಿ, ಹೊರಟು ಹೋದರು.

ಈ ಪ್ರಕಾರ ದೀಕ್ಷಿತರು ದೇವಲಾಪುರದಲ್ಲಿ ವಿಚಿತ್ರವಾದ ಚರಿತ್ರವನ್ನು ತೋರಿಸುತ್ತಿರಲು, ಪರಮ ಪೂಜ್ಯರಾದ ನಾರಾಯಣ ಯತಿಗಳು, ದೀಕ್ಷಿತರ ದರ್ಶನಕ್ಕೆ ಬಂದರು. ಆ ಮನೋಹರವಾದ ವೃತ್ತಾಂತವನ್ನು ಮುಂದಿನ ಪ್ರಕರಣದಲ್ಲಿ ಕೊಟ್ಟಿರುತ್ತದೆ.

## ೨ನೆಯ—ಪ್ರಕರಣ.

## * ನಾರಾಯಣ ಯತಿಗಳ ಪೂರ್ವ ವೃತ್ತಾಂತವೂ, ಅವರ ಸಮಾಗಮವೂ.

ಮನೆಯಲ್ಲಿ ನಾರಾಯಣ ಯತಿಗಳ ಜನಕರು ಅಯಾಚಿತ ವೃತ್ತಿಯಿಂದ ಇರುತ್ತಿದ್ದರು. ಇವರು ಶಾಸ್ತ್ರಗಳಲ್ಲಿ ಪ್ರವೀಣರೂ, ಕರ್ಮನಿಷ್ಠರೂ ಇದ್ದರು. ಇವರ ಬಳಿಯಲ್ಲಿ ನಾರಾಯಣ ಯತಿಗಳ ಪೂರ್ವಾಶ್ರಮದೊಳಗಿನ ಆಚರಣವು ಶುದ್ಧವಾಗಿ, ಅವರ ಗ್ರಹಣಶಕ್ತಿಯು ಅತಿಶಯವಾಗಿ ಬೆಳೆಯಿತು. ಅನಂತರ ಅವರು ಕಾಶಿಯಲ್ಲಿ ಮತ್ತೆ ಅಭ್ಯಾಸವನ್ನು ಮಾಡಲಾರಂಭಿಸಿ, ಷಟ್‌ಶಾಸ್ತ್ರಗಳಲ್ಲಿಯೂ, ವೇದ-ವೇದಾಂಗಗಳಲ್ಲಿಯೂ ಪ್ರವೀಣರಾದರು. ಅಧ್ಯಯನವು ಮುಗಿದ ಬಳಿಕ ಅವರು ಮನೆಗೆ ಹೋಗಲಿಕ್ಕೆ ತಮ್ಮ ಗುರುಗಳ ಹತ್ತರ ಅಪ್ಪಣೆಯನ್ನು ಬೇಡಿದರು. ಆಗ ಗುರುಗಳು:-ನಮಗೆ ಗುರುದಕ್ಷಿಣೆಯನ್ನು ಕೊಟ್ಟರೆ, ನಿನಗೆ ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಡುವೆವು ಎನಲು, ನಾರಾಯಣನು:- ತಮಗೆ ಯಾವ ಗುರುದಕ್ಷಿಣೆಯನ್ನು ಕೊಡಬೇಕು ಎಂದನು. ಗುರುಗಳು:—

* ಇವರ ಪೂರ್ವಾಶ್ರಮದ ಹೆಸರು ಗೊತ್ತಿಲ್ಲದ್ದರಿಂದ ಚತುರ್ಥಾಶ್ರಮದ ಹೆಸರನ್ನೇ ಉಪಯೋಗಿಸಿದ್ದೇವೆ.

ಸದಾ ಸತ್ಸ್ವರೂಪದಲ್ಲಿ ಮನಸ್ಸನ್ನಿಡಬೇಕು ಇದರಂತೆ ನಡೆಯುತ್ತೇನೆಂದು ನೀನು ನನ್ನ ಕೈಮೇಲೆ ಉದಕವನ್ನು ಬಿಡಬೇಕು. ಇದೇ ನಮ್ಮ ಗುರುದಕ್ಷಿಣೆಯು, ಎಂದು ಹೇಳಿದರು. ಕೂಡಲೆ ನಾರಾಯಣನು ಗುರ್ವಾಜ್ಞೆಯ ಮೇರೆಗೆ ನೀರನ್ನು ಬಿಟ್ಟನು ಆಗ ಗುರುಗಳಿಗೆ ಸಂತೋಷವಾಯಿತು. ಅವರು ನಾರಾಯಣನನ್ನು ಸಮೀಪಕ್ಕೆ ಕರೆದು:-ಶಿಷ್ಯವರ್ಯನೇ, ನಿನ್ನ ಈ ಶಿಷ್ಯವೃತ್ತಿಯಿಂದ ಸಂತೋಷವಾಯಿತು. ಇನ್ನು ನಿನಗೆ ಯಾವ ಮಾತಿನ ಕೊರತೆಯುಂಟಾಗಲಾರದು. ನೀನು ಯಾರ ಸಂಗಡಲೂ ವಾದಿಸಬೇಡ. ಯಾವಾಗಲೂ ಆತ್ಮಸ್ವರೂಪದ ವಿಚಾರ ಮಾಡುತ್ತ ಹೋದರೆ, ತುಸ ದಿವಸಗಳಲ್ಲಿ ನೀನೇ ಚರಾಚರರೂಪಿಯಾದ ಆತ್ಮಸ್ವರೂಪವನ್ನು ಹೊಂದುವಿ, ಎಂದು ನುಡಿದು, ನಾರಾಯಣನನ್ನು ಆಶೀರ್ವದಿಸಿದರು ಇಂತು ಗುರುಕೃಪೆಯಿಂದ ತುಷ್ಟರಾದ ನಾರಾಯಣ ಶಾಸ್ತ್ರಿಗಳು ಗುರ್ವಾಜ್ಞೆಯನ್ನು ತಕ್ಕೊಂಡು, ತಿರುಗಿ ಮನೆಗೆ ಬಂದರು.

ಹೀಗೆ ನಾರಾಯಣ ಶಾಸ್ತ್ರಿಗಳು ಮನೆಗೆ ಬಂದ ಒಳಿಕ ಗೃಹಸ್ಥಾಶ್ರಮಿಗಳಾದರು. ಇವರ ಶಿಷ್ಯ ಸಮುದಾಯವಾದರೂ ದೊಡ್ಡದಿತ್ತು. ಇವರ ಶಿಷ್ಯರಲ್ಲಿ ಎಷ್ಟೋಜನರು ದಶಗ್ರಂಥಿಗಳಾದರು. ಇವರು ಹೆರವರ ಕೂಡ ಎಂದೂ ವಾದಿಸಲಿಲ್ಲ. ಯಾರಾದರೂ ಯಾವದೊಂದು ವಿಷಯವನ್ನು ಕೇಳಬಂದರೆ, ಅವರಿಗೆ ಸಮಾಧಾನದಿಂದ ರಾಮದಾಸ-ತುಕಾರಾಮ ಮೊದಲಾದವರಂತೆ ಬಾಲಬೋಧಭಾಷೆಯಿಂದ ತಿಳಿಸಿಕೊಡುತ್ತಿದ್ದರು. ಇವರು ಸಿಕ್ಕ ವೇಳೆಯಲ್ಲಿ ಆತ್ಮಚಿಂತನೆಯನ್ನು ಮಾಡುತ್ತಿದ್ದರು. ಕೆಲವು ದಿವಸಗಳ ತರುವಾಯ ಅವರಿಗೆ ಧ್ಯೇಯ-ಧ್ಯಾತೃಗಳು ಒಂದೇ ರೂಪವಾಗಿ, ನಿರ್ಗುಣ ಬ್ರಹ್ಮಸ್ವರೂಪದ ಪರಿಚಯವಾಯಿತು ಇವರು ಮುಂದೆ ಶ್ರೀಪಾದ ಶ್ರೀವಲ್ಲಭರ ಅಪ್ಪಣೆಯ ಮೇರೆಗೆ ಚತುರ್ಥಾಶ್ರಮವನ್ನು ಸ್ವೀಕರಿಸಿ. ನಾರಾಯಣ ಯತಿಗಳಾಗಿ ಶ್ರೀ ನರಸಿಂಹವಾಡಿಯೊಳಗೆ ದತ್ತಾತ್ರೇಯನ ಸಾನ್ನಿಧ್ಯದಲ್ಲಿ ಇರಹತ್ತಿದರು. ಇವರಿಗೆ ನಾಲ್ಕು ಮಂದಿ ಮಕ್ಕಳಿದ್ದರು ಇವರು ವಾಡಿಯಲ್ಲಿ ಈಶ ಚಿಂತನೆಯಲ್ಲಿ ಕಾಲಕಳೆಯುತ್ತಿರಲು, ಇವರಿಗೆ ತೀರ್ಥಾಟನ ಮಾಡಬೇಕೆಂದು, ಶ್ರೀ ದತ್ತಾತ್ರೇಯರ ಅಪ್ಪಣೆಯಾಯಿತು. ಕೂಡಲೆ ಅವರು ಸಂಚಾರಾರ್ಥವಾಗಿ ಹೊರಟು, ದತ್ತಾತ್ರೇಯರ ಆಜ್ಞೆಯಾದ ಹಾಗೆ ಸಂಚರಿಸಹತ್ತಿದರು.

ಒಮ್ಮೆ ನಾರಾಯಣಯತಿಗಳು ವಿಠ್ಠಲದೇವರ ದರ್ಶನಕ್ಕೆ ಹೋಗ

ಬೇಕೆಂದು ಹೊರಟರು. ಮಾರ್ಗಕ್ರಮಣ ಮಾಡುತ್ತಿರಲು, ಮಧ್ಯಮಾರ್ಗದಲ್ಲಿ ಒಂದು ಹಳ್ಳಿಯ ಸಮೀಪಕ್ಕೆ ಸಾಯಂಕಾಲವಾಯಿತು. ಆ ಹಳ್ಳಿಯು ಅಂತ್ಯಜರ ವಾಸಸ್ಥಾನವಾಗಿತ್ತು. ಯತಿಗಳು ಆ ಹಳ್ಳಿಯನ್ನು ಪ್ರವೇಶಿಸಲು ಜನರು ಯತಿಗಳನ್ನು ನೋಡಿ:—ನಾವು ಅಧಮಜಾತಿಯ ಜನರು. ತಾವು ಯತಿಗಳು. ಇಲ್ಲಿ ಬೇರೆ ಜನರ ಮನೆಗಳಿಲ್ಲ. ಇಲ್ಲಿಂದ ಒಂದು ಹರದಾರಿಯ ಮೇಲೆ ಒಂದು ಶಿವಾಲಯವೂ, ಭಾವಿಯೂ ಇರುವವು. ಅಲ್ಲಿ ಹುಲಿ-ಕರಡಿ ಮುಂತಾದ ವನ್ಯಪಶುಗಳ ಉಪದ್ರವವು ಮಾತ್ರ ಬಹಳ ಇರುತ್ತದೆ. ಅನುಕೂಲಿಸಿದರೆ ಅಲ್ಲಿಗೆ ಹೋಗಬಹುದೆಂದು ಹೇಳಿದರು. ಆಗ ಯತಿಗಳು, ತಮ್ಮ ಸಂಗಡಿಗರಾದ ಮಣಿಕ ಮತ್ತು ವಿಠ್ಠಲ ಎಂಬ ಕವಿಗಳಿಗೆ, ಒಂದು ಸೂಜಿ, ಡಬ್ಬಣ ನಾಲ್ಕಾರು ಕೇರುಗಳನ್ನು ತಕ್ಕೊಂಡು ದೇವಾಲಯಕ್ಕೆ ಬರಬೇಕು, ಎಂದು ಹೇಳಿ, ತಾವು ಕಾಶೀರಾಜನಿಂದೊಡಗೂಡಿ ದೇವಾಲಯಕ್ಕೆ ಹೋದರು. ಇತ್ತ ತುಸ ವೇಳೆಯಲ್ಲಿ ಕವಿಗಳೂ ಸಾಮಾನುಗಳನ್ನು ತಕ್ಕೊಂಡು ಗುಡಿಗೆ ಹೋದರು.

ಪೂಜಾರಿಗಳು ಸಾಯಂಕಾಲದ ಪೂಜೆಯನ್ನು ತೀರಿಸಿ, ಹೊರಗೆ ಬರುವಷ್ಟರಲ್ಲಿ ಯತಿಗಳು ಅಲ್ಲಿಗೆ ಹೋದರು. ಆಗ ಪೂಜಾರಿಗಳು "ಇವರು ಬಹಳ ಮಾಡಿ ವಸ್ತೀ ಮಾಡಲಿಕ್ಕೆ ಇಲ್ಲಿಗೆ ಬಂದಿರಬಹುದೆ"ಂದು ಯೋಚಿಸಿ:—ಯತಿವರ್ಯರೇ, ಇಲ್ಲಿ ಕ್ರೂರಶ್ವಾಪದಗಳ ಹಾಗು ಕುಡುಗರ ಭಯವಿರುವದು. ಆದ್ದರಿಂದ ಸಾಯಾಹ್ನಿಕ ಕರ್ಮಗಳನ್ನು ತೀರಿಸಿ ನಮ್ಮ ಕೂಡ ಬರಬೇಕೆಂದು ಹೇಳಿದರು. ಅದಕ್ಕೆ ಯತಿಗಳು ಒಡಂಬಡಲಿಲ್ಲ ಆಗ ಪೂಜಾರಿಗಳು ನಿರುಪಾಯರಾಗಿ ಹೊರಟು ಹೋದರು. ಆ ಮೇಲೆ ಎಲ್ಲರು ಸಂಧ್ಯಾವಂದನೆಯನ್ನು ತೀರಿಸಿ, ಕಟ್ಟಿಗೆಗಳನ್ನು ಹೊತ್ತಿಸಿ, ಕಾಸಿಕೊಳ್ಳುತ್ತ ಕುಳಿತುಕೊಂಡರು. ರಾತ್ರಿಯ ರೌದ್ರರೂಪವು ಪ್ರತಿಕ್ಷಣಕ್ಕೆ ಬೆಳೆಯಹತ್ತಿತು. ವನ್ಯಪಶುಗಳ ಭಯಂಕರವಾದ ಗರ್ಜನೆಯಿಂದ ಆ ಕಾನನವೆಲ್ಲ ತುಂಬಿಹೋಯಿತು. ಆಗ ಯತಿಗಳ ಶಿಷ್ಯರು ಹೆದರಿ:—ಯತಿಗಳೇ, ನಮಗೆ ಬಹಳ ಅಂಜಿಕೆ ಬರುತ್ತದೆ. ಏನು ಮಾಡೋಣ? ಎನಲು, ಯತಿಗಳು:—ನೀವು ದೇವಾಲಯದಲ್ಲಿ ಹೋಗಿ ಬಾಗಿಲುಗಳನ್ನು ಗಟ್ಟಿಯಾಗಿ ಇಕ್ಕಿ ಮಲಗಿಕೊಳ್ಳಬೇಕೆಂದು ಹೇಳಿದರು. ಆಗ ಶಿಷ್ಯರಿಗೆ ತುಸ ಧೈರ್ಯಬಂತು. ಅವರು ದೇವಾಲಯವನ್ನು ಸೇರಿ, ಬಾಗಿಲಿಕ್ಕಿ ಸ್ವಸ್ಥವಾಗಿ ಮಲಗಿ ಕೊಂಡರು. ಇತ್ತ ಯತಿಗಳು ಅಗ್ನಿಯನ್ನು ಪ್ರಜ್ವಲಿಸಿ, ಈಶಚಿಂತನೆಯನ್ನು ಮಾಡುತ್ತ ಕುಳಿತುಕೊಂಡರು.

ಮಧ್ಯರಾತ್ರಿಯ ಸಮಯವು; ಒಂದು ಹೆಬ್ಬುಲಿಯು ಭಯಂಕರವಾಗಿ ಗರ್ಜಿಸುತ್ತ ಯತಿಗಳ ಸಮೀಪಕ್ಕೆ ಬಂತು. ಆಗ ಯತಿಗಳು ಅದನ್ನು ಮುಟ್ಟಿ ಹೋಗಲು, ಅದು ನಮಸ್ಕಾರ ಮಾಡುವಂತೆ ತಲೆಬಾಗಿಸಿ, ತನ್ನ ಬಲಗಾಲನ್ನು ಮುಂದೆ ಮಾಡಿತು. ಆಗ ಯತಿಗಳು ಅದರ ಅಭಿಪ್ರಾಯವನ್ನರಿತು, ಅದರ ಕಾಲೊಳಗೆ ನಟ್ಟ ಮುಳ್ಳನ್ನು ಸೂಜಿಯಿಂದ ಸಾವಕಾಶವಾಗಿ ತೆಗೆದು ಆ ಗಾಯದಲ್ಲಿ ಮೊದಲೇ ಸಂಗಡ ತಂದ ಕೇರಿನ ಎಣ್ಣೆಯನ್ನು ಹಾಕಿ, ಅದರ ಮೇಲೆ ಬೂದಿಯನ್ನು ಒರಿಸಿ, ಮೈಮೇಲೆಲ್ಲ ಕೈಯಾಡಿಸಿ, ಇನ್ನು ಹೋಗು, ಎಂದು ಹೇಳಿದರು. ಆಗ ಆ ಹುಲಿಯು ಜಿಗಿಯುತ್ತ, ತನ್ನ ಉಪಕಾರಕರ್ತೃವಿನ ಗುಣಗಳನ್ನು ಹೊಗಳುತ್ತದೋ ಏನೋ ಎಂಬಂತೆ ಗರ್ಜಿಸುತ್ತ ಹೊರಟು ಹೋಯಿತು. ಪುಂಡರೀಕನ ಪ್ರಥಮ ಗರ್ಜನೆಗೆ ಎಚ್ಚತ್ತ ಶಿಷ್ಯತ್ರಯವು ಬಾಗಿಲು ಸಂದಿನೊಳಗಿಂದ ಮೇಲೆ ಹೇಳಿದ ಯಾವತ್ತು ಚಮತ್ಕಾರಗಳನ್ನು ನೋಡಿ, ನಾಚಿಕೆಗೊಂಡು ಹೊರಭಾಗಕ್ಕೆ ಬಂದು ಯತಿಗಳನ್ನು ನಮಸ್ಕರಿಸಿ:—ಕ್ಷಮಿಸಿರಿ, ಗುರುಗಳೇ, ಕ್ಷಮಿಸಿರಿ; ನಾವು ದೇಹಲೋಭದ ಮೂಲಕ ತಮಗೆ ಉಪದ್ರವ ಕೊಟ್ಟೆವು. ತಮಗೆ ಎಲ್ಲರೂ ಸಮಾನರೇ; ನಾವು ಅಜ್ಞಾನಿಗಳು, ಅದಕ್ಕಂತಲೇ ಹೊರಭಾಗಕ್ಕೆ ತಮ್ಮೊಬ್ಬರನ್ನೇ ಬಿಟ್ಟು ಹೋದೆವು. ದೇಹಲೋಭವು ಕಡಿಮೆಯಾಗುವಂತೆ ನಮ್ಮನ್ನು ಆಶೀರ್ವದಿಸಬೇಕೆಂದು ಪರಿಪರಿಯಿಂದ ಬೇಡಿಕೊಂಡರು. ಆಗ ಯತಿಗಳು ಅವರನ್ನು ಸವಿಮಾತುಗಳಿಂದ ಸಂತೈಸಿದರು.

ಬೆಳಗಾದ ಮೇಲೆ ಎಲ್ಲರು ಸ್ನಾನ-ಸಂಧ್ಯಾದಿಕರ್ಮಗಳನ್ನು ತೀರಿಸಿ ಮುಂದೆ ಮಾರ್ಗಕ್ರಮಣಮಾಡಲಿಕ್ಕೆ ಸಿದ್ಧರಾದರು. ಆಗ ಯತಿಗಳ ಪ್ರಿಯಶಿಷ್ಯನಾದ ಕಾಶೀರಾಜನು:—ಗುರುವರ್ಯ, ಈ ಮಾರ್ಗದಲ್ಲಿ ಚೋರರ ಭಯವು ಬಹಳ ಉಂಟು. ಕಾರಣ ತುಸ ಶ್ರಮವಾದರೂ ಚಿಂತೆಯಿಲ್ಲ, ಮತ್ತೊಂದು ಮಾರ್ಗದಿಂದ ಹೋಗೋಣ, ಎಂದನು. ಅದಕ್ಕೆ ಯತಿಗಳು:—ಶಿಷ್ಯನೇ, ಇಷ್ಟು ಭೀತಿ ಯಾತಕ್ಕೆ? ತುಡುಗರಲ್ಲಿಯೂ, ನಮ್ಮಲ್ಲಿಯೂ ಒಬ್ಬನೇ ಪರಮಾತ್ಮನಿರುವನು, ಎಂದು ಹೇಳಿ, ಮಾರ್ಗದಲ್ಲಿ ಕೂಡಿದ ನಾನೂರು ಜನ ಯಾತ್ರಸ್ಥರಿಂದ ಕೂಡಿಕೊಂಡು ಅದೇ ದಾರಿಯಿಂದ ಮುಂದಕ್ಕೆ ಸಾಗಿದರು. ತುಸ ಮುಂದೆ ಹೋಗುವಷ್ಟರಲ್ಲಿ ಕಳ್ಳರು ಇವರನ್ನು ಸುಲುಕೊಳ್ಳುವದಕ್ಕಾಗಿ ಇವರ ಸಮೀಪಕ್ಕೆ ಬಂದರು; ಆದರೆ ಸರ್ಪವನ್ನು ನೋಡಿ ಮನುಷ್ಯನು, ಹುಲಿಯನ್ನು ನೋಡಿ ಆಕಳು ಹೆದರುವಂತೆ, ನಾರಾಯಣ ಯತಿಗಳನ್ನು ನೋಡಿ ತುಡುಗರು ಹೆದರಿ

ದರು; ಹಾಗು ಯಾರಿಗೂ ಉಪದ್ರವ ಮಾಡದೆ, ಯತಿಗಳಿಗೆ ನಮಸ್ಕಾರ ಮಾಡಿ ಬಂದದಾರಿಯಿಂದ ಹೊರಟು ಹೋದರು. ಇದನ್ನು ನೋಡಿ ಸಂಗಡಿಗರು ಆಶ್ಚರ್ಯಗೊಂಡು ಯತಿಗಳನ್ನು ಸ್ತುತಿಸತೊಡಗಿದರು. ಮುಂದೆ ಹಾಗೆಯೇ ಎಲ್ಲರು ದೇವಿಯ ಯಾತ್ರೆಯನ್ನು ತೀರಿಸಿ, ದ್ವಾರಕಾ ಕ್ಷೇತ್ರಕ್ಕೆ ಹೋದರು. ಅಲ್ಲಿಂದ ತಮ್ಮ ಗ್ರಾಮಕ್ಕೆ ಬರಬೇಕೆಂದು ಹೊರಟು ಮಾರ್ಗಕ್ರಮಣವನ್ನು ಮಾಡುತ್ತಿರಲು, ಅವರ ವಸ್ತಿಯು ಕಾಠೇವಾಡದೊಳಗಿನ ಒಂದು ಹಳ್ಳಿಯಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಾಯಿತು. ಆ ಹೊತ್ತು ರಾತ್ರಿ ಯತಿಗಳು ಯಾವ ಬ್ರಾಹ್ಮಣನ ಮನೆಯೊಳಗೆ ಇಳಕೊಂಡಿದ್ದರೋ, ಅವನ ಮಗನು ಒಮ್ಮಿಂ-ದೊಮ್ಮೆ ಮರಣ ಹೊಂದಿದನು. ಆ ಬ್ರಾಹ್ಮಣನಿಗೆ ಒಬ್ಬನೇ ಮಗನಿದ್ದನು. ಮೇಲಾಗಿ ಮುಪ್ಪಿನಕಾಲದಲ್ಲಿ ಹುಟ್ಟಿದವನು. ಕೇಳುವದೇನು? ಆ ದಂಪತಿಗಳ ದುಃಖಕ್ಕೆ ಮಿತಿಯೇ ಇಲ್ಲದಂತಾಯಿತು. ಆ ಮಗುವಿನ ತಾಯಿಯ ಶೋಕ ಸಾಗರವು ಮೇರೆದಪ್ಪಲು, ಯತಿಗಳ ಮನಸ್ಸಿನಲ್ಲಿ ಅಂತಃಕರಣವು ಹುಟ್ಟಿ, ಅವರು ಅವಳಿಗೆ ಎಷ್ಟೋ ಉಪದೇಶದ ಮಾತುಗಳನ್ನು ಹೇಳಿದರು. ಆದರೂ ಅವಳು ಕೇಳಲೊಲ್ಲಳು. ಅವಳು ಒಂದು ಪಾಷಾಣವನ್ನು ತಕ್ಕೊಂಡು ಎದೆಯ ಮೇಲೆ ಪ್ರಹಾರಮಾಡಿಕೊಂಡು ಪ್ರಾಣವನ್ನು ತ್ಯಜಿಸಲುದ್ಯುಕ್ತಳಾದಳು. ಆಗ ಯತಿಗಳು ಮಗುವನ್ನು ಮಾತೆಯಕಡೆಯಿಂದ ಕೆಳಗಿಡಿಸಿ, ಅದರ ಬಾಯಿಯಲ್ಲಿ ಕಾಶೀರಾಜನ ಕೈಯಿಂದ ಮಂತ್ರಿತವಾದ ವಿಭೂತಿಯನ್ನು ಹಾಕಿಸಿದರು ಆಗ ಮಗುವು ಮಲಗಿ ಏಳುವಂತೆ ಮೈಮುರಿಯುತ್ತ ಅತ್ತಿತ್ತ ಹೊರಳಾಡಿ ಅಳಹತ್ತಿತು. ಈ ಅದ್ಭುತವನ್ನು ನೋಡಿ ಎಲ್ಲರಿಗೂ ಆನಂದಾಶ್ಚರ್ಯಗಳುಂಟಾದವು!

ನಾರಾಯಣ ಯತಿಗಳು ಮರುದಿವಸ ಅಲ್ಲಿಂದ ಹೊರಟು ಕೆಲವು ದಿವಸಗಳನಂತರ ನರಸಿಂಹವಾಡಿಗೆ ಬಂದರು. ಕೆಲವು ಕಾಲದನಂತರ ಸಿಂಧು ಸ್ನಾನಕ್ಕಾಗಿ ಅಲ್ಲಿಂದ ಹೊರಟರು. ಮಾರ್ಗಕ್ರಮಣ ಮಾಡುತ್ತಿರಲು, ಮಧ್ಯಾಹ್ನವಾಯಿತು. ಆಗ ಯತಿಗಳು:-ಕಾಶಿರಾಜ, ಮಧ್ಯಾಹ್ನ ಸಮಯವು ಪ್ರಾಪ್ತವಾಗಿರುವದು; ಆದ್ದರಿಂದ ಸ್ನಾನಾದಿ ಕರ್ಮಗಳನ್ನೂ, ಭೋಜನವನ್ನೂ ತೀರಿಸಿ ಮುಂದಕ್ಕೆ ಹೋಗೋಣ, ಎಂದು ನುಡಿದರು. ಆಗ ಸಂಗಡಿಗರು:-ಇಲ್ಲಿ ಆ ಸಮಂತದಲ್ಲಿ ನೀರು ಇಲ್ಲ. ಇಳುಕೊಂಡು ಏನು ಮಾಡತಕ್ಕದ್ದು? ಎನ್ನಲು, ಯತಿಗಳು:-ಹೀಗೆ ಅಮಂಗಲ ಮಾತುಗಳನ್ನಾಡಬಾರದು. ಯಾವಾಗಲೂ 'ಶುಭಂ ಬ್ರೂಯಾತ್' ಒಳ್ಳೇದನ್ನೇ ಮಾತಾಡುತ್ತಿರಬೇಕು. ಭೂಮಿಯಿದ್ದಲ್ಲಿ

ನೀರು ಇರಲಿಕ್ಕೇಬೇಕು, ಎಂದು ಮಾತಾಡುವಷ್ಟರಲ್ಲಿ ಒಬ್ಬ ತೇಜಸ್ವಿಯಾದ ವೃದ್ಧ ಬ್ರಾಹ್ಮಣನು ಸ್ನಾನಮಾಡಿ, ಸರ್ವಾಂಗಕ್ಕೆ ವಿಭೂತಿಯನ್ನು ಚರ್ಚಿಸಿ ಕೊಂಡು, ಒಂದು ಕೈಯಲ್ಲಿ ವಾರಿಪೂರಿತ ಕಲಶವನ್ನೂ ಮತ್ತೊಂದು ಕೈಯಲ್ಲಿ ಒದ್ದೆಯ ಧೋತರಗಳನ್ನೂ ಹಿಡಕೊಂಡು ಅದೇ ದಾರಿಯಿಂದ ಹೋಗುತ್ತಿದ್ದನು. ಅವನನ್ನು ನೋಡಿ, § ಕಾಶೀರಾಜನು:-ದ್ವಿಜವರೇಣ್ಯರೇ, ನಾವು ಇದು ವರೆಗೆ ಇಲ್ಲಿ ನೀರನ್ನು ಶೋಧಿಸಿದೆವು; ಅವು ನಮಗೆ ಎಲ್ಲಿಯೂ ದೊರೆಯಲಿಲ್ಲ. ತಾವು ಸ್ನಾನವನ್ನು ಯಾವ ಸ್ಥಳದಲ್ಲಿ ಮಾಡಿಬಂದಿರುವಿರಿ? ಎಂದು ಕೇಳಿದನು. ಅದಕ್ಕೆ ಆ ಬ್ರಾಹ್ಮಣನು:-ನೀವು ನುಡಿಯುವದು ನಿಜವು. ಮೊದಲು ಇಲ್ಲಿ ಎಲ್ಲಿಯೂ ನೀರು ಇದ್ದಿಲ್ಲ; ಆದರೆ ಯತಿವರ್ಯರು ಈ ಪ್ರದೇಶವನ್ನು ಸೇರಿದ ಕೂಡಲೆ ಇಲ್ಲಿ ನಾಲ್ಕೂ ಕಡೆಗೆ ನೀರಿನ ವಿಪುಲತೆಯುಂಟಾಗಿ, ವಾಪಿ, ತಡಾಗ, ಕಾಲುವೆಗಳು ತುಂಬಿ ಹೊರಸೂಸುತ್ತಿರುವವು, ಎಂದು ನುಡಿದು, ಆ ಬ್ರಾಹ್ಮಣನು ತುಸು ಮುಂದಕ್ಕೆ ಹೋಗಿ ಗುಪ್ತನಾದನು. ಇತ್ತ ನಾರಾಯಣ ಯತಿಗಳು ಮೊದ ಲ್ಗೊಂಡು ಎಲ್ಲರೂ ಸ್ನಾನ-ಭೋಜನಗಳನ್ನು ತೀರಿಸಿ, ಹಾಗೆಯೇ ಸಮುದ್ರ ಸ್ನಾನಕ್ಕೆ ಸಾಗಿದರು. ಮುಂದೆ ಅಲ್ಲಿಂದ ಹೊರಟು, ಸಹ್ಯಾದ್ರಿಯ ಸಮೀಪ ದಲ್ಲಿರುವ ರಾಜಾಪುರಕ್ಕೆ ಬಂದರು. ಆಗ ಗ್ರೀಷ್ಮಋತುವು ಪ್ರಾಪ್ತವಾಗಿತ್ತು. ರಾಜಾಪುರದಲ್ಲಿ ಭಾಗೀರಥಿಯು ಮಾಘಮಾಸದಲ್ಲಿ ಬಂದು, ವಸಂತಋತುವಿನಲ್ಲಿ ಗುಪ್ತಳಾಗುತ್ತಾಳೆ. ಅವಳು ಅದೃಶ್ಯಳಾಗಿ ಒಂದು ತಿಂಗಳು ಆಗಿತ್ತು. ನಾರಾ ಯಣ ಯತಿಗಳು ಕುಂಡದ ಸಮೀಪಕ್ಕೆ ಹೋಗಿ, ಭಾಗೀರಥಿಯನ್ನು ನಮಸ್ಕರಿಸಿ, ಅವಳನ್ನು ಪ್ರಾರ್ಥಿಸತೊಡಗಿದರು. ಆಗ ಅಲ್ಲಿಯ ಬ್ರಾಹ್ಮಣರು ಯತಿಗಳಿಗೆ:- ಭಾಗೀರಥಿಯು ಹೋಗಿ, ಸುಮಾರು ತಿಂಗಳು ಆಯಿತು. ತಿರುಗಿ ಒರಬೇಕಾದರೆ ಇನ್ನೂ ಬಹಳ ದಿವಸಗಳು ಬೇಕು. ಈ ಮೊದಲೇ ಬಂದಿದ್ದರೆ ನೆಟ್ಟಗಾಗುತ್ತಿತ್ತು, ಎಂದು ನುಡಿದರು. ಅದಕ್ಕೆ ನಾರಾಯಣ ಯತಿಗಳು:-ಶಂಕರನ ಕೃಪೆಯಿದ್ದರೆ ಈಗ ಯಾಕೆ ದರ್ಶನವಾಗಲಿಕ್ಕಿಲ್ಲ? ಈ ಕುಂಡದೊಳಗಿನ ಪರ್ಣ-ಪತ್ರಗಳನ್ನು ತೆಗೆಯಿರಿ. ಸುತ್ತಲು ಸಾರಿಸಿ, ರಂಗೋಲಿಯನ್ನು ಹಾಕಿರಿ, ಎಂದು ಹೇಳಿದರು. ಬ್ರಾಹ್ಮಣರು ಯತಿಗಳ ಹೇಳಿಕೆಯಂತೆ, ಎಲ್ಲ ವ್ಯವಸ್ಥೆಯನ್ನು ಮಾಡಿ, ಸಾಯಂ- ಕಾಲಕ್ಕೆ ತಮ್ಮ-ತಮ್ಮ ಮನೆಗಳಿಗೆ ಹೊರಟು ಹೋದರು ಇತ್ತ ಯಾತ್ರಿಕ

§ ಈ ಕಾಶೀರಾಜನಿಗೂ, ಚಿದಂಬರ ದೀಕ್ಷಿತರ ಬಳಿಯಲ್ಲಿರುವ ಕಾಶೀರಾಜನಿಗೂ ಏನೂ ಸಂಬಂಧವಿಲ್ಲ. ಆದರೂ ಇವರಿಬ್ಬರೂ ಚಿದಂಬರ ಭಕ್ತರೇ ಸರಿ.

ರಾದರೂ ಸಂಜೆಯ ಕಾರ್ಯಗಳನ್ನು ತೀರಿಸಿ, ಮಾರ್ಗಾಯಾಸದ ಮೂಲಕ ಮಲಗಿಕೊಂಡರು. ನಾರಾಯಣ ಯತಿಗಳು ಮಾತ್ರ ಶುಚಿಭೂತರಾಗಿ, ಆ ಗಂಗಾಕುಂಡದ ಬಳಿಯಲ್ಲಿ ಕುಳಿತುಕೊಂಡು, ಗಂಗಾಲಹರಿಯನ್ನು ಅನ್ನಲಿಕ್ಕೆ ಆರಂಭಿಸಿದರು. ನಾಲ್ವತ್ತೆಂಟು ಶ್ಲೋಕಗಳು ಮುಗಿಯಲು, ಕುಂಡದಲ್ಲಿ ಒಂದು ದೊಡ್ಡ ಶಬ್ದವಾಯಿತು. ಯಾತ್ರಿಕರೆಲ್ಲರೂ ಎಚ್ಚತ್ತರು. ಇಷ್ಟರಲ್ಲಿ ಕುಂಡದಲ್ಲಿ ಭಾಗೀರಥಿಯ ಪ್ರವೇಶವಾಗಿ ನಾರಾಯಣ ಯತಿಗಳಿಗೆ ಸಚ್ಚೈಲ ಸ್ನಾನವಾಯಿತು. ಬಳಿಕ ಯಾತ್ರಿಕರಾದರೂ ಸ್ನಾನಮಾಡಿದರು. ಹಾ, ಹಾ, ಅನ್ನುವಷ್ಟರಲ್ಲಿ ಈ ಸುದ್ದಿಯು ಊರೊಳಗೆ ಹಬ್ಬಿ, ಜನರು ಆಶ್ಚರ್ಯಗೊಂಡು, ಎಲ್ಲರೂ ಸ್ನಾನಾರ್ಥವಾಗಿ ಯತಿಗಳಿದ್ದೆಡೆಗೆ ಬಂದರು. ಎಲ್ಲರೂ ಸ್ನಾನಾದಿಗಳನ್ನು ಮಾಡಿ, ಯತಿಗಳ ಅತರ್ಕ್ಯವಾದ ಪುಣ್ಯ ಪ್ರತಾಪಕ್ಕೆ ಬೆರಗಾಗಿ, ಅವರನ್ನು ಅನನ್ಯ ಭಾವದಿಂದ ಸ್ತುತಿಸತೊಡಗಿದರು. ಆಗ ಯತಿಗಳು ಸಮಯೋಚಿತವಾದ ಮಾತುಗಳಿಂದ ಸಮಸ್ತರನ್ನು ಸಮಾಧಾನಗೊಳಿಸಿ, ಊರಿಗೆ ಕಳುಹಿ ತಾವು ಅಲ್ಲಿ ಮೂರು ದಿವಸಗಳ ವರೆಗೆ ಇದ್ದು, ಆ ಮೇಲೆ ನರಸಿಂಹವಾಡಿಗೆ ಬಂದರು.

ವಾಡಿಯಲ್ಲಿ ನಾರಾಯಣ ಯತಿಗಳು ಕೆಲವುಕಾಲ ವಾಸಿಸಿ, ಮತ್ತೆ ಯಾತ್ರಾರ್ಥವಾಗಿ ರೌದ್ರಾಬ್ದಿಯಲ್ಲಿ ಹೊರಟು, ವೈಜನಾಥಕ್ಕೆ ಬರಿದರು. ಅಲ್ಲಿ ಶ್ರೀದತ್ತ ಪಾದುಕೆಗಳು ಇರುತ್ತವೆ. ಯತಿಗಳು ಕೆಲವುಕಾಲ ದತ್ತ ಸೇವೆಯಲ್ಲಿ ಕಾಲವನ್ನು ಕಳೆಯುತ್ತಿರಲು, ಒಂದುದಿವಸ ಒಂದು ಚಮತ್ಕಾರವಾಯಿತು. ಆ ಗ್ರಾಮವಾಸಿಯಾದ ಭಗವಂತ ಶಾಸ್ತ್ರಿಯೆಂಬವನು ದೇವದರ್ಶನಕ್ಕಾಗಿ, ದತ್ತ ಮಂದಿರಕ್ಕೆ ಪರಿವಾರದೊಡನೆ ಬಂದಿದ್ದನು. ಅವನು ದೇವರಿಗೆ ನಮಸ್ಕಾರ ಮಾಡುತ್ತಿರಲು, ಒಂದು ಘಟಸರ್ಪವು ಬಂದು ಅವನನ್ನು ಕಚ್ಚಿತು. ತತ್ಕಾಲಕ್ಕೆ ಅವನು ಮೂರ್ಛೆಯನ್ನು ಹೊಂದಿದನು. ಆಗ ಅವನ ಪರಿವಾರದವರು ಬೆದರಿ, ಅವನನ್ನು ಯತಿಗಳ ಸನ್ನಿಧಿಯಲ್ಲಿ ತಂದು, ಅವರ ಮುಂದಿಟ್ಟು, ಆದ ಸಂಗತಿಯನ್ನೆಲ್ಲ ಹೇಳಿದರು. ಆಗ ಯತಿಗಳು:-ಅಂಜಬೇಡಿರಿ, ನೀವಿರುವ ಸ್ಥಳವನ್ನು ವಿಚಾರಿಸಿರಿ. ಇದು ವೈದ್ಯ(ವೈಜ)ನಾಥನ ಸ್ಥಳವು; ಇಲ್ಲಿ ಔಷಧವು ದೊರೆಯಲಿಕ್ಕಿಲ್ಲವೆ? ನಮಗೆ ದೊರೆಯದಿದ್ದರೆ, ವೈಜನಾಥನನ್ನು ಕೇಳೋಣ, ಎಂದು ನುಡಿದು, ಕಾಶೀರಾಜನನ್ನು ಸಮೀಪಕ್ಕೆ ಕರೆದು:-ಭಗವಂತಶಾಸ್ತ್ರಿಗಳಿಗೆ ಹಾವು ಕಚ್ಚಿದೆ; ಕಾರಣ ಇವರನ್ನು ವೈದ್ಯನಾಥನ ಹತ್ತಿರ ಒಯ್ದು, ಔಷಧವನ್ನು ಕೊಡಿಸು; ಹಾಗು ವೈದ್ಯನಿಗೆ ರುದ್ರಾಭಿಷೇಕ ರೂಪವಾದ ಹಣವನ್ನು ಕೊಟ್ಟು,

ಅಂದರೆ ಇವರಿಗೆ ಗುಣವಾಗುವದು, ಎಂದು ಹೇಳಲು, ಕಾಶೀರಾಜನು ಅವರಿಗೆ ಸ್ನಾನಕ್ಕೆ ಹಾಕಿ, ಗುಡಿಗೆ ಕರಕೊಂಡು ಹೋಗಿ ರುದ್ರಾಭಿಷೇಕವನ್ನು ಮಾಡಲು ಶಾಸ್ತ್ರಿಗಳಿಗೆ ಗುಣವಾಯಿತು. ಆಗ ಎಲ್ಲರು ಆನಂದಭರಿತರಾಗಿ ತಮ್ಮ ಮನೆಗೆ ಹೊರಟು ಹೋದರು. ಇತ್ತ ನಾರಾಯಣ ಯತಿಗಳು ಮರುದಿವಸ ಅಲ್ಲಿಂದ ಹೊರಟು, ದೀಕ್ಷಿತರ ದರ್ಶನಾರ್ಥವಾಗಿ ದೇವಲಾಪುರಕ್ಕೆ ಬಂದರು.

ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು ಯತಿಗಳನ್ನು ಎದುರುಗೊಂಡು ಮನೆಗೆ ಕರೆದೊಯ್ದರು; ಮೊದಲು ಅವರನ್ನು ಆಸನದ ಮೇಲೆ ಕುಳ್ಳಿರಿಸಿ, ಮುಂಭಾಗದಲ್ಲಿ ರಂಗೋಲಿಯನ್ನು ಹಾಕಿಸಿ, ಅದರ ಮೇಲೆ ಪಾತ್ರೆಯನ್ನು ಇಟ್ಟು, ದೀಕ್ಷಿತರು ಯತಿಗಳ ಚರಣಕಮಲಗಳನ್ನು ತೊಳೆದರು. ಬಳಿಕ ಆ ಚರಣತೀರ್ಥವನ್ನು ಮಸ್ತಕದ ಮೇಲೆ ಸಿಂಚಿಸಿಕೊಂಡು, ಯತಿಗಳ ಕಾಲುಗಳನ್ನು ಒರಿಸಿ, ಮುಂದೆ ಯಥಾವಿಧಿ ಅವರ ಪೂಜೆಯನ್ನು ಮಾಡಿದರು. ಅನಂತರ ಭೋಜನವಾಯಿತು. ಭೋಜನೋತ್ತರದಲ್ಲಿ ವೇದಾಂತಚರ್ಚೆಗೆ ಆರಂಭವಾಯಿತು. ಸಾಯಂಕಾಲವು ಸಮೀಪಿಸಲು, ಸಾಯಾಹ್ನದ ಕರ್ಮಗಳನ್ನೆಲ್ಲ ತೀರಿಸಿ, ಶ್ರೋತೃವೃಂದವು ಮತ್ತೆ ಯತಿಗಳ ಸನ್ನಿಧಿಯಲ್ಲಿ ಸೇರಿತು. ಮುಂದೆ ಕೆಲಕಾಲ ಪರಮಾರ್ಥಚರ್ಚೆಯಾಗಿ, ಯಾವತ್ತು ಜನರು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಯತಿಗಳು ಅಲ್ಲಿ ಇರುವವರೆಗೆ ಅಂದರೆ ಒಂದು ತಿಂಗಳು ದಿನಾಲು ಇದೇ ಕ್ರಮವು ನಡೆಯುತ್ತಿತ್ತು.

ಹೀಗಿರಲು, ಒಂದು ದಿವಸ ರಾಹುಪರ್ವಕಾಲವು ಬಂತು. ಆಗ ಯಾತ್ರಿಕರು ಬಹಳವಾಗಿ ಕೂಡಿದರು. ಊರಲ್ಲಿ ಒಂದೇ ಬಾವಿಯು ಇತ್ತೆಂದು ಹೇಳಿರುತ್ತದಷ್ಟೇ? ಅದರಲ್ಲಿ ಈ ಸಮಯಕ್ಕೆ ಮತ್ತೆ ನೀರು ಕಡಿಮೆಯಾಗಿದ್ದವು. ಆದ್ದರಿಂದ ಅಲ್ಲಿ ಸ್ನಾನ ಮಾಡುವದು ಯಾತ್ರಿಕರಿಗೆ ದುರ್ಧರವಾಯಿತು. ಬಳಿಕ ಅವರೆಲ್ಲರು ಸ್ನಾನಕ್ಕೆ ಹೊಳೆಗೆ ಹೋಗಬೇಕೆಂದು ನಿಶ್ಚಯಿಸಿ, ಈ ವಿಚಾರವನ್ನು ದೀಕ್ಷಿತರಿಗೆ ತಿಳಿಸಲು, ಅವರಾದರೂ ಅದಕ್ಕೆ ಒಡಂಬಟ್ಟರು. ಈ ಸುದ್ದಿಯು ಯತಿಗಳಿಗೆ ತಿಳಿಯಲು, ಅವರು ದೀಕ್ಷಿತರಿಗೆ:—ನೀವು ಸಾಕ್ಷಾತ್ ಅವತಾರಿಕರಿದ್ದು, ಎಲ್ಲರಿಗೂ ಭ್ರಾಂತಿಯನ್ನುಂಟು ಮಾಡುವಿರಾ? ಜನರೇನು, ನೀವು ಹೇಳಿದಂತೆ ಕೇಳುತ್ತಾರೆ. ಹೋಗೋಣ ಅಂದರೆ ಹೋಗೋಣ, ಬೇಡ ಅಂದರೆ ಬೇಡ. ರಾತ್ರಿಯ ಸಮಯವು. ಮೇಲಾಗಿ ಮಾರ್ಗದಲ್ಲಿ ಹಾವು-ಚೇಳು ಮುಂತಾದ ವಿಷಪ್ರಾಣಿಗಳ ಉಪದ್ರವವು. ದಾರಿಯು ಕಲ್ಲು-ಮುಳ್ಳುಗಳಿಂದ ತುಂಬಿದೆ.

ಕಾರಣ ಹೊಳಿಗೆ ಹೋಗುವ ವಿಚಾರವನ್ನು ಬಿಟ್ಟುಬಿಡಬೇಕು ಎಂದು ಹೇಳಿದರು. ಆಗ ದೀಕ್ಷಿತರು:—ಊರಲ್ಲಿ ಒಂದೇ ಬಾವಿಯು ಅದೆ. ಅದರಲ್ಲಿಯೂ ನೀರಿನ ಕೊರತೆಯು ಎಲ್ಲ ಯಾತ್ರಿಕರ ಸ್ನಾನವು ಹೇಗಾದೀತು? ಎನಲು ಯತಿಗಳು:- ನೀವು ಬಾವಿಯಲ್ಲಿ ಮೊದಲು ಇಳಿದು, ವರುಣನನ್ನು ಪ್ರಾರ್ಥಿಸಿ, ಸ್ನಾನಮಾಡಬೇಕು ಅಂದರೆ ನೀರಿನ ಕೊರತೆಯುಂಟಾಗಲಿಕ್ಕಿಲ್ಲ; ಎಂದಂದರು. ಆಗ ದೀಕ್ಷಿತರು- ತಾವೇ ಮೊದಲು ಸ್ನಾನಮಾಡಬೇಕು, ಅಂದರೆ ಸುಖವಾಗುವದು ಎಂದು ಹೇಳಲು ಯತಿಗಳು ಅದಕ್ಕೆ ಒಪ್ಪಿ, ಎಲ್ಲ ಯಾತ್ರಿಕರಿಂದ ಕೂಡಿಕೊಂಡು ಬಾವಿಯ ಬಳಿಗೆ ಬಂದರು. ಮೊದಲು ಯತಿಗಳ ಸ್ನಾನವಾಯಿತು. ಬಳಿಕ ದೀಕ್ಷಿತರು ಸ್ನಾನ ಮಾಡುವದಕ್ಕಾಗಿ ಬಾವಿಯನ್ನು ಪ್ರವೇಶಿಸಿದರು. ಆಗ ಅದರಲ್ಲಿ ಕಟಿಪ್ರಮಾಣ ನೀರು ಇದ್ದವು. ದೀಕ್ಷಿತರು ಸ್ನಾನಮಾಡಿ ಮೇಲಕ್ಕೆ ಬರಲು, ಬಾವಿಯಲ್ಲಿ ನೀರು ವಿಪುಲವಾದವು. ಜನರಿಗೆ ಆಶ್ಚರ್ಯವಾಯಿತು. ಬಳಿಕ ಮಿಕ್ಕ ಯಾತ್ರಿಕರೆಲ್ಲರು ಸ್ನಾನ ಮಾಡಿ, ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

ಮುಂದೆ ಒಂದು ದಿವಸ ಪ್ರಾತಃಕಾಲದಲ್ಲಿ ದೀಕ್ಷಿತರಿಗೆ ಯತಿಗಳು:— ನಾವು ಇನ್ನು ನರಸಿಂಹವಾಡಿಗೆ ಹೋಗುತ್ತೇವೆ. ಒಪ್ಪಿಗೆಯು ದೊರೆಯಲಿ, ಎನಲು, ದೀಕ್ಷಿತರು ವಿನೋದದಿಂದ:—ನಾವು ಗೃಹಸ್ಥಾಶ್ರಮಿಗಳು. ಆದ್ದರಿಂದ ನೀವು ನಮಗೆ ಗುರುಗಳಾದಿರಿ. ಕಾರಣ ನಿಮಗೆ ಹೋಗಿರಿ, ಎಂದರೆ, ದೊಡ್ಡವರಿಗೆ ಅಮಂಗಲವನ್ನು ನುಡಿದಂತಾಗುವದು. ಸ್ನೇಹಭಾವದಿಂದಾದರೂ ಹೀಗೆ ಹೇಳಲಿಕ್ಕೆ ಬರುವಂತಿಲ್ಲ. ನಿಲ್ಲಿರಿ, ಎಂದು ಹೇಳುವ ಅಧಿಕಾರವೂ ಇಲ್ಲ. ಆದ್ದರಿಂದ ತಮ್ಮ ಮನಸ್ಸಿಗೆ ಬಂದಂತೆ ಮಾಡಿರೆನ್ನುವದೇ ಯೋಗ್ಯವು, ಎಂದರು. ಅದಕ್ಕೆ ಯತಿಗಳು:—ನಾನು ಹೋಗಲಿಕ್ಕೇ ಬೇಕು. ಇನ್ನೊಮ್ಮೆ ಭೆಟ್ಟಿಯಾಗುವ ಯೋಗವಿದ್ದಂತೆ ಕಾಣುವದಿಲ್ಲ; ಎಂದು ನುಡಿದು, ನರಸಿಂಹವಾಡಿಗೆ ಹೊರಟರು. ಗ್ರಾಮಸ್ಥರೆಲ್ಲರೂ ಯತಿಗಳನ್ನು ಕಳಿಸಲಿಕ್ಕೆ ಊರ ಹೊರಭಾಗದವರೆಗೆ ಬಂದರು. ಆಗ ದೀಕ್ಷಿತರು ಅವರೆಲ್ಲರನ್ನು ಹಿಂದಕ್ಕೆ ಕಳುಹಿಸಿ, ತಾವೊಬ್ಬರೇ ಯತಿಗಳ ಕೂಡ ಮುಂದಕ್ಕೆ ಸಾಗಿದರು. ಕುಸ ಮುಂದೆ ಹೋದ ಬಳಿಕ ಯತಿಗಳಿಗೆ ನಮಸ್ಕಾರ ಮಾಡಿ:—ನನ್ನ ಶಿಷ್ಯನಾದ † ಸಖಾರಾಮನೆಂಬವನು ಕುಟುಂಬಸಹಿತನಾಗಿ ಬೆಳಗಾವಿಯಲ್ಲಿ ನೆರೆಮನೆಯಲ್ಲಿರುವನು. ಅವನಿಗೆ

† ಇವನು ಚಿದಂಬರಭಕ್ತನು. ಇವನು ದೀಕ್ಷಿತರ ಚರಿತ್ರವನ್ನು ಬಹಳ ಸರಸಾಗಿ ರಚಿಸಿರುವನು. ಉಪಲಬ್ಧವಿದ್ದಷ್ಟು ಇವನ ಚರಿತ್ರವನ್ನು ಈ ಗ್ರಂಥದ ಕೊನೆಯಲ್ಲಿ ಕೊಟ್ಟಿದ್ದೇವೆ.

ತಾವು ದರ್ಶನಕೊಟ್ಟು, ಒಂದು ತಿಂಗಳಲ್ಲಿ ಬಿಡುಗಡೆಯಾಗುವದೆಂದು ಹೇಳಿ, ಮುಂದಕ್ಕೆ ಹೋಗಬೇಕು. ಎಂದು ಹೇಳಿದರು. ಅದಕ್ಕೆ ಯತಿಗಳು ಒಪ್ಪಿ, ದೀಕ್ಷಿತರಿಗೆ ಮರಳಿ ಹೋಗಲಿಕ್ಕೆ ಆಜ್ಞಾಪಿಸಿ, ತಾವು ಮುಂದಕ್ಕೆ ಸಾಗಿದರು.

ದೀಕ್ಷಿತರ ಹೇಳಿಕೆಯಂತೆ ನಾರಾಯಣಯತಿಗಳು ಸಖಾರಾಮನಿಗೆ ಕಾರಾಗೃಹದಲ್ಲಿ ದರ್ಶನಕೊಟ್ಟು, ಅವನಿಗೆ ದೀಕ್ಷಿತರ ನಿರೂಪವನ್ನು ಹೇಳಿ, ಕಾರಾಗೃಹದಿಂದ ಒಮ್ಮಿಂದೊಮ್ಮೆ ಹೊರಗೆ ಬಂದರು. ಅದನ್ನು ನೋಡಿ ಸಖಾರಾಮನು ಆಶ್ಚರ್ಯಹೊಂದಿ, ಅವರನ್ನು ಸ್ತುತಿಸತೊಡಗಿದನು. ಬಳಿಕ ಯತಿಗಳು, ಶಲಿಸನ್ನೆಯಿಂದ ಸಖಾರಾಮನಿಗೆ ಸುಮ್ಮನಿರಹೇಳಿ, ತಾವು ವಾಡಿಗೆ ಹೋದರು. ಅಲ್ಲಿ ಕೆಲವು ದಿವಸ ವಾಸಿಸಿ, ಅಲ್ಲಿಂದ ಕರವೀರಪುರಕ್ಕೆ ಹೋಗಿ, ಅಲ್ಲಿ ಕೆಲವು ಚಮತ್ಕಾರಗಳನ್ನು ತೋರಿಸಿ, ಅಲ್ಲಿಯ ಅರಸನಿಂದ ಸನ್ಮಾನ ಹೊಂದಿ, ಅಲ್ಲಿ ಕೆಲವು ತೀರ್ಥಗಳನ್ನು ನಿರ್ಮಾಣಮಾಡಿ, ಮರಳಿ ನರಸಿಂಹವಾಡಿಗೆ ಬಂದರು. ಮುಂದೆ ಕೆಲವು ದಿವಸಗಳವರೆಗೆ ಅಲ್ಲಿಯೇ ಇದ್ದುಕೊಂಡು, ಶಕೆ ೧೭೨೭ ಚೈತ್ರ ವದ್ಯ ಅಮಾವಾಸ್ಯೆಯು ದಿವಸ ಸಮಾಧಿಸ್ಥರಾದರು. ಇವರು ಸಮಾಧಿಸ್ಥರಾಗುವ ಕಾಲಕ್ಕೆ ಒಂದು ಜ್ವಾಲೆಯು ಒಮ್ಮಿಂದೊಮ್ಮೆ ಆಕಾಶದವರೆಗೆ ಹೋಯಿತು! ಸ್ವರ್ಗದಲ್ಲಿ ಗಂಟೆಗಳು ಬಾರಿಸಲಾರಂಭಿಸಿದವು! ಈ ಯತಿಗಳು ನಿರ್ಯಾಣ ಹೊಂದಿದ ಸ್ಥಳದಲ್ಲಿ ಅವರ ಪರಮ ಶಿಷ್ಯನಾದ ಕಾಶೀರಾಜನು ಒಂದು ಸಮಾಧಿಯನ್ನು ಕಟ್ಟಿಸಿ, ಅಲ್ಲಿ ಪಾದುಕೆಗಳನ್ನು ಸ್ಥಾಪಿಸಿದನು. ನರಸಿಂಹವಾಡಿಯಲ್ಲಿ ಈಗಲೂ ದತ್ತಾತ್ರಯರ ಪೂಜೆಯಾದ ಬಳಿಕ, ಈ ಸಮಾಧಿಯೊಳಗಿನ ಪಾದುಕೆಗಳ ಪೂಜೆ-ಧೂಪಾರತಿಗಳಾಗುತ್ತವೆ. ಸದ್ಯಕ್ಕೆ ಇವರ ಸಮಾಧಿಯ ಸ್ಥಳವು 'ನಾರಾಯಣಸ್ವಾಮಿಗಳ ಓರಿ' ಎಂಬ ಹೆಸರಿನಿಂದ ಪ್ರಸಿದ್ಧವದೆ.

---

## ೩ನೆಯ ಪ್ರಕರಣ

## ವಿಷಭಕ್ಷಣವೂ, ದೇವಲಾಪುರತ್ಯಾಗವೂ.

ಚಿದಂಬರ ದೀಕ್ಷಿತರು ತಮ್ಮ ತಂದೆಯಂತೆ ಒಮ್ಮೊಮ್ಮೆ ಸಂಚಾರಕ್ಕೆ ಹೋಗುತ್ತಿದ್ದರು ಅವರು ದೇವಲಾಪುರದಲ್ಲಿರುವಾಗ ಒಮ್ಮೆ ಸಂಚಾರಾರ್ಥವಾಗಿ ಪಾರ್ಶ್ವವಾಡಕ್ಕೆ ಹೋಗಿದ್ದರು ಅಲ್ಲಿ ಒಬ್ಬ ಮುದುಕೆಯ ಮನೆಯಲ್ಲಿಯೇ

ಮಾರ್ತಾಂಡ ದೀಕ್ಷಿತರು ಇಳಕೊಳ್ಳುತ್ತಿದ್ದದರಿಂದ ಇವಂಾದರೂ ಅಲ್ಲಿಯೇ ಇಳಕೊಂಡರು. ಈ ಕಾಲಕ್ಕೆ ಪೂರ್ವಜನ್ಮದ ಕರ್ಮಫಲವು ಅವಳನ್ನು ಕುಕರ್ಮದಲ್ಲಿ ಮುಳುಗಿಸಿ ಬಿಟ್ಟಿತು. ಅವಳ ಕೈಯಿಂದ ಕೆಟ್ಟಕೆಲಸವಾಗದ ದಿವಸವೇ ಇದ್ದಿಲ್ಲ. ಪಾಪದ ಸಂಚಯವು ವಿಶೇಷವಾಗಿ, ಕುಂಭೀಪಾಕದಲ್ಲಿ ಕೊಳೆಯುತ್ತ ಕೂಡ್ರುವ ಕಾಲವು ಸಮೀಪಿಸಿದ್ದರಿಂದಲೋ ಏನೋ ಎಂಬಂತೆ ಆ ಮುದುಕೆಯ ಮನಸ್ಸಿನಲ್ಲಿ ಒಂದು ದುರಾಲೋಚನೆಯು ಉಂಟಾಯಿತು. ಅವಳು ದೀಕ್ಷಿತರನ್ನು ಯಾವದೇ ಉಪಾಯದಿಂದ ಕೊಲ್ಲಬೇಕೆಂದು ಯೋಚಿಸಿ, ಅವಳು ದೀಕ್ಷಿತರ ಹತ್ತರ ಹೋಗಿ:—ಚಿದಂಬರಪ್ಪಾ, ನಮಗೆ ನಿಮ್ಮ ಹಿರಿಯರ ಪರಿಚಯವು ಬಹಳ. ನೀವೇ ನಮ್ಮನ್ನು ಮರೆತಿರುವಿರಿ; ಬಹಳ ದಿವಸಕ್ಕೆ ಬಂದಿರುವಿರಿ ಆದ್ದರಿಂದ ಈ ಬಡವಿಯ ಒಂದು ಮಾತನ್ನು ಕೇಳಬೇಕು. ಅದೇನಂದರೆ: ಈ ಹೊತ್ತು ನಿಮ್ಮ ಜಳಕ, ಪೂಜೆಯಾದ ಬಳಿಕ ನಾನು ಕೊಡುವ ಪದಾರ್ಥವನ್ನಷ್ಟು ಸೇವಿಸಬೇಕು, ಎಂದು ನುಡಿದಳು. ಆಗ ಚಿದಂಬರ ದೀಕ್ಷಿತರು ಮುದುಕೆಯ ಅಂತರಂಗವನ್ನರಿತು:—ನಮ್ಮ ಹತ್ತರ ಸಮಸ್ತ ಪದಾರ್ಥಗಳೂ ಇರುವವು; ಆದರೆ ಚಲೋ ತುಪ್ಪವು ಮಾತ್ರ ಇಲ್ಲ. ಆದ್ದರಿಂದ ಅದನ್ನಷ್ಟು ಕೊಟ್ಟರೆ, ಯಜ್ಞನಾರಾಯಣನ ಮೇಲೆ ಉಪಕಾರಮಾಡಿದಂತಾಗುವದು, ಎಂದು ನುಡಿದರು. ಆಗ ಮುದುಕೆಗೆ ಅತ್ಯಾನಂದವಾಯಿತು. ಯಾಕಂದರೆ, ಅವಳ ಮನಸ್ಸಿನಲ್ಲಿಯೂ ತುಪ್ಪದಲ್ಲಿ ವಿಷಯವನ್ನು ಬೆರಿಸಿ ಕೊಡಬೇಕೆಂದೇ ಇತ್ತು.

ತನ್ನ ಕೆಲಸವು ಅನಾಯಾಸವಾಗಿ ಕೈಗೂಡುವದೆಂದು ತಿಳಿದು ಆ ಮುದುಕೆಯು ಹಿರಿಹಿರಿ ಹಿಗ್ಗಿ ಉತ್ತಮವಾದ ತುಪ್ಪದಿಂದ ಒಂದು ಮಗಿಯನ್ನು ತುಂಬಿ. ಅದರಲ್ಲಿ ಭಯಂಕರವಾದ ವಿಷವನ್ನು ಬೆರಿಸಿ, ಅದನ್ನು ನೈವೇದ್ಯದ ಹೊತ್ತಿಗೆ ದೀಕ್ಷಿತರ ಮುಂದೆ ತಂದಿಟ್ಟಳು. ಅದನ್ನು ದೀಕ್ಷಿತರು ನೋಡಿ ಮುದುಕೆಯ ದುಷ್ಟಕರ್ಮವನ್ನು ಹೊರಗೆಡವದೆ, ಅವಳಿಗೆ:—ಅಹಹ! ತುಪ್ಪವು ಎಷ್ಟು ಕಂಪು ಅದೆ? ನಾನು ಬಡವನು; ನನ್ನ ದೈವವು ದೊಡ್ಡದು; ಅದಕ್ಕಂತಲೇ ಇಂಥ ತುಪ್ಪವು ದೊರೆಯಿತು. ಇದರ ಹೆಸರು ಪರೋಪಕಾರವು. ತುಪ್ಪವನ್ನು ತಕ್ಕೊಳ್ಳಲೇನು? ತುಪ್ಪವನ್ನು ತಕ್ಕೊಳ್ಳಲೇನು? ಎಂದು ಮೂರು ಸಾರೆ ಕೇಳಿದರು. ಆಗ ಮುದುಕೆಯು:—ನಿಮ್ಮ ಬಾಯಿಯಲ್ಲಿ ತುಪ್ಪ ಬೀಳಬೇಕೆಂದು ನನ್ನ ಇಚ್ಛೆಯಿರುವದು. ಹೀಗಾಯಿತೆಂದರೆ ನನ್ನ ಜನ್ಮವು ಸಾರ್ಥಕವಾದಂತಾಯಿತೆಂದು ತಿಳಿಯುತ್ತೇನೆ, ಎಂದು ನುಡಿದಳು. ಸ್ತ್ರೀಯರಲ್ಲಿ

ನಿರ್ದಯೆ, ಅವಿವೇಕತನ, ಮೂಢತನ, ಅಶುಚಿ, ಮಮತೆ, ಲೋಭ ಈಯಾರು ಗುಣಗಳು ಸ್ವಾಭಾವಿಕವಾಗಿ ಮನೆಮಾಡಿಕೊಂಡಿರುತ್ತವೆ ಆದ್ದರಿಂದ ಅವರು ಯಾವ ಕಾಲಕ್ಕೆ ಏನು ಮಾಡಿಯಾರು ಎಂಬದರ ನಿಯಮವಿಲ್ಲ.

ಮೇಲೆ ಹೇಳಿದಂತೆ ಮಾತುಕಥೆಗಳಾದ ಬಳಿಕ. ಮುದುಕೆಯು ಆನಂದಿತಳಾಗಿ ಹೊರಟು ಹೋದಳು. ಇತ್ತ ದೀಕ್ಷಿತರು ಆ ತುಪ್ಪವನ್ನು ತಕ್ಕೊಂಡು, ಅಭಿಗಾರಮಾಡಿ ನೈವೇದ್ಯ-ವೈಶ್ವದೇವಗಳನ್ನು ತೀರಿಸಿದರು. ಬಳಿಕ ಎಲೆಯನ್ನು ಬಡಿಸಿಕೊಂಡು ಅನ್ನಶುದ್ಧಿಯನ್ನು ಮಾಡಿ, ತ್ರಿಸುಪರ್ಣವನ್ನು ಅನ್ನುತ್ತಿರಲು, ಅನ್ನವು ನೋಡ ನೋಡುವಷ್ಟರಲ್ಲಿ ಹಚ್ಚಗಾಯಿತು. ಈ ಚಮತ್ಕಾರವನ್ನು ನೋಡಿ, ಸನ್ನಿಧಿಯಲ್ಲಿರುವ ಸೇವಕ ಮೊದಲಾದವರು:—ಸ್ವಾಮಿ, ಈ ಆಹಾರವನ್ನು ಭುಂಜಿಸಬಾರದು. ಇದರಲ್ಲಿ ವಿಷಕೂಡಿದಂತೆ ತೋರುತ್ತದೆ ಎನಲು, ದೀಕ್ಷಿತರು:—ನನಗೆ ಎಲ್ಲವೂ ಗೊತ್ತುಂಟು. ಅಗ್ನಿನಾರಾಯಣನೂ, ಪರಮೇಶ್ವರನೂ ಇಂಥ ಅನ್ನವನ್ನೇ ಉಂಡಿರುವರು. ಅಂದಬಳಿಕ ಅದರಿಂದ ನನಗೇನಾಗುವದು! ಅನ್ನವನ್ನು ಸರ್ವಥಾ ನಿಂದಿಸಬಾರದು. ಆಗುವದು ಆಗೇ ತೀರುತ್ತದೆ. ಶರೀರದ ಮೋಹದಲ್ಲಿ ಸಿಕ್ಕರೆ ಧರ್ಮ ಲಯವಾಗಿ, ನಮಗೆ ದೋಷತಟ್ಟುತ್ತದೆ. ಎಂದು ಜನರನ್ನು ಬೋಧಿಸಿ, ತಾವು ಭೋಜನಮಾಡಲಾರಂಭಿಸಿದರು. ನಾಲ್ಕೈದು ತುತ್ತುಗಳನ್ನು ತಿನ್ನುವಷ್ಟರಲ್ಲಿ ವಾಂತಿಯಾಯಿತು. ಆದರೂ ಅವರು ಅಸಮಾಧಾನಗೊಳ್ಳದೆ, ಮಜ್ಜನಶಾಲೆಗೆ ಹೋಗಿ, ಸ್ನಾನಮಾಡಲಾರಂಭಿಸಲು, ಮೈಮೇಲೆಲ್ಲ ಗುಳ್ಳೆಗಳೇಳಹತ್ತಿದವು. ದೇಹದಲ್ಲಿ ಉರುವು ಬಿದ್ದಿತು. ಅತ್ತ ಮುದುಕೆಯ ಮೈಮೇಲಾದರೂ ಗುಳ್ಳೆಗಳಿದ್ದು, ಶರೀರದಲ್ಲಿ ಉರುವುಬಿತ್ತು. ಇಬ್ಬರೂ ಸಾಯಂಕಾಲದವರೆಗೆ ಗೋಳಾಡಿದರು. ಮುದುಕೆಯು ಅತ್ಯಾವಸ್ಥೆಯನ್ನು ಹೊಂದಿ, ಆಸನ್ನಮರಣಳಾದಳು. ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು ಆಕೆಯ ವ್ಯಥೆಯ ನಿವಾರಣಾರ್ಥವಾಗಿ ಶಿಷ್ಯನ ಕೈಯಿಂದ ಭಸ್ಮವನ್ನು ಕಳುಹಿದರು. ಸತ್ಪುರುಷರಲ್ಲಿ ಸ್ವಾಭಾವಿಕವಾಗಿ ಪರೋಪಕಾರಬುದ್ಧಿಯು ಇರುತ್ತದೆ. ಮುದುಕೆಯು ಕೃತಕರ್ಮಕ್ಕೆ ಪಶ್ಚಾತ್ತಾಪಪಟ್ಟು, ದೀಕ್ಷಿತರು ಕಳಿಸಿದ ಭಸ್ಮವನ್ನು ಮೈಗೆಲ್ಲ ಲೇಪಿಸಿಕೊಂಡು, ಸ್ವಲ್ಪ ಮುಖದಲ್ಲಿ ಹಾಕಿಕೊಂಡು ದೀಕ್ಷಿತರನ್ನು ಸ್ತುತಿಸಹತ್ತಿದಳು. ಆಗ ದಾಹವು ಇಲ್ಲದಂತಾಗಿ ಗುಳ್ಳೆಗಳು ಮಾಯೆವಾದವು. ಇತ್ತ ದೀಕ್ಷಿತರಿಗಾದರೂ ಆರೋಗ್ಯವುಂಟಾಯಿತು.

ಮುದುಕೆಯು ಮರುದಿವಸ ದೀಕ್ಷಿತರ ಬಳಿಗೆ ಬಂದು, ಅವರ ಕಾಲಿಗೆರಗಿ

ಅವರನ್ನು ಅನನ್ಯಭಾವದಿಂದ ಹೊಗಳಹತ್ತಿದಳು. ಆಗ ಅವಳಿಗೆ ದೀಕ್ಷಿತರು ನಿಷ್ಕಾರಣವಾಗಿ ಪರಪೀಡೆಯನ್ನು ಮಾಡಿದರೆ ಆಗುವ ಹಾನಿಯನ್ನು ಹೇಳಿ, ಅವಳನ್ನು ಮನೆಗೆ ಕಳುಹಿ, ತಾವು ಶಿಷ್ಯರಿಂದೊಡಗೂಡಿ ದೇವಲಾಪುರಕ್ಕೆ ಬಂದರು.

ಹೀಗೆ ದೀಕ್ಷಿತರು ನಾನಾವಿಧ ಚಮತ್ಕಾರಗಳನ್ನು ತೋರಿಸುತ್ತ ಕಾಲವನ್ನು ಕಳೆಯುತ್ತಿರಲು, ಸರಸ್ವತೀಮಾತೆಯು ನಾಲ್ಕನೇ ಗರ್ಭವನ್ನು ತಳೆದಳು. ಆ ಗರ್ಭವು ದಿನೇದಿನೇ ಶುಕ್ಲಪಕ್ಷದ ಚಂದ್ರನಂತೆ ಬೆಳೆಯಹತ್ತಿತು. ಇದುವರೆಗೆ ಅವರು ತವರ ಮನೆಯಲ್ಲಿಯೇ ಇದ್ದರು. ಎಂಟನೇ ತಿಂಗಳು ಸಮೀಪಿಸಲು, ದೀಕ್ಷಿತರು ಕಾಗ್ಯಾ ಎಂಬ ಒಬ್ಬ ನಂಬಿಗಸ್ಥನಾದ ಆಳಿನ ಕೈಯಿಂದ ತಮ್ಮ ಕುಟುಂಬವನ್ನು ಕರಿಸಿಕೊಂಡರು. ದೀಕ್ಷಿತರ ಕುಟುಂಬವನ್ನು ಕಾಗ್ಯಾನು ಬಹಳೇ ವ್ಯವಸ್ಥೆಯಿಂದ ಕರಕೊಂಡು ಬಂದದ್ದರಿಂದ, ದೀಕ್ಷಿತರು ಅವನ ಕೆಲಸಕ್ಕೆ ತುಷ್ಟರಾಗಿ, ನೀನು ಇಂದಿನಿಂದ ದೈವವುಳ್ಳವನಾಗುವಿ, ಎಂದು ಆಶೀರ್ವದಿಸಿದರು. ಕಾಗ್ಯಾನು ತುಸದಿವಸಗಳಲ್ಲಿಯೇ ಹದಿನಾರು ಎತ್ತುಗಳುಳ್ಳ ಒಕ್ಕಲಿಗನಾದನು. ಇವನು ತಾನು ಬದುಕಿರುವ ವರೆಗೆ ಪ್ರತಿವರ್ಷ ನೂರುಮಂದಿ ಬ್ರಾಹ್ಮಣರಿಗೆ ಊಟಕ್ಕೆ ಹಾಕುತ್ತಿದ್ದನು.

ಸರಸ್ವತೀಮಾತೆಗೆ ನವಮಾಸಗಳು ತುಂಬಲು, ಅವರು ಶುಭ ಮುಹೂರ್ತದಲ್ಲಿ ಒಬ್ಬ ಗಂಡುಮಗುವನ್ನು ಹೆತ್ತರು. ಷಷ್ಠಿಪೂಜನ ಮೊದಲಾದ ಸಂಸ್ಕಾರಗಳು ತೀರಿ, ಆ ಮಗುವಿಗೆ ಹನ್ನೆರಡನೇ ದಿವಸ ವರರುಚಿಯೆಂದು ಹೆಸರಿಟ್ಟರು.

ದೀಕ್ಷಿತರ ಕೀರ್ತಿಯು ನಾಲ್ಕೂಕಡೆಗೆ ಹಬ್ಬಿರಲು, ದುರ್ಬುದ್ಧಿಯುಳ್ಳ ಒಬ್ಬ ರಾಜನು ಮನಸ್ಸಿನಲ್ಲಿ:-ದೀಕ್ಷಿತರು ಮಾಡುವದೆಲ್ಲವು ಸುಳ್ಳು; ವ್ಯರ್ಥವಾಗಿ ತಮ್ಮ ಪ್ರಸ್ಥವನ್ನು ಬೆಳಿಸುವರು. ಅವರನ್ನು ಜನರು ವ್ಯರ್ಥವಾಗಿ ಭಜಿಸುತ್ತಾರೆ; ನಮ್ಮನ್ನು ಯಾರೂ ಕೇಳಲೊಲ್ಲರು; ಆದ್ದರಿಂದ ಅವರನ್ನು ಕೊಂದು ಬಿಡಬೇಕೆಂದು ಯೋಚಿಸಿ, ಸುಮ್ಮ-ಸುಮ್ಮನೆ ದೀಕ್ಷಿತರನ್ನು ಹಿಡತರಿಸಿದನು; ಹಾಗೂ ಅವರನ್ನು ತೋಫಿನ ಬಾಯಿಗೆ ನಿಲ್ಲಿಸಿ, ಅತಿದೊಡ್ಡ ತೋಫಿನಲ್ಲಿ ಎರಡು ಗುಂಡುಗಳನ್ನು ಹಾಕಿ, ಗೋಲಂದಾಜನಿಗೆ ಹಾರಿಸಲಿಕ್ಕೆ ಹೇಳಿದನು. ಆಗ ಗೋಲಂದಾಜನು ಒಡೆಯನ ಅಪ್ಪಣೆಯ ಮೇರೆಗೆ ತೋಫನ್ನು ತಯಾರಿಸಿ ಹಾರಿಸಿದನು. ಆಗ ದೀಕ್ಷಿತರು ತಮ್ಮ ಮೇಲೆ ಬರುವ ಎರಡು ಗುಂಡುಗಳನ್ನು ಎರಡೂ ಕೈಯಲ್ಲಿ ಹೂವಿನಂತೆ ಹಿಡುಕೊಂಡರು. ಆಗ ಕೂಡಿದ ಜನರಿಗೂ-ರಾಜನಿಗೂ ಆಶ್ಚರ್ಯವಾಯಿತು. ರಾಜನು ಕೃತಕರ್ಮಕ್ಕೆ ಅನುತಾಪಗೊಂಡು

ದೀಕ್ಷಿತರಿಗೆ ಶರಣು ಬಂದನು. ಆಗ ಅರಿಮಿತ್ರರಲ್ಲಿ ಸಮಭಾವವುಳ್ಳ ದೀಕ್ಷಿತರು ರಾಜನನ್ನು ಸವಿಮಾತುಗಳಿಂದ ಸಂಬೋಧಿಸಿ, ತಮ್ಮ ಸ್ಥಳಕ್ಕೆ ಹೊರಟು ಹೋದರು. ಈ ಚಮತ್ಕಾರವು ದುರ್ಮತಿ ಸಂವತ್ಸರದ ಆಷಾಢ ಶುದ್ಧ ಷಷ್ಠೀ ದಿವಸವಾಯಿತು.

ಈ ಸಮಯಕ್ಕೆ ರಾಜರು ನಿರಪರಾಧಿಗಳನ್ನು ಪೀಡಿಸತೊಡಗಿದರು; ಆದ್ದರಿಂದ ಭಕ್ತಜನರು ಈ ಸ್ಥಾನವನ್ನು ಬಿಡೋಣವೆಂದು ಹೇಳಹತ್ತಿದರು. ಆಗ ದೀಕ್ಷಿತರು:-ನೀವು ಹೇಳುವದು ಸಯುಕ್ತಿಕವು. ಯಾವ ಕಾಲಕ್ಕೆ ಏನು ಪ್ರಸಂಗ ಬಂದೀತೆಂಬದು ಹೇಳಲಿಕ್ಕೆ ಬರುವಂತಿಲ್ಲ; ಆದ್ದರಿಂದ ಕೋಟೆಯುಳ್ಳ ಒಂದು ಊರಿಗೆ ಹೋಗೋಣ, ಎಂದು ನಿಶ್ಚಯಿಸಿ, ಅವರು ಅಲ್ಲಿಂದ ಹೊರಟು ಕುಸುಗಲ್ಲಿಗೆ ಹೋದರು. ದೇವಲಾಪುರದಲ್ಲಿ ದೀಕ್ಷಿತರು ಒಟ್ಟಿಗೆ ಮೂರು ವರ್ಷಗಳ ವರೆಗೆ ಇದ್ದರು.

---

## ೩೩ನೆಯ ಪ್ರಕರಣ.

## ಬ್ರಹ್ಮರಾಕ್ಷಸಗಳ ಉದ್ಧಾರವು.

ಚಿದಂಬರ ದೀಕ್ಷಿತರು ದೇವಲಾಪುರದಲ್ಲಿದ್ದಾಗ ಎಷ್ಟೋಜನ ಭಕ್ತರು ಅಲ್ಲಿಗೆ ಬಂದು:-ನಮ್ಮಲ್ಲಿ ನೀರಿನ ವಿಪುಲತೆಯುಂಟು, ನಮ್ಮಲ್ಲಿ ದಸ್ಯುಗಳ ಭಯ ವಿಲ್ಲ, ನಮ್ಮಲ್ಲಿ ಪರ್ಣ-ಪತ್ರಗಳ ವಿಪುಲತೆಯುಂಟು; ಕಾರಣ ನಮ್ಮ ಊರಿಗೆ ಬರಬೇಕು, ನಮ್ಮ ಊರಿಗೆ ಬರಬೇಕು, ಎಂದು ಪ್ರತಿಯೊಬ್ಬರು ದೀಕ್ಷಿತರನ್ನು ಪ್ರಾರ್ಥಿಸುತ್ತಿದ್ದರು. ಈ ಭಕ್ತರಲ್ಲಿಯೇ ವಿಶೇಷ ಪ್ರೇಮಾಸಕ್ತನಾದ, ಕುಸುಗಲ್ಲವಾಸಿ ಹರಿ ಪರಶುರಾಮ ಎಂಬವನು ವಿಜ್ಞಾಪನೆಯನ್ನು ಮಾಡಿಕೊಳ್ಳಲು, ದೀಕ್ಷಿತರು ಅವನ ಮಾತಿಗೆ ಒಡಂಬಟ್ಟು, ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ಶಕೆ ೧೬೨೪ರಲ್ಲಿ ಕುಸುಗಲ್ಲಿಗೆ ಹೋದರು. ಅವರು ಅಲ್ಲಿ ಕೋಟೆಯೊಳಗೆ ಒಂದು ವರ್ಷ, ಹಾಗೂ ಊರಲ್ಲಿ ಆರು ತಿಂಗಳು ಅಂತು ಒಂದುವರೆ ವರ್ಷ ವಾಸಿಸಿದರು.

ದೀಕ್ಷಿತರು ಇದ್ದ ಮನೆಯಲ್ಲಿ ಎಂಟು ಬ್ರಹ್ಮರಾಕ್ಷಸಗಳಿದ್ದವು. ಅವು ಶಾಸ್ತ್ರಜ್ಞರನ್ನೂ, ಮಾಂತ್ರಿಕರನ್ನೂ ಪೀಡಿಸುತ್ತಿದ್ದವು; ಆದರೆ ದೀಕ್ಷಿತರ ಕಣ್ಣಿಗೆ

ಮಾತ್ರ ಬೀಳುತ್ತಿದ್ದಿಲ್ಲ; ಆದರೂ ಮನೆಯೊಳಗೆ ಒಮ್ಮೊಮ್ಮೆ ಭಯಂಕರ ಶಬ್ದ ಮಾಡುತ್ತಿದ್ದವು; ಆದರೆ ಅದರ ಕಡೆಗೆ ದೀಕ್ಷಿತರು ದುರ್ಲಕ್ಷ ಮಾಡುತ್ತಿದ್ದರು. ಒಂದುದಿವಸ ದೀಕ್ಷಿತರಿಗೆ ಅಕಸ್ಮಾತ್ತಾಗಿ ಜ್ವರ ಒಂದವು. ಆಗ ಊರೊಳಗಿನ ಜನರು:-ದೀಕ್ಷಿತರೇ, ತಮಗೆ ರಾಕ್ಷಸಗಳು ಪೀಡಿಸುತ್ತಿರುವವು; ಕಾರಣ ತಾವು ಇಲ್ಲಿ ಇರಬೇಡಿರಿ, ಎಂದು ದೀಕ್ಷಿತರಿಗೆ ಹೇಳಹತ್ತಿದರು. ಆಗ ದೀಕ್ಷಿತರು:-ಇರಲಿ, ಆಗತಕ್ಕದ್ದು ಆಗೇ ತೀರಲಿ; ದೇಹಭೋಗವನ್ನು ಯಾರೂ ತಪ್ಪಿಸಲಾರರು. ನಮಗೆ ಏನೂ ವ್ಯಥೆಯಾಗುವದಿಲ್ಲ. ನೀವು ಸ್ವಸ್ಥ ಚಿತ್ತರಾಗಿ ಇರ್ರಿ, ಎಂದು ಹೇಳಿ, ಅವರನ್ನು ಮನೆಗೆ ಕಳಿಸಿಕೊಟ್ಟು, ತಾವು ನಿತ್ಯ ಕರ್ಮವನ್ನು ಆಚರಿಸ ತೊಡಗಿದರು.

ಹೀಗಿರಲು, ಒಂದುದಿವಸ ದಿವಾಕರ ದೀಕ್ಷಿತರ ಸ್ವಪ್ನದಲ್ಲಿ ಎಂಟೂ ಬ್ರಹ್ಮರಾಕ್ಷಸಗಳು ಬಂದು;-ನಾವು ಈ ಮನೆಯೊಳಗಿನ ರಾಕ್ಷಸರು. ನಮ್ಮ ಉದ್ಧಾರಕ್ಕಾಗಿಯೇ ಚಿದಂಬರ ದೀಕ್ಷಿತರು ಇಲ್ಲಿಗೆ ಬಂದಿರುವರು. ಹೀಗಿದ್ದು, ಅವರು ಇನ್ನೂ ನಮ್ಮನ್ನು ಉದ್ಧರಿಸಲೊಲ್ಲರು. ಅದಕ್ಕಂತಲೇ ನಾವು ಈ ಪ್ರಕಾರ ಚೇಷ್ಟೆಗಳನ್ನು ಮಾಡುತ್ತಿರುವೆವು ಎಂದು ನುಡಿಯಲು, ದಿವಾಕರ ದೀಕ್ಷಿತರು:—ಮೊದಲು ನೀವು ಯಾರು? ನಿಮಗೆ ಬ್ರಹ್ಮರಾಕ್ಷಸಯೋನಿಯು ಪ್ರಾಪ್ತವಾಗಲಿಕ್ಕೆ ಕಾರಣವೇನು? ಎಂದು ಕೇಳಿದರು. ಆದಕ್ಕೆ ಪ್ರತ್ಯುತ್ತರವಾಗಿ ರಾಕ್ಷಸರು:—ದಿವಾಕರ ಪ್ರಭುವೇ, ನಾವು ಮೊದಲು ಶಾಸ್ತ್ರಜ್ಞರಾದ ಬ್ರಾಹ್ಮಣರು; ವಿದ್ಯಾಗರ್ವದಿಂದ ಉನ್ಮತ್ತರಾಗಿ, ಜಯಪತ್ರಗಳನ್ನು ಸಂಪಾದಿಸುತ್ತ, ಕಾಶೀಕ್ಷೇತ್ರಕ್ಕೆ ಹೋಗಿ, ಅಲ್ಲಿಯ ಎಷ್ಟೋ ಜನ ಪಂಡಿತರನ್ನು ಗೆದ್ದು, ಅವರನ್ನು ಪರಿಪರಿಯಿಂದ ಪೀಡಿಸತೊಡಗಿದೆವು. ಆಗ ಅವರೆಲ್ಲರು ಸಿಟ್ಟಿಗೆದ್ದು "ನೀವು ಬ್ರಹ್ಮರಾಕ್ಷಸರಾಗಿರಿ" ಎಂದು ಶಾಪವನ್ನು ಕೊಟ್ಟರು. ಆಗ ನಾವೆಲ್ಲರು ಬ್ರಹ್ಮಶಾಪವು ಸಟಿಯಾಗಲಾರದೆಂದು ಯೋಚಿಸಿ, ಆ ಬ್ರಾಹ್ಮಣರನ್ನು ಹಲವು ಪ್ರಕಾರದಿಂದ ಪ್ರಾರ್ಥಿಸಿ, ನಮಗೆ ಉಶ್ಶಾಪವನ್ನು ಕೊಡಬೇಕೆಂದು ಬೇಡಿಕೊಂಡೆವು. ಆಗ ಅವರು:—ಈ ಮೊದಲು ವಾಜಸನೇಯ ಕಣ್ವ-ಮಾಧ್ಯಂದಿನ ಶಾಖೆಗಳಲ್ಲಿ ಮಾಲಿನ್ಯ-ಶೈಥಿಲ್ಯಗಳುಂಟಾಗಿ, ಸರ್ವಶಃ ಧರ್ಮಬಾಹಿರರಾಗಹತ್ತಿದರು. ಆಗ ಶ್ರೀ ಯಾಜ್ಞವಲ್ಕ್ಯರು ಗೋತೆ ಗ್ರಾಮದಲ್ಲಿ ಘುಲ್ಲಾರ (ಮಾರ್ತಂಡ) ಭಟ್ಟರಾಗಿ ಹುಟ್ಟಿದರು. ಅವರ ಶಾಖೆ ಕಣ್ವ, ಸೂತ್ರವು ಕಾತ್ಯಾಯನ, ಅವರು ತಮ್ಮ ಶಾಖೆಯ ಕಲ್ಯಾಣಕ್ಕಾಗಿ ಎಷ್ಟೋ ಪ್ರಯತ್ನ

ಮಾಡಿದರು. ಸದ್ಯಕ್ಕೆ ಅವರ ಮಕ್ಕಳಾದ ಚಿಂಬರ ದೀಕ್ಷಿತರು ತಂದೆ ಕೈ-ಕೊಂಡ ಕಾರ್ಯವನ್ನು ಮುಂದಕ್ಕೆ ಸಾಗಿಸಿರುವರು. ನೀವು ಇಲ್ಲಿಂದ ಕುಸುಗಲ್ಲಿಗೆ ಹೋಗಬೇಕು. ದೀಕ್ಷಿತರು ಅಲ್ಲಿಗೆ ಬಂದಾಗ ನಿಮ್ಮ ಉದ್ಧಾರವಾಗುವದು, ಎಂದು ಉಶ್ಯಾಪವನ್ನು ಕೊಟ್ಟರು. ಅಂದಿನಿಂದ ನಾವು ಇಲ್ಲಿಗೆ ಬಂದು ವಾಸಮಾಡಿಕೊಂಡಿರುವೆವು. ಇಲ್ಲಿಗೆ ದೀಕ್ಷಿತರು ಬಂದು ನಾಲ್ಕುತಿಂಗಳುಗಳಾದವು. ಇನ್ನೂ ಅವರ ಕೃಪಾದೃಷ್ಟಿಯು ನಮ್ಮ ಕಡೆಗೆ ತಿರುಗಲೊಲ್ಲದು. ಆದ್ದರಿಂದ ಹ್ಯಾಗಾದರೂ ಮಾಡಿ, ನಮ್ಮ ಉದ್ಧಾರವು ತೀವ್ರವಾಗಿ ಆಗುವ ಏರ್ಪಾಡನ್ನು ತಾವೇ ಮಾಡಬೇಕು, ಎಂದು ಹೇಳಿಕೊಂಡರು. ಅದಕ್ಕೆ ದಿವಾಕರ ದೀಕ್ಷಿತರು:—ಯಾಕಾಗಲೊಲ್ಲದು, ನಾಳಿನ ದಿವಸ ಶ್ರೀಗಳ ಹತ್ತರ ಮಾತು ತೆಗೆಯುತ್ತೇನೆ. ನೀವು ಚಿಂತಿಸಬೇಡಿರಿ, ಎನಲು, ರಾಕ್ಷಸಗಳು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದವು.

ಇತ್ತ ಮರುದಿವಸ ಪ್ರಾತಃಕಾಲಕ್ಕೆ ದಿವಾಕರ ದೀಕ್ಷಿತರು ಸ್ವಪ್ನದ ಸಂಗತಿಯನ್ನು ಚಿದಂಬರ ದೀಕ್ಷಿತರಿಗೆ ಹೇಳಿದರು. ಆಗ ಅವರು:-ವೇಳೆಯು ಬಂತೆಂದರೆ ಆಗತಕ್ಕ ಕೆಲಸಗಳು ಆಗೇ ಆಗುತ್ತವೆ. ತೀವ್ರವೇ ರಾಕ್ಷಸಗಳ ಉದ್ಧಾರವಾದೀತು, ಎಂದು ಹೇಳಿದರು. ಅದಕ್ಕೆ ದಿವಾಕರ ದೀಕ್ಷಿತರು:— ಪ್ರಭುಗಳ ಮನಸಿನಂತೆಯೇ ಆಗಲಿ ಎಂದು ಹೇಳಿ ಹೊರಟು ಹೋದರು.

ಹೀಗಿರಲು ಒಂದು ದಿನ ಚಿದಂಬರ ದೀಕ್ಷಿತರು ರಾತ್ರಿಯಲ್ಲಿ ಎಲ್ಲರೂ ಮಲಗಿದ ಬಳಿಕ ಮನೆಯ ಹೊರಭಾಗಕ್ಕೆ ಬಂದರು. ಆಗ ಸಮಯವನ್ನು ನಿರೀಕ್ಷಿಸುತ್ತಿದ್ದ ರಾಕ್ಷಸರು, ಸರಕ್ಕನೆ ದೀಕ್ಷಿತರ ಸಮೀಪಕ್ಕೆ ಬಂದು ನಮಸ್ಕಾರ ಮಾಡಿ, ಕೈಜೋಡಿಸಿಕೊಂಡು ಸುಮ್ಮನೆ ನಿಂತುಕೊಂಡರು; ಆಗ ದೀಕ್ಷಿತರು:—ನಿಮ್ಮ ಪ್ರತಿಯೊಬ್ಬರ ಪೂರ್ವವೃತ್ತಾಂತವನ್ನು ಹೇಳಿರೆನಲು, ಒಬ್ಬೊಬ್ಬರೇ ತಮ್ಮ ವೃತ್ತಾಂತವನ್ನು ಕ್ರಮವಾಗಿ ಹೇಳಿದರು. ಬಳಿಕ ಚಿದಂಬರ ದೀಕ್ಷಿತರು ತಕ್ಕ ಮಾರ್ಗದಿಂದ ಅವರನ್ನು ಉದ್ಧರಿಸಿದರು.



## ೫೯ನೆಯ ಪ್ರಕರಣ.

## ರಾಮನ ಮದುವೆ.

ಪರಮ ಪವಿತ್ರವಾದ ಕೃಷ್ಣಾನದಿಯು ರತ್ನಾಕರನಿಗೆ ಕೂಡುವ ಸ್ಥಳದಲ್ಲಿಯ ಒಂದು ಗ್ರಾಮದಲ್ಲಿ ಸ್ವಾಸ್ತಿಯುಳ್ಳ ಒಬ್ಬ ದೇಶಮುಖನು ಸರ್ವರಿಗೂ ಮಾನ್ಯನಾಗಿ ದೇಶಮುಖಿಯ ಕೆಲಸವನ್ನು ಸಾಗಿಸುತ್ತಿದ್ದನು. ಅವನಿಗೆ ಸರ್ವ ಅನುಕೂಲತೆಗಳಿದ್ದರೂ, ಅನಪತ್ಯವೆಂಬ ಚಿಂತೆಯು ಅವನನ್ನು ದಹಿಸುತ್ತಿತ್ತು. ದೇಶಮುಖನ ಪತ್ನಿಯಾದರೂ ಬಂಜೆಯೆಂಬ ಹೆಸರಿಗೆ ಪಾತ್ರಳಾದ್ದರಿಂದ ಅವಳು ಹಗಲಿರಳೂ ಪುತ್ರಪ್ರಾಪ್ತಿಯ ಮಾರ್ಗವನ್ನು ಶೋಧಿಸುತ್ತಿದ್ದಳು. ಹೀಗಿರಲು, ಒಂದು ದಿವಸ ಆ ದಂಪತಿಗಳು ಒಬ್ಬ ಬ್ರಾಹ್ಮಣನ ಮುಖದಿಂದ ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯನ್ನು ಕೇಳಿ, ಮುರಗೋಡಕ್ಕೆ ಬರಬೇಕೆಂದು ನಿಶ್ಚಯಿಸಿ ಹೊರಟು, ಕೆಲವು ದಿವಸಗಳ ತರುವಾಯ ಮುರಗೋಡವನ್ನು ಸೇರಿದರು; ಹಾಗು ದೀಕ್ಷಿತರ ದರ್ಶನವನ್ನು ತಕೊಂಡು ಅವರಿಗೆ ತಮ್ಮ ಮನೋಗತವನ್ನು ತಿಳಿಸಿದರು. ಇದೇ ಸಮಯಕ್ಕೆ ರಾಮನೆಂಬ ಒಬ್ಬ ಬಡಬ್ರಾಹ್ಮಣನು ದೀಕ್ಷಿತರ ದರ್ಶನಕ್ಕೆ ಬಂದು, ನಮಸ್ಕರಿಸಿ, ಅವರಿಗೆ ತನ್ನ ಹೀನ-ದೀನ ಸ್ಥಿತಿಯನ್ನು ನಿವೇದಿಸಿದನು. ಆಗ ದೀಕ್ಷಿತರು ದಂಪತಿಗಳಿಗೆ:-ನಿಮ್ಮ ಹಣೆಯ ಬರಹದಲ್ಲಿ ಗಂಡುಮಕ್ಕಳಿಲ್ಲ. ಒಂದು ಹೆಣ್ಣು ಸಂತತಿಯು ಮಾತ್ರ ಇರುವದು; ಹಾಗು ಅದು ತೀವ್ರವೇ ನಿಮಗೆ ಪ್ರಾಪ್ತವಾಗುವದು, ಆದರೆ ನಾನು ಹೇಳುವ ಬ್ರಾಹ್ಮಣನಿಗೆ ಅವಳನ್ನು ಕೊಟ್ಟರೆ, ಮಾತ್ರ ನಿಮಗೆ ಸುಖವಾಗುವದು. ಹೀಗೆ ಮಾಡದಿದ್ದರೆ, ನೀವು ದುರ್ಧರ ದುಃಖಕ್ಕೆ ಒಳಗಾಗುವಿರಿ; ನಿಮಗೆ ಗಂಡು ಸಂತತಿಯು ಇಲ್ಲದ್ದರಿಂದ ಈ ರಾಮನನ್ನೇ ಮಗನೆಂದು ಭಾವಿಸಿ, ಇವನನ್ನು ಜೋಕೆ ಮಾಡಬೇಕು. ಇವನು ನಿಮ್ಮ ಕಾರ್ಯಕ್ಕೆ ನೆರವಾಗುವನು, ಎಂದು ಹೇಳಲು, ಆ ದಂಪತಿಗಳು ದೀಕ್ಷಿತರ ಮಾತಿಗೆ ಒಡಂಬಟ್ಟರು. ಬಳಿಕ ದೀಕ್ಷಿತರು ರಾಮನಿಗೆ:-ರಾಮಾ, ಇನ್ನು ಮೇಲೆ ಚಿಂತಿಸಬೇಡ. ನಿನಗೆ ದೇಶಮುಖರ ದೊಡ್ಡ ಆಶ್ರಯವು ದೊರೆಯಿತು; ನೀನು ಇವರಲ್ಲಿಯೇ ಇರಬೇಕು. ಇವರೇ ನಿನ್ನ ತಾಯಿ-ತಂದೆಗಳೆಂದು ತಿಳಿದು, ಪುತ್ರಧರ್ಮದಂತೆ ವರ್ತಿಸು, ಎಂದು ಹೇಳಿ ಆ ದಂಪತಿಗಳಿಗೆ, ರಾಮನನ್ನು (ನಿಮ್ಮ ಮಗನನ್ನು) ಕರಕೊಂಡು, ಸ್ವಗ್ರಾಮಕ್ಕೆ

ಹೋಗಿರೆಂದು ಆಜ್ಞಾಪಿಸಿದರು. ಆಗ ದೇಶಮುಖರು ರಾಮುನನ್ನು ಸಂಗಡ ಕರಕೊಂಡು ಪತ್ನಿಯೊಡನೆ ಹೊರಟು ಹೋದರು ಮುಂದೆ ಕುಸ ದಿವಸಗಳ ಲ್ಲಿಯೇ ದೀಕ್ಷಿತರ ಆಶೀರ್ವಚನದಂತೆ ದೇಶಮುಖರಿಗೆ ಒಂದು ಕನ್ಯಾರತ್ನವು ಜನಿ ಸಿತು. ಆಗ ಅವರಿಗೆ ಪರಮಾನಂದವಾಯಿತು. ಅವರು ಮನಸಿನೊಳಗೆ ದೀಕ್ಷಿ ತರಿಗೆ ಶತಶಃ ಪ್ರಣಾಮ ಮಾಡಿದರು; ಹಾಗು ಇಂದಿನಿಂದ ಪ್ರತಿವರ್ಷ ದೀಕ್ಷಿತರ ದರ್ಶನಕ್ಕೆ ಹೋಗತಕ್ಕದ್ದೆಂದು ಗೊತ್ತುಮಾಡಿ, ಪ್ರತಿವರುಷ ರಾಮುನನ್ನು ಕೂಡಿ ಕೊಂಡು, ಅವರೆಲ್ಲರು ಮುರಗೋಡಕ್ಕೆ ಬರಹತ್ತಿದರು.

ಹುಡುಗಿಗೆ ನಾಲ್ಕು ವರ್ಷಗಳು ತುಂಬಿದವು. ದೇಶಮುಖರು ಎಂದಿ ನಂತೆ, ಮುರಗೋಡಕ್ಕೆ ದರ್ಶನಕ್ಕಾಗಿ ಬಂದಾಗ, ದೀಕ್ಷಿತರು ಅವರಿಗೆ:— ದೇಶಮುಖರೇ, ನಾನು ಆಶೀರ್ವಾದ ಮಾಡುವಾಗ ಆಡಿದ ಮಾತು ಲಕ್ಷ ದಲ್ಲಿದೆಯೋ? ಈ ನಿಮ್ಮ ಮಗಳನ್ನು ನಿಮ್ಮ (ಮಗನೆಂದು ಭಾವಿಸಿದ) ರಾಮುನಿಗೆ ಕೊಟ್ಟು, ಸಮಯ ಬಂದಾಗ ಮದುವೆಯನ್ನು ಮಾಡಬೇಕೆಂದು ಹೇಳಿದರು. ಈ ಮಾತು ದೇಶಮುಖ ದಂಪತಿಗಳ ಮನಸ್ಸಿಗೆ ಬರಲಿಲ್ಲ. ಆದ್ದ ರಿಂದ ಅವರು "ಇವಳನ್ನು ಯಾರಿಗೆ ಕೊಡಲಿ, ಇವಳನ್ನು ಯಾರಿಗೆ ಕೊಡಲಿ" ಎಂದು ಮೇಲೆ ಮೇಲೆ ಕೇಳಹತ್ತಿದರು. ದೀಕ್ಷಿತರು ಕೇಳಿದ ಸರತಿಗೊಮ್ಮೆ ಈ ರಾಮುನಿಗೇ ಕೊಡಿರಿ ಎಂದು ಹೇಳಹತ್ತಿದರು. ಆಗ ದಂಪತಿಗಳು ಮದುವೆಯ ಮಾತನ್ನೇ ಬಿಟ್ಟುಬಿಟ್ಟರು.

ಹೀಗೆ ದಿನಗಳು ಹೋಗುತ್ತಿರಲು, ಒಂದು ಸಾರೆ ದೇಶಮುಖ ಪರಿವಾರ ವೆಲ್ಲ ದರ್ಶನಕ್ಕೆ ಬಂದಾಗ, ದೀಕ್ಷಿತರು ಅವರ ಸಮಕ್ಷಮ ರಾಮುನಿಗೆ:—ಯಾಕೆ ರಾಮೂ, ದೇಶಮುಖರ ಆಶ್ರಯವು ನೆಟ್ಟಗದೆಯೋ? ನಿನಗೆ ಹೆಂಡತಿಯು ಬೇಕೇನು? ಎಂದು ಕೇಳಲು, ರಾಮುನು:—ಪ್ರಭುವೇ, ತಮ್ಮಿಂದ ದೊರೆತ ಆಶ್ರಯವು ಎಂದಿಗಾದರೂ ಅಯೋಗ್ಯವಿದ್ದೀತೇ? ನಾನು ಬಡವನು, ನನಗೆ ತಿಳಿದೂ ತಿಳಿದೂ ಮಗಳನ್ನು ಯಾರು ಕೊಡುವರು? ಎಂದು ಉತ್ತರ ವನ್ನಿತ್ತನು. ಆಗ ದೀಕ್ಷಿತರು—ಈ ದೇಶಮುಖರ ಮಗಳೇ ನಿನ್ನ ಹೆಂಡತಿಯು. ಅವಳ ಕೂಡ ನಿನ್ನ ಮದುವೆಯಾಗಬೇಕೆಂದು ಬ್ರಹ್ಮಸೂತ್ರವಿರುವದು. ಆದ ರಿಂದ ಇವರೇ ನಿನಗೆ ಮಗಳನ್ನು ಕೊಡುವರು. ಕಾರಣ ಚಿಂತೆಯನ್ನು ಬಿಟ್ಟು ಸ್ವಸ್ಥವಾಗಿ ಇರು ಎಂದು ಹೇಳಿ, ಅವರೆಲ್ಲರಿಗೆ ಹೋಗಲಿಕ್ಕೆ ಅಪ್ಪಣೆ ಕೊಟ್ಟರು. ದೀಕ್ಷಿತರ ಈ ಮಾತುಗಳಿಂದ ದೇಶಮುಖರಿಗೆ ಸ್ವಲ್ಪ ವಿಷಾದವಾಯಿತು; ಆದರೂ

ಅವರು ಅದನ್ನು ಹೊರಗೆಡವದೆ, ತಮ್ಮವರೊಂದಿಗೆ ಸ್ವಗ್ರಾಮಕ್ಕೆ ಹೊರಟು ಹೋದರು. ಹಾಗು ಅಂದಿನಿಂದ ದರ್ಶನಕ್ಕೆ ಬರುವದನ್ನು ಕಡಿಮೆ ಮಾಡಿದರು.

ಈ ಮಾತಿಗೆ ಕೆಲವು ವರ್ಷಗಳು ಗತಿಸಿದವು. ಇತ್ತ ಕುಸುಗಲ್ಲಿನಲ್ಲಿ ದೀಕ್ಷಿತರ ಕೀರ್ತಿಯೂ, ಯಾತ್ರಿಕರ ಸಂಖ್ಯೆಯೂ ಬೆಳೆಯ ಹತ್ತಿದವು. ಅತ್ತ ದೇಶಮುಖನು ಇದೇ ಸಂಧಿಗೆ, ದೀಕ್ಷಿತರ ವಚನವನ್ನು ತಿರಸ್ಕರಿಸಿ, ತಮ್ಮ ಮಗಳಿಗೆ ಮತ್ತೊಂದು ವರವನ್ನು ಗೊತ್ತುಮಾಡಿ, ಮದುವೆಯನ್ನು ಬಳ್ಳೇ ಅಟ್ಟಹಾಸದಿಂದ ಆರಂಭಿಸಿದನು. ಗೊತ್ತುಮಾಡಿದ ಮುಹೂರ್ತಕ್ಕೆ ಸರಿಯಾಗಿ ಬೀಗರು-ಬಿಜ್ಜರು ಬಂದರು. ಮೊದಲನೆಯ ದಿವಸ ಸೀಮಾಂತ ಪೂಜನವಾಯಿತು. ಏನು ಚಮತ್ಕಾರವೋ? ಅದೇ ರಾತ್ರಿ ಒಮ್ಮಿಂದೊಮ್ಮೆ ಮದುಮಗನಿಗೆ ಬಹಳ ಜ್ವರ ಬಂದವು. ಆಗ ವರಪಕ್ಷದವರು ಇದು ಅಪಶಕುನವಾಯಿತೆಂದು ತಿಳಿದು, ರಾತ್ರಿಯಲ್ಲಿಯೇ ಮದುಮಗನೊಂದಿಗೆ ಎಲ್ಲರು ಹೊರಟು ಹೋದರು. ಇಂತು ಕೂಡಿ ಬಂದ ಸುಯೋಗವು ನಷ್ಟವಾದುದರಿಂದ ವಧುವಿನ ತಾಯಿ-ತಂದೆಗಳಿಗೆ ದುಃಖವಾಯಿತು. ಬೀಗರು ಹೋದ ರಾತ್ರಿಯಲ್ಲಿಯೇ ಶ್ರೀ ಚಿದಂಬರ ದೀಕ್ಷಿತರು ದೇಶಮುಖರಿಗೆ "ನೀವು ಮಗಳನ್ನು ರಾಮನಿಗೇ ಕೊಡಬೇಕು; ಅಂದರೆ ಮಾತ್ರ ನಿಮಗೆ ಕ್ಷೇಮವಾಗುವದು" ಎಂದು ದೃಷ್ಟಾಂತ ಕೊಟ್ಟರು. ಈ ಆಕಸ್ಮಿಕ ಪ್ರಸಂಗ ನೋಡಿ, ದೇಶಮುಖದಂಪತಿಗಳಿಗೆ ಆಶ್ಚರ್ಯವಾಯಿತು.

ಮನಸು ಒಮ್ಮೆ ಅವಿಚಾರವೆಂಬ ಚಕ್ರದಲ್ಲಿ ಸಿಕ್ಕು, ಭ್ರಮಿಸಹತ್ತಿತೆಂದರೆ ಅದಕ್ಕೆ ಸುವಿಚಾರವೆಂಬ ಸುಮಾರ್ಗವು ಎಂದೂ ಸಿಗುವದಿಲ್ಲ. ದೇಶಮುಖರ ಸ್ಥಿತಿಯಾದರೂ ಹೀಗೆಯೇ ಆಗಿತ್ತು. ಅವರು ಗುರುದೃಷ್ಟಾಂತವನ್ನು ಲಕ್ಷಿಸದೆ, ಮತ್ತೆ ಬೇರೆ ಕಡೆಯಲ್ಲಿ ವರನನ್ನು ಶೋಧಿಸತೊಡಗಿದರು. ಯೋಗಾ-ಯೋಗವು ವಿಚಿತ್ರವಾದದ್ದು, ಕುಸುಗಲ್ಲಿನಲ್ಲಿಯೇ ಒಂದು ಚಲೋ ವರವು ದೊರೆಯಿತು. ಲಗ್ನ ನಿಶ್ಚಯವಾಯಿತು. ದೇಶಮುಖರು ಪರಿವಾರದೊಂದಿಗೆ ಕುಸುಗಲ್ಲಿಗೆ ಬಂದರು. ದೀಕ್ಷಿತರು ಅಲ್ಲಿಯೇ ಇದ್ದದ್ದು ಗೊತ್ತಾಯಿತು; ಆದರೆ ಅವರು ಈ ಮಾತಿನ ಕಡೆಗೆ ದುರ್ಲಕ್ಷ ಮಾಡಿ, ದೀಕ್ಷಿತರ ದರ್ಶನ ತಕ್ಕೊಂಡರೆ, ಪುನಃ ಏನಾದರೂ ಸಂಕಟವು ಒದಗೀತೆಂದು ತಿಳಿದು, ದೀಕ್ಷಿತರ ಕಡೆಗೆ ಹೋಗದೆ, ಹಾಗೆಯೇ ಮದುವೆಯನ್ನು ಸಾಗಿಸಹತ್ತಿದರು. ಮೊದಲನೆಯ ದಿವಸ ಸೀಮಾಂತ ಪೂಜನವಾಯಿತು. ಮರುದಿವಸ ಪ್ರಾತಃಕಾಲಕ್ಕೆ ಪುಣ್ಯಾಹವಾಚನ, ದೇವತಾಸ್ಥಾಪನ, ಮೊದಲಾದ ಕಾರ್ಯಗಳು ಯಥಾಸಾಂಗವಾದವು. ಮುಂದೆ ಗೌರಿ-ಹರಪೂಜೆಯು

ಕಾಲಕ್ಕೆ ಕನ್ಯೆಗೆ ಒಮ್ಮಿಂದೊಮ್ಮೆ ಜ್ವರಬಂದು, ಅವಳು ನಿಶ್ಚೇಷ್ಟಿತಳಾದಳು. ತುಸ ಹೊತ್ತಿನಲ್ಲಿ ಅವಳಿಗೆ ಊರ್ಧ್ವ-ಶ್ವಾಸಹತ್ತಿತು. ಆಗ ಬೀಗರು ಈ ಅನರ್ಥ ವನ್ನು ನೋಡಿ ಮದುವೆಯನ್ನು ಅಷ್ಟಕ್ಕೇ ನಿಲ್ಲಿಸಿ ವರನೊಂದಿಗೆ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಈಗ ಮಾತ್ರ ದೇಶಮುಖರಿಗೆ ಎಚ್ಚರ ವುಂಟಾಯಿತು. ಅವರು ಮನಸಿನಲ್ಲಿ:—ಇದೆಲ್ಲ ದೀಕ್ಷಿತರ ಆಟವು. ನಾವು ಅವರ ಅಪ್ಪಣೆಯಂತೆ ನಡೆಯಲಿಲ್ಲ; ಆದ್ದರಿಂದಲೇ ಎರಡುಸಾರೆ ವಿವಾಹಕ್ಕೆ ವಿಘ್ನವುಂಟಾಯಿತು. ಇಲ್ಲಿ ದೀಕ್ಷಿತರು ಇರುತ್ತಿರಲು, ಅಧಮನಾದ ನಾನು ಅವರನ್ನು ಲಗ್ನಕ್ಕೆ ಕರೆಯುವದಂತೂ ಒತ್ತಟ್ಟಿಗಿರಲಿ, ಅವರ ದರ್ಶನವನ್ನು ಸಹ ತೆಗೆದುಕೊಳ್ಳಲಿಲ್ಲ; ಇನ್ನು ಏನು ಮಾಡಲಿ; ಇದಕ್ಕೆ ಏನು ಉಪಾಯ ಮಾಡ ತಕ್ಕದ್ದೆಂಬದನ್ನು ಯಾರಿಗೆ ಕೇಳಲಿ? ಎಂದು ಯೋಚಿಸಿ, ಹಣೆಯನ್ನು ಬಡ ಕೊಂಡು ಹಂಬಲಿಸಹತ್ತಿದನು. ವಧುವಿನ ತಾಯಿಯ ದುಃಖವಂತೂ ಮಿತಿ ಮೀರಿತು. ದುಃಖದ ವೇಗವು ತುಸ ಕಡಿಮೆಯಾದ ಬಳಿಕ ಅವರು ಊರೊಳ ಗಿನ ಮುಖ್ಯ ಮುಖ್ಯ ಬ್ರಾಹ್ಮಣರನ್ನು ಕರೆಯಿಸಿ, ಅವರಿಗೆ ಆದ್ಯಂತ ಸಂಗತಿ ಯನ್ನು ಅರುಹಿದರು. ಆಗ ಬ್ರಾಹ್ಮಣರು:—ಎಂಥ ಮರುಳರು ನೀವು? ಆ ಸದ್ಗುರುವಿನ ಆಜ್ಞೆಯನ್ನುಲ್ಲಂಘಿಸಿದರೆ. ನಿಮಗೆ ಎಂದಿಗಾದರೂ ಕ್ಷೇಮವಾಗುವ ದುಂಟೇ? ಗುರ್ವಾಜ್ಞೆಯು ಶ್ರೇಷ್ಠತರವಾದದ್ದು! ಅದನ್ನು ಮೀರಿದವರಿಗೆ ಇದೇ ಪ್ರಕಾರ ಅನರ್ಥಗಳು ಒಂದೊದಗುವವು. ಕಾರಣ ಇನ್ನು ಮೇಲೆ ಏನೂ ವಿಚಾರ ಮಾಡದೆ, ಮಗಳನ್ನು ರಾಮನಿಗೆ ಕೊಟ್ಟು ಮದುವೆಯನ್ನು ಮಾಡ ಬೇಕು, ಹಾಗು ದೀಕ್ಷಿತರ ಬಳಿಗೆ ಹೋಗಿ ಕೃತಾಪರಾಧಕ್ಕಾಗಿ ಕ್ಷಮೆಯನ್ನು ಯಾಚಿಸಿ, ಅವರಿಗೆ ಈ ಸಂಗತಿಯನ್ನೆಲ್ಲ ಹೇಳಬೇಕು, ಎಂದು ಹೇಳಿದರು. ಬಳಿಕ ದೇಶಮುಖನು ಬ್ರಾಹ್ಮಣರಿಗೆ ಸನ್ಮಾನಮಾಡಿ, ಅವರಿಗೆ ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟು, ತಾನು ದೀಕ್ಷಿತರಿದ್ದೆಡೆಗೆ ಹೋಗಿ, ಅವರನ್ನು ಅಭಿ ವಂದಿಸಿ:—ಕ್ಷಮಿಸಿರಿ, ಕೃತಾಪರಾಧವನ್ನು ಕ್ಷಮಿಸಿರಿ! ನನ್ನಿಂದ ಅನುಚಿತ ಕಾರ್ಯವಾಯಿತು. ಜ್ಞಾನಾಭಾವದ ಮೂಲಕ ತಮ್ಮ ವಚನವನ್ನು ತಿರಸ್ಕ ರಿಸಿ, ಸಂಕಟಕ್ಕೊಳಗಾದೆನು, ಎಂದು ಬೇಡಿಕೊಂಡು, ವರ್ತಿಸಿದ ಸಂಗತಿ ಯನ್ನೆಲ್ಲ ಸಾದ್ಯಂತವಾಗಿ ಹೇಳಿದನು. ಆಗ ದೀಕ್ಷಿತರು:—ಇನ್ನಾದರೂ ನಿನ್ನ ಮಗಳನ್ನೂ, ರಾಮನನ್ನೂ ಇಲ್ಲಿಗೆ ಕರಕೊಂಡು ಬಂದು, ಅವಳನ್ನು ರಾಮ ನಿಗೇ ಕೊಡುತ್ತೇನೆಂದು ನೀರು ಬಿಡು, ಅಂದರೆ ಎಲ್ಲವೂ ಕ್ಷೇಮವಾಗುವದು.

ಎಂದು ಹೇಳಿದರು. ಆಗ ದೇಶಮುಖನು ತಟ್ಟನೆ ಮನೆಗೆ ಹೋಗಿ, ಇಬ್ಬರನ್ನೂ ಅಲ್ಲಿಗೆ ಕರತಂದು, ದೀಕ್ಷಿತರ ವಚನದಂತೆ ನೀರು ಬಿಟ್ಟನು; ಹಾಗೂ ರಾಮನಿಗೆ:—ಇವಳು ನಿನ್ನ ಹೆಂಡತಿಯಾಗುವಳು. ಇವಳನ್ನು ನೆಟ್ಟಗೆ ಮಾಡಿಕೊಂಡು ಬಾ, ಆಮೇಲೆ ಸಂಭ್ರಮದಿಂದ ಮದುವೆಯನ್ನು ಮಾಡುವೆನು, ತಕ್ಕೊಂಡು ಹೋಗು, ಎಂದು ಹೇಳಲು, ರಾಮನು ಅಳಹತ್ತಿದನು. ಆಗ ದೀಕ್ಷಿತರು ಅವನಿಗೆ ಅವಳನ್ನು ದುರ್ಗಾದೇವಾಲಯಕ್ಕೆ ಒಯ್ಯಲು ಸನ್ನೆಮಾಡಿದರು. ರಾಮನು ಆ ಸ್ನನೆಯನ್ನರಿತು, ದೇಶಮುಖನಿಗೆ.—ಯಾಕಾಗಲೊಲ್ಲದು ನಾನು ನನ್ನ ಭಾವೀ-ಹೆಂಡತಿಯನ್ನು ಕರಕೊಂಡು ಹೋಗುವೆನು, ನೆಟ್ಟಗಾಗಿ ಬಂದಬಳಿಕ ಕೊಟ್ಟ ವಚನವನ್ನು ಮಾತ್ರ ಮರೆಯಬೇಡಿರಿ ಎಂಬದಾಗಿ ಹೇಳಿ, ಅವಳನ್ನು ದುರ್ಗಾದೇವಾಲಯಕ್ಕೆ ಒಯ್ದು, ದುರ್ಗಾಂಬೆಯ ಮುಂದೆ ಮಲಗಿಸಿ ಬಾಗಿಲವನ್ನಿಕ್ಕಿ, ದುರ್ಗೆಯನ್ನು ಸ್ತುತಿಸತೊಡಗಿದನು. ಅಷ್ಟರಲ್ಲಿ ಅವಳು ಮೃತಳಾದಳು. ಅದನ್ನರಿತು ರಾಮನು ದೊಡ್ಡ ದನಿಯಿಂದ ಅಳಹತ್ತಿ, ಶ್ರೀ ಚಿದಂಬರ ದೀಕ್ಷಿತರನ್ನು ಸ್ತುತಿಸತೊಡಗಿದನು:—

"ಎಲೈ ದಯಾಘನನೇ! ಮೃತ್ಯುಂಜಯನೇ! ಒಡವನ ಮೊರೆಯನ್ನು ಕೇಳು! ನೀನು ಹಿಂದಕ್ಕೆ ಕೊಟ್ಟ ಆಶೀರ್ವಾದವೂ, ಬ್ರಹ್ಮಸೂತ್ರವೂ ಈ ಪ್ರಕಾರ ಸಟಿಯಾಗಬೇಕೇ? ಇದು ಭಕ್ತರಕ್ಷಕನಿಗೆ ಕುಂದಲ್ಲವೆ? ನೀನು ನನ್ನ ವಿಷಯದಲ್ಲಿ ಇಷ್ಟು ನಿಷ್ಠುರನಾಗುವ ಕಾರಣವೇನು? ನೀನು ಹಿಂದಕ್ಕೆ ಗಜರಾಜನನ್ನು ಸಲಹಲಿಲ್ಲವೆ? ಧ್ರುವ-ಬಾಲಕನಿಗೆ ಅಚಲಪದವಿಯನ್ನು ಕೊಡಲಿಲ್ಲವೆ? ಸಭೆಯಲ್ಲಿ ದ್ರೌಪದಿಯ ಮಾನವನ್ನು ಸರಸಾಗಿ ಕಾಯಲಿಲ್ಲವೆ? ಹೀಗೆ ಎಷ್ಟೋ ಜನರನ್ನು ಕಾಪಾಡಿದ್ದು ಈಗ ಮೌನವನ್ನು ತಳೆದಿರುವ ಕಾರಣವೇನು?" ಹೀಗೆ ಸ್ತುತಿಸುತ್ತಿರಲು, ರಾಮನಿಗೆ ಮೂರ್ಛೆ ಬಂತು ಅವನು ಕೂತಲ್ಲಿಯೇ ನೆಲಕ್ಕುರುಳಿದನು. ಆಗ ರಾಮನಲ್ಲಿ ಪೂರ್ಣ ಅನುರಾಗವುಳ್ಳ ದೀಕ್ಷಿತರು ದುರ್ಗಾದೇವಾಲಯಕ್ಕೆ ರಹಸ್ಯವಾಗಿ ಹೋಗಿ, ಸ್ಪರ್ಶಮಾತ್ರದಿಂದ ಕನ್ಯೆಯನ್ನು ಸಜೀವಗೊಳಿಸಿ ತಾವು ಅದೃಶ್ಯರಾದರು. ಹುಡುಗೆಯು ಎದ್ದು ಕುಳಿತು ಗಂಡನ ಗುರ್ತ ಹಿಡಿದು ಅವನ ಸ್ಥಿತಿಯನ್ನು ನೋಡಿ ಅಳಹತ್ತಿದಳು. ಇಷ್ಟರಲ್ಲಿ ದೀಕ್ಷಿತರು ರಾಮನಿಗೆ "ನಿನ್ನ ಹೆಂಡತಿಯು ಜೀವಿಸಿರುವಳು, ಏಳು!" ಎಂದು ದೃಷ್ಟಾಂತವನ್ನು ಕೊಟ್ಟರು. ಆಗ ರಾಮನು ಎಚ್ಚತ್ತು, ಸಜೀವಳಾದ ಹೆಂಡತಿಯನ್ನು ನೋಡಿ ಹರ್ಷಿತನಾದನು. ಅವನಲ್ಲಿ ಮೊದಲೇ ದೀಕ್ಷಿತರ ಸಂಬಂಧವಾಗಿ ನೆಲೆಗೊಂಡ

ವಿಶ್ವಾಸವು ಈಗ ಮಿತಿಮೀರಿ ಬೆಳೆಯಿತು. ಅವನು ಭಾವೀಹೆಂಡತಿಯನ್ನು ಹತ್ತರ ಕರೆದು, ಅವಳೊಡನೆ ಸರಸ-ಸಲ್ಲಾಪಗಳನ್ನು ಆಡಹತ್ತಿದನು. ಕುಸ ಕಾಲವು ಇದರಂತೆಯೇ ಗತಿಸಿದ ಬಳಿಕ ರಾಮನು ಆಕೆಯೊಡನೆ ಮೊದಲು ದೀಕ್ಷಿತರ ದರ್ಶನವನ್ನು ಅನನ್ಯಭಾವದಿಂದ ತಕೊಂಡು, ಬಳಿಕ, ಮಾವನ ಮನೆಯನ್ನು ಸೇರಿದನು. ಮೊದಲಿಗಿಂತ ವಿಶೇಷವಾಗಿ ತೇಜಃಪುಂಜಳಾದ ಮಗಳನ್ನು ನೋಡಿ, ದೇಶಮುಖ-ದಂಪತಿಗಳಿಗೆ ಆನಂದವಾಯಿತು. ಕೂಡಲೆ ದೇಶಮುಖನು ಮಗಳ ಸೀರೆಯ ಸೆರಗಿಗೂ ರಾಮನ ಧೋತರಕ್ಕೂ ಗಂಟುಹಾಕಿ, ಪರಿವಾರ ದೊಡನೆ ದೀಕ್ಷಿತರ ಬಳಿಗೆ ಬಂದನು. ಎಲ್ಲರೂ ದೀಕ್ಷಿತರಿಗೆ ನಮಸ್ಕಾರಮಾಡಿ ನಿಂತುಕೊಂಡರು. ಆಗ ದೀಕ್ಷಿತರು:—ಯಾಕೆ ದೇಶಮುಖರೇ? ಇನ್ನು ಮೇಲೆ ಮದುವೆಯನ್ನು ಮಾಡಲಿಕ್ಕೆ ಏನಾದರೂ ಪ್ರತಿಬಂಧವಿದೆಯೋ? ಎಂದು ಕೇಳಲು, ದೇಶಮುಖನು:—ಸ್ವಾಮಿನ್, ಅಜ್ಞಾನಿಯನ್ನು ಬೆದರಿಸ ಬೇಡಿರಿ, ಎಲ್ಲ ಮಾತುಗಳೂ ನಿದರ್ಶನಕ್ಕೆ ಬಂದವು. ನಾನು ಈಗ ಮದುವೆಯ ನಿಮಂತ್ರಣವನ್ನೇ ಕೊಡಲಿಕ್ಕೆ ಬಂದಿರುವೆನು. ಮದುವೆಯನ್ನು ಜನ್ಮಭೂಮಿಯೊಳಗೆ ಮಾಡಬೇಕೆಂಬ ಇಚ್ಛೆಯಿದೆ. ಕಾರಣ ಭಕ್ತನ ಮೇಲೆ ಅಂತಃಕರಣವಿಟ್ಟು, ಅಲ್ಲಿಯವರೆಗೆ ಒಂದು, ಕಾರ್ಯಸಾಂಗಮಾಡಬೇಕು; ಇದರಿಂದ ದೀನನಾದ ಈ ಭಕ್ತನ ಭೂಮಿಯೂ ಪವಿತ್ರವಾಗುವದು, ಎಂದು ಬೇಡಿಕೊಂಡನು. ಅದಕ್ಕೆ ದೀಕ್ಷಿತರು:—ನೀವು ಮುಂದಕ್ಕೆ ಸಾಗಿರಿ, ನೀವೆಲ್ಲರು ನಮ್ಮವರೇ ಇರುವಿರಿ, ಆದ್ದರಿಂದ ಆಗ್ರಹದ ಅವಶ್ಯಕತೆಯಿಲ್ಲ. ನಾವು ಹಿಂದಿನಿಂದ ಅನುಕೂಲಿಸಿದರೆ ಬರುವೆವಂತೆ! ನಮ್ಮ ಸಲುವಾಗಿ ಮಾತ್ರ ಕಾರ್ಯಕ್ಕೆ ಪ್ರತಿಬಂಧ ಮಾಡ ಬೇಡಿರಿ. ವೈಭವದಿಂದ ಮದುವೆಯನ್ನು ಸಾಗಿಸಿರಿ, ಎಂದು ಹೇಳಲು ದೇಶ ಮುಖನು ನಿವಾಹವಿಲ್ಲದೆ, ಗುರ್ವಾಜ್ಞೆಯನ್ನು ಹೊಂದಿ, ಪರಿವಾರದೊಡನೆ ಸ್ವಗ್ರಾಮಕ್ಕೆ ಸಾಗಿದನು. ಅಲ್ಲಿ ಹೋದ ಬಳಿಕ ದೇಶಮುಖನು ಲಗ್ನವನ್ನು ಬಹಳೇ ಆಟ್ಟಹಾಸದಿಂದ ಮಾಡಿದನು. ದೀಕ್ಷಿತರ ಆಶೀರ್ವಾದದಂತೆ ರಾಮನ ಬಯಕೆಯು ಪೂರ್ಣವಾಯಿತು. ಇಷ್ಟೇ ಅಲ್ಲ, ಅಂದಿನಿಂದ ದೇಶಮುಖನ ಪರಿವಾರವೆಲ್ಲ ದಿನೇದಿನೇ ಏಳ್ಗೆಯನ್ನು ಹೊಂದುತ್ತ ಹೋಯಿತು.



## ೭ನೆಯ ಪ್ರಕರಣ.

## ಖಲನಿಗ್ರಹವೂ, ಸದನುಗ್ರಹವೂ.

ಶಕೆ ೧೬೨೧ ರ ಸುಮಾರಕ್ಕೆ ಶೃಂಗೇರಿ, ಹಂಪಿ, ಕರವೀರ ಮತ್ತು ಕೂಡಲಗಿ ಈ ಮಠಗಳ ಸ್ವಾಮಿಗಳು ತಮ್ಮ ಸಂಗಡ ವಜ್ರ-ವೈಡೂರ್ಯ-ಮುತ್ತು-ಮಾಣಿಕ-ಬೆಳ್ಳಿ-ಬಂಗಾರ ಹೀಗೆ ಬಹು ಬೆಲೆ ಬಾಳುವ ದೇವ ಆಭರಣಗಳನ್ನೂ, ಉಪಕರಣಗಳನ್ನೂ, ಬೇರೆ ಎಷ್ಟೋ ಸಂಪತ್ತನ್ನೂ ತಕ್ಕೊಂಡು ಕರ್ನಾಟಕ ಪ್ರಾಂತದಲ್ಲಿ ಸಂಚಾರಮಾಡುತ್ತಿದ್ದರು. ಅವರು ಹೀಗೆ ಸಂಚಾರ ಮಾಡುತ್ತ ಪುಷ್ಪಲತಿಕಾ (ಹೂ-ಬಳ್ಳಿ) ಹುಬ್ಬಳ್ಳಿಗೆ ಬಂದರು. ಇವರು ತಮ್ಮ ವೈಭವದೊಡನೆ ಸಂಚಾರಮಾಡುತ್ತಿರುವ ಸುದ್ದಿಯು ಕೊಲ್ಲಾಪುರ ಸರಕಾರದ ಸೇನಾಪತಿಯಾದ ರತ್ನಾಕರಪಂತನಿಗೆ ತಿಳಿಯಿತು. ಅವನು ಕ್ಷುದ್ರಮನಸಿನ ಮನುಷ್ಯನಾದ್ದರಿಂದ ಈ ಮಠಾಧಿಪತಿಗಳನ್ನು ಸದೆಬಡೆದು, ಅವರ ಸಂಪತ್ತನ್ನೆಲ್ಲ ಸುಲಿದುಕೊಳ್ಳಬೇಕೆಂದು ಯೋಚಿಸಿ, ತನ್ನ ಸೈನ್ಯದೊಂದಿಗೆ ಹೊರಟು, ಹುಬ್ಬಳ್ಳಿಯ ಗಡಿಯಲ್ಲಿ ಒಂದು ಇಳುಕೊಂಡನು. ರತ್ನಾಕರಪಂತನ ಉದ್ದೇಶವೂ, ಆತನು ಬಂದ ವರ್ತಮಾನವೂ ಸ್ವಾಮಿಗಳಿಗೆ ತಿಳಿಯಲು, ಅವರು ಬಹಳವಾಗಿ ಹೆದರಿ ಈ ಸಂಕಟದೊಳಗಿಂದ ಪಾರಾಗುವದಕ್ಕಾಗಿ, ಮಹಾವಿಷ್ಣುವಿನ ಧ್ಯಾನವನ್ನು ಮಾಡುತ್ತ, ಉಪೋಷಣಗಳನ್ನು ಮಾಡಲಾರಂಭಿಸಿದರು. ಆಗ ಅವರ ಶಿಷ್ಯರಲ್ಲಿಯ ಕೆಲವು ಜನ ಚಿದಂಬರಭಕ್ತರು, ಅವರನ್ನು ಕುರಿತು:—ಮಹಾಸ್ವಾಮಿಗಳೇ, * ಮಹಾವಿಷ್ಣುವೇ, 'ಚಿದಂಬರ' ಎಂಬ ಹೆಸರಿನಿಂದ ಅವತರಿಸಿ, ಅಲೌಕಿಕ ಚಮತ್ಕಾರಗಳನ್ನು ತೋರುತ್ತ, ಭಕ್ತರ ಬಯಕೆಗಳನ್ನು ಪೂರ್ಣಮಾಡುತ್ತಿರುವನು. ಆದುದರಿಂದ ನೀವೆಲ್ಲರು ಒಮ್ಮನಸಿನಿಂದ ಶ್ರೀಚಿದಂಬರ ದೀಕ್ಷಿತರನ್ನು ಕುರಿತು:-ನಮ್ಮನ್ನು ಈ ಸಂಕಟದೊಳಗಿಂದ ಪಾರಮಾಡಬೇಕೆಂದು

* वसुदेवअवतार मल्हारदीक्षित ॥ नामहोविख्यात साजेज्या॥सि॥१॥ तया॥चि ते कांतामहापतिव्रता ॥ लक्ष्मिविख्याता नामसाजे ॥२॥ अनुसूया ऐसी पतिव्रतापूर्ण ॥ अंश तोहीजाणदेवकीचा ॥३॥

साधुवर्य राजाराममहाराजकृत बालक्रीडा अभंग, ३६.

ಬೇಡಿಕೊಂಡರೆ, ಅವರು ಖಂಡಿತವಾಗಿ ತಮ್ಮನ್ನು ಈ ಸಂಕಟದೊಳಗಿಂದ ಪಾರಮಾಡುವರು; ಎಂದು ಹೇಳಿದರು. ಆಗ ಪೇಚಾಟದಲ್ಲಿ ಸಿಕ್ಕ ಮಠಾಧಿಪತಿಗಳು ಮುಂದುಗಾಣದೆ, ಶಿಷ್ಯರ ಹೇಳಿಕೆಯಂತೆ, ಅತ್ಯಾದರದಿಂದ ಶ್ರೀ ಚಿದಂಬರ ನಾಮಸ್ಮರಣೆಯನ್ನು ಮಾಡಲಾರಂಭಿಸಿದರು.

ಆಗ ಭಕ್ತಾಧೀನರೂ, ಅಂತರಜ್ಞರೂ ಆದ ಚಿದಂಬರ ದೀಕ್ಷಿತರು ಕೂಡಲೆ ಮನೆಯವರನ್ನು ಕುಸುಗಲ್ಲಿನಲ್ಲಿಯೇ ಬಿಟ್ಟು, ತಾವೊಬ್ಬರೇ ಮೂರುಸಂಜೆಯ ಮುಂದೆ ಹುಬ್ಬಳ್ಳಿಗೆ ಬಂದರು. ದೀಕ್ಷಿತರು ಹೀಗೆ ಒಮ್ಮೆಲೆ ಏಕಾಕಿಯಾಗಿ ಪ್ರಯಾಣ ಬೆಳಸಿದ್ದನ್ನು ನೋಡಿ, ಕುಸುಗಲ್ಲಿನ ಭಕ್ತರಿಗೂ, ದೀಕ್ಷಿತರ ಮನೆಯವರಿಗೂ ಆಶ್ಚರ್ಯವಾಯಿತು! ದೀಕ್ಷಿತರು ಹುಬ್ಬಳ್ಳಿಗೆ ಬಂದ ಸುದ್ದಿಯು ಮಠಾಧಿಪತಿಗಳಿಗೆ ತಿಳಿಯಲು, ಅವರು ದಿಗಿಲುಬಿದ್ದು, ದೀಕ್ಷಿತರನ್ನು ಎದುಗೊಂಡು ಬಹು ವೈಭವದಿಂದ ಕರಕೊಂಡು ಬಂದು, ಒಂದು ದಿವ್ಯಾಸನದಲ್ಲಿ ಕೂಡ್ರಿಸಿದರು. ಆಗ ದೀಕ್ಷಿತರು:-'ಈ ದಾಸನನ್ನು ಏಕೆ ಒರಮಾಡಿಕೊಂಡಿರಿ?' ಎಂದು ಪ್ರಶ್ನ ಮಾಡಲು, ಮಠಾಧಿಪತಿಗಳು ಯಾವತ್ತು ಸಂಗತಿಯನ್ನು ಅರುಹಿದರು. ಅದನ್ನು ಕೇಳಿ, ದೀಕ್ಷಿತರು:-ನೀವು ಸ್ವಸ್ಥಚಿತ್ತರಾಗಿ ಇದ್ದುಕೊಳ್ಳಿರಿ ನಿಮಗೆ ಯಾರಿಂದಲೂ ಉಪದ್ರವವಾಗಲಾರದು. ಸಂಕಟಪರಿಹಾರ ಮಾಡಲು, ಸದಾಶಿವನು ಸಮರ್ಥನಿರುವನು! ಎಂದು ಆಶ್ವಾಸನವನ್ನಿತ್ತರು. ಅಷ್ಟರಲ್ಲಿ ರತ್ನಾಕರಪಂತನ ಶಸ್ತ್ರಪಾಣಿಗಳಾದ ಸೈನಿಕರು ಅಲ್ಲಿಗೆ ಬಂದು, ಮಠಾಧಿಪತಿಗಳು ವಾಸಮಾಡಿಕೊಂಡ ಸ್ಥಳವನ್ನು ಮುತ್ತಿದರು. ಅವರನ್ನು ನೋಡಿ, ಅಲ್ಲಿಯ ಜನರ ಕೈ-ಕಾಲುಗಳೇ ಹೋದವು ಈ ಸ್ಥಿತಿಯನ್ನು ನೋಡಿ, ದೀಕ್ಷಿತರು ಚಟ್ಟನೆದ್ದು ಹೆಬ್ಬಾಗಿಲಿಗೆ ಬಂದು ನಿಂತುಕೊಂಡರು ದೀಕ್ಷಿತರು ಒಬ್ಬರು! ಸೈನಿಕರು ಸಾವಿರಾರು ಜನರು! ಆದರೆ ದೀಕ್ಷಿತರನ್ನು ನೋಡಿದ ಕೂಡಲೆ, ರತ್ನಾಕರಪಂತನ ಸೈನಿಕರ ಮೈಯಲ್ಲಿ ನಡುಗು ಹುಟ್ಟಿತು. ಅಗಾಧ ಲೀಲಾಧಾರಿಯಾದ ಪ್ರಭುವು ಏನು ಚಮತ್ಕಾರ ಮಾಡಿದನೋ ಯಾರಿಗೆ ಗೊತ್ತು? ಒಬ್ಬ ಸೈನಿಕನಾದರೂ ಅಲ್ಲಿ ನಿಲ್ಲದೆ, ತಮ್ಮ ಒಡೆಯನ ಹತ್ತರ ಬಂದು:-ಮಹಾರಾಜ, ತಲೆಬಾಗಿಲಲ್ಲಿ ಮುರುಗೋಡದ ಚಿದಂಬರ ದೀಕ್ಷಿತರು ನಿಂತಿರುವರು. ಅವರನ್ನು ನೋಡಿದ ಕೂಡಲೆ ನಮ್ಮ ಮೈಯೊಳಗೆ ನಡುಗು ಹುಟ್ಟಿತು. ನಮ್ಮ ಕೈಯಲ್ಲಿಯ ಶಸ್ತ್ರಗಳು ತಮ್ಮಷ್ಟಕ್ಕೇ ತಾವೇ ಕಳಚಿ ಬೀಳಹತ್ತಿದವು; ಆದುದರಿಂದ ನಾವು ನಿರುಪಾಯರಾದೆವು, ಎಂದು ಹೇಳಲು, ರತ್ನಾಕರನು ಖಿನ್ನಮನಸ್ಕನಾದನು. ಸ್ವಾಮಿ

ಗಳ ಸಂಪತ್ತನ್ನು ಅಪಹರಿಸಿ, ಕುಬೇರನಾಗಬೇಕೆಂಬ ಅವನ ಇಚ್ಛೆಯು ನಾಶ ವಾಯಿತು. ನಿದ್ದೆಯು ಬರಲೊಲ್ಲದು; ಕೆಟ್ಟ-ಕೆಟ್ಟ ಕನಸುಗಳು ಬೀಳಹತ್ತಿದವು! ದೀಕ್ಷಿತರ ಪ್ರಭಾವವು ಆತನಿಗೆ ಗೊತ್ತಿದ್ದದರಿಂದ, ಅವನು ಆ ಕಾಲಕ್ಕೆ ಹೆಚ್ಚಿನ ಗೋಜಿಗೆ ಹೋಗಲಿಲ್ಲ. ಅವನು ದೀಕ್ಷಿತರ ದರ್ಶನವನ್ನು ತಕ್ಕೊಂಡು, ಅವ ರನ್ನೇ ಸಮಾಧಾನಗೊಳಿಸಬೇಕೆಂದು ಯೋಚಿಸಿ, ಮರುದಿವಸ ಬೆಳಗಾಗುತ್ತಲೇ ಹಣ್ಣು-ಹಂಪಲಗಳನ್ನು ತಕ್ಕೊಂಡು, ದೀಕ್ಷಿತರಿದ್ದೆಡೆಗೆ ಬರಬೇಕೆಂದು ಹೊರಟನು.

ಇತ್ತ ಮಠಾಧಿಪತಿಗಳಿಗೆ ಬೆಳಗಾಗುವವರೆಗೆ ಜೀವದೊಳಗೆ ಜೀವವಿದ್ದಿಲ್ಲ. ಏನಾಗುತ್ತದೋ ಏನೋ ಎಂದು ಚಿಂತಿಸುವಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ಆಗ ಅವರಿಗೆ ಧೈರ್ಯಬಂತು. ಸೈನಿಕರು ಓಡಿಹೋದ ಸುದ್ದಿಯನ್ನು ಕೇಳಿ, ಅವರು ಆಶ್ಚರ್ಯಪಟ್ಟು, ದೀಕ್ಷಿತರನ್ನು ಹೊಗಳುತ್ತ, ಅವರನ್ನು ಉಚ್ಚಾಸನ ದಲ್ಲಿ ಕುಳ್ಳಿರಿಸಿ, ಷೋಡಶೋಪಚಾರಗಳಿಂದ ಪೂಜಿಸತೊಡಗಿದರು. ಅಷ್ಟರಲ್ಲಿ ಮ್ಲಾನ-ಮುಖವುಳ್ಳವನಾದ ರತ್ನಾಕರಪಂತನು ಅಲ್ಲಿಗೆ ಬಂದನು. ದೀಕ್ಷಿತರು ಆತನನ್ನು ನೋಡಿ ಗದ್ದರಿಸಿ:—ಏನೋ ರತ್ನಾಕರಾ, ನಿರಪರಾಧಿಗಳಾದ ಸಂನ್ಯಾ ಸಿಗಳ ಸಂಪತ್ತಿನ ಸುಲಿಗೆಯನ್ನು ಬಿಟ್ಟು, ನಮ್ಮ ದರ್ಶನಕ್ಕೆ ಏಕೆ ಬಂದಿ? ಹೋಗು, ನಿನ್ನ ಸುಲಿಗೆಯ ಕಾರ್ಯವನ್ನು ಸಾಗಿಸು, ಎಂದು ಮರ್ಮಭೇದಕ ಮಾತುಗಳನ್ನಾಡಿದರು. ಆಗ ರತ್ನಾಕರನಿಗೆ ಎರೆದು ಹೊಚ್ಚಿದಂತಾಯಿತು. ಅವನು ಅಧೋವದನವುಳ್ಳವನಾಗಿ:—ಆದ ಅಪರಾಧವನ್ನು ಕ್ಷಮಿಸಿ, ದಾಸನನ್ನು ಉದ್ಧರಿಸಬೇಕೆಂದು ಪ್ರಣಾಮಪೂರ್ವಕವಾಗಿ ಬೇಡಿಕೊಂಡನು. ಆಗ ಅಂತಃ ಕರಣವುಳ್ಳ ದೀಕ್ಷಿತರು ರತ್ನಾಕರನಿಗೆ:—"ರತ್ನಾಕರಾ, ನೀನೂ ನಿಮ್ಮ ಅರ ಸನೂ ಗೋ-ಬ್ರಾಹ್ಮಣ ಪ್ರತಿಪಾಲಕರು! ಈ ಮಠಾಧಿಪತಿಗಳ ಬಳಿಯಲ್ಲಿರುವ ಸಂಪತ್ತು ನಿಮ್ಮದೇ ಅಲ್ಲವೇ? ನೀವೇ ಕೊಟ್ಟದ್ದನ್ನು ತಿರುಗಿ ನೀವೇ ಅಪಹರಿ ಸಲು, ಮನಸು ಮಾಡುವದು ಸರಿಯೇ? ಕರ್ನಾಟಕದಲ್ಲಿ ಈಗೀಗ ಅಲ್ಲಲ್ಲಿ ಬಂಡುಗಾರರ ಸಂಖ್ಯೆಯು ಬಹಳವಾಗಿ ಬೆಳೆದಿರುವದು. ನೀವು ಅನಾಯಾಸ ವಾಗಿ ಇತ್ತ ಕಡೆಗೆ ಬಂದದ್ದು, ಒಂದು ರೀತಿಯಿಂದ ನೆಟ್ಟಗೇ ಆಗಿರುವದು, ಈಗ ಈ ಯತಿಶ್ರೇಷ್ಠರು ಹೆಚ್ಚಿಗೆ ಸಂಚಾರವನ್ನು ಮಾಡದೆ, ತಮ್ಮ-ತಮ್ಮ ಸ್ಥಳಗಳಿಗೆ ಹೋಗಬೇಕೆಂದಿರುತ್ತಾರೆ; ಆದುದರಿಂದ ನೀನು ಸೈನ್ಯದೊಡನೆ ಇವರ ಸಂಗಡ ಹೋಗಿ ಅವರವರ ಸ್ಥಳಗಳಿಗೆ ಮುಟ್ಟಿಸೆಂದು ಹೇಳಿದರು. ಆಗ

ರತ್ನಾಕರನು ದೀಕ್ಷಿತರ ಹೇಳಿಕೆಯಂತೆ ಮಠಾಧಿಪತಿಗಳನ್ನು ಅವರವರ ಸ್ಥಳಗಳಿಗೆ ಮುಟ್ಟಿಸಿದನು. ಹುಟ್ಟುಗುಣವು ಹುಗಿದರೂ ಹೋಗುವದಿಲ್ಲ, ಎಂಬ ಮಾತು ಸುಳ್ಳಲ್ಲ. ರತ್ನಾಕರನು ತನ್ನ ಸ್ವಭಾವಕ್ಕನುಗುಣವಾಗಿ, ತನ್ನ ಶ್ರಮದ ಸಲು ವಾಗಿ, ಎಂದು ಪ್ರತಿಯೊಬ್ಬ ಮಠಾಧಿಕಾರಿಯಿಂದ ಕೆಲ-ಕೆಲವು ಅಮೂಲ್ಯವಾದ ಪದಾರ್ಥಗಳನ್ನು ಉಚಿತವೆಂದು ಇಸಕೊಂಡು, ದೀಕ್ಷಿತರು ಇಲ್ಲದ ಪ್ರಾಂತದಲ್ಲಿ ತನ್ನ ಕೊಲೆ-ಸುಲಿಗೆಯ ಕೆಲಸವನ್ನು ಮತ್ತೆ ಪ್ರಾರಂಭಿಸಿದನು.

ಹೀಗೆ ಶ್ರೀ ಚಿದಂಬರ ದೀಕ್ಷಿತರು ಮಠಾಧಿಕಾರಿಗಳನ್ನು ಹುಬ್ಬಳ್ಳಿಯಿಂದ ಕಳಿಸಿದ ಬಳಿಕ ಕೆಲವು ದಿವಸ ಭಕ್ತರಿಗೆ ಬಗೆಬಗೆಯ ಚಮತ್ಕಾರಗಳನ್ನು ತೋರಿ ಸುತ್ತ ಅಲ್ಲಿಯೇ ನಿಂತುಕೊಂಡರು. ಇಷ್ಟರಲ್ಲಿ ಕೊಲ್ಲಾಪುರದ ಶಿವಾಜಿರಾಜನು ಅಸಂಖ್ಯ ಸೈನ್ಯದೊಂದಿಗೆ ದೀಕ್ಷಿತರ ದರ್ಶನಕ್ಕೆ ಬಂದನು. ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು ಮನಸ್ಸಿನಲ್ಲಿ—ಈಗ ಈತನಿಗೆ ಭೆಟ್ಟಿಯಾದರೆ ಇವನು ಇಲ್ಲಿಯೇ ತಳವೂರುವನು. ಹೀಗಾಯಿತೆಂದರೆ ಆತನ ಬಳಿಯಲ್ಲಿರುವ ಸೈನಿಕರಿಂದ ಜನರಿಗೆ ಉಪದ್ರವವಾಗುವದು. ಕಾರಣ ಆತನಿಗೆ ಇಲ್ಲಿ ದರ್ಶನ ವನ್ನೇ ಕೊಡಬಾರದೆಂದು ಯೋಚಿಸಿ, ತಾವೊಬ್ಬರೇ ಕಂಡಕಂಡಲ್ಲಿ ಅಂದರೆ ಸತ್ತೀಗೇರಿ, ಮುನ್ನೊಳ್ಳಿ ಮುಂತಾದ ಕಡೆಗೆ ಅಡ್ಡಾಡಹತ್ತಿದರು. ಶಿವಾಜಿ ರಾಜನಾದರೂ ದೀಕ್ಷಿತರ ದರ್ಶನವನ್ನು ತಕ್ಕೊಳ್ಳದೆ ತಿರುಗಿ ರಾಜ್ಯವನ್ನು ಸೇರ ಲಿಕ್ಕಿಲ್ಲವೆಂದು ನಿಶ್ಚಯವನ್ನು ಮಾಡಿಕೊಂಡು ಬಂದದ್ದರಿಂದ, ಅವನೂ ದೀಕ್ಷಿ ತರು ಹೋದ ಹೋದಲ್ಲಿ ಅವರನ್ನು ಬೆಂಬಳಿಸಹತ್ತಿದನು. ಒಂದು ದಿವಸ ಅಕ ಸ್ಮಾತ್ತಾಗಿ ಮಧ್ಯಮಾರ್ಗದಲ್ಲಿಯೇ ಶಿವಾಜಿಗೆ ದೀಕ್ಷಿತರ ದರ್ಶನವಾಯಿತು. ಆಗ ಅವನು ಸಾಷ್ಟಾಂಗವೆರಗಿ, ಮುದ್ರಾ-ವಸನ-ರತ್ನಗಳನ್ನೂ, ಒಂದೂಕಾಲು ಲಕ್ಷದ ಜಾಹಗೀರು ಬರೆದ ಕಾಗದವನ್ನೂ ಮುಂದಿಟ್ಟು, ಈ ದಾಸನ ಅಲ್ಪ ಸೇವೆಯ ಸ್ವೀಕಾರವನ್ನು ಮಾಡಬೇಕೆಂದು ಬೇಡಿಕೊಂಡನು. ಆಗ ದೀಕ್ಷಿ ತರು—ರಾಜನೇ, ನಾನು ನಿನ್ನ ರಾಜ್ಯದಲ್ಲಿಯೇ ಇರುವೆನು. ನೀನು ಕೊಟ್ಟದ್ದು ನನಗೆ ಮೇರು-ಮಂದಾರದ ಸರಿಯಾಯಿತು. ನನ್ನ ಅಷ್ಟದಾರಿದ್ರ್ಯಗಳು ಲಯ ಲಾದವು! ನೀನು ಕೊಟ್ಟದ್ದು ನಮಗೆ ಮುಟ್ಟಿತು. ಇದು ನಮ್ಮದೇ ಎಂದು ತಿಳಕೊಂಡು ನಿನ್ನ ಬಳಿಯಲ್ಲಿ ಇಟ್ಟುಕೊಳ್ಳು. ಈ ಮಾತನ್ನು ಅಲ್ಲಗಳೆಯಬೇಡ. ಅದರಿಂದ ನಿನಗೆ ಕ್ಷೇಮವಾಗಲಿಕ್ಕಿಲ್ಲ. ನಿನಗೆ ಕಲ್ಯಾಣವಾಗಬೇಕೆಂದು ಇಚ್ಛೆ ಯಿದ್ದರೆ, ಇವೆಲ್ಲ ಜೇನಸುಗಳನ್ನು ತಕ್ಕೊಂಡು ಹೋಗು. ಹೀಗೆ ಮಾಡಿದರೆ

ನಿನಗೆ ಇನ್ನೊಮ್ಮೆ ದರ್ಶನ ಕೊಡುವೆವು!'' ಎಂದು ನುಡಿದರು. ಆಗ ರಾಜನು ಮನಸ್ಸಿನಲ್ಲಿ—ಪ್ರಾಪಂಚಿಕ ಮನುಷ್ಯನಿಗೆ ಹಣದಲ್ಲಿ ಇಷ್ಟು ನಿರಾಶೆಯಿರುವದು ಅಸಂಭವವು! ದೀಕ್ಷಿತರು ನಿರ್ಮಲಾಂತಃಕರಣದಿಂದ ತಮ್ಮ ನಿರಾಶೆಯನ್ನು ವ್ಯಕ್ತಮಾಡಿದ್ದರಿಂದ, ಅವರ ಯೋಗ್ಯತೆಗೆ ಬೆಲೆಯಿಲ್ಲದಂತಾಯಿತು. ಅವರು ಮಾನವಕೋಟಿಯನ್ನು ಮೀರಿರುವರು! ಅವರ ಮಾತನ್ನು ಅಲ್ಲಗಳೆಯುವದು ಸರಿಯಲ್ಲ, ಎಂದು ಯೋಚಿಸಿ, ದೀಕ್ಷಿತರ ವಚನದಂತೆ ಯಾವತ್ತು ಒಡವೆಗಳನ್ನು ತಕ್ಕೊಂಡು, ತಿರುಗಿ ತನ್ನ ರಾಜ್ಯವನ್ನು ಸೇರಿದನು. ಇತ್ತ ದೀಕ್ಷಿತರು ಮತ್ತೆ ಹುಬ್ಬಳ್ಳಿಗೆ ಬಂದು, ಭಕ್ತಾವಳಿಗೆ ಚಮತ್ಕಾರಗಳನ್ನು ತೋರಿಸಹತ್ತಿದರು.

ಇಷ್ಟರೊಳಗೆ ರತ್ನಾಕರಸಂತನ ಸುಲಿಗೆಯು ಕೆಲಸಕ್ಕೆ ಒಳ್ಳೇ ಕಳೆಯೇರಿತ್ತು. ಆತನ ಉಪಟಳಕ್ಕೆ ಜನರು ಬಹಳ ಬೇಸತ್ತಿದ್ದರು. ಅವರಿಗೆ ರತ್ನಾಕರನ ತ್ರಾಸವು ಅಸಹ್ಯವಾಗಲು, ಅವರು ದೀಕ್ಷಿತರಿದ್ದೆಡೆಗೆ ಬಂದು ತಮ್ಮ ದೂರುಗಳನ್ನು ಹೇಳಿಕೊಂಡರು. ಆಗ ಭಕ್ತಾಭಿಮಾನಿಯಾದ ದೀಕ್ಷಿತರು ರತ್ನಾಕರನನ್ನು ಕರೆಯಿಸಿ—ರತ್ನಾಕರಾ, ಜನರನ್ನು ವ್ಯರ್ಥವಾಗಿ ಏಕೆ ಸೋಳಾಡಿಸುವಿ? ರೈತರನ್ನು ಸುಲಿಯುವದು ಸರಿಯಲ್ಲ. ಅದರಿಂದ ರಾಜನಿಗೆ ಕ್ಷೇಮವಾಗುವದಿಲ್ಲ. ನೀನು ತಿಳಿದವನಿದ್ದು, ಹೀಗೆ ಅಡ್ಡಹಾದಿಯನ್ನು ತುಳಿಯುವದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ನೀನು ತೀವ್ರವಾಗಿ ಎಚ್ಚತ್ತು, ನಿನ್ನ ನಡತೆಯನ್ನು ತಿದ್ದಿಕೊಂಡರೆ ನೆಟ್ಟಗಾಗುವದು. ಇಲ್ಲದಿದ್ದರೆ ರತ್ನಾಕರನನ್ನು (ಸಮುದ್ರವನ್ನು) ನುಂಗುವ ಅಗಸ್ತ್ಯನು ತೀವ್ರವಾಗಿಯೇ ನಿನಗೆ ಗಂಟುಬೀಳುವನು. ಇಷ್ಟರ ಮೇಲೆ ನಿನ್ನ ಮನಬಂದಂತೆ ಮಾಡು, ಎಂದು ಉಪದೇಶಿಸಿದರು. ಆದರೆ ರತ್ನಾಕರನಿಗೆ ಈ ಮಾತುಗಳು ವಿಷದಂತೆ ತೋರಿದವು. ಅವನು ದೀಕ್ಷಿತರ ಮಾತಿಗೆ ಕಿವಿಗೊಡದೆ ತನ್ನ ಮೊದಲಿನ ಕಾಯಕವನ್ನೇ ಮುಂದೆ ಸಾಗಿಸಿದನು.

ಇದೇ ಸುಮಾರಕ್ಕೆ 'ಧುಂಡಜಿ' ಎಂಬೊಬ್ಬ ಶೂರ ಸರದಾರನು ಸಂಗಡ ಸ್ವಲ್ಪ ಸೈನ್ಯವನ್ನು ತಕ್ಕೊಂಡು ದೀಕ್ಷಿತರ ಭೆಟ್ಟಿಗೆ ಬಂದನು. ಅವನು ಒಳ್ಳೇ ಗುರುಭಕ್ತಪರಾಯಣನಾಗಿದ್ದನು. ದೀಕ್ಷಿತರು ಅವನನ್ನು ನೋಡಿ ಸಂತೋಷಬಟ್ಟು, ಮನ್ನಿಸಿ—ನೀನು ಕಾಲಕ್ಕೆ ಸರಿಯಾಗಿ ಇಲ್ಲಿಗೆ ಅಗಸ್ತ್ಯನಾಗಿ ಬಂದಿ! ಇದೊಂದು ನೆಟ್ಟಗಾಯಿತು. ಇನ್ನು ರತ್ನಾಕರನ ಶೋಷಣಕ್ಕೆ ಎಷ್ಟು ತಡ! ಎಂದು ನುಡಿದರು ಧುಂಡಜಿಗೆ ಇದರ ಅಭಿಪ್ರಾಯವು ಗೊತ್ತಾಗಲಿಲ್ಲ.

ಅವನು ಸಂಶಯಗ್ರಸ್ತನಾದದ್ದನ್ನು ಕಂಡು, ದೀಕ್ಷಿತರು:—ಧುಂಡಜೀ, ಇಂದಿನಿಂದ ನಾವು ನಿನ್ನನ್ನು ಅಗಸ್ತ್ಯನೆಂದೇ ಸಂಬೋಧಿಸತಕ್ಕವರು! ಈಗ ಈ ಪ್ರಾಂತದಲ್ಲಿ ಕೊಲ್ಲಾಪುರ ಸರಕಾರದ ಸೇನಾಪತಿಯಾದ ರತ್ನಾಕರನು ಪ್ರಜೆಗಳನ್ನು ಬಹಳವಾಗಿ ಗೋಳಾಡಿಸುತ್ತಿರುವನು. ಆತನು ರತ್ನಾಕರನು, (ಸಮುದ್ರವು) ನೀನು ಅಗಸ್ತ್ಯಋಷಿಯು, ಸಮುದ್ರವನ್ನು ಪ್ರಾಶನಮಾಡತಕ್ಕವನು!! ನೀನು ರತ್ನಾಕರನನ್ನು ಬಗ್ಗುಬಡೆದು, ಪ್ರಜೆಗಳಿಗೆ ಸುಖವನ್ನುಂಟುಮಾಡು. ಸದ್ಯಕ್ಕೆ ನೀನು ಸವಣೂರಿಗೆ ಹೋಗಿ, ಇಂಥಿಂಥ ಕಾರ್ಯದ ಸಲುವಾಗಿ ಇಂಥವರ ಅಪ್ಪಣೆಯಿಂದ ಇಲ್ಲಿಗೆ ಬಂದಿರುವೆನೆಂದು ಅಲ್ಲಿಯ ಅಧಿಕಾರಿಗೆ ಹೇಳಿ, ಯುದ್ಧದ ಸಿದ್ಧತೆಯನ್ನು ಮಾಡಿಕೊಳ್ಳು, ಎಂದು ಆಜ್ಞಾಪಿಸಲು, ಅವನು ಆದರಂತೆಯೇ ಯಾವತ್ತು ವ್ಯವಸ್ಥೆಯನ್ನು ಮಾಡಿಕೊಂಡನು. ಈ ಸುದ್ದಿಯು ರತ್ನಾಕರನಿಗೆ ತಿಳಿಯಲು, ಆತನೂ ದೊಡ್ಡ ದಂಡಿನೊಡನೆ ಬಂದು ಸವಣೂರನ್ನು ಮುತ್ತಿದನು. ಆಗ ಧುಂಡಜೀಗೂ, ರತ್ನಾಕರಪಂತನಿಗೂ ಕಡುಕಾಳಗವೆಸಗಿತು. ಈ ಕಾಳಗದಲ್ಲಿ ಸ್ವಲ್ಪ ಸೈನ್ಯವುಳ್ಳ ಧುಂಡಜಿಯು ಸೋಲುವ ಹೊತ್ತು ಬಂದಿತು. ಆಗ ಶ್ರೀ ಚಿದಂಬರ ದೀಕ್ಷಿತರು ಅಲ್ಲಿ ಒಮ್ಮೆಲೆ ಪ್ರಕಟರಾಗಿ, ಧುಂಡಜಿಗೆ:—ನೀನು ಸ್ವಲ್ಪಾದರೂ ಹೆದರಬೇಡ. ನನ್ನ ಮಾತಿನಲ್ಲಿ ನಂಬಿಗೆಯಿರಲಿ! ವಿಜಯಶ್ರೀಯು ಖಂಡಿತವಾಗಿ ನಿನಗೇ ಮಾಲೆಯನ್ನು ಹಾಕುವಳು. ಇನ್ನೊಮ್ಮೆ ದೃಢನಿಶ್ಚಯದಿಂದ ವೈರಿಯ ಮೇಲೆ ಸಾಗಿ ಹೋಗು; ಎಂದು ಆಶ್ವಾಸನವನ್ನು ಕೊಡಲು, ಆತನಲ್ಲಿಯೂ, ಆತನ ಸೈನಿಕರಲ್ಲಿಯೂ ಮೀರಿದ ಹೊಸ ಚೈತನ್ಯವು ಉಂಟಾದಂತಾಗಿ, ಅವರು ಒಮ್ಮೆಲೆ ಶತ್ರು-ಸೈನ್ಯದ ಮೇಲೆ ಸಾಗಿಹೋದರು. ಈ ಕಡತದಲ್ಲಿ ರತ್ನಾಕರನೂ, ಆತನ ಸೈನಿಕರೂ ಸೋತು ದಿಕ್ಕಾಪಾಲಾಗಿ ಓಡಹತ್ತಿದರು. ಧುಂಡಜಿಗೆ ಶ್ರೀಗುರು-ಕೃಪೆಯಿಂದ ಜಯವು ಪ್ರಾಪ್ತವಾಯಿತು. ಗುರುವಚನಗಳನ್ನು ಅಲ್ಲಗಳೆದದ್ದರಿಂದ ಸೈನದ ಸೊಕ್ಕು ಇದ್ದ ರತ್ನಾಕರನು ಕಂಗೆಟ್ಟು, ಮನಸ್ಸಿನಲ್ಲಿ ಮಿಡುಕುತ್ತ, ತನ್ನ ರಾಜ್ಯಕ್ಕೆ ಹೊರಟುಹೋದನು. ಧುಂಡಜಿಯೂ ಗುರುಗಳ ಆಶೀರ್ವಾದವನ್ನು ಸಂಪಾದಿಸಿ, ತನ್ನ ದೇಶಕ್ಕೆ ಪ್ರಯಾಣವನ್ನು ಬೆಳಸಿದನು.

ಈ ಸುಮಾರಕ್ಕೆ ದಕ್ಷಿಣ ದೇಶದ ಧೋಂಡೋಪಂತ ಗೋಖಲೆಯೆಂಬವನು ಪುಂಡಾಟಿಕೆಯನ್ನು ನಡಿಸಿದ್ದನು. ಈ ಮನೆತನದವರು ತೈತ್ತಿರೀಯ ಶಾಖೆಯ ಬ್ರಾಹ್ಮಣರು. ಧೋಂಡೋಪಂತ ಗೋಖಲೆ ಮತ್ತು ಆತನ ತಮ್ಮನಾದ

ಗಣೇಶ ಗೋಖಲೆ ಎಂಬವರು ಎರಡನೆಯು ಬಾಜೀರಾಯನ ಆಶ್ರಯದಲ್ಲಿದ್ದರು. ಧೋಂಡೋಪಂತನು ಐನೂರು ಕುದುರೆಗಳ ಮೇಲಿನ ಅಧಿಕಾರವುಳ್ಳ ಸರದಾರನಾಗಿದ್ದನು. ಗಣೇಶ ಗೋಖಲೆ ಎಂಬವನಿಗೆ ಬಾಪೂಗೋಖಲೆ ಮತ್ತು ಅಪ್ಪಾಗೋಖಲೆ ಎಂಬ ಇಬ್ಬರು ಮಕ್ಕಳಿದ್ದರು. ಬಾಜೀರಾಯನು ಈ ಧೋಂಡೋಪಂತನನ್ನು ಗದಗ, ನವಲಗುಂದಗಳ ಭಾಗಕ್ಕೆ ನೇಮಿಸಿದ್ದನು. ಧೋಂಡೋಪಂತ ಗೋಖಲೆಯು ಕೊಲೆ-ಸುಲಿಗೆಗಳಿಂದ ಜನರನ್ನು ಗೋಳಾಡಿಸಹತ್ತಿದ್ದನ್ನು ಕೇಳಿ, ದೀಕ್ಷಿತರು ಅವನನ್ನು ಹಲವು ಸಾರೆ ಎಚ್ಚರಗೊಳಿಸಿದ್ದರು; ಆದರೆ ಧೋಂಡೋಪಂತನು ಅವರ ಮಾತಿಗೆ ಕಿವಿಗೊಡದೆ ತನ್ನ ಮೊದಲಿನ ಕಾಯಕವನ್ನೇ ನಡಿಸಿದನು. ಅಷ್ಟರಲ್ಲಿ ರತ್ನಾಕರಪಂತನ ಗರ್ವಹರಣಮಾಡಿದ ಧುಂಡಜಿಯು ದೀಕ್ಷಿತರ ದರ್ಶನಕ್ಕೆ ಬರಲು, ದೀಕ್ಷಿತರು ಆತನನ್ನು ಧೋಂಡೋಪಂತನ ಪುಂಡಾಟವನ್ನು ನಿಲ್ಲಿಸುವದಕ್ಕೋಸ್ಕರ ದಕ್ಷಿಣಕ್ಕೆ ಕಳಿಸಿಕೊಟ್ಟರು. ಈ ಸುದ್ದಿಯು ಗೋಖಲೆಗೆ ತಿಳಿಯಿತು. ಆತನು ಧುಂಡಜಿಯ ಮೇಲೆ ಹಲ್ಲು ತಿನ್ನಹತ್ತಿದನು. ಧುಂಡಜಿಯು ಮನಸ್ಸಿನಲ್ಲಿ ಏನೇನೋ ವಿಚಾರಿಸಿ, ಶ್ರೀರಂಗಪಟ್ಟಣದ ಅರಸನಾದ ಟೀಪೂಸುಲ್ತಾನನ ಆಶ್ರಯವನ್ನು ಬಯಸಿದನು. ಸುಲ್ತಾನನು ಅವನನ್ನು ಮುಸಲ್ಮಾನನನ್ನಾಗಮಾಡಿ, ತನ್ನ ಆಶ್ರಯದಲ್ಲಿಟ್ಟುಕೊಂಡು, ಆತನಿಗೆ ಸರದಾರಿಕೆಯನ್ನು ದಯಪಾಲಿಸಿದನು. ಮುಂದೆ ಕೆಲವು ದಿವಸಗಳ ತರುವಾಯ ಇಂಗ್ಲಿಷರಿಗೂ, ಟೀಪುವಿಗೂ ಕಾಳಗವಾಗಿ ಸುಲ್ತಾನನು ಪರಾಜಯಪಟ್ಟನು. ಆಗ ಧುಂಡಜಿಯು ಧೋಂಡೋಪಂತನ ಆಶ್ರಯವನ್ನು ಕೇಳಿಕೊಂಡನು. ಪಂತನು ಮನಸ್ಸಿನಲ್ಲಿ:-ಈತನು ನನ್ನನ್ನು ದಂಡಿಸಲು, ಬಂದಿದ್ದನಷ್ಟೇ? ಈಗ ಅನಾಯಾಸವಾಗಿ ನನ್ನ ಕೈಯಲ್ಲಿ ಸಿಗುತ್ತಿರುವನು. ಈ ಸಂಧಿಯನ್ನು ಕಳಕೊಳ್ಳುವದು ಸರಿಯಲ್ಲವೆಂದು ನೆನಿಸಿ, ಮೋಸದ ಬುದ್ಧಿಯಿಂದ ಅವನಿಗೆ ಆಶ್ರಯವನ್ನು ಕೊಟ್ಟನು. ಕೆಲವು ದಿವಸಗಳ ತರುವಾಯ ಧೋಂಡೋಪಂತನು ಅಕಸ್ಮಾತ್ತಾಗಿ ಧುಂಡಜಿಯ ಹೆಂಡಿರು-ಮಕ್ಕಳನ್ನು ಸೆರೆಹಿಡಿದು ಅವನ ಧನ-ಧಾನ್ಯ ಸಂಪತ್ತನ್ನೆಲ್ಲ ಅಪಹರಿಸಿದನು. ಆಗ ಧುಂಡಜಿಯು ಅಲ್ಲಿಂದ ಮುರಗೋಡಕ್ಕೆ ದೀಕ್ಷಿತರ ಕಡೆಗೆ ಓಡಿಬಂದನು. ಆಗ ಮಳೆಗಾಲವಿತ್ತು. ಮಳೆಯು ಚಿಟಿ-ಚಿಟಿ ಹತ್ತಿತ್ತು. ಧುಂಡಜಿಯು ಮುಸಲ್ಮಾನನಾದ್ದರಿಂದ ದೇವಾಲಯದ ಒಳಭಾಗಕ್ಕೆ ಹೋಗದೆ, ಮಹಾದ್ವಾರದಲ್ಲಿ ಮಳೆಯೊಳಗೇ ನಿಂತುಕೊಂಡನು. ಆತನು ಧರ್ಮಾಂತರ ಮಾಡಿದ ವೇಳೆಯಲ್ಲಿ ಬಹುಜನ ಬ್ರಾಹ್ಮಣ

ರನ್ನು ಗೋಳಾಡಿಸಿದ್ದರಿಂದ, ಆತನಿಗೆ ಮೂರು ದಿವಸಗಳ ವರೆಗೆ ದೀಕ್ಷಿತರ ದರ್ಶನವಾಗಲಿಲ್ಲ; ಆದರೆ ನಾಲ್ಕನೆಯ ದಿವಸ ಆತನ ದೃಢತರವಾದ ನಿರ್ಧಾರ ಕ್ಕಾಗಿ ದರ್ಶನಕೊಡಬೇಕಾಯಿತು. ದೀಕ್ಷಿತರು ಮಹಾದ್ವಾರಕ್ಕೆ ಬಂದು—ಏನೋ ಧುಂಡಜಿ, ನೀನು ಮಹಾಪಾಪಿಷ್ಠನಿರುವಿ. ನಾವು ಹೇಳಿದ ಕೆಲಸ ವನ್ನು ಬದಿಗೊತ್ತಿ, ವೈಭವಕ್ಕೆ ಮನಸೋತು, ಧರ್ಮಾಂತರವನ್ನು ಮಾಡಿ, ಜನ ರನ್ನು ಗೋಳಾಡಿಸಿದಿ, ಈಗ ಅದನ್ನು ಬಿಟ್ಟು ಹಟಹಿಡಿದು ಬಾಗಿಲಲ್ಲಿ ಸುಮ್ಮನೆ ಏಕೆ ನಿಂತುಕೊಂಡಿರುವಿ? ಎಂದು ಕೇಳಲು, ಧುಂಡಜಿಯು ಮನಸಿನಲ್ಲಿ ಪಶ್ಚಾ ತ್ತಾಪಪಟ್ಟು, ದೀಕ್ಷಿತರ ಮುಂಭಾಗದಲ್ಲಿಯ ರಾಡಿಯಲ್ಲಿಯೇ ಉರುಳಾಡುತ್ತ:- ನನಗೆ ಅಭಯವನ್ನಿತ್ತರೇ ಮಾತ್ರ ಏಳುತ್ತೇನೆ; ಇಲ್ಲದಿದ್ದರೆ ಇಲ್ಲಿಯೇ ಪ್ರಾಣ ತ್ಯಾಗವನ್ನು ಮಾಡುತ್ತೇನೆ, ಎಂದು ಅಂಗಲಾಚಿ ಬೇಡಿಕೊಂಡನು. ಆಗ ದೀಕ್ಷಿತರು ಕನಿಕರಬಟ್ಟು, ಧುಂಡಜಿಗೆ ಅಭಯವನ್ನು ಕೊಟ್ಟು:—ಏಳು, ನೀನು ಇಲ್ಲಿಗೆ ಬಂದ ಕಾರಣವೇನು? ಎಂದು ಪ್ರಶ್ನೆಮಾಡಿದರು. ಆಗ ಧುಂಡಜಿಯು: "ನನ್ನಿಂದ ಮಹಾಪರಾಧವಾಗಿರುವದು. ಅದಕ್ಕಾಗಿ ತಾವು ನನಗೆ ಬೇಕಾದಂಥ ಕಠಿಣ ಶಿಕ್ಷೆಯನ್ನು ವಿಧಿಸಿರಿ. ಅದನ್ನು ನಾನು ಆನಂದದಿಂದ ಅನುಭವಿಸುವೆನು; ಆದರೆ ಧೋಂಡೋಪಂತ ಗೋಖಲೆಯನ್ನು ನೋಲಿಸುವ ಸಾಮರ್ಥ್ಯವನ್ನು ನನಗೆ ದಯಪಾಲಿಸಬೇಕು. ಆತನು ನಂಬಿಗೆಗೇಡಿಯಾಗಿರುವನು. ನನ್ನನ್ನು ಮೋಸಗೊಳಿಸಿ ನನ್ನ ಕುಟುಂಬವನ್ನು ಪ್ರತಿಬಂಧದಲ್ಲಿರಿಸಿರುವನು.

ದೀಕ್ಷಿತರು:—ಹೀಗೇನು? ಅದರ ಪ್ರತೀಕಾರದ ಉಪಾಯವನ್ನು ಹೇಳುತ್ತೇನೆ, ಮೊದಲು ನೀನು ಊಟವನ್ನು ತೀರಿಸು.

ಧುಂಡಜಿ:—ತಮ್ಮ ಇಷ್ಟದಂತೆಯೇ ಆಗಲಿ, ಎಂದು ನುಡಿದು ಸ್ನಾನ ವನ್ನು ತೀರಿಸಿ, ದೀಕ್ಷಿತರ ಉಚ್ಛಿಷ್ಠವನ್ನೇ ಅತ್ಯಾಗ್ರಹದಿಂದ ಇಸಗೊಂಡು, ಮನದಣೀಯ ಸೇವಿಸಿ, ಉಳಿದದ್ದನ್ನು ತನ್ನ ಧೋತರ ಸೆರಗಿನಲ್ಲಿ ಕಟ್ಟಿಕೊಂಡು ನನ್ನನ್ನು ಆಶೀರ್ವದಿಸಿರೆಂದು ದೀಕ್ಷಿತರ ಪಾದಪದ್ಮಗಳಿಗೆರಗಿ ಕೈಜೋಡಿಸಿ ನಿಂತುಕೊಂಡನು.

ದೀಕ್ಷಿತರು:-ನೀನು ಭಸ್ಮಾಸುರನಂತೆ ಮಾತ್ರ ಮಾಡಬೇಡ. ನೀನು ಯವನನಾಗಿರುವಿ; ಆದ್ದರಿಂದ ಬ್ರಾಹ್ಮಣರ ವಿಷಯವಾಗಿ ಒಂದಿಲ್ಲೊಂದು ದಿನ ನಿನ್ನ ಮನಸ್ಸಿನಲ್ಲಿ ವೈಷಮ್ಯ ಉಂಟಾಗುವ ಸಂಭವವದೆ; ಹಾಗೆ ಮಾತ್ರ ಮಾಡ ಬೇಡ; ನಿನಗೆ ವರಪ್ರದಾನ ಮಾಡುತ್ತೇನೆ. ಇನ್ನು ಆರು ತಿಂಗಳಲ್ಲಿ ನಿನಗೆ

ದೊಡ್ಡ ಸೈನ್ಯವು ದೊರಕುವದು. ಬ್ರಾಹ್ಮಣರನ್ನು ಮಾತ್ರ ಕಾಡಬೇಡ. ನೀನು ಬ್ರಾಹ್ಮಣರನ್ನು ಎಂದು ಗೋಳಾಡಿಸಲಿಕ್ಕೆ ಆರಂಭಿಸುವಿಯೋ, ಆಹೊತ್ತೇ ನಿನ್ನ ಅಳಿಗಾಲಕ್ಕೆ ಆರಂಭವಾಯಿತೆಂದು ತಿಳಿ, ಎಂದು ಹೇಳಿ, ಆತನ ಉಡಿಯಲ್ಲಿ † ಮೂರು ಸೇರು ಜೋಳವನ್ನು ಸುರವಿ, ಹೋಗಲು ಅಪ್ಪಣೆಯನ್ನಿತ್ತರು. ಆಗ ಧುಂಡಜಿಯು ದೀಕ್ಷಿತರನ್ನು ನಮಸ್ಕರಿಸಿ, ದಕ್ಷಿಣಕ್ಕೆ ಬಂದನು; ಹಾಗು ಸೈನ್ಯವನ್ನು ಕೂಡಿಸುವ ಎತ್ತುಗಡೆಯನ್ನು ಮಾಡಹತ್ತಿದನು. ಆರುತಿಂಗಳಲ್ಲಿ ಅರ್ಧಲಕ್ಷ ಸೈನ್ಯವು ಕೂಡಿತು. ಆಗ ಅವನು ಧೊಂಡೋಪಂತನ ಮೇಲೆ ಸಾಗಿ ಹೋಗಬೇಕೆಂದು ಹವಣಿಸ ಹತ್ತಿದನು. ಈ ಸುದ್ದಿಯು ಧೊಂಡೋಪಂತನಿಗೆ ತಿಳಿಯಲು, ಆತನು ಹೆದರಿ, ಅದರ ಪ್ರತೀಕಾರದ ಉಪಾಯವನ್ನು ಕೇಳಬೇಕೆಂದು ದೀಕ್ಷಿತರ ಬಳಿಗೆ ಬಂದನು. ಎಷ್ಟು ಪ್ರಯತ್ನಪಟ್ಟರೂ ದೀಕ್ಷಿತರ ದರ್ಶನವಾಗಲೊಲ್ಲದು. ಆಗ ಅವನು ರೇಗಿಗೆದ್ದು, ಸೈನ್ಯದೊಡನೆ ಊರನ್ನು ಹೊಕ್ಕು, ದೀಕ್ಷಿತರ ಮನೆಯನ್ನು ಮುತ್ತಿದನು. ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು:-ನಾನು ಬಡಬ್ರಾಹ್ಮಣನು; ನನ್ನ ಮನೆಯನ್ನು ಮುತ್ತಿದರೆ ನಿನಗೇನು ಲಾಭವಾಗುವದು? ನೀನು ಉದ್ಧಟತನವನ್ನು ಮಾಡುತ್ತಿರುವಿ? ಅದರ ಪ್ರಾಯಶ್ಚಿತ್ತವನ್ನು ತೀವ್ರವೇ ಹೊಂದುವಿ! ನನ್ನ ಬಳಿಯಲ್ಲಿ ದೇಶ-ಕೋಶ, ವೃತ್ತಿ-ವೈಭವ ಇವುಗಳಲ್ಲಿ ಯಾವದೂ ಇಲ್ಲ ದಾರಿದ್ರ್ಯವು ಮಾತ್ರ ಪೂರಾ ಇರುವದು. ನಾನು ನಿಜವಾಗಿ ಎಲ್ಲ ಬಡವರಿಗಿಂದ ಬಡವನಾಗಿದ್ದೇನೆ ವೈದಿಕ ಬ್ರಾಹ್ಮಣನನ್ನು ಸುಮ್ಮನೆ ಕಾಡಬೇಡ; ನಮಗೆ ಯಾರ ಆಶ್ರಯವಿಲ್ಲ. ಜನರನ್ನು ಗೋಳಾಡಿಸುವದು, ಗರ್ವದಿಂದ ನಡೆಯುವದು, ಶಾಸ್ತ್ರಾರ್ಥವನ್ನು ತ್ಯಜಿಸುವದು, ಮನಬಂದಂತೆ ನಡೆಯುವದು, ಸಾಧು-ಸತ್ಪುರುಷರನ್ನು ಅವಮಾನಿಸುವದು, ಸದ್ಧರ್ಮದ ಕಡೆಗೆ ದುರ್ಲಕ್ಷ್ಯ ಮಾಡುವದು, ಅಧರ್ಮವನ್ನು ಅವಚಿಕೊಳ್ಳುವದು ಇವೆಲ್ಲ ಪಾಪದ ಕಾರ್ಯಗಳಾಗಿರುವವು. ನೀನು ಇಂತಹ ಕೆಲಸಗಳನ್ನೇ ಮಾಡುತ್ತಿರುವಿ. ನಿನ್ನ ಮುಖಾವಲೋಕನವನ್ನಾದರೂ ಮಾಡಲು ಮನಸ್ಸಾಗುವದಿಲ್ಲ. ನಿನ್ನ ಉಪಟಳಕ್ಕೆ ಬೇಸತ್ತು ದೂರ ಹೋಗಬೇಕೆನ್ನುತ್ತೇನೆ; ನಿನಗೆ ವಿನಾಶ ಕಾಲಕ್ಕೆ ಹೀಗೆ ವಿಪರೀತ ಬುದ್ಧಿಯುಂಟಾಗಿರುತ್ತದೆ; ಕಾರಣ ಜಾಗರೂಕನಾಗಿರು, ಎಂದು ಪಂತನಿಗೆ ಹೇಳಿ ಕಳುಹಿದರು. ಆಗ ಧೊಂಡೋಪಂತನು

† ಮೂರು ಸೇರಿನಲ್ಲಿ ಎಷ್ಟು ಕಾಳುಗಳಿರುವವೋ, ಅಷ್ಟು ಸೈನ್ಯವು ಕೂಡುವದೆಂದು ದೀಕ್ಷಿತರು ಧುಂಡಜಿಗೆ ವರಪ್ರದಾನವನ್ನು ಮಾಡಿದ್ದರಂತೆ.

ದೀಕ್ಷಿತರ ಭವಿಷ್ಯಸೂಚಕ ಸಂದೇಹವನ್ನು ಶ್ರವಣಮಾಡಿ ಗಾಬರಿಯಾದನು; ಹಾಗು ಸೈನಿಕರನ್ನು ಊರ ಹೊರಗೆ ಕಳಿಸಿ, ದೀಕ್ಷಿತರ ದರ್ಶನವಿಲ್ಲದೆ ಅನ್ನ-ನೀರು ತಕ್ಕೊಳ್ಳುವದಿಲ್ಲೆಂದು ನಿರ್ಧಾರ ಮಾಡಿ, ಬಳಿಯಲ್ಲಿದ್ದ ಬ್ರಾಹ್ಮಣರನ್ನು ಕೂಡಿಕೊಂಡು, ಸ್ನಾನವನ್ನು ಮಾಡಿ, ಶುಚಿರ್ಭೂತನಾಗಿ ದೀಕ್ಷಿತರ ಮನೆಯ ಹೊರಬದಿಯಲ್ಲಿ ಬಂದು ಕುಳಿತುಕೊಂಡನು. ಉದ್ದೇಶವಿಷ್ಟೇ, ದೀಕ್ಷಿತರು ಬಲಿಹರಣ ಚಲ್ಲಲಿಕ್ಕೆ ಹೊರಗೆ ಬರುತ್ತಾರೆ, ಆಗ ಈ ಬ್ರಹ್ಮವೃಂದವೆಲ್ಲ ಅವರ ಕಣ್ಣಿಗೆ ಬೀಳಲು, ಅವರು ನಮ್ಮನ್ನು ಬಿಟ್ಟು, ಎಂದೂ ಊಟಮಾಡಲಾರರು. ನಮಗೆ ಭೋಜನ ಲಾಭವೂ, ದರ್ಶನ ಲಾಭವೂ ಕೂಡಿಯೇ ಆಗುವವು. ಹೀಗೆ ಕೆಲಹೊತ್ತು ಕೂತಬಳಿಕ ಧೊಂಡೋಪಂತನು:-ನಾವು ಅತಿಥಿಗಳು ಊಟಕ್ಕೆ ಬಂದಿರುತ್ತೇವೆಂದು ಒಳಗೆ ಹೇಳಿ ಕಳುಹಿದನು. ಆಗ ಎಲ್ಲರೂ ಗುರ್ವಾಜ್ಞೆಯ ಮೇರೆಗೆ ಒಳಗೆ ಹೋಗಿ, ಎಲೆಗಳ ಮೇಲೆ ಕುಳಿತುಕೊಂಡರು. ಪಂಕ್ತಿಯಲ್ಲಿ ದೀಕ್ಷಿತರು ಬರಲು, ಅವರನ್ನು ಎಲ್ಲರೂ ನಮಸ್ಕರಿಸಿದರು. ಆಗ ಗೋಖಲೆ ಧೊಂಡೋಪಂತನು ತನ್ನ ಆಗಮನದ ಉದ್ದೇಶವನ್ನು ಅರುಹಿದನು. ಅದಕ್ಕೆ ದೀಕ್ಷಿತರು:-ನಿನ್ನ ಮೇಲೆ ಈಗಿನಕ್ಕಿಂತ ದೊಡ್ಡ ಪ್ರಸಂಗವು ಬರುವದು. ಜೋಕೆ! ಕಲಿಮಹಿಮೆಯು ಅಗಾಧವಾಗಿದೆ. ಪುಣ್ಯದ ಕಸುವು ಇರುವ ವರೆಗೆ, ಪ್ರಾಣಿಯು ಎಂತಹ ಕೆಲಸವನ್ನು ಮಾಡಿದರೂ ಆತನಿಗೆ ಅದು ಬಾಧಕವಾಗುವದಿಲ್ಲ. ಅದೇ ಪುಣ್ಯವು ಕ್ಷಯವಾಯಿತೆಂದರೆ ಅವುಗಳಿಂದ ಬಾಧೆಯುಂಟಾಗುತ್ತದೆ; ಕೈಯಲ್ಲಿ ಬಂಗಾರವನ್ನು ಹಿಡಿದರೂ ಅದು ಮಣ್ಣು ಆಗುತ್ತದೆ. ಇದನ್ನೆಲ್ಲ ವಿಚಾರಿಸು, ಎಂದು ಉಪದೇಶಿಸಿದ ಒಳಿಕ ಊಟಕ್ಕೆ ಆಜ್ಞೆಯಾಯಿತು. ಎಲ್ಲರ ಊಟವು ಮುಗಿದ ಬಳಿಕ ದೀಕ್ಷಿತರು ಧೊಂಡೋಪಂತನಿಗೆ:—ನೀನು ಇನ್ನು ಮೇಲೆ ಬೇಕಾದಲ್ಲಿಗೆ ಹೋಗು. ದಕ್ಷಿಣದಿಕ್ಕು ಒಂದನ್ನು ಮಾತ್ರ ಬಿಟ್ಟುಬಿಡು, ಎಂದು ಹೇಳಿ, ಫಲ-ಮಂತ್ರಾಕ್ಷತೆಗಳನ್ನು ಕೊಡಹೋದರು. ಆಗ ಧೊಂಡೋಪಂತನು:—ನನ್ನ ಮನಸಿಗೆ ಸಮಾಧಾನವಾಗುವಂಥ ವರಗಳನ್ನು ಕೊಟ್ಟಹೊರತು, ನಾನು ಇಲ್ಲಿಂದ ಹೋಗಲಾರೆ! ಎಂದನು. ದೀಕ್ಷಿತರು:—ನೀನು ಬಹಳ ಹಟವಾದಿಯಿರುವಿ. ಫಲ-ಮಂತ್ರಾಕ್ಷತೆಗಳನ್ನು ತಕ್ಕೊಂಡು ದಕ್ಷಿಣದಿಕ್ಕು ಒಂದನ್ನು ಬಿಟ್ಟು, ಬೇಕಾದ ಕಡೆಗೆ ಹೋಗು, ಎಂದು ಮೂರು ಸಾರೆ ಹೇಳಿದರೂ ಆ ಚಂಡಿ ಧೊಂಡೋಪಂತನು ಫಲವನ್ನು ತೆಗೆದುಕೊಳ್ಳಲಿಲ್ಲ. ಆಗ ದೀಕ್ಷಿತರು ಆತನನ್ನು ಬಿಟ್ಟು, ಅಪ್ಪಾ-ಗೋಖಲೆಯ ಕಡೆಗೆ ಹೊರಳಿ:—

ನೀನಾದರೂ ಈ ಫಲ-ಮಂತ್ರಾಕ್ಷತೆಗಳನ್ನು ತೆಗೆದುಕೊಳ್ಳು, ಎಂದು ಅನ್ನಲು, ಅವನು:-ಹಿರಿಯರ ಫಲವನ್ನು ನಾನು ಸ್ವೀಕರಿಸುವದಿಲ್ಲ, ಎಂದು ಹೇಳಿದನು. ಅವರಿಬ್ಬರ ಅಳಿಗಾಲವು ಸಮೀಪಿಸಿದ್ದರಿಂದ, ಈ ಬಗೆಯ ದುರ್ಬುದ್ಧಿಯು ಅವರಲ್ಲಿ ಉಂಟಾಗಿತ್ತು. ಅಪ್ಪಾ-ಗೋಖಲೆನಿಗಾದರೂ ದೀಕ್ಷಿತರು ಮೂರುಸಾರೆ ಕೇಳಿದರು. ಅವನೂ ತಕ್ಕೊಳ್ಳಲಿಲ್ಲ. ಆಗ ದೀಕ್ಷಿತರು ಬಾಪೂ-ಗೋಖಲೆಯನ್ನು ಕರೆದು:-ನೀನಾದರೂ ಫಲವನ್ನು ಸ್ವೀಕರಿಸುವಿಯಾ? ಎಂದು ಕೇಳಲು, ಅವನು ಅದಕ್ಕೆ ಸಮ್ಮತಿಯನ್ನಿತ್ತು, ಫಲವನ್ನು ಸ್ವೀಕರಿಸಿದನು. ದೀಕ್ಷಿತರು ಆತನನ್ನು ಆಶೀರ್ವದಿಸಿ, ಎಲ್ಲರನ್ನು ಕಟ್ಟಿಕೊಂಡು, ಪಶ್ಚಿಮದಿಕ್ಕಿಗೆ ಹೋಗು, ಎಂದು ಆಜ್ಞಾಪಿಸಿದರು. ಆಗ ಧೋಂಡೋಪಂತನಿಗೂ ಅಪ್ಪಾನಿಗೂ ಬುದ್ಧಿಬಂತು. ಅವರು ಕೃತಾಪರಾಧದ ಬಗ್ಗೆ ಕ್ಷಮೆಯನ್ನು ಯಾಚಿಸಹತ್ತಿದರು. ಆಗ ದೀಕ್ಷಿತರು:-ಆದದ್ದಾಯಿತು, ಒಂದು ತಿಂಗಳ ವರೆಗೆ ನಿಮಗೆ ಅಂಜಿಕೆಯಿದೆ. ನೀವು ದಕ್ಷಿಣಕ್ಕೆ ಹೋಗದೆ, ಬೇಕಾದಲ್ಲಿಗೆ ಹೋಗಿರಿ, ಎಂದು ಹೇಳಿ ಅವರೆಲ್ಲರನ್ನು ಕಳಿಸಿಕೊಟ್ಟರು.

ಧೋಂಡೋಪಂತ ಮತ್ತು ಅಪ್ಪಾ ಇವರಿಬ್ಬರ ವಿನಾಶಕಾಲವು ಸಮೀಪಿಸಿದ್ದರಿಂದ ಅವರಲ್ಲಿ ವಿಪರೀತ ಬುದ್ಧಿಯುಂಟಾಗಿ ಅವರು ದೀಕ್ಷಿತರ ಮಾತನ್ನು ಮೀರಿ, ದಕ್ಷಿಣದಿಕ್ಕಿಗೇ ಹೋದರು. ಇಲಿಯನ್ನು ಬೆಕ್ಕು ಕಾಯುತ್ತ ಕೂಡುವಂತೆ, ಹೊಂಚುಹಾಕಿಕೊಂಡು ಕುಳಿತ ಧುಂಡಜೀಯು ಗೋಖಲೆಯು ಬಂದ ಸುದ್ದಿಯನ್ನು ಕೇಳಿ ಅವನ ಮೇಲೆ ಸಾಗಿ ಹೋದನು. ಇಬ್ಬರಲ್ಲಿಯೂ ಕಾಳಗಕ್ಕೆ ಆರಂಭವಾಯಿತು. ರಣವು ಕ್ಷಣದಲ್ಲಿ ರಕ್ತಮಯವಾಯಿತು. ಗೋಖಲೆಯ ಸೈನ್ಯದಲ್ಲಿ ವಿಶೇಷ ಹಾನಿಯಾಯಿತು. ಅದನ್ನು ಕಂಡು ಧೋಂಡೋಪಂತನು ಸಂತಪ್ತನಾಗಿ ಆವೇಶದಿಂದ ಧುಂಡಜಿಯ ಮೇಲೆ ಸಾಗಿಹೋದನು. ಅವನು ಧುಂಡಜಿಯ ಕುದುರೆಯನ್ನು ತುಂಡರಿಸಿದನು ಆಗ ಶೂರನಾದ ಧುಂಡಜಿಯು ಟಣ್ಣನೆ ಜಿಗಿದು ಧೋಂಡೋಪಂತನ ಮೇಲೆ ಎರಗಿ, ಆತನನ್ನು ನೆಲಕ್ಕುರುಳಿಸಿ, ಎದೆಯ ಮೇಲೆ ಕುಳಿತುಕೊಂಡನು. ವೀರಾವೇಶದ ಭರದಲ್ಲಿ ಆತನಿಗೆ:—'ಬ್ರಾಹ್ಮಣರನ್ನು ಕಾಡಿದ ದಿವಸವೇ ನಿನ್ನ ಅಳಿಗಾಲಕ್ಕೆ ಆರಂಭವಾಯಿತೆ'ಂದು ಹೇಳಿದ ದೀಕ್ಷಿತರ ವಚನದ ವಿಸ್ಮರಣವಾಗಿ, ಹುಲಿಯು ಹರಿಣವನ್ನು ಮುರಿಯುವಂತೆ ಧೋಂಡೋಪಂತನ ಕಂಠನಾಳವನ್ನು ಸೀಳಿದನು. ಈ ಸುದ್ದಿಯು ಅಪ್ಪಾ ಗೋಖಲೆ ಈತನಿಗೆ ತಿಳಿಯಲು, ಆತನೂ ಧುಂಡಜಿಯಮೇಲೆ ಸಾಗಿ

ಬರಲು, ಧುಂಡಜಿಯು ಧೋಂಡೋಪಂತನಂತೆಯೇ ಆತನ ಗಂಟಲವನ್ನು ಹಿಸುಕಿ, 'ಧುಂಡಜಿ ವಾಘ' ಎಂಬ ಹೆಸರನ್ನು ಹೊಂದಿದನು. ಈ ಜಗತ್ತಿನಲ್ಲಿ ಪ್ರತಿಯೊಬ್ಬರು ಸುಖದ ಮುಬ್ಬಿಗೆ ಬಿದ್ದು, ಗುರು-ಹಿರಿಯರ ಮಾತುಗಳನ್ನು ಲೆಕ್ಕಿಸದೆ ಗೋಳಿಗೆ ಒಳಗಾಗುತ್ತಾರೆ! ಧುಂಡಜಿ ವಾಘನ ಸ್ಥಿತಿಯಾದರೂ ಹೀಗೆಯೇ ಆಯಿತು.

ಭಯಂಕರವೂ, ಅಪಮಾನಕರವೂ ಆದ ಧೋಂಡೋಪಂತನ ಹಾಗೂ ಅಪ್ಪಾಗೋಖಲೆ ಇವರ ಮರಣವಾರ್ತೆಯನ್ನು ಕೇಳಿ, ಧೋಂಡೋಪಂತನ ಹೆಂಡತಿಯು ಸಂತಾಪಗೊಂಡು ಧುಂಡಜಿಯನ್ನು ಚಂಡಾಡಿಬರುವವರೆಗೆ ಗಂಡನ ಉತ್ತರ ಕಾರ್ಯವನ್ನು ಮಾಡಲಿಕ್ಕಾಗದೆಂದು, ಮಗನಾದ ನಡು-ಹರೆಯದ ಬಾಪೂನನ್ನು ಪ್ರತಿಬಂಧಿಸಿದಳು! ಬಾಪೂವಾದರೂ ತಾಯಿಯಂತೆ ಪ್ರತಿಜ್ಞೆಮಾಡಿ, ಇಂಗ್ಲಿಷರ ನೆರವಿನಿಂದ ಧುಂಡಜಿಯ ಮೇಲೆ ಸಾಗಿಹೋದನು. ಈ ಮೊದಲು, ಇಂಗ್ಲಿಷರ ವಿರುದ್ಧವಾಗಿ ಟೀಪೂಸುಲ್ತಾನನ ಪಕ್ಷದಿಂದ ಧುಂಡಜಿಯು ಕಾದಿದ್ದನು. ಅಂತೇ ಈಗ ಇಂಗ್ಲಿಷರು ಬಾಪೂನಿಗೆ ನೆರವಾದರು. ಇಬ್ಬರಲ್ಲಿಯೂ ಕಡು ಕಾಳಗವಾಗಿ ಧುಂಡಜಿಯು ಕಾಲ್ತೆಗೆದನು. ಅವನ ಸೈನಿಕರು ದಿಕ್ಕುಪಾಲಾಗಿ ಓಡಹತ್ತಿದರು. ಬಾಪೂಗೋಖಲೆಯು ಧುಂಡಜಿಯ ಬೆನ್ನು ಹತ್ತಿದನು. ಮಧ್ಯ ಮಾರ್ಗದಲ್ಲಿ ಕೃಷ್ಣಾನದಿಯು ತುಂಬಿಹರಿಯುತ್ತಿತ್ತು. ಅಲ್ಲಿಯ ವರೆಗೆ ಧುಂಡಜಿಯು ಬಂದನು. ಬೇರೆ ಕಡೆಗೆ ಮಾರ್ಗವು ದೊರೆಯಲೊಲ್ಲದು. ಆಗ ಅವನು ಶ್ರೀ ಗುರುಚರಣಗಳನ್ನು ಧ್ಯಾನಿಸುತ್ತ ಕುದುರೆಯನ್ನು ನದಿಯಲ್ಲಿ ನೂಕಿ, ನಾಮಸ್ಮರಣದಿಂದ ಹೊಳೆಯನ್ನು ದಾಟಿ ಪಾರಾದನು. ಅಷ್ಟರಲ್ಲಿ ಬಾಪೂಗೋಖಲೆಯಾದರೂ ಅಲ್ಲಿಗೆ ಬಂದನು. ನದಿಯ ಆಚೆಯ ದಂಡೆಯಲ್ಲಿ ಧುಂಡಜಿಯು ನಿರ್ಭಯದಿಂದ ಇರುವದನ್ನು ನೋಡಿ, ಇನ್ನು ಹೊಳೆಯನ್ನು ಹೇಗೆ ದಾಟಬೇಕೆಂದು ಆತನು ಎಣಿಕೆಹಾಕಹತ್ತಿದನು. ಅಷ್ಟರಲ್ಲಿ ಧುಂಡಜಿಯು ಉಚ್ಚಸ್ವರದಿಂದ ಶ್ರೀ ಚಿದಂಬರ ನಾಮೋಚ್ಚಾರ ಮಾಡುತ್ತಿರುವದನ್ನು ಕೇಳಿ, ಬಾಪೂನು ಮನಸ್ಸಿನಲ್ಲಿ:- ಈತನು ಚಿದಂಬರನಾಮೋಚ್ಚಾರದ ಪ್ರಭಾವದಿಂದ ಹೊಳೆಯನ್ನು ದಾಟಿರಲಿಕ್ಕೆ ಬೇಕೆಂದು ಗೊತ್ತುಮಾಡಿ, ಅವನೂ ಶಿವಚಿದಂಬರ, ಹರಚಿದಂಬರ ಎಂದು ನಾಮೋಚ್ಚಾರವನ್ನು ಮಾಡುತ್ತ, ಧೈರ್ಯದಿಂದ ಕುದುರೆಯನ್ನು ಹೊಳೆಯಲ್ಲಿ ನೂಕಿ, ಹಾಹಾ ಅನ್ನುವಷ್ಟರಲ್ಲಿ ಹೊಳೆಯನ್ನು ದಾಟಿ ಹೋಗಿ, ಧುಂಡಜಿಯ ಮೇಲೆ ಏರಿ ಹೋದನು. ಇಬ್ಬರಿಗೂ ಕೈಗೆಕೈ ಹತ್ತಿತು. ಧುಂಡಜಿಯ ಕಾಲವು ಸಮೀಪಿ

ಸಿತ್ತು. ಅಂದಬಳಿಕ ಆತನಿಗೆ ಯಶದೊರೆಯುವ ಬಗೆಯೇನು? ಅವನು ಕ್ಷಣಾರ್ಧದಲ್ಲಿ ಬಾಪೂನ ಖಡ್ಗಕ್ಕೆ ಬಲಿಯಾದನು. ಬಾಪೂಗೋಖಲೆಯು ಧುಂಡಜಿಯ ಶಂಡನನ್ನು ಪಶುವಿನಂತೆ ಕರಕರಕೊಯ್ದು, ತಾನು ಮಾಡಿದ ಪ್ರತಿಜ್ಞೆಯನ್ನು ಪೂರ್ಣಮಾಡಿದನು ಬಳಿಕ ಅವನು ತನ್ನ ತಾಯಿಯನ್ನು ಕೂಡಿಕೊಂಡು ಹಿರಿಯರ ಉತ್ತರಕಾರ್ಯಾದಿಗಳನ್ನು ತೀರಿಸಿ, ಎಲ್ಲರೊಡನೆ ದೀಕ್ಷಿತರ ದರ್ಶನಕ್ಕೆ ಬಂದನು; ಹಾಗು ಅವರನ್ನು ಅಭಿವಂದಿಸಿ, ತನ್ನ ವೃತ್ತಾಂತವನ್ನೆಲ್ಲ ಹೇಳಿದನು. ಆಗ ದೀಕ್ಷಿತರು:—ನಾನು ವರ ಕೊಟ್ಟಂತೆ ನಿನಗಂತೂ ವಿಜಯವು ಪ್ರಾಪ್ತವಾಯಿತು. ಇನ್ನು ಮೇಲೆ ಸಂಸಾರದಲ್ಲಿ ಚನ್ನಾಗಿ ಲೌಕಿಕವನ್ನು ದೊರಕಿಸುವಿ. ಬಾಜೀರಾಯನಿಂದ ಬಹುಮಾನವನ್ನು ಹೊಂದುವಿ; ಬ್ರಾಹ್ಮಣರನ್ನು ಮನ್ನಿಸು; ದೀನರಲ್ಲಿ ದಯೆಯುಳ್ಳವನಾಗು; ಸದ್ಧರ್ಮದಿಂದ ವರ್ತಿಸು; ಅಂದರೆ ನಿನ್ನ ಕಲ್ಯಾಣವಾಗುವದು, ಎಂದು ಆಶೀರ್ವದಿಸಿ, ಅವನಿಗೆ ವಸ್ತ್ರಪ್ರಸಾದವನ್ನು ಕೊಟ್ಟರು. ಧೋಂಡೋಪಂತನ ಅಧಿಕಾರವನ್ನು ಬಾಪೂಗೋಖಲೆಗೆ ಕೊಟ್ಟಬಗ್ಗೆ ಬಾಜೀರಾಯನಿಂದ ಹುಕುಮು ಬಂದಿತು. ಅದನ್ನು ನೋಡಿ ಬಾಪೂವು ನವಲಗುಂದಕ್ಕೆ ಬರುವ ವಿಷಯವಾಗಿ ದೀಕ್ಷಿತರಿಗೆ ಅಗ್ರಹ ಮಾಡಿದನು. ದೀಕ್ಷಿತರು ಆತನ ಮಾತಿಗೆ ಒಪ್ಪಿಕೊಂಡರು. ಆಗ ಗೋಖಲೆಯು ದೀಕ್ಷಿತರ ಅಪ್ಪಣೆಯನ್ನು ಪಡೆದು ಮುಂದಾಗಿ ನವಲಗುಂದಕ್ಕೆ ಬಂದು ಕೋಟೆಯೊಳಗೇ ದೀಕ್ಷಿತರನ್ನು ಇಳಿಸುವ ವ್ಯವಸ್ಥೆಯನ್ನು ಮಾಡಿಸಿದನು. ಗುರುಗಳು ಸುಮುಹೂರ್ತದ ಮೇಲೆ ಪರಿವಾರದೊಂದಿಗೆ ನವಲಗುಂದಕ್ಕೆ ಬಂದರು. ಏನೂ ಕೊರತೆಯಾಗದಂತೆ ಬಾಪೂವು ಅವರ ವ್ಯವಸ್ಥೆಯನ್ನಿಡಿಸಿದನು. ದೀಕ್ಷಿತರು ಬಗೆಬಗೆಯ ಚಮತ್ಕಾರಗಳನ್ನು ತೋರುತ್ತ ಕೆಲವು ದಿವಸಗಳವರೆಗೆ ಅಲ್ಲಿ ನಿಂತುಕೊಂಡರು.

---

## ೩೬ನೆಯ ಪ್ರಕರಣ.

## ಪ್ರಭಾಕರ-ಶಂಕರರ ಮದುವೆಗಳೂ, ಕೃಷ್ಣಾತೀರ ವಾಸವೂ.

೩೦ನೆಯ ದಿನ ಪ್ರಕರಣದಲ್ಲಿ ಹೇಳಿದಂತೆ ದೀಕ್ಷಿತರು ಮನೆಯ ಜನರನ್ನೆಲ್ಲ ಕುಸುಗಲ್ಲಿನಲ್ಲಿಯೇ ಇಟ್ಟು, ತಾವು ಕುಬ್ಬೂರಿಗೆ ಹೋಗಿ, ರತ್ನಾಕರಪಂತನ ಗರ್ವಹರಣವನ್ನು ಮಾಡಿ, ತಿರುಗಿ ಕುಸುಗಲ್ಲಿಗೆ ಬಂದರು. ಮುಂದೆ ತುಸು

ದಿವಸಗಳಲ್ಲಿಯೇ ಭಕ್ತರ ಆಗ್ರಹಕ್ಕಾಗಿ ಅವರು ಪರಿವಾರದೊಡನೆ ವಕ್ಕುಂದಕ್ಕೆ ಹೋದರು. ದೀಕ್ಷಿತರಿಗೆ ಇಬ್ಬರು ಹೆಂಡಿರು ಇದ್ದರಷ್ಟೇ? ಈ ಅವಧಿಯಲ್ಲಿ ಅವರಿಗೆ ಹಿರಿಯ ಹೆಂಡತಿಯಾದ ಸರಸ್ವತೀ-ಮಾತೆಯ ಹೊಟ್ಟೆಯಲ್ಲಿ ದಿವಾಕರ, ಶಂಕರ, ಮೃತ್ಯುಂಜಯ ಮತ್ತು ವರರುಚಿ ಎಂಬ ನಾಲ್ವರು ಗಂಡುಮಕ್ಕಳೂ, ಅಕ್ಕಾ ಎಂಬ ಒಬ್ಬ ಹೆಣ್ಣುಮಗಳೂ, ಚಿಕ್ಕಹೆಂಡತಿಯಾದ ಸಾವಿತ್ರೀ-ಮಾತೆಯ ಹೊಟ್ಟೆಯಲ್ಲಿ ಕಾಶೀನಾಥ ಎಂಬೊಬ್ಬ ಮಗನೂ ಹೀಗೆ ಆರುಜನ ಮಕ್ಕಳಾಗಿದ್ದರು.

ಶ್ರೀ ಚಿದಂಬರ ದೀಕ್ಷಿತರ ತಮ್ಮಂದಿರರಾದ ಪ್ರಭಾಕರ ದೀಕ್ಷಿತರ ಕುಟುಂಬವು ಕಾಲವಶವಾದ್ದರಿಂದ, ದೀಕ್ಷಿತರು ಅವರ ಎರಡನೆಯ ಮದುವೆಯನ್ನು ಮಾಡಬೇಕೆಂದು ಯೋಚಿಸಿ, ಅವರನ್ನು ಕುರಿತು:—ಪ್ರಭಾಕರಾ, ನಾನು ನಿನ್ನ ದ್ವಿತೀಯ-ವಿವಾಹವನ್ನು ಮಾಡಬೇಕೆಂದು ಆಲೋಚಿಸಿರುವೆನು. ಅದಕ್ಕೆ ನಿನ್ನ ಅಭಿಪ್ರಾಯವೇನು? ಎಂದು ಪ್ರಶ್ನಮಾಡಲು, ಪ್ರಭಾಕರ ದೀಕ್ಷಿತರು:—ಅಣ್ಣಾ, ನನಗೆ ಈಗ ಭವ-ಬಂಧನವು ಕಡಿದುಹೋಗಿದೆ! ಮತ್ತೆ ಸಂಸಾರಬಲೆಯಲ್ಲಿ ನನ್ನನ್ನು ತೊಡಕಿಸಬೇಡ!! ದೇವರಲ್ಲಿ ಭಕ್ತಿಯನ್ನಿಟ್ಟು, ಜನ್ಮದ ಸಾರ್ಥಕ್ಯವನ್ನು ಮಾಡಿಕೊಳ್ಳುತ್ತೇನೆ! ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದರು. ಅದಕ್ಕೆ ಚಿದಂಬರ ದೀಕ್ಷಿತರು:—ಅಪ್ಪಾ ಪ್ರಭಾಕರಾ, ಈ ಲೋಕದಲ್ಲಿ ಕರ್ಮಮಾಡಿದ ಹೊರತು ಮುಕ್ತಿಗೆ ಮಾರ್ಗವಿಲ್ಲ. ಗೃಹಸ್ಥಾಶ್ರಮದಲ್ಲಿದ್ದು, ಜನ್ಮದ ಸಾರ್ಥಕವನ್ನು ಮಾಡಿಕೊಳ್ಳಲಿಕ್ಕೆ ಬರುವದಿಲ್ಲವೋ? ಜನಕರಾಜನು ಸಂಸಾರದ ಸಡಗರದಲ್ಲಿಯೇ ಇದ್ದುಕೊಂಡು ಪರಮಾರ್ಥವನ್ನು ಸಾಧಿಸಿಕೊಳ್ಳಲಿಲ್ಲವೇ? ಎಂದು ಬೋಧಿಸಿ, ಮದುವೆಯನ್ನು ಮಾಡುವ ವಿಷಯದಲ್ಲಿದ್ದ ತಮ್ಮ ಆಗ್ರಹವನ್ನು ತೋರ್ಪಡಿಸಿದರು. ಆಗ ಪ್ರಭಾಕರ ದೀಕ್ಷಿತರು ಉಪಾಯವಿಲ್ಲದೆ ಅಣ್ಣನ ಮಾತಿಗೆ ಸಮ್ಮತಿಸಿದರು. ಬಳಿಕ ಚಿದಂಬರ ದೀಕ್ಷಿತರು ಸುಲಕ್ಷಣಗಳುಳ್ಳ ಒಬ್ಬ ಕನ್ಯೆಯನ್ನು ನೋಡಿ, ಶುಭ-ಮುಹೂರ್ತದಲ್ಲಿ ತಮ್ಮನ ಮದುವೆಯನ್ನು ಒಳ್ಳೇ ಸಂಭ್ರಮದಿಂದ ಮಾಡಿದರು. ಈ ಮದುವೆಯು ಉಗರಗೊಳ್ಳದಿಂದ ಅರ್ಧ-ಯೋಜನದ ಮೇಲಿರುವ ಬೆಟಸೂರ ಗ್ರಾಮದ ಸಮೀಪವರ್ತಿಯಾದ ಅಸುಂಡಿಯಲ್ಲಿ ಶಕೆ ೧೬೭೬ ದುರ್ಮತಿ-ಸಂವತ್ಸರದಲ್ಲಾಯಿತು. ದಿನಾಲು ಅಸಂಖ್ಯಜನ ಬ್ರಾಹ್ಮಣರು ಮಿಷ್ಟಾನ್ನದಿಂದತೃಪ್ತರಾಗುತ್ತಿದ್ದರು. ಲಗ್ನಕಾರ್ಯವು ಮುಗಿದ ಬಳಿಕ ದೀಕ್ಷಿತರು ವಕ್ಕುಂದಕ್ಕೆ ಹೋದರು.

ಶ್ರೀ ಚಿದಂಬರ ದೀಕ್ಷಿತರು ಮುಂದೆ ಕೆಲವು ದಿವಸಗಳವರೆಗೆ ವಕ್ಕುಂದದ

ಲ್ಲಿಯೇ ಭಕ್ತರನ್ನು ಉದ್ಧರಿಸುತ್ತ ನಿಂತುಕೊಂಡರು. ಒಂದು ದಿವಸ ಅವರು ದಿವಾಕರದೀಕ್ಷಿತರನ್ನು ಏಕಾಂತದಲ್ಲಿ ಕರೆದು—ದಿವಾಕರಾ, ಇದೇ ಸಂವತ್ಸರ ದಲ್ಲಿ ಶಂಕರನ ಮದುವೆಯನ್ನು ಮಾಡಬೇಕೆಂದು ಆಲೋಚಿಸಿರುವೆನು. ಕಾರಣ ಒಂದು ಚಲೋ ಕನ್ಯೆಯನ್ನು ನೋಡು ಎಂದು ಹೇಳಿದರು. ಆಗ ದಿವಾಕರ ದೀಕ್ಷಿತರು ಚನ್ನಾಗಿ ಶೋಧ ಮಾಡಿ, ಒಬ್ಬ ಗುಣವತಿಯಾದ ಕನ್ಯೆಯನ್ನು ಗೊತ್ತುಮಾಡಿ ತಂದೆಗೆ ಅರುಹಿದರು. ಆಗ ಶ್ರೀ ಚಿದಂಬರ ದೀಕ್ಷಿತರು, ಆ ಕನ್ಯೆಯು ನಮ್ಮ ಮನಸಿಗೆ ಬರುವದಿಲ್ಲೆಂದು ಹೇಳಿದರು. ಅದಕ್ಕೆ ದಿವಾಕರ ದೀಕ್ಷಿತರು—"ತಂದೆಯವರೇ, ನಾನು ಕನ್ಯೆಯನ್ನು ಚನ್ನಾಗಿ ಪರೀಕ್ಷಿಸಿ, ಅವಳ ಪಾಲಕರಿಗೆ ವಚನವನ್ನು ಕೊಟ್ಟಿರುವೆನು. ಅದ್ದರಿಂದ ಆ ಕನ್ಯೆಯಕೂಡ ಶಂಕ ರನ ವಿವಾಹವನ್ನು ಮಾಡಲೇಬೇಕು" ಎಂದು ಬಿನ್ನವಿಸಲು, ದೀಕ್ಷಿತರು ನಿರು ಪಾಯಂರಾಗಿ ಮಗನ ಮಾತನ್ನು ಒಪ್ಪಿಕೊಂಡರು. ಲಗ್ನದ ಸಿದ್ಧತೆಯು ಭರ ದಿಂದ ಸಾಗಿತು. ಲಗ್ನದ ಮೇಲ್ವಿಚಾರಣೆಯನ್ನು ದಿವಾಕರ ದೀಕ್ಷಿತರೇ ನೋಡು ತ್ತಿದ್ದರು. ಅವರ ದರ್ಪವು ವಿಶೇಷವಾಗಿದ್ದದರಿಂದ, ಕಾರ್ಯಕಾರಿ-ಮಂಡ ಲಿಯು ತಮ್ಮ ತಮ್ಮ ಕೆಲಸಗಳನ್ನು ಒಮ್ಮನಸಿನಿಂದ ಮಾಡುತ್ತಿತ್ತು. ಗೊತ್ತು ಮಾಡಿದ ಮುಹೂರ್ತಕ್ಕೆ ಬೀಗರು ಸರಿಯಾಗಿ ಬಂದರು. ವಿವಾಹದ ಮುನ್ನಾ ದಿವಸದಲ್ಲಿ ಎದುಗೊಳ್ಳುವ, ಸೀಮಾಂತಪೂಜನ ಮುಂತಾದ ಕಾರ್ಯಗಳು ಯಥಾಸಾಂಗವಾಗಿ ನೆರವೇರಿದವು. ಬಳಿಕ ಮರುದಿವಸ ಲಗ್ನಸಮಾರಂಭವು ಯಥಾಸಾಂಗವಾಗಿ ನೆರವೇರಿತು. ದಂಪತಿಗಳು ಪಾಣಿಗ್ರಹಣ-ಮಹೋತ್ಸವ ದಿಂದ ಆನಂದಪಟ್ಟರು. ಲಗ್ನಸಮಾರಂಭವು ಒಂದು ತಿಂಗಳವರೆಗೆ ನಡೆದಿತ್ತು. ಒಟ್ಟಿಗೆ ಒಂದು ಲಕ್ಷ ಬ್ರಾಹ್ಮಣರ ಭೋಜನವಾಯಿತು. ಈ ಲಗ್ನದಲ್ಲಿ ಬಹು ದೊಡ್ಡ ಸಮುದಾಯವು ಕೂಡಿದ್ದರೂ, ಕಳವು, ವ್ಯಭಿಚಾರ ಮೊದಲಾದ ದುಷ್ಕೃತ್ಯಗಳಾವವೂ ಒದಗಲಿಲ್ಲ! ಜಗಳಕ್ಕೆ ಆಸ್ಪದ ದೊರೆಯಲಿಲ್ಲ. ದೀಕ್ಷಿ ತರು ಸೊಸೆಯ ಹೆಸರನ್ನು ಪಾರ್ವತಿಯೆಂದಿಟ್ಟರು. ಲಗ್ನಸಮಾರಂಭವೆಲ್ಲ ತೀರಿದ ಬಳಿಕ, ಚಿದಂಬರ ದೀಕ್ಷಿತರು ಎಲ್ಲರನ್ನು ಕರಕೊಂಡು ಮತ್ತೆ ಕುಸು ಗಲ್ಲಿಗೆ ಬಂದರು. ಒಂದು ವರ್ಷದ ತರುವಾಯ ಅವರು, ತಮ್ಮ ಕುಲಸ್ವಾಮಿಯ ಬಳಿಯಲ್ಲಿ ಮೃತ್ಯುಂಜಯನ ಉಪನಯನವನ್ನು ಮಾಡಬೇಕೆಂದು ಯೋಚಿಸಿ, ದೇವರ-ಹಿಪ್ಪರಗಿಗೆ ಹೋಗಬೇಕೆಂದು ಹೊರಟರು. ಮಾರ್ಗದಲ್ಲಿ ಬಗೆಬಗೆಯ ಚಮತ್ಕಾರಗಳು ಒದಗಿದವು. ಅವುಗಳನ್ನೆಲ್ಲ ವರ್ಣಿಸಲಿಕ್ಕೆ ನಮ್ಮ ಲೆಕ್ಕಣಿಕೆಯು

ಶಕ್ತಿಯು ಸಾಲದು. ಆದರೂ ಅವುಗಳಲ್ಲಿ ಒಂದು ಮಹತ್ವದ ಚಮತ್ಕಾರ ವನ್ನು ಇಲ್ಲಿ ಹೇಳದಿರಲಾರೆವು.

ಶ್ರೀ ಚಿದಂಬರ ದೀಕ್ಷಿತರು ಸಾವಿರಾರುಜನ ಬ್ರಾಹ್ಮಣರಿಂದೊಡಗೂಡಿ, ದಿನಾಲು ೪-೫ ಹರದಾರಿಗಳವರೆಗೆ ಮಾರ್ಗಕ್ರಮಣಮಾಡುತ್ತ, ಒಂದು ದಿವಸ ಕೃಷ್ಣಾನದಿಯ ತೀರದಲ್ಲಿ ತಳವೂರಿದರು. ಆಗ ಕೃಷ್ಣಾನದಿಗೆ * ಭಾಗೀರಥಿ ಯು ಬಂದದ್ದರಿಂದ ಎಲ್ಲರೂ ಒಂದು ತಿಂಗಳವರೆಗೆ ಅಲ್ಲಿಯೇ ನಿಲ್ಲುವದು ಗೊತ್ತಾಗಿ, ಅದರಂತೆ ವ್ಯವಸ್ಥೆಮಾಡಲ್ಪಟ್ಟಿತು. ಶ್ರೀ ಚಿದಂಬರ ದೀಕ್ಷಿತರು ಮೊದಲನೆಯ ದಿವಸ ಎಲ್ಲ ಬ್ರಾಹ್ಮಣರ ಕಡೆಯಿಂದ ಕನ್ಯಾಗತ-ವಿಧಿಯನ್ನು ವಿಧ್ಯುಕ್ತವಾಗಿ ಮಾಡಿಸಿದರು. ಮಧ್ಯಾಹ್ನದಲ್ಲಿ ಎಲ್ಲ ಬ್ರಹ್ಮವೃಂದವು ಕೃಷ್ಣಾ ತೀರದಲ್ಲಿ ಹಾಕಿದ ಮಂಟಪದಲ್ಲಿ ಭೋಜನಕ್ಕೆ ಕೂತಿತು. ಒಡಿಸುವ ಕೆಲಸವು ಮುಗಿಯಲು, ದೀಕ್ಷಿತರು ಶ್ರೀ ಕೃಷ್ಣೆಯನ್ನು ಪ್ರಾರ್ಥಿಸಿ, ಬ್ರಾಹ್ಮಣರನ್ನು ಊಟಕ್ಕೆ ಕೂಡಲು ವಿನಂತಿಸಿದರು. ಭೋಜನವು ಒಳ್ಳೇ ಸಂಭ್ರಮದಿಂದ ನಡೆದಿರಲು, ಕೃಷ್ಣೆಯು ದೀಕ್ಷಿತರಿಗೆ ದರ್ಶನ ಕೊಡುವದಕ್ಕಾಗಿ ಒಬ್ಬ ಕುರೂ ಪಿಣಿಯಂತೆ ವೇಷವನ್ನು ಧರಿಸಿ, ಪಂಙ್ಕ್ತಿಯಲ್ಲಿ ಬಂದಳು. ದೀಕ್ಷಿತರು ಅವಳಿಗೆ ನಮಸ್ಕಾರ ಮಾಡಿದರು; ಆದರೆ ಅಜ್ಞಾನಿಗಳಾದ ಬ್ರಾಹ್ಮಣರು ಆ ಸ್ತ್ರೀಯನ್ನು ಧಿಃಕರಿಸತೊಡಗಿದರು. ಆಗ ಅವಳು ಮಾಯವಾದಳು. ಈಗ ಎಲ್ಲರಿಗೂ ಸೋಜಿಗ ವೆನಿಸಿತು. ಊಟವು ಮುಗಿದ ಬಳಿಕ, ಎಂಜಲ-ಎಲೆಗಳನ್ನೆಲ್ಲ ಕೃಷ್ಣಾನದಿಯಲ್ಲಿ ಚಲ್ಲಲಿಕ್ಕೆ ದೀಕ್ಷಿತರ ಅಪ್ಪಣೆಯಾಯಿತು. ಅದರಂತೆ ಮಾಡಲು, ಪತ್ರಾವಳಿಗಳು ನೀರಿನಲ್ಲಿ ಮುಳುಗಹತ್ತಿದವು. ಈ ಅದ್ಭುತವನ್ನು ನೋಡಿ ಬ್ರಾಹ್ಮಣರು ಪಶ್ಚಾ ತ್ತಾಪಬಟ್ಟರು. ನಮ್ಮ ಭೋಜನ ಕಾಲದಲ್ಲಿ ಪ್ರಾಪ್ತಳಾದ ಸ್ತ್ರೀಯು ಶ್ರೀ ಕೃಷ್ಣಾಬಾಯಿಯೇ! ಅವಳನ್ನು ನಾವು ತಿಳಿಯದೆ ಅವಮಾನಿಸಿದೆವು. ಆದರ

---

* ಒಂದೊಂದು ರಾಶಿಗೆ ಗುರುಬಂದಾಗ ಒಂದೊಂದು ತೀರ್ಥದಲ್ಲಿ ಭಾಗೀರಥಿಯು ಬರು ತ್ತಾಳೆ. ಮೇಷಕ್ಕೆ ಗುರುಬಂದಾಗ ವಿಷ್ಣುವಿನ ಎಡಪಾದವಿರುವ ಮುಕ್ತಾಪಟ್ಟಣದಲ್ಲಿ, ವೃಷಭಕ್ಕೆ ಗಂಡಕಿಯಲ್ಲಿ, ಮಿಥುನಕ್ಕೆ ವಾರಣಾಸಿಯಲ್ಲಿ. ಕರ್ಕಕ್ಕೆ ಕಾವೇರಿಯಲ್ಲಿ, ಸಿಂಹಕ್ಕೆ ಗೋದಾವರಿ ಯಲ್ಲಿ, ಕನ್ಯೆಗೆ ಕೃಷ್ಣೆಯಲ್ಲಿ, ತುಲಾಕ್ಕೆ ತುಂಗಭದ್ರೆಯಲ್ಲಿ ವೃಶ್ಚಿಕಕ್ಕೆ ವಿಶಾಲಾನದಿಯಲ್ಲಿ, ಧನುಕ್ಕೆ ಕೋದಂಡತೀರ್ಥದಲ್ಲಿ, ಮಕರಕ್ಕೆ ಮಲಾಪಹಾರಿಯಲ್ಲಿ, ಕುಂಭಕ್ಕೆ ಕುಂಭಕೋಣ ದಲ್ಲಿ. ಮೀನಕ್ಕೆ ಮಾನಸ-ಸರೋವರದಲ್ಲಿ ಹೀಗೆ ಪ್ರತಿಯೊಂದು ರಾಶಿಗೆ ಗುರುಬರಲು, ಆಯಾ ರಾಶಿಗೆ ಗೊತ್ತುಮಾಡಿದ ಪುಣ್ಯಸ್ಥಳಗಳಲ್ಲಿ ಭಾಗೀರಥಿಯು ಬರುತ್ತಾಳೆ.

ನಿದರ್ಶನಕ್ಕಾಗಿ ದೀಕ್ಷಿತರು ನಮಗೆ ಪರ್ಣಗಳ ಈ ಚಮತ್ಕಾರವನ್ನು ತೋರಿಸಿದರು. ಇನ್ನು ಅವರನ್ನೇ ಪ್ರಾರ್ಥಿಸಿ ಕೃಷ್ಣೆಯ ದರ್ಶನವನ್ನು ತಕ್ಕೊಳ್ಳಬೇಕೆಂದು ಯೋಚಿಸಿ, ಅದರಂತೆ ಮಾಡಲು, ಶ್ರೀ ಚಿದಂಬರ ದೀಕ್ಷಿತರು ಎಲ್ಲರಿಗೂ ಕೃಷ್ಣೆಯ ದರ್ಶನವನ್ನು ಮೊದಲಿನ ಸ್ತ್ರೀರೂಪದಿಂದಲೇ ಮಾಡಿಸಿದರು. ಸತ್ಸಂಗತಿಯ ಮಹಿಮೆಯೇ ಇಂತಿರುವದು!

## —ಕೃಷ್ಣಾತೀರದಲ್ಲಿರುವಾಗಿನ ದಿನಚರ್ಯೆ—

ಪ್ರತಿದಿವಸ ಎಲ್ಲರೂ ಉಷಃಕಾಲದಲ್ಲೆದ್ದು, ಭೂಮಾತೆಯನ್ನು ಪ್ರಾರ್ಥಿಸಿ ಪ್ರಾತಃಸ್ಮರಣೆಯನ್ನು ಮಾಡಿ, ಪ್ರಾತರ್ವಿಧಿಯನ್ನು ತೀರಿಸುತ್ತಿದ್ದರು; ಬಳಿಕ ಸ್ನಾನವನ್ನು ಮಾಡಿ; ಶುಚಿರ್ಭೂತರಾಗಿ, ಸಂಧ್ಯಾವಂದನಾದಿ ಬ್ರಾಹ್ಮಣೋಚಿತ ಕರ್ಮಗಳನ್ನು ಮಾಡುತ್ತಿದ್ದರು. ಇಷ್ಟಾದ ಬಳಿಕ ಗಾಯಕರು ಗಾಯನವನ್ನೂ, ಪಂಡಿತರು ಶಾಸ್ತ್ರ-ಚರ್ಚೆಯನ್ನೂ ಮಾಡುತ್ತಿದ್ದರು. ಅನಂತರ ಭೋಜನವಾಗುತ್ತಿತ್ತು. ಇಳಿಹೊತ್ತಿನಲ್ಲಿ ವೇದಾಂತ ಚರ್ಚೆಯು ಆಗುತ್ತಿತ್ತು. ಸಾಯಂಕಾಲದಲ್ಲಿ ಕೃಷ್ಣಾ-ಮಾಹಾತ್ಮ್ಯದ ಪ್ರವಚನವಾಗಿ ದೀಪೋತ್ಸವವು ಮಾಡಲ್ಪಡುತ್ತಿತ್ತು. ತೀರದಲ್ಲಿ ಹಚ್ಚಲ್ಪಟ್ಟ ಲಕ್ಷಗಟ್ಲೆ ದೀಪಗಳ ಪ್ರತಿಬಿಂಬಗಳು ನೀರಿನಲ್ಲಿ ಮೂಡುವದರಿಂದ ಅಪೂರ್ವ ಶೋಭೆಯುಂಟಾಗುತ್ತಿತ್ತು. ಆಗ ಅವು ನಕ್ಷತ್ರಗಳಂತೆ ತೋರುತ್ತಿದ್ದವು. ಶ್ರೀ ಕೃಷ್ಣಾಬಾಯಿಗೆ ಮಂಗಲಾರತಿಯನ್ನು ಮಾಡಲು, ಸಕ್ಕರಿ, ಕೊಸಂಬರಿ, ಹಣ್ಣು, ಟೆಂಗಿನಕಾಯಿ ಇವುಗಳ ಪನಿವಾರವು ಹಂಚಲ್ಪಡುತ್ತಿತ್ತು. ಬಳಿಕ ಹಸಿವೆಯಾದವರು ತಮಗೆ ಬೇಕಾದ ಜೀನಸುಗಳನ್ನು ತಿಂದು, ವಿಶ್ರಾಂತಿಯನ್ನು ಹೊಂದುತ್ತಿದ್ದರು. ದೀಪೋತ್ಸವದ ಪೂರ್ವದಲ್ಲಿಯೇ ಎಲ್ಲರೂ ಸಾಯಾಹ್ನದ ಕರ್ಮಗಳನ್ನು ಮುಗಿಸಿ ಕೊಳ್ಳುತ್ತಿದ್ದರು.

ಈ ಪ್ರಕಾರ ಒಂದು ತಿಂಗಳ ವರೆಗೆ ಶ್ರೀ ಚಿದಂಬರ ದೀಕ್ಷಿತರು ಉತ್ಸವವನ್ನು ಮಾಡಿ, ಅಲ್ಲಿಂದ ಮತ್ತೆ ಎಲ್ಲರೊಡನೆ ಮಾರ್ಗವನ್ನು ಕ್ರಮಿಸಹತ್ತಿದರು. ಹಾದಿಯಲ್ಲಿ ಹತ್ತಿದ ಗ್ರಾಮಗಳೊಳಗಿನ ಜನರು ಉಡುಗರೆಗಳನ್ನು ತಕ್ಕೊಂಡು ಬಂದು, ದೀಕ್ಷಿತರ ದರ್ಶನವನ್ನು ತಕ್ಕೊಳ್ಳುತ್ತಿದ್ದರು. ದೀಕ್ಷಿತರು ಆ ಉಡುಗರೆಗಳಿಗೆ ಸ್ಪರ್ಶಮಾಡಿ ತಿರುಗಿ ಕೊಡುತ್ತಿದ್ದರು. ಒಂದು ದಿವಸ ಅವರು ಹಿಪ್ಪರಗಿಯಿಂದ ಒಂದು ಹರದಾರಿಯ ಮೇಲಿರುವ 'ಪಡಗಾನೂರ' ಎಂಬ ಗ್ರಾಮದಲ್ಲಿ ಇಳುಕೊಂಡಿದ್ದರು. ಅಲ್ಲಿ ಒಂದು ಚಮತ್ಕಾರವಾಯಿತು, ಅಲ್ಲಿಯ

ಗ್ರಾಮಾಧಿಕಾರಿಗಳು ವೀರವೈಷ್ಣವರೂ, ಸ್ಮಾರ್ತದ್ವೇಷಿಗಳೂ, ದ್ವೈತವಾದಿಗಳೂ, ಭಕ್ತಿವಿಹೀನರೂ ಆದ ಆಚಾರ್ಯರಿದ್ದರು. ಊರೊಳಗಿನ ಎಷ್ಟೋ ಜನರು ದೀಕ್ಷಿತರ ದರ್ಶನವನ್ನು ತಕ್ಕೊಂಡು ಬಂದರು; ಆದರೆ ಗ್ರಾಮಾಧಿಕಾರಿಗಳು ಮಾತ್ರ ದೀಕ್ಷಿತರ ದರ್ಶನಕ್ಕೆ ಹೋಗಲಿಲ್ಲ. ಆಗ ದೀಕ್ಷಿತರು ಅವರನ್ನು ಎಚ್ಚರಗೊಳಿಸಬೇಕೆಂದು ಕರೆಕಳುಹಿದರು. ಆದರೂ ಅವರು ಬರಲಿಲ್ಲ. ಆಗ ದೀಕ್ಷಿತರು ಅವರಿಗೆ:—ನಾಳೆ ನಿಮ್ಮ ಗ್ರಾಮಕ್ಕೆ ಅಗ್ನಿಬಾಧೆಯಾಗುವ ಸಂಭವವದೆ; ಕಾರಣ ಜೋಕೆಯಿಂದ ಇರಬೇಕು, ಎಂದು ಹೇಳಿ ಕಳುಹಿ, ತಾವು ಆ ರಾತ್ರಿ ಅಲ್ಲಿಯೇ ಇದ್ದು, ಮರುದಿವಸ ಮುಂಜಾನೆ ಎಲ್ಲರೊಡನೆ ಹಿಪ್ಪರಿಗಿಗೆ ಹೋದರು. ಬಳಿಕ ಅವರು ಸ್ನಾನ-ಸಂಧ್ಯಾವಂದನಾದಿ ಕರ್ಮಗಳನ್ನು ತೀರಿಸಿ ಶ್ರೀ ಮಾರ್ತಂಡಭೈರವನನ್ನು ವಿಧ್ಯುಕ್ತವಾಗಿ ಪೂಜಿಸಿದರು. ಅಷ್ಟರಲ್ಲಿ ಪಡಗಾನೂರ ಗ್ರಾಮದೊಳಗಿನ ಗ್ರಾಮಾಧಿಕಾರಿಗಳ ಗೃಹಗಳಿಗೆ ಒಮ್ಮೆಲೆ ಅಗ್ನಿಭಾಧೆಯಾಯಿತು. ಅಗ್ನಿನಾರಾಯಣನು ಸ್ವಲ್ಪಾವಕಾಶದಲ್ಲಿಯೇ ಉಗ್ರಸ್ವರೂಪವನ್ನು ಧಾರಣಮಾಡಿದಂತೆ ತೋರಹತ್ತಿದನು. ಊರಿಗೆ ಊರೇ ಸುಡುವ ಹಾಗೆ ತೋರಹತ್ತಿತು. ಆಗ ಊರೊಳಗಿನ ಜನರು ಒತ್ತಟ್ಟಿಗೆ ಕೂಡಿ, ಗ್ರಾಮಾಧಿಕಾರಿಗಳನ್ನು ಆಡಿಕೊಳ್ಳಹತ್ತಿದರು. ಬೆಂಕಿಯನ್ನು ನಂದಿಸುವ ಇಚ್ಛೆಯು ಒಬ್ಬರಿಗೂ ಆಗಲೊಲ್ಲದು. 'ಕಳ್ಳನ ಜೀವವು ಹುಳ್ಳ ಹುಳ್ಳಗೆ' ಎಂಬಂತೆ ದೀಕ್ಷಿತರ ದರ್ಶನವನ್ನು ನಾವು ತೆಗೆದುಕೊಳ್ಳಲಿಲ್ಲ. ಅವರ ಮಾತನ್ನೂ ಲೆಕ್ಕಿಸಲಿಲ್ಲ. ಆದ್ದರಿಂದ ಈ ಅನಿಷ್ಟವು ಸಂಭವಿಸಿರಬಹುದೇ? ಎಂಬ ಸಂಶಯವು ಗ್ರಾಮಾಧಿಕಾರಿಗಳ ಮನಸ್ಸಿನಲ್ಲುಂಟಾಯಿತು. ಅಷ್ಟರಲ್ಲಿ ಆ ಊರ ಗ್ರಾಮದೇವತೆಯು ಪೂಜಾರಿಯ ಮೈಯಲ್ಲಿ ಸಂಚರಿಸಿ:—ಎಲೈ ಗ್ರಾಮಾಧಿಕಾರಿಗಳೇ, ಇನ್ನೂ ನಿಮ್ಮ ಕಣ್ಣಮೇಲಿನ ಪರಿಯು ಹೋಗಲೊಲ್ಲದೋ? ಶಿವನಲ್ಲಿಯೂ ವಿಷ್ಣುವಿನಲ್ಲಿಯೂ ನಿಜವಾಗಿ ಏನೂ ಭೇದವಿಲ್ಲ ತಮ್ಮ ತಮ್ಮ ಮತದಂತೆ ನಡೆಯಲಿಕ್ಕೆ ಯಾವ ಪ್ರತಿಬಂಧವೂ ಇಲ್ಲ; ಆದರೆ ಮತಾಭಿಮಾನದಿಂದ ಅನ್ಯರನ್ನು ಅಲ್ಲಗಳೆಯುವದು ಮಾತ್ರ ನಿಂದ್ಯವು. ನೀವು ಶ್ರೀ ಚಿದಂಬರದೀಕ್ಷಿತರನ್ನು ಅವಮಾನಿಸಿರುವಿರಿ. ಕಾರಣ ಈ ಅರಿಷ್ಟವು ನಿಮ್ಮ ಮೇಲೆ ಬಂದಿರುವದು. ನೀವು ಈಗಲೇ ದೀಕ್ಷಿತರ ಬಳಿಗೆ ಹೋಗಿ ಕ್ಷಮೆಯನ್ನು ಬೇಡಿಕೊಳ್ಳಿರಿ; ಅಂದರೆ ನಿಮ್ಮ ಸಂಕಟದ ನಿವಾರಣವಾಗುವದು, ಎಂದು ನುಡಿಯಲು, ಗ್ರಾಮಾಧಿಕಾರಿಗಳು ಅಂಜಿ, ರೈತರನ್ನು ಕೂಡಿಕೊಂಡು ಹಿಪ್ಪರಿಗಿಗೆ ಬಂದು, ಆಹ ಸಂಗತಿ

ಯನ್ನು ದೀಕ್ಷಿತರಿಗೆ ಅರುಹಿ, ಅಪರಾಧವನ್ನು ಕ್ಷಮಿಸಿರೆಂದು ಅಂಗಲಾಚಿ ಬೇಡಿಕೊಂಡರು; ಹಾಗು ಅವರು ದೀಕ್ಷಿತರ ಚರಣಗಳ ಮೇಲೆ ಹೊರಳಾಡ ಹತ್ತಿದರು.

ಆಗ ದೀಕ್ಷಿತರು ಅವರನ್ನು ಎಬ್ಬಿಸಿ:—ನೀವು ದೊಡ್ಡ ಆಚಾರ್ಯರು! ವಿಷ್ಣುಭಕ್ತರು!! ನಾವು ಶೈವರು; ನಮ್ಮ ಕಡೆಗೆ ಏಕೆ ಬಂದಿರಿ? ಒಳ್ಳೇದು ಆದದ್ದಾಯಿತು. ಇನ್ನು ಮುಂದೆ ಹೀಗೆ ದುರಭಿಮಾನಿಗಳಾಗಬೇಡಿರಿ; ಸದ್ಬುದ್ಧಿಯಿಂದ ನಡೆಯಿರಿ. ಅಂದರೆ ನಿಮ್ಮ ಕಲ್ಯಾಣವಾಗುವದು ನಿಮ್ಮ ಮತದ ದುರಭಿಮಾನವು ಈಗ ನಿಮ್ಮಲ್ಲಿ ಕಡಿಮೆಯಾದ್ದರಿಂದ, ಅಗ್ನಿನಾರಾಯಣನು ನಿಮ್ಮ ಮೇಲೆ ದಯಮಾಡಿರುವನು. ನೀವು ಸ್ವಲ್ಪಾದರೂ ಚಿಂತೆಯನ್ನು ಮಾಡದೆ ಹೊರಟು ಹೋಗಿರಿ; ಹಾಗು ಈವೊತ್ತು ಗ್ರಾಮದೇವತೆಯ ಹೆಸರಿನಿಂದ ಬ್ರಾಹ್ಮಣ ಭೋಜನವನ್ನು ಮಾಡಿಸಿರಿ, ಎಂದು ಉಪದೇಶಿಸಲು, ಎಲ್ಲರೂ ದೀಕ್ಷಿತರಿಗೆ ಸಾಷ್ಟಾಂಗವಾಗಿ ಎರಗಿ, ಮರಳಿ ತಮ್ಮ ಗ್ರಾಮಕ್ಕೆ ಬಂದರು. ಅಷ್ಟರಲ್ಲಿ ಅಗ್ನಿನಾರಾಯಣನು ತನ್ನಷ್ಟಕ್ಕೆ ತಾನೇ ಶಾಂತನಾಗಿದ್ದನು ಇಷ್ಟೇ ಅಲ್ಲ; ಈ ಮೊದಲು ಆತನು ಸುಟ್ಟ ಮನೆಗಳು ಮೊದಲಿನಂತೆಯೇ ಆಗಿದ್ದವು. ಆಗ ದೀಕ್ಷಿತರ ವಿಷಯವಾಗಿ ಎಲ್ಲರಲ್ಲ ವಿಶೇಷವಾಗಿ ಆಚಾರ್ಯರಲ್ಲಿ ಪೂಜ್ಯಬುದ್ಧಿಯುಂಟಾಯಿತು. ಅವರು ಮತ್ತೆ ಮರುದಿವಸ ಒಳ್ಳೇ ಸಡಗರದಿಂದ ದೀಕ್ಷಿತರ ದರ್ಶನವನ್ನು ತಕ್ಕೊಂಡು, ಅಂದಿನಿಂದ ಭೇದಭಾವರಹಿತರಾಗಿ ನಡೆಯಹತ್ತಿದರು.

---

## ೪ನೆಯ ಪ್ರಕರಣ.

## ಹಿಪ್ಪರಿಗಿಯಲ್ಲಿ ಪ್ರಕಟಿಸಿದ ಮಹಿಮೆ.



**ಪಂಗ್ತಿಭೇದ-ಪರಸ್ತ್ರೀಗಮನಗಳನ್ನು ಬಿಡಿಸಿದ್ದು**:-ಶ್ರೀ ಚಿದಂಬರ ದೀಕ್ಷಿತರು ಭಕ್ತಜನರಿಗೆ ವಿವಿಧಚಮತ್ಕಾರಗಳನ್ನು ತೋರಿಸುತ್ತ, ಹಿಪ್ಪರಿಗಿಯಲ್ಲಿ ಗಾಯತ್ರೀ ಮಂತ್ರದ ತ್ರಿದಶಲಕ್ಷ ಜಪವನ್ನೂ, ಶ್ರೀ ಮಾರ್ತಂಡ ಭೈರವನಿಗೆ ಮಹಾರುದ್ರಾಭಿಷೇಕವನ್ನೂ ಬ್ರಾಹ್ಮಣರಿಂದ ಮಾಡಿಸಿ, ಶ್ರೀ ಮ್ಹಾಳಸಾಕಾಂತನಿಗೆ ಲಕ್ಷ ಪ್ರದಕ್ಷಿಣೆಗಳನ್ನು ಹಾಕಿಸಿದರು. ದಿನಾಲು ಐದು

ನೂರು ಜನರ ಒಂದೊಂದು ಪಂಗ್ತಿಯಂತೆ ಎಷ್ಟೋ ಪಂಗ್ತಿಗಳ ವರೆಗೆ ಬ್ರಾಹ್ಮಣ ಭೋಜನವಾಗುತ್ತಿತ್ತು. ಇವರ ಹೊರತು ಶೂದ್ರರ ಸಲುವಾಗಿ ದಿನಾಲು ಹೋಳಿಗೆ, ಹುಗ್ಗಿ, ಪಲ್ಲೆ, ಅನ್ನ ಈ ಪ್ರಕಾರ ಅಡಿಗೆಯಾಗುತ್ತಿತ್ತು. ಹಬ್ಬವಿದ್ದ ದಿವಸ ಅವರಿಗೆ ಹಾಲು-ತುಪ್ಪಗಳನ್ನು ಬೇಕಾದಷ್ಟು ಕೊಡುತ್ತಿದ್ದರು. ಭಕ್ತರು ದೀಕ್ಷಿತರಿಗೋಸುಗ ಹಳ್ಳಿ-ಪಳ್ಳಿಗಳಿಂದ ಬಗೆಬಗೆಯು ಕಾಯಿಪಲ್ಲೆಗಳನ್ನೂ, ಬಾಳೆಯು ಎಲೆಗಳನ್ನೂ ಕಳಿಸುತ್ತಿದ್ದರು. ಶ್ರೀಗುರು ಪ್ರಸಾದ ಭಕ್ಷಣದಿಂದ ನಿಪುತ್ರಿಕರು ಪುತ್ರವಂತರೂ, ರೋಗಿಗಳು ಆರೋಗ್ಯವಂತರೂ ಆಗುತ್ತಿದ್ದರು. ಇರಲಿ.

ಕೃಷ್ಣಾನದಿಯು ಪೂರ್ವಭಾಗದಲ್ಲಿ ಯಾದಗಿರಿ ಎಂಬ ಗ್ರಾಮುವಿರುವದು. ಅಲ್ಲಿಯು ದೇಸಾಯಿಯು ಕಣ್ವಶಾಖೆಯುವನಿದ್ದನು. ಅವನು ದೈವವುಳ್ಳವನಿದ್ದರೂ, ಆತನಿಗೆ ಸಂತತಿಯಿದ್ದಿಲ್ಲ; ಅದ್ದರಿಂದ ಅವನು ಪ್ರಪಂಚದಲ್ಲಿ ನಿರಾಶೆಯುಳ್ಳವನಾಗಿ, ಪರೋಪಕಾರದ ಕೆಲಸಗಳನ್ನು ಮಾಡತೊಡಗಿದನು. ಮೇಲೆ ಹೇಳಿದ ಗ್ರಾಮುದ ಸಮೀಪದಲ್ಲಿ ನೀರಿನ ಕೊರತೆಯು ವಿಶೇಷವಾಗಿದ್ದದರಿಂದ, ದೇಸಾಯಿಯು ತನ್ನ ಊರ ನಾಲ್ಕುದಿಕ್ಕುಗಳಲ್ಲಿ ನಾಲ್ಕು ಬಾವಿಗಳನ್ನು ಅಗಿಸಿದನು; ಆದರೆ ನೀರು ವಿಪುಲವಾಗಿ ಬೀಳಲಿಲ್ಲ; ಆದರೂ ಬಂದಷ್ಟೇ ನೀರಿನಿಂದ ಜನರ ವಿಶ್ರಾಂತಿಯು ಸಲುವಾಗಿ ಬಾವಿಯು ಸುತ್ತಲು, ಚಿಕ್ಕ ಚಿಕ್ಕ ಆರಾಮುಗಳನ್ನು ಮಾಡಿಸಿದನು. ಬೇಸಿಗೆಯಲ್ಲಿ ಬಾವಿಯು ನೀರು ಬತ್ತಿಹೋಗುತ್ತಿದ್ದದರಿಂದ ಆಗ ಈ ಆರಾಮುಗಳೆಲ್ಲ ಹಾಳಾಗಿ ಹೋಗುತ್ತಿದ್ದವು. ಹೀಗಾಗಿ ಜನರಿಗೆ ಅವುಗಳಿಂದ ಆಗತಕ್ಕಷ್ಟು ಉಪಯೋಗವು ಆಗದಂತಾಯಿತು ಮುಂದೆ ಅವನು ಬಾವಿಯಲ್ಲಿ ನೀರು ವಿಪುಲವಾಗಬೇಕೆಂಬ ಇಚ್ಛೆಯಿಂದ ದಾನ-ಧರ್ಮಗಳನ್ನೂ, ದೈವೀ ಉಪಾಯಗಳನ್ನೂ ಮಾಡಹತ್ತಿದನು; ಆದರೆ ಅದರಿಂದ ಏನೂ ಉಪಯೋಗವಾಗಲಿಲ್ಲ. ಆಗ ಆತನು ಬೇಸತ್ತು ಈ ವಿಷಯುವಾಗಿ ಶ್ರೀ ಚಿದಂಬರ ದೀಕ್ಷಿತರನ್ನು ವಿಚಾರಿಸಿಕೊಳ್ಳಬೇಕೆಂದು, ಸಕುಟುಂಬ ಹಿಪ್ಪರಿಗಿಗೆ ಬಂದನು; ಹಾಗು ತನ್ನ ಅಭಿಪ್ರಾಯುವನ್ನು ದೀಕ್ಷಿತರಿಗೆ ಅರುಹಿದನು. ಆಗ ದೀಕ್ಷಿತರು ನೀನು ಒಳ್ಳೇಪರೋಪಕಾರಿಯಾಗಿರುವಿ! ಪರಮೇಶ್ವರನು ನಿನ್ನ ಬಯಕೆಯನ್ನು ಪೂರ್ಣ ಮಾಡುವನು. ನೀನು ಇಲ್ಲಿಂದ ಹೋಗಿ ಬಾವಿಯನ್ನು ಪೂಜಿಸಿ, ಇಪ್ಪತ್ತು ಸಾವಿರ ಬ್ರಾಹ್ಮಣ ಭೋಜನವನ್ನು ಮಾಡಿಸಿ, ಎಲ್ಲ ಬಾವಿಗಳನ್ನು ಮತ್ತೆ ಎರಡು ಮೊಳ ಅಗಿಸಿ, ಈಶಾನ್ಯ ಮೂಲೆಯಲ್ಲಿ ಒಂದು ಮೊಳ ಸ್ಥಳವನ್ನು ತುಸ ಹೆಚ್ಚಿಗೆ

ಆಗಿಸು; ಆಂದರೆ ನೀರು ವಿಪುಲವಾಗಿ ಬೀಳುವವು, ಎಂದು ಹೇಳಲು, ದೇಸಾಯಿಯು ಸಂತುಷ್ಟನಾಗಿ, ಗುರುಗಳ ಅಪ್ಪಣೆಯು ಮೇರೆಗೆ ಸ್ವಗ್ರಾಮಕ್ಕೆ ಹೋಗಿ ಬಾವಿಯನ್ನು ಪೂಜಿಸಿ ಬ್ರಾಹ್ಮಣ ಭೋಜನವನ್ನಾರಂಭಿಸಿದನು.

ಈ ಸುದ್ದಿಯು ಊರೊಳಗಿನ ಕೆಲವುಜನ ಕುಹಕರಿಗೆ ತಿಳಿಯಲು, ಅವರು ದೇಸಾಯಿಗೆ:-ಹಣವನ್ನು ವ್ಯರ್ಥವಾಗಿ ಯಾಕೆ ವೆಚ್ಚಮಾಡುವಿ? ಬ್ರಾಹ್ಮಣ ಭೋಜನ ಮಾಡಿಸಿದಷ್ಟಕ್ಕೆ ನೀರು ಬೀಳುವವೋ? ಎಂದು ಉಪದೇಶ ಮಾಡ ಹತ್ತಿದರು; ಆದರೆ ಗುರುವಚನದಲ್ಲಿ ಪೂರ್ಣನಂಬಿಗೆಯುಳ್ಳ ದೇಸಾಯಿಯು ಯಾರ ಮಾತಿಗೂ ಕಿವಿಗೊಡದೆ, ದೀಕ್ಷಿತರ ಹೇಳಿಕೆಯಂತೆ ಮಾಡಲು, ಭಾವಿಯಲ್ಲಿ ನೀರು ವಿಪುಲವಾಗಿ ಬಿದ್ದವು. ಆದರಿಂದ ಬರ-ಹೋಗುವ ಮಾರ್ಗಸ್ಥರಿಗೂ, ಗ್ರಾಮವಾಸಿಗಳಿಗೂ ಬಹು ಅನುಕೂಲವಾಯಿತು. ಇಷ್ಟಾದ ಬಳಿಕ ದೇಸಾಯಿಯು ಕುಟುಂಬ ಸಹಿತವಾಗಿ ಮತ್ತೆ ದೀಕ್ಷಿತರ ದರ್ಶನಕ್ಕೆ ಬಂದು, ಆದ ವರ್ತಮಾನವನ್ನೆಲ್ಲ ಹೇಳಿದನು. ಅದಕ್ಕೆ ದೀಕ್ಷಿತರು:-ನೀನು ಬಹು ಪರೋಪಕಾರಿಯು. ಎಲ್ಲ ದಾನಗಳಲ್ಲಿ ಅನ್ನ-ನೀರುಗಳ ದಾನವೇ ಶ್ರೇಷ್ಠವಾದದ್ದು, ಇದರ ಹೊರತು ಬೇರೆ ಬೇಕಾದಷ್ಟು ದಾನಮಾಡಿದರೂ ಮನುಷ್ಯನ ಬಾಯಿಂದ 'ಸಾಕು' ಎಂಬ ಆಶಾಪೂರ್ತಿಯು ಶಬ್ದಗಳೇ ಹೊರಡುವದಿಲ್ಲ. ನೀನು ಶ್ರೇಷ್ಠತರ ದಾನವನ್ನು ಮಾಡಿರುವಿ; ಏನಾದರೂ ನಿನ್ನ ಬಯಕೆಯಿದ್ದರೆ, ಸ್ಪಷ್ಟವಾಗಿ ಅರುಹು, ಎಂದು ನುಡಿಯಲು, ದೇಸಾಯಿಯು ನಮ್ರತನದಿಂದ ತನ್ನ ಪುತ್ರೇಚ್ಛೆಯನ್ನು ಬೈಲಿಗಿಟ್ಟನು. ಆಗ ದೀಕ್ಷಿತರು:—ನೀನು ಒಬ್ಬ ಪರಸ್ತ್ರೀಯಲ್ಲಿ ರತನಾಗಿರುವಿ; ಅಲ್ಲದೆ ಮಹಾ ಪಾಪದಾಯಕವಾದ ಪಂಗ್ತಿಭೇದವನ್ನು ಮಾಡುತ್ತಿರುವಿ. ಇವೆರಡು ಕಾರಣಗಳ ಮೂಲಕ ನಿನಗೆ ಸಂತತಿಯಾಗಲೊಲ್ಲದು. ಅವುಗಳನ್ನು ಬಿಟ್ಟು-ಬಿಟ್ಟರೆ, ನಿನಗೆ ಸಂತತಿಯಾಗುವದು, ಎಂದು ಹೇಳಿದರು. ಆಗ ದೇಸಾಯಿಯು ಇನ್ನು ಮೇಲೆ ಪಂಗ್ತಿಭೇದವನ್ನೂ, ಪರಸ್ತ್ರೀಗಮನವನ್ನೂ ಮಾಡುವದಿಲ್ಲೆಂದು ಹೇಳಿ, ಅಪ್ಪಣೆಯನ್ನು ಪಡಕೊಂಡು ಮರಳಿ ತನ್ನ ಗ್ರಾಮಕ್ಕೆ ಹೊರಟು ಹೋದನು.

ಈಶಾನುಗ್ರಹದಿಂದ ದೇಸಾಯಿಯ ಹೆಂಡತಿಯು ತೀವ್ರವೇ ಗರ್ಭಿಣಿಯಾದಳು. ಗರ್ಭಕ್ಕೆ ಐದು ತಿಂಗಳುಗಳಾದವು. ಆಗ ದೇಸಾಯಿಗೆ ಬಹು ಆನಂದವಾಯಿತು. ಆತನು ಅನೇಕ ಉತ್ಸವಗಳನ್ನು ಮಾಡಿಸಿದನು. ಈ ಸಂಭ್ರಮದಲ್ಲಿ ಆತನಿಗೆ ಗುರುವಚನದ ವಿಸ್ಮೃತಿಯಾಗಿ, ಅವನು ಮತ್ತೆ ತನ್ನ ಕುಕರ್ಮದಲ್ಲಿ

ಪ್ರವೃತ್ತನಾದನು. ಗುರುವಚನ ಭಂಗದೋಷವು ಆತನನ್ನು ಬಾಧಿಸದೆ ಬಿಡಲಿಲ್ಲ. ಆತನ ಶರೀರದಲ್ಲಿ ವ್ರಣಗಳುಂಟಾಗಿ ಕೀವು ಸೋರಹತ್ತಿತು. ಆತನ ಪತ್ನಿಯ ಗರ್ಭಪಾತವಾಯಿತು. ಈ ಪ್ರಕಾರ ಸಂಕಟ ಪರಂಪರೆಯು ಒದಗಲು, ದೇಸಾಯಿಗೆ ದೀಕ್ಷಿತರ ವಚನಗಳು ನೆನಪಾದವು; ಆದರೆ ಮೊದಲೇ ಬುದ್ಧಿಯು ಹೋದದರಿಂದ ಆತನು ನಿರುಪಾಯವುಳ್ಳವನಾದನು. ಆಗ ಅವನ ಹೆಂಡತಿಯು ಗಟ್ಟಿ ಮನಸ್ಸು ಮಾಡಿ, ತಾನೊಬ್ಬಳೇ ದೀಕ್ಷಿತರ ಬಳಿಗೆ ಬಂದು, ಆದ ವರ್ತಮಾನವನ್ನೆಲ್ಲ ಹೇಳಿ, ಗಂಡನ ಅಪರಾಧದ ಬಗ್ಗೆ ಕ್ಷಮೆಯನ್ನು ಯಾಚಿಸಹತ್ತಿದಳು; ಹಾಗು ಪತಿಯ ವ್ಯಾಧಿಯ ನಿವಾರಣಾರ್ಥವಾಗಿಯೂ, ಸಂತತಿಯ ಸಲುವಾಗಿಯೂ ಅಂಗಲಾಚಿ ಬೇಡಿಕೊಂಡು ದೀಕ್ಷಿತರ ಮುಂಭಾಗದಲ್ಲಿ ಹೊರಳಾಡಹತ್ತಿದಳು. ಆಗ ಆ ಪತಿವ್ರತೆಯ ಬಗ್ಗೆ ದೀಕ್ಷಿತರಿಗೆ ಅಂತಃಕರಣ ಹುಟ್ಟಿತು. ಅವರು ಆ ದೇಸಾಯಿಯ ಹೆಂಡತಿಗೆ ಅಭಯವನ್ನಿತ್ತು:-ನಾನು ದಿನಾಲು ಇತ್ತ ಕಡೆಯಿಂದ ಹೊಸ-ಹೊಸ ನೂರುಜನ ಬ್ರಾಹ್ಮಣರನ್ನು ಕಳಿಸಿಕೊಡುತ್ತೇನೆ. ನೀವು ಅವರನ್ನು ಪಂಚೋಪಚಾರದಿಂದ ಪೂಜಿಸಿ, ಅವರ ಚರಣ ತೀರ್ಥವನ್ನು ಉಭಯತರೂ ಪ್ರಾಶನಮಾಡಿ, ಸ್ವಲ್ಪ ಚರಣತೀರ್ಥದಲ್ಲಿ ಬ್ರಾಹ್ಮಣರ ಚರಣಧೂಲಿಯನ್ನು ಕಲಿಸಿ, ಅದನ್ನು ಪತಿಯ ಮೈಗೆ ಲೇಪಿಸಬೇಕು. ಅನಂತರ ಸುಗ್ರಾಸ ಭೋಜನದಿಂದಲೂ, ತಾಂಬೂಲ-ದಕ್ಷಿಣಾದಿಗಳಿಂದಲೂ ಬ್ರಾಹ್ಮಣರನ್ನು ಸಮಾಧಾನಗೊಳಿಸಬೇಕು. ಇದರಂತೆ ಏಳುದಿವಸಗಳ ವರೆಗೆ ಮಾಡಿದರೆ, ನಿನ್ನ ಗಂಡನಿಗೆ ಗುಣವಾಗುವದು; ನೀನೂ ತಿಂಗಳೊಳಗಾಗಿ ಗರ್ಭಿಣಿಯಾಗುವಿ, ಎಂದು ಹೇಳಲು, ದೇಸಾಯಿಯ ಹೆಂಡತಿಯು ದೀಕ್ಷಿತರನ್ನು ಕೊಂಡಾಡುತ್ತ ಮರಳಿ ತನ್ನ ಊರಿಗೆ ಬಂದು, ಅವರು ಹೇಳಿದಂತೆಯೇ ಯಾವತ್ತು ಸಂಗತಿಗಳನ್ನು ಮಾಡಿದಳು; ಅದರಿಂದ ದೇಸಾಯಿಗೆ ಗುಣವಾಯಿತು; ಅವಳೂ ಗರ್ಭಿಣಿಯಾದಳು. ಒಂಭತ್ತು ತಿಂಗಳು ತುಂಬಲು, ಅವಳು ಗಂಡುಕೂಸನ್ನು ಹೆತ್ತಳು. ಆಗ ಎಲ್ಲರಿಗೂ ಆನಂದವಾಯಿತು. ಮಗುವಿಗೆ ಮೂರು ವರ್ಷಗಳು ತುಂಬಲು, ಅವರೆಲ್ಲರು ಪುನಃ ದೀಕ್ಷಿತರ ದರ್ಶನಕ್ಕೆ ಬಂದರು. ಆಗ ದೀಕ್ಷಿತರು ಅವರನ್ನು ಮತ್ತೆ ಬೋಧಿಸಿ, ಆಶೀರ್ವದಿಸಿ ಕಳಿಸಿದರು. ಅಂದಿನಿಂದ ಆ ದಂಪತಿಗಳು ತಮ್ಮ ಶೀಲವನ್ನು ಕಾಯ್ದುಕೊಂಡು ಸತ್ಕರ್ಮಗಳಲ್ಲಿ ನಿರತರಾಗಿ, ಕಾಲವನ್ನು ಕಳೆಯುತ್ತ ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಿದರು.



**೨ ಮೃತವಿಪ್ರ-ಸಂಜೀವನ:**—ಹಿಪ್ಪರಿಗೆಯಲ್ಲಿ ಶ್ರೀ ಚಿದಂಬರ ದೀಕ್ಷಿತರ ಪಂಗ್ತಿಯಲ್ಲಿ ನೂರಾರುಜನ ಬ್ರಾಹ್ಮಣರ ಭೋಜನವಾಗುತ್ತಿತ್ತು. ಗುಡಿಯ ಸುತ್ತಲೂ ಹಂದರವನ್ನು ಹಾಕಿ, ಬ್ರಾಹ್ಮಣ ಭೋಜನಕ್ಕೆ ರಮ್ಯವಾದ ಸ್ಥಳವನ್ನು ಸಿದ್ಧಪಡಿಸಿದ್ದರು. ದಿನಾಲು ಊಟಕ್ಕೆ ಬಹಳ ತಡವಾಗುತ್ತಿತ್ತು. ಒಂದು ದಿವಸ ದಿವಾಕರ ದೀಕ್ಷಿತರು ತಂದೆಯನ್ನು ಕುರಿತು:-ಅಪ್ಪಾ, ನಾಳಿನಿಂದ ಊಟದ ವ್ಯವಸ್ಥೆಯನ್ನು ತೀವ್ರವಾಗಿ ಮಾಡಿಸುತ್ತೇನೆ. ತಾವು ತಮ್ಮ ಆಹ್ನಿಕವನ್ನು ಬೇಗನೆ ತೀರಿಸಬೇಕು ಬ್ರಾಹ್ಮಣರ ಊಟವಾದ ಬಳಿಕ ತಮ್ಮ ಊಟವಾಗಬೇಕೆಂದರೆ, ಬಹಳ ತಡವಾಗುವದು; ಕಾರಣ ಬ್ರಾಹ್ಮಣರ ಅಡಿಗೆಯನ್ನು ಬೇರೆ ಮಾಡಿಸುವೆನು, ಎಂದು ನುಡಿಯಲು, ಅದಕ್ಕೆ ದೀಕ್ಷಿತರು:-ಅಪ್ಪಾ, ದಿವಾಕರಾ, ನಮ್ಮ ಮನೆತನದಲ್ಲಿ ಬೇಕಾದಷ್ಟು ತಡವಾದರೂ ಬ್ರಾಹ್ಮಣ ಭೋಜನವಾದ ಹೊರತು, ಊಟಮಾಡುವ ಸಾಂಪ್ರದಾಯವಿಲ್ಲ, ಆದ್ದರಿಂದ ಈಗಿದ್ದ ವ್ಯವಸ್ಥೆಯೇ ಇರಲಿ, ಹೊಸ ವ್ಯವಸ್ಥೆಯನ್ನು ಮಾಡಬೇಡ, ಎಂದು ಹೇಳಿದರು. ಆದರೆ ಚಂಡಿಸ್ವಭಾವವುಳ್ಳ ದಿವಾಕರ ದೀಕ್ಷಿತರು ತಂದೆಯ ಮಾತಿಗೆ ಕಿವಿಗೊಡದೆ ಮರುದಿವಸ ಎರಡುಪ್ರಹರದ ಒಳಗಾಗಿ ಅಡಿಗೆಯ ವ್ಯವಸ್ಥೆಯನ್ನು ಮಾಡುವಂತೆ ಅಡಿಗೆಯವರಿಗೂ, ತಮ್ಮ-ತಮ್ಮ ಆಹ್ನಿಕಗಳನ್ನು ಬೇಗನೇ ತೀರಿಸಿಕೊಂಡು ಬರಬೇಕೆಂದು ಬ್ರಾಹ್ಮಣರಿಗೂ ಕಟ್ಟಪ್ಪಣೆಯನ್ನು ಮಾಡಿದರು. ಮರುದಿವಸ ಅದರಂತೆ ಅಡಿಗೆಯವರು ಅಡಿಗೆಯನ್ನು ಸಿದ್ಧಮಾಡಿದರು. ಬ್ರಾಹ್ಮಣರೂ ಭೋಜನಕ್ಕಾಗಿ ಮಂಟಪದೊಳಗೆ ಬಂದು ಕುಳಿತುಕೊಂಡರು. ದಿವಾಕರ ದೀಕ್ಷಿತರ ಈ ಚಂಡಿತನದ ಸ್ವಭಾವಕ್ಕೆ ತುಸ ಪಟ್ಟಿಗಾದರೂ ಪ್ರತಿಬಂಧವಾಗಬೇಕೆಂದು ಚಿದಂಬರ ದೀಕ್ಷಿತರು ಒಂದು ಚಮತ್ಕಾರವನ್ನು ತೋರಿಸಿದರು. ಇನ್ನು ಊಟಕ್ಕೆ ಎಲೆಗಳನ್ನು ಹಾಕತಕ್ಕವರಿದ್ದರು; ಅಷ್ಟರಲ್ಲಿ ಒಮ್ಮೆಲೆ ಬಿರುಗಾಳಿಯು ಬೀಸಹತ್ತಿ, ಹಂದರದ ಒಂದು ಕಂಬವು ನಡುವೇ ಮುರಿದು, * 'ರಾಮಯೋಗಿ' ಎಂಬ ಬ್ರಾಹ್ಮಣನ ತಲೆಯ ಮೇಲೆ ಬಿದ್ದದ್ದರಿಂದ ಆತನಿಗೆ ಬಲವಾದ ಮೂರ್ಛೆಯು ಬಂತು. ಎಲ್ಲರು ಗಾಬರಿಯಾದರು. ಊಟದ ಮಾತು ಒತ್ತಟ್ಟಿಗುಳಿಯು, ಸರ್ವರೂ ಚಿಂತಾಕ್ರಾಂತರಾದರು. ದಿವಾಕರ ದೀಕ್ಷಿತರಂತೂ ವರ್ತಿಸಿದ ಅನರ್ಥವನ್ನು

* ಇವನು ತೆಲಗುದೇಶದ ಬ್ರಾಹ್ಮಣನು. ಒಂದು ವರ್ಷದ ಕೆಳಗೆ ದೀಕ್ಷಿತರ ದರ್ಶನಕ್ಕೆಂದು ಬಂದಿದ್ದನು. ಆತನಲ್ಲಿ ಯಾವದೋ ಒಂದು ಪೂರ್ವ ಸಂಸ್ಕಾರದ ದೋಷವಿದ್ದದರಿಂದ ಇದುವರೆಗೆ ಅವನಿಗೆ ದೀಕ್ಷಿತರ ದರ್ಶನವಾಗಿದ್ದಿಲ್ಲ.

ನೋಡಿ, ದಿಗಿಲುಬಿದ್ದು ಶ್ರೀಚಿದಂಬರ ದೀಕ್ಷಿತರ ಕಡೆಗೆ ಬಂದು, ಆದ ಸಂಗತಿಯನ್ನು ಹೇಳಿದರು ಆಗ ದೀಕ್ಷಿತರು:— ಗಾಬರಿಯಾಗಬೇಡ, ಆ ಬ್ರಾಹ್ಮಣನ ಮೈಮೇಲೆ ಒಂದು ವಸ್ತ್ರವನ್ನು ಹೊಚ್ಚಿ, ಗಾಳಿ ಹತ್ತದಂಥ ಸ್ಥಳದಲ್ಲಿ ಅವನನ್ನು ಒಯ್ದು ಮಲಗಿಸು; ಮೃತ್ಯುಂಜಯನು ಕೃಪೆಮಾಡುವನು, ಎಂದು ಮಗನಿಗೆ ಆಶ್ವಾಸನವನ್ನು ಕೊಟ್ಟರು. ಆಗ ದಿವಾಕರ ದೀಕ್ಷಿತರು ರಾಮಯೋಗಿಯನ್ನು ಒಯ್ದು ಒಂದು ನಿವಾಂತಸ್ಥಳದಲ್ಲಿ ಮಲಗಿಸಿದರು; ಅಷ್ಟರಲ್ಲಿ ಆತನ ಪ್ರಾಣೋತ್ಕ್ರಮಣವಾಯಿತು. ಆಗ ದಿವಾಕರ ದೀಕ್ಷಿತರಿಗೆ ಪಶ್ಚಾತ್ತಾಪವಾಯಿತು. ಅವರು ತಂದೆಯ ಬಳಿಗೆ ಬಂದು, ವಿಪ್ರನು ಮೃತಪಟ್ಟ ಸುದ್ದಿಯನ್ನು ಹೇಳಿದರು. ಆಗ ದೀಕ್ಷಿತರು:-ಇಂತಹ ಅಬದ್ಧ ಮಾತುಗಳನ್ನು ಆಡಬಾರದು. ಯಾವಾಗಲೂ 'ಶುಭಂ ಬ್ರೂಯಾತ್' ಒಳ್ಳೇಯದನ್ನೇ ಮಾತಾಡುತ್ತಿರಬೇಕು, ಎಂದು ಹೇಳಿದರು; ಅಷ್ಟರಲ್ಲಿ ರಾಮಯೋಗಿಯು ಸತ್ತ ಸುದ್ದಿಯು ಆತನ ಹೆಂಡತಿಗೆ ತಿಳಿಯಿತು. ಆಗ ಅವಳು ಮೊದಲು ದೀಕ್ಷಿತರ ಬಳಿಗೆ ಬಂದು, ಅವರನ್ನು ಅಭಿವಂದಿಸಿದಳು. ದೀಕ್ಷಿತರು ಅವಳಿಗೆ 'ಅಷ್ಟಪುತ್ರ ಸೌಭಾಗ್ಯವತೀಭವ' ಎಂದು ಆಶೀರ್ವದಿಸಿದರು.

ವಿಪ್ರಸ್ತ್ರೀಯು--ನನ್ನ ಪತಿಯು ಮೃತವಾಗಿರುವನಂತೆ! ತಾವಂತೂ ನನಗೆ ಮಂಗಲಾಶೀರ್ವಾದವನ್ನು ಕೊಟ್ಟಿರುವಿರಿ, ಈ ತಮ್ಮ ಆಶೀರ್ವಾದದ ಗತಿಯೇನು? ತಾವು ತಮ್ಮ ವಚನವನ್ನು ಸತ್ಯಮಾಡದಿದ್ದರೆ ನಾನಂತೂ ಸಾಯುತ್ತೇನೆ.

ದೀಕ್ಷಿತರು:—"ತಾಯಿ, ಹೀಗೆ ಕೆಟ್ಟ ಶಬ್ದಗಳನ್ನು ಉಚ್ಚರಿಸಬೇಡವ್ವಾ! ಶಂಕರನು ನಿನ್ನ ಚಿಂತೆಯನ್ನು ದೂರಮಾಡುವನು. ಎಲಾ, ದಿವಾಕರಾ, ಈಕೆಯನ್ನು ಶ್ರೀ ಮಾರ್ತಂಡೇಶ್ವರನ ಬಳಿಗೆ ಕರಕೊಂಡು ಹೋಗಿ, ಇವಳ ಕೈಯಲ್ಲಿ ಭಕ್ತರ ಕಡೆಯಿಂದ ತೀರ್ಥ-ಕುಂಕುಮ-ಭಂಡಾರ ಮುಂತಾದ ಪ್ರಸಾದವನ್ನು ಕೊಡಿಸು" ಎಂದು ದೀಕ್ಷಿತರು ನುಡಿಯಲು, ದಿವಾಕರದೀಕ್ಷಿತರು ವಿಪ್ರಸ್ತ್ರೀಗೆ ಪ್ರಸಾದವನ್ನು ಕೊಡಿಸಿದರು. ಇಷ್ಟರಲ್ಲಿ ಕೆಲವು ಜನ ಕುಹಕರಾದ ಬ್ರಾಹ್ಮಣರು ದೀಕ್ಷಿತರ ಬಳಿಗೆ ಬಂದು—ತಡವಾಗುತ್ತದೆ; ವಿಪ್ರನು ಸತ್ತು ಬಹಳ ಹೊತ್ತಾಯಿತು. ಮುಂದಣ ಕಾರ್ಯಕ್ಕೆ ಅಪ್ಪಣೆಯನ್ನು ಕೊಡಬೇಕು. ಎನಲು, ದೀಕ್ಷಿತರು—ನಿಮ್ಮ ಅಭಿಪ್ರಾಯವು ಗೊತ್ತಾಯಿತು. ನಮ್ಮ ಪರೀಕ್ಷೆಯನ್ನು ಮಾಡುವದಕ್ಕಾಗಿಯೇ ತಾವು ಅವಸರ ಮಾಡುವಂತೆ ತೋರುತ್ತದೆ. ಹೀಗೆ ಅವಸರ ಮಾಡಬೇಡಿರಿ. ಸದಾಶಿವನ ಲೀಲೆಯು ಅಗಾಧವಾಗಿದೆ! ಎಂದು

ತೀಕ್ಷ್ಣ ಮಾತುಗಳನ್ನಾಡಲು, ಬ್ರಾಹ್ಮಣರು ಸುಮ್ಮನಾದರು. ಅಷ್ಟರಲ್ಲಿ ದಿವಾಕರ ದೀಕ್ಷಿತರು ತಂದೆಯ ಬಳಿಗೆ ಬಂದವು, ಕೈಜೋಡಿಸಿ—ಈಗ ಎಲ್ಲವೂ ನನ್ನ ಲಕ್ಷ್ಯದಲ್ಲಿ ಬಂತು. ನಾನೇ ಸರ್ವಸ್ವಿ ಅಪರಾಧಿಯಾಗಿರುವೆನು. ತಮ್ಮ ವಚನವನ್ನುಲ್ಲಂಘಿಸಿ, ಅಲ್ಲದ ಕೆಲಸಕ್ಕೆ ಕೈಹಾಕಿರುವದರಿಂದ ಈ ಅನರ್ಥವು ಒದಗಿತು. ಕೃತಾಪರಾಧಗಳನ್ನು ಕ್ಷಮಿಸಬೇಕು. ಇದರಲ್ಲಿ ನನ್ನ ಮಾನ-ಹಾನಿಯಾದರೆ, ತಮ್ಮ ಮಾನ-ಹಾನಿಯಾದಂತಾಗಲಿಲ್ಲವೇ? ತಾವು ಮೃತ-ವಿಪ್ರ ಸ್ತ್ರೀಗೆ ಕೊಟ್ಟ 'ಅಷ್ಟಪುತ್ರಾ-ಸೌಭಾಗ್ಯವತೀಭವ' ಎಂಬ ಆಶೀರ್ವಾದವನ್ನು ಸತ್ಯವಾಗಮಾಡಿರಿ, ಎಂದು ಬೇಡಿಕೊಂಡರು.

ಆಗ ದೀಕ್ಷಿತರು:—ಸಮಸ್ತ ಸಂಕಟಗಳನ್ನು ಸಂಹಾರ ಮಾಡಲು, ಸಾಂಬನು ಸಮರ್ಥನಿರುವನು. ನೀನು ಸ್ವಲ್ಪಾದರೂ ಚಿಂತಿಸಬೇಡ, ಎಂದು ಮಗನಿಗೆ ಧೈರ್ಯ ಕೊಟ್ಟು, ಅವನೊಡನೆ ಶ್ರೀ ಮಲ್ಲಾರಿಯ ದರ್ಶನವನ್ನು ತಕ್ಕೊಂಡು, ಅಲ್ಲಿಯ ವಿಭೂತಿ-ತೀರ್ಥಗಳನ್ನು ದಿವಾಕರದೀಕ್ಷಿತರ ಕೈಯಲ್ಲಿ ಕೊಟ್ಟು, ಬ್ರಾಹ್ಮಣರಿಂದ ಕೂಡಿಕೊಂಡು ರಾಮಯೋಗಿಯು ಇದ್ದಡೆಗೆಬಂದರು. ಅಷ್ಟರಲ್ಲಿ ರಾಮಯೋಗಿಯ ಹೆಂಡತಿಯೂ ಎದೆ ಎದೆ ಬಡಕೊಳ್ಳುತ್ತ ಅಲ್ಲಿಗೆ ಬಂದಳು; ಹಾಗು ಸತ್ತ ಗಂಡನನ್ನು ನೋಡಿ, ಪರಿಪರಿಯಿಂದ ಶೋಕ ಮಾಡ ಹತ್ತಿದಳು:—ಗುರುಗಳೇ, ಪತಿಯು ಮೃತನಾದನು. ಇನ್ನು ನನ್ನ ಗತಿಯೇನು? ಜನರಿಗೆ ಈ ನನ್ನ ಅಮಂಗಲ ಮೋರೆಯನ್ನು ಹ್ಯಾಗೆ ತೋರಿಸಲಿ? ನನಗೆ ತಾಯಿ-ತಂದೆಗಳಿಲ್ಲ, ಮಕ್ಕಳಿಲ್ಲ, ಭಾವ-ಮೈದುನರಿಲ್ಲ, ಅಣ್ಣ-ತಮ್ಮಂದಿರಿಲ್ಲ, ಯಾರ ಆಶ್ರಯವೂ ಇಲ್ಲ. ನಾನು ತೀರ ನಿರಾಶ್ರಿತಳಾಗಿರುವೆನು. ಇನ್ನು ಮೇಲೆ ನನ್ನನ್ನು ಯಾರು ಕಾಪಾಡುವರು ಅಯ್ಯೋ ದೇವರೇ, ನಾನು ಮಹಾ ಪಾಪಿಣಿಯು! ಅಜ್ಞಾನದ ಮೂಲಕ ನಾನು ಅಲಂಕಾರಗಳ ಸಲುವಾಗಿ ಅವರನ್ನು ಬಹಳವಾಗಿ ಕಾಡಿದೆನು! ಇನ್ನೇನು ಮಾಡಲಿ? ಮಹಾಸ್ವಾಮಿಯೇ, ನನ್ನ ಪತಿಯ ಪ್ರಾಣಗಳನ್ನುಳುಹಿ, ನೀನು ಕೊಟ್ಟ ಆಶೀರ್ವಾದವನ್ನು ಪೂರ್ಣಮಾಡು ಹೀಗೆ ಮಾಡದೆ ಇದ್ದಲ್ಲಿ ನಾನು ಗಂಡನೊಡನೆ ಸಹಗಮನವನ್ನು ಮಾಡಿ, ಸ್ವರ್ಗದಲ್ಲಿ ನಿನ್ನ ಅಪಕೀರ್ತಿಯನ್ನು ಹರಡುವೆನು. ನಾನು ನಿಮ್ಮ ಪ್ರಸಾದದಿಂದ ಸಂಸಾರವನ್ನು ಸುಖಮಯವಾಗಿ ಮಾಡಿಕೊಳ್ಳಬೇಕೆಂದು ಇಲ್ಲಿಗೆ ಬಂದಿದ್ದೆನು. ಕಡೆಗೆ ನನ್ನ ಗತಿಯು ಹೀಗಾಯಿತು! ಎಂದು ಪರಿಪರಿಯಿಂದ ಹಲಬುತ್ತ, ಹಾಗು ದೀಕ್ಷಿತರನ್ನು ಅಡಿಕೊಳ್ಳುತ್ತ, ದುಃಖಿಸಹತ್ತಿದಳು. ಅವಳ ಆ ಶೋಕ

ವನ್ನು ನೋಡಿ, ದೀಕ್ಷಿತರಿಗೆ ಆವಳ ವಿಷಯವಾಗಿ ದಯೆಯುಂಟಾಯಿತು. ಆಗ ದೀಕ್ಷಿತರು ಆ ವಿಪ್ರಸ್ತ್ರೀಯನ್ನು ಕುರಿತು—ನೀನು ಸುಮ್ಮನೆ ಶೋಕಮಾಡ ಬೇಡ. ನಿನ್ನ ಸೌಭಾಗ್ಯವು ಸುರಕ್ಷಿತವಾಗಿರುವದು! ನೀನು ಶೋಕವನ್ನು ಬಿಟ್ಟು ಇನ್ನೆರಡು ಗಳಿಗೆಗಳವರೆಗೆ ಸುಮ್ಮನೆ ಕುಳಿತುಕೊಳ್ಳು, ಹಾಗು ನಾನು ಹೇಳುವ ಮಾತನ್ನು ಕೇಳು. ನಿನ್ನ ಗಂಡನು ಬ್ರಹ್ಮಘ್ನನೂ, ದುಷ್ಟನೂ, ಸ್ಪರ್ಶಕ್ಕೆ ಸಹ ಅಯೋಗ್ಯನೂ ಆಗಿರುವನು; ಆದರೆ ನಿನ್ನ ಸಲುವಾಗಿ ಆತನನ್ನು ಮುಟ್ಟ ಬೇಕಾಗಿದೆ. ಕಳೆದ ಜನ್ಮದಲ್ಲಿ ಅವನು ಹಾದಿಯನ್ನು ಬಡಿಯುವದು, ಕಳವು ಮಾಡುವದು, ನರಹತ್ಯ ಇವೇ ಮೊದಲಾದ ಕುಕರ್ಮಗಳನ್ನು ಮಾಡಿರುವನು. ಆದರೂ ಅವನು ದಿನಾಲು ತಪ್ಪದೆ ಶಿವಲಿಂಗಾರ್ಚನೆಯನ್ನು ಮಾಡಿರುವನು. ಆದ್ದರಿಂದ ಇಂತಹ ಘೋರಪಾಪಗಳೂ ಕೂಡ ದಗ್ಧವಾಗಿ ಅವನ ಪದರಿನಲ್ಲಿ ಕೆಲವು ಪುಣ್ಯಾಂಶವು ಬಿದ್ದಿರುವದು. ಅದರ ಕಸುವಿನಿಂದ ಈಗ ಆತನಿಗೆ ಬ್ರಾಹ್ಮಣ ಜನ್ಮವು ಪ್ರಾಪ್ತವಾಗಿರುವದು. ಆತನ ಪ್ರಾರಬ್ಧವು ನಮಗೆ ಗೊತ್ತುಂಟು. ನೀನು ಕುಸವೇಳೆ ಒತ್ತಟ್ಟಿಗೆ ಕುಳಿತುಕೋ ಎಂದು ಮಾತಾ ಡಲು, ರಾಮಯೋಗಿಯ ಸ್ತ್ರೀಯು ದೀಕ್ಷಿತರಿಗೆ ನಮಸ್ಕಾರ ಮಾಡಿ, ಒತ್ತಟ್ಟಿಗೆ ಕುಳಿತುಕೊಂಡಳು. ಬಳಿಕ ದೀಕ್ಷಿತರು ವೈದ್ಯರ ಕಡೆಯಿಂದಲೂ, ದಿವಾಕರ ದೀಕ್ಷಿತರ ಕಡೆಯಿಂದಲೂ ರಾಮಯೋಗಿಯ ಶರೀರವನ್ನು ಪರೀಕ್ಷಿಸಿದರು. ಎಲ್ಲರೂ—ವಿಪ್ರನು ಸತ್ತಿರುವನು. ಶರೀರವು ಕೂಡ ತಣ್ಣಗಾಗಿರುವದು, ಎಂದು ಹೇಳಿದರು. ಬಳಿಕ ಅದೇ ಊರೊಳಗಿನ ಮಲ್ಲಾರಿಯ ಭಕ್ತನಾದ ನೀಲಕಂಠಭಟ್ಟನನ್ನು ಕರೆಯಿಸಿ, ಆತನ ಕೈಯಿಂದಲೂ ರಾಮಯೋಗಿಯ ಶರೀರ ವನ್ನು ಪರೀಕ್ಷಿಸಿದರು. ಆತನೂ ಹಾಗು ಶಂಕರದೀಕ್ಷಿತರೂ ಇತರರಂತೆಯೇ ಹೇಳಲು,

ದೀಕ್ಷಿತರು:—ಅಪ್ಪಗಳಿರಾ, ಹೀಗೆ ಅಶುಭವಚನಗಳನ್ನು ಉಚ್ಚರಿಸ ಬಾರದು. ಅಸ್ತು-ಪ್ರಸ್ತು, ಎಂಬ ದೇವತೆಗಳು ಯಾವಾಗಲೂ, ಆಕಾಶ ಮಾರ್ಗ ದಲ್ಲಿ ಸಂಚರಿಸುತ್ತ ಶುಭಾಶುಭಗಳೆರಡಕ್ಕೂ 'ತಥಾಸ್ತು' ಎಂದು ನುಡಿಯು ತ್ತಿರುತ್ತಾರೆ. ಕಾರಣ ಮನುಷ್ಯರು ಯಾವಾಗಲೂ ಶುಭವನ್ನೇ ನುಡಿಯು ತ್ತಿರಬೇಕು, ಎಂದು ಹೇಳಿ, ಸಂಗಡ ತಂದ ತೀರ್ಥವನ್ನು ಆ ವಿಪ್ರನ ಕಿವಿ ಯೊಳಗೂ, ಬಾಯಿಯಲ್ಲಿಯೂ ತುಸ ತುಸ ಹಾಕಿ, ಮೈಮೇಲೆಲ್ಲ ಸಿಂಪಡಿಸಿದರು. ಅದರಂತೆ ವಿಭೂತಿಯನ್ನು ಬಾಯಿಯೊಳಗೆ ಹಾಕಿ, ಶರೀರಕ್ಕೆಲ್ಲ ತೊಡೆದರು.

ಹಣೆಗೆ ಭಂಡಾರವನ್ನು ಹಚ್ಚಿ ಶಿವನಾಮಸ್ಮರಣೆಯನ್ನು ಮಾಡುತ್ತ ಶವದಮೇಲೆ ಕೈಯಾಡಿಸಹತ್ತಿದರು. ಆದರೂ ವಿಪ್ರನು ಏಳಲೊಲ್ಲನು. ಆಗ ದೀಕ್ಷಿತರು ಎಲ್ಲರನ್ನು ಹೊರಗೆ ಕಳುಹಿ ತಾವೊಬ್ಬರೇ ಬಾಗಿಲವನ್ನಿಕ್ಕಿಕೊಂಡು ಒಳಗೆ ಕುಳಿತುಕೊಂಡರು. ಹಾಗು ಬಾಯಿಂದ ಜಯಜಯ ಸೋಮೇಶ್ವರಾ, ದಯಾಳೋ, ಹರಾ, ಶಂಭೋ, ಮೃತ್ಯುಂಜಯಾ, ಮಲ್ಲಾರಿ ಎಂದು ನಾಮಸ್ಮರಣೆಯನ್ನು ಮಾಡುತ್ತ, 'ಶಿವರಕ್ಷೆವನ್ನೂ ಪಂಚಾಕ್ಷರೀ' ಮಂತ್ರವನ್ನೂ ಪಠಿಸುತ್ತ, ಮಹಾನ್ ಮಹಾನ್ ಯೋಗಿಗಳಿಗೂ ಕೂಡ ದುರ್ಲಭವಾದ ತಮ್ಮ ವರದಹಸ್ತವನ್ನು ರಾಮಯೋಗಿಯ ತಲೆಯ ಮೇಲಿಟ್ಟು:—ರಾಮಯೋಗಿ, ಏಳಪ್ಪಾ, ನಿನ್ನಿಂದ ಬ್ರಾಹ್ಮಣ ಭೋಜನಕ್ಕೆ ಪ್ರತಿಬಂಧವಾಗಿರುವದು, ಬೇಗನೆ ಏಳು, ಎಂದು ನುಡಿದರು. ಆಗ ಬ್ರಾಹ್ಮಣನು ಒಮ್ಮೆಲೆ ಕಣ್ತೆರೆದನು. ಆಗ ದೀಕ್ಷಿತರು—ಬ್ರಾಹ್ಮಣನು ಜೀವಿಸಿರುವನು ಎಂದು ಗಟ್ಟಿಸಿ ನುಡಿದರು; ಹಾಗೂ ಬಾಗಿಲವನ್ನು ತೆರೆದರು ಆಗ ಜನರು 'ಜಯ ಚಿದಂಬರ' ಎಂದು ಗರ್ಜನೆಯನ್ನು ಮಾಡಿದರು. ಎಲ್ಲರೂ ಚಪ್ಪಾಳೆಯನ್ನಿಕ್ಕಿ, ಕುಣಿಯಹತ್ತಿದರು. ರಾಮಯೋಗಿಯ ಪತ್ನಿಯು, ದೀಕ್ಷಿತರನ್ನು ಆಡಿಕೊಂಡದ್ದಕ್ಕಾಗಿ, ಪಶ್ಚಾತ್ತಾಪಪಟ್ಟು, ದೀಕ್ಷಿತರ ಬಳಿಯಲ್ಲಿ ಕ್ಷಮೆಯನ್ನು ಬೇಡಿಕೊಂಡಳು. ರಾಮಯೋಗಿಯು ನಿದ್ರೆಯೊಳಗಿಂದ ಎಚ್ಚತ್ತವನಂತೆ ಎದ್ದು ಕುಳಿತುಕೊಂಡನು. ಅವನಿಗಾದ ಗಾಯು ಮಾಯವಾಗಿ ಹೋಗಿತ್ತು. ಅವನು ತನ್ನ ಎದುರಿನಲ್ಲಿ ನಿಂತ ಬ್ರಹ್ಮ-ವೃಂದವನ್ನು, ಪತ್ನಿಯನ್ನೂ ಮತ್ತು ದೀಕ್ಷಿತರನ್ನೂ ನೋಡಿ ಭ್ರಮೆಗೊಂಡನು. ಆಗ ಕೂಡಿದ ಜನರಲ್ಲಿ ಕೆಲವರು, ಅವನಿಗೆ ವರ್ತಿಸಿದ ಸಂಗತಿಯನ್ನೆಲ್ಲ ಹೇಳಿದರು. ಆಗ ಆ ಬ್ರಾಹ್ಮಣನು ಪರಮಾಶ್ಚರ್ಯಪಟ್ಟು, ದೀಕ್ಷಿತರನ್ನು ಹೊಗಳಹತ್ತಿದನು. ದೀಕ್ಷಿತರು ಅತನನ್ನು ಸಂತೈಸಿ, ದಿವಾಕರ ದೀಕ್ಷಿತರನ್ನು ಕುರಿತು:—ದಿವಾಕರಾ, ಈಗ ಸಿದ್ಧವಾಗಿರುವ ಅಡಿಗೆಯನ್ನು ಶೂದ್ರಾದಿಗಳಿಗೆ ಕೊಡಿಸಿ, ಹೊಸ ಅಡಿಗೆಯನ್ನು ಮಾಡಿಸು. ಎಂದು ಹೇಳಿ, ಬ್ರಹ್ಮ-ವೃಂದಕ್ಕೆಲ್ಲ ಇನ್ನೊಮ್ಮೆ ಸ್ನಾನವನ್ನು ಮಾಡಿ, ಶ್ರೀ ಮಾರ್ತಾಂಡನ ದರ್ಶನವನ್ನು ತಕ್ಕೊಂಡು ಬನ್ನಿರಿ, ಎಂದು ಸೂಚಿಸಿದರು. ಆಗ ಬ್ರಾಹ್ಮಣರೆಲ್ಲರು ದೀಕ್ಷಿತರ ಗುಣಾನುವಾದವನ್ನು ಮಾಡುತ್ತ, ಸ್ನಾನಕ್ಕಾಗಿ ಹೊರಟ ಹೋದರು. ಶ್ರೀ ಚಿದಂಬರ ದೀಕ್ಷಿತರು ಸ್ನಾನ ಮಾಡಿ, ಶ್ರೀ ಮಲ್ಲಾರಿಯನ್ನು ಪೂಜಿಸತೊಡಗಿದರು. ರಾಮಯೋಗಿಯು ಪತ್ನಿಯೊಡನೆ ಸ್ನಾನಾರ್ಥವಾಗಿ ಹೊರಟು

ಹೋದನು. ದಿವಾಕರ ದೀಕ್ಷಿತರು ಸ್ನಾನವನ್ನು ಮಾಡಿ, ಉಡುಪಾರಿಣೆಯನ್ನು ಮಾಡಿಸಿ, ಹೊಸ ಅಡಿಗೆಯನ್ನು ಸಿದ್ಧಪಡಿಸಿದರು. ಅಷ್ಟರಲ್ಲಿ ಬ್ರಾಹ್ಮಣರೂ ಸ್ನಾನವನ್ನು ತೀರಿಸಿಕೊಂಡು ಅಲ್ಲಿಗೆ ಬಂದರು. ಬಳಿಕ ಸಮಾರಂಭದಿಂದ ಬ್ರಾಹ್ಮಣ-ಭೋಜನವಾಯಿತು. ಭೋಜನೋತ್ತರದಲ್ಲಿ ದೀಕ್ಷಿತರು, ತಾಂಬೂಲ ದಕ್ಷಿಣಾದಿಗಳಿಂದ ಬ್ರಾಹ್ಮಣರನ್ನು ಸಂತೋಷಗೊಳಿಸಿದರು. ಆಗ ಕೆಲವು ವಿಪ್ರರು ದೀಕ್ಷಿತರಿಗೆ— ಈ ರಾಮಯೋಗಿಯು ಸತ್ತವನು ಜೀವಿಸಿದ್ದರಿಂದ, ಬ್ರಹ್ಮನು ಬರೆದ ಆಯುರ್ಮರ್ಯಾದೆಯು ಸಟೆಯಾಗಲಿಲ್ಲವೇ? ಎಂದು ಪ್ರಶ್ನೆ ಮಾಡಿದರು. ಅದಕ್ಕೆ ದೀಕ್ಷಿತರು—ಮನುಷ್ಯರಿಗೆ ಮಹಾಮೃತ್ಯುವಿನ ಹೊರ ತಾಗಿ, ಅಪಮೃತ್ಯುಗಳಿರುತ್ತವೆ. ಪೂರ್ವಜನ್ಮದ ಹಾಗೂ ಈ ಜನ್ಮದೊಳಗಿನ ಪುಣ್ಯಬಲದಿಂದಲೂ ಸತ್ಸಂಗದಿಂದಲೂ ಅಪಮೃತ್ಯುಗಳು ತಪ್ಪುತ್ತವೆ. ದೇವ ರಿಗೂ ಸತ್ಪುರುಷರಿಗೂ ಭೇದವಿಲ್ಲ! ಭಗವಂತನ ಲೀಲೆಯನ್ನು ಅರಿಯುವರಾರು? ಎಂದು ಸಮಾಧಾನವನ್ನು ಹೇಳಿದರು. ಬಳಿಕ ವಿಪ್ರ-ವೃಂದವು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋಯಿತು. ಅಷ್ಟರಲ್ಲಿ ರಾಮಯೋಗಿಯು ಪತ್ನಿಯಿಂದ ಕೂಡಿಕೊಂಡು ಅಲ್ಲಿಗೆ ಬಂದು, ದೀಕ್ಷಿತರ ಚರಣಕ್ಕೆರಗಿ, ತನ್ನ ಪುತ್ರ-ಕಾಮನ ವನ್ನು ಅರುಹಿದನು. ಆಗ ದೀಕ್ಷಿತರು—ಎಲೈ ವಿಪ್ರನೇ, ನಿನಗೆ ಮುಂದಣ ಜನ್ಮದಲ್ಲಿ ಸಂತತಿಯಾಗುವ ಯೋಗವಿರುವದು. ಆದರೂ ಇನ್ನು ವರ್ಷದೊಳ ಗಾಗಿ ನಿನ್ನ ಮನೆಯಲ್ಲಿ ತೊಟ್ಟಿಲ ತೂಗುವದು. ನಿನಗಿದ್ದ ಭೂತ-ಬಾಧೆ ಯಾದರೂ ದೂರಾಗುವದು, ಎಂದು ಆಶೀರ್ವದಿಸಿದರು. ಈಗ ರಾಮಯೋಗಿಗೆ ಪುನರ್ಜನ್ಮವಾದ್ದರಿಂದ ಅದೇ ಅವನಿಗೆ ಹೊಸ ಜನ್ಮವಾಗಿ ಪರಿಣಮಿಸಿ, ದೀಕ್ಷಿ ತರ ವಚನದಂತೆ ಪುತ್ರಪ್ರಾಪ್ತಿಯಾಯಿತು. ದೊಡ್ಡವರ ಮನಸಿಗೆ ಬಂದರೆ ಯಾವ ಕಾರ್ಯವಾಗಲಾರದು?

**ಮೃತ್ಯುಂಜಯ ದೀಕ್ಷಿತರ ಉಪನಯನ:**— ಮುಂದೆ ಕೆಲವು ದಿವಸಗಳ ತರುವಾಯ ಮೃತ್ಯುಂಜಯ ದೀಕ್ಷಿತರ ಉಪನಯನದ ಪ್ರಸ್ತಾಪವು ಹೊರಟು, ಉಪನಯನ ಮಾಡುವದು ಗೊತ್ತಾಯಿತು. ಸಮಾರಂಭದ ಸಾರ ಣೆಯು ಮಾಡಲ್ಪಟ್ಟು, ಶುಭಮುಹೂರ್ತದಲ್ಲಿ ಕಾರ್ಯಾರಂಭವಾಯಿತು. ಆ ದಿನ ಎಲ್ಲರೂ ಅಭ್ಯಂಗ ಸ್ನಾನವನ್ನು ಮಾಡಿ, ತಮ್ಮ-ತಮ್ಮ ಕಾರ್ಯಗಳನ್ನು ಮಾಡಹತ್ತಿದರು. ಗಣಪತಿಪೂಜನ, ಪುಣ್ಯಾಹವಾಚನ, ನಾಂದೀಸ್ಥಾಪನ ಮೊದ ಲಾದ ಕಾರ್ಯಗಳು ಕ್ರಮವಾಗಿ ಜರುಗಿದವು. ಶುಭಮುಹೂರ್ತವು ಪ್ರಾಪ್ತ

ವಾಗಲು ಎಲ್ಲರೂ ಆನಂದದಿಂದ ವಟುವಿನ ಮೇಲೆ ಅಕ್ಷತೆಗಳನ್ನು ಹಾಕಿದರು. ಬಳಿಕ ಮುಂದಣ ಕಾರ್ಯಗಳು ವಿಧ್ಯುಕ್ತವಾಗಿ ಜರುಗಿದವು. ಈ ಉಪನಯನ ದಲ್ಲಿ ೧೨೧ ಅನಾಥ ಮಕ್ಕಳ ಉಪನಯನಗಳನ್ನು ದೀಕ್ಷಿತರು ಧರ್ಮಾರ್ಥವಾಗಿ ಮಾಡಿದರಂತೆ! ಒಬ್ಬೊಬ್ಬ ಬ್ರಹ್ಮಚಾರಿಗೆ ೧ ಉಂಗುರ, ೧ ತಂಬಿಗೆ, ೧ ಥಾಲಿ, ೧ ತಾಬಾಣ, ೧ ಶಟ್ಟಿ, ೧ ನೊಂಡೀಥಾಲಿ, ೧ ಸಂಧ್ಯಾವಂದನದ ಸವಟು, ೧ ಭಸ್ಮ-ಸಂಗ್ರಹ ಪಾತ್ರೆ, ಮತ್ತು ೧ ರುದ್ರಾಕ್ಷ ಮಾಲೆಗಳು ಬರುವಂತೆ, ಈ ಪ್ರಕಾರ ಸಾಮಾನುಗಳನ್ನು ಕೊಟ್ಟರು. ಈ ಉಪನಯನದಲ್ಲಿ ಒಟ್ಟಿಗೆ ಒಂದು ಲಕ್ಷ ಬ್ರಾಹ್ಮಣ ಭೋಜನವಾಯಿತು. ಯಾರಿಗೂ ಯಾವ ಮಾತಿನ ಕೊರತೆ ಯೂ ಉಂಟಾಗಲಿಲ್ಲ. ಈ ಉಪನಯನಕ್ಕೆ ದೂರ ದೂರಿನ ರಾಜರೂ, ಮಂತ್ರಿ ಗಳೂ ಬಂದಿದ್ದರು. ಎಲ್ಲರಿಗೂ ಯೋಗ್ಯವಾಗಿ ಮರ್ಯಾದೆಯು ಮಾಡಲ್ಪಟ್ಟಿತು. ಯಾವ ಪರಮಾತ್ಮನು ಅನಂತ ಚಮತ್ಕಾರಗಳಿಂದ ತುಂಬಿ ತುಳುಕುತ್ತಿರುವ ಸೃಷ್ಟಿಯನ್ನು ನಿರ್ಮಾಣ ಮಾಡಿ, ಅದರ ನಿಯಮನವನ್ನು ಮಾಡುತ್ತಾನೋ ಆತನೇ ಪ್ರತ್ಯಕ್ಷವಾಗಿ ನಡಕಟ್ಟಿ ನಿಂತು ಮಾಡಿದ ಉಪನಯನ ಮಹೋತ್ಸವ ವನ್ನು ಯಾರು ಬಣ್ಣಿಸಬಹುದು? ಈ ಉಪನಯನವು ಶಾಲಿವಾಹನ ಶಕೆ ೧೭೨೪ ರಲ್ಲಾಯಿತು.

ಈ ಪ್ರಕಾರ ಚಿದಂಬರ ದೀಕ್ಷಿತರು ಸಂಭ್ರಮದಿಂದ ತಮ್ಮ ಮೂರ ನೆಯ ಮಗನಾದ ಮೃತ್ಯುಂಜಯನ ಮುಂಜೆಯನ್ನು ಮಾಡಿ, ತಂದೆಯ ತರು ವಾಯ ಮನೆಯಲ್ಲಿಲ್ಲದ ಶ್ರೌತಾಗ್ನಿಯನ್ನು ಒಳ್ಳೇ ಸಮಾರಂಭದಿಂದ ಸ್ವೀಕರಿಸಿ ದರು. ಇಂತು ಅಗ್ನಿಹೋತ್ರವನ್ನಿಟ್ಟು, ಭಕ್ತಜನರಿಗೆ ಸದ್ಧರ್ಮವನ್ನು ಬೋಧಿ ಸುತ್ತ, ವಿಧವಿಧವಾದ ಚಮತ್ಕಾರಗಳನ್ನು ತೋರುತ್ತ ಹಿಪ್ಪರಿಗೆಯಲ್ಲಿಯೇ ಕೆಲವು ಕಾಲ ನಿಂತುಕೊಂಡರು.

ಒಂದು ದಿವಸ ಪ್ರಭಾಕರ ದೀಕ್ಷಿತರೂ, ದಿವಾಕರ ದೀಕ್ಷಿತರೂ ಕೂಡಿ, ಜ್ಯೋತಿಷ್ಟೋಮವನ್ನು ಮಾಡಬೇಕೆಂದು, ಶ್ರೀ ಚಿದಂಬರ ದೀಕ್ಷಿತರನ್ನು ಪ್ರಾರ್ಥಿಸಿದರು. ಆಗ ದೀಕ್ಷಿತರು:—ಈ ಕಾಲದಲ್ಲಿ ಪಶುಹನನ ಕಾರ್ಯವು ಬೇಡ. ಬೇಕಾದರೆ ಪಶುಹನನ ರಹಿತವಾದ ಪಂಚಾಗ್ನಿಯನ್ನು ಸಿದ್ಧ ಮಾಡೋಣ. ಎಂದು ನುಡಿದರು; ಆದರೆ ಈ ಮಾತು ದಿವಾಕರ ದೀಕ್ಷಿತರ ಮನಸ್ಸಿಗೆ ಬರಲಿಲ್ಲ. ಅವರು ಜ್ಯೋತಿಷ್ಟೋಮವನ್ನೇ ಮಾಡುವ ವಿಷಯವಾಗಿ ಆಗ್ರಹತೊಟ್ಟರು. ಪ್ರಭಾಕರ ದೀಕ್ಷಿತರ ಬಲವಾದರೂ ದಿವಾಕರ ದೀಕ್ಷಿತರಂತೆಯೇ ಇತ್ತು. ಆದ್ದ

ರಿಂದ ಚಿದಂಬರ ದೀಕ್ಷಿತರು ಅವರಿಬ್ಬರ ಆಗ್ರಹಕ್ಕಾಗಿ, ಜ್ಯೋತಿಷ್ಟೋಮ ವನ್ನು ಮಾಡಲಿಕ್ಕೆ ಸಮ್ಮತಿಸಿದರು. ಇಷ್ಟರಲ್ಲಿ ರುಧಿರೋದ್ಗಾರೀ ಸಂವತ್ಸರದ ಬರಗಾಲವು ತನ್ನ ಭಯಂಕರ ಸ್ವರೂಪವನ್ನು ಪ್ರಕಟ ಮಾಡಿದ್ದರಿಂದ, ಜನರು ಕೂಳಿಲ್ಲದೆ ಯಮನ ಬಾಯಿಗೆ ತುತ್ತಾಗುತ್ತಿದ್ದರು. ಈ ಭಯಂಕರವಾದ ಬರ ಗಾಲದಲ್ಲಿ ದೀಕ್ಷಿತರು ಅಲ್ಲಲ್ಲಿ ಅನ್ನ-ಸತ್ರಗಳನ್ನಿಟ್ಟು ಬಹು ಜನರನ್ನು ಕಾಪಾಡಿ ದರು. ಮುಂದೆ ಮಳೆ-ಬೆಳೆಯಾಗಿ ದೇಶವು ಶಾಂತವಾದ ಬಳಿಕ ಶ್ರೀ ಚಿದಂಬರ ದೀಕ್ಷಿತರು ಪರಿವಾರದೊಂದಿಗೆ ಹಿಪ್ಪರಗಿಯಿಂದ ಗಲಗಲಿ ಗ್ರಾಮಕ್ಕೆ ಬಂದರು.

---

## ೭೫ನೆಯ ಪ್ರಕರಣ.

## ಗಲಗಲಿ-ವಾಸವೂ, ವಿಧವಾ ಸೌಭಾಗ್ಯ-ಪ್ರಧಾನವೂ.

ಶ್ರೀ ಚಿದಂಬರ ದೀಕ್ಷಿತರು ಗಲಗಲಿಗೆ ಬಂದ ಕೂಡಲೆ ಮೊದಲು ಕ್ಷೇತ್ರ ವಿಧಿಯನ್ನು ತೀರಿಸಿದರು. ಒಂದು ದಿವಸ ಅವರು ಬ್ರಾಹ್ಮಣರಿಂದ ಕೂಡಿ ಕೊಂಡು ಸ್ನಾನಕ್ಕೆ ಹೋದ ಸಮಯದಲ್ಲಿ ಒಂದು ಸೋಜಿಗದ ಸಂಗತಿಯು ವರ್ತಿಸಿತು. ದೀಕ್ಷಿತರು ಕೃಷ್ಣೆಯನ್ನು ಪ್ರಾರ್ಥಿಸಿ, ಸ್ನಾನವನ್ನು ಮಾಡು ತ್ತಿರಲು, ಓರ್ವ ವಿಧವೆಯು ಬಂದು ಅವರಿಗೆ ನಮಸ್ಕಾರ ಮಾಡಿದಳು. ಆಗ ಅವರು 'ಅಷ್ಟಪುತ್ರಿ ಸೌಭಾಗ್ಯವತೀಭವ' ಎಂದು ಅವಳನ್ನು ಆಶೀರ್ವದಿಸಿದರು. ಆಗ ಅಲ್ಲಿಯ ಬ್ರಹ್ಮವೃಂದವು:—ಗುರುಗಳೇ, ಇವಳು ವಿಧವೆಯಿರುವಳು. ಇವ ಳಿಗೆ ತಾವು 'ಅಷ್ಟಪುತ್ರಿ ಸೌಭಾಗ್ಯವತೀಭವ' ಎಂದು ಹೇಗೆ ಆಶೀರ್ವದಿಸಿದಿರಿ! ಎಂದು ಪ್ರಶ್ನೆಮಾಡಿದರು. ಅದಕ್ಕೆ ದೀಕ್ಷಿತರು:—ನಾನೇನು ಆಶೀರ್ವದಿಸಿಲ್ಲ! ಆಶೀರ್ವಾದ ಕೊಡಲಿಕ್ಕೆ ನಾನೆಷ್ಟರವನು! ಶ್ರೀ ಕೃಷ್ಣಾಬಾಯಿಯೇ ನನ್ನ ಬಾಯಿಂದ ಈ ಪ್ರಕಾರ ನುಡಿಸಿರುವಳು!! ಅದಕ್ಕೆ ನಾನೇನು ಮಾಡಲಿ? ಬೇಕಾ ದರೆ, ಕೃಷ್ಣಾಬಾಯಿಯು ತನ್ನ ವಚನವನ್ನು ಸತ್ಯಮಾಡಬಹುದು! ನಮಗೇಕೆ ಅದರ ಚಿಂತೆ! ಎಂದು ನುಡಿದು, ಒಬ್ಬ ಬ್ರಾಹ್ಮಣನನ್ನು ಕುರಿತು:—ಆ ವಿಧ ವೆಗೆ ಮಹಾ ಸಂಕಲ್ಪಪೂರ್ವಕವಾಗಿ ಸ್ನಾನವನ್ನು ಮಾಡಿಸಿ, ಮನೆಗೆ ಕರೆದು ಕೊಂಡು ಬಾ, ಎಂದು ಹೇಳಿದರು. ಹಾಗೂ ತಾವು ಬ್ರಾಹ್ಮಣರಿಂದ ಕೂಡಿ ಕೊಂಡು ಮನೆಗೆ ಬಂದರು.

ಇತ್ತ ಬ್ರಾಹ್ಮಣನು ದೀಕ್ಷಿತರ ಹೇಳಿಕೆಯಂತೆ ಆ ವಿಧವೆಗೆ ಸಂಕಲ್ಪವನ್ನು ಹೇಳಿ, ಸ್ನಾನಮಾಡಲಿಕ್ಕೆ ಹೇಳಿದನು. ಆಗ ವಿಧವೆಯು ನಡುಮಟ ನೀರಲ್ಲಿ ನಿಂತು ಮುಳುಗು ಹಾಕುತ್ತಿರಲು, ಒಮ್ಮೆ ಮುಳುಗಿದವಳು ಮುಹೂರ್ತಮಾತ್ರ ಮೇಲಕ್ಕೆ ಬರಲಿಲ್ಲ. ಆಗ ಬ್ರಾಹ್ಮಣನು ಹೆದರಿದನು; ಹಾಗು ದೀಕ್ಷಿತರಿಗೆ ಏನು ಹೇಳಲಿ! ಎಂದು ಚಿಂತಿಸುತ್ತ, ನದಿಯಲ್ಲಿ ವಿಧವೆಯನ್ನು ಶೋಧಿಸಹತ್ತಿದನು; ಆದರೆ ಅವಳು ದೊರೆಯಲಿಲ್ಲ. ಆಗ ಬ್ರಾಹ್ಮಣನು ಖಿನ್ನಮನಸ್ಕನಾಗಿ ದಡಕ್ಕೆ ಬಂದನು ಅಷ್ಟರಲ್ಲಿ ಹೊಳೆಯ ಮಧ್ಯಭಾಗದಿಂದ ನಾನಾಪ್ರಕಾರದ ಅಲಂಕಾರಗಳಿಂದಲೂ, ನಾಗವೇಣಿಯಿಂದಲೂ ಒಪ್ಪುವ ಒಬ್ಬ ಸ್ತ್ರೀಯು ಮೇಲಕ್ಕೆ ಬಂದಳು. ಆಕೆಯ ಸುಂದರವಾದ ಮುಖಮಂಡಲದಲ್ಲಿ ಅರಿಶಿನವೂ, ಕುಂಕುಮ ತಿಲಕವೂ ಹೆಚ್ಚು ರಮಣೀಯವಾಗಿ ತೋರುತ್ತಿದ್ದವು. ಕೈಗಳಲ್ಲಿ ಬಳೆಗಳೂ, ಕಾಲುಗಳಲ್ಲಿ ಸರಪಳಿ-ಪೈಜಣಗಳೂ ಒಪ್ಪುತ್ತಿದ್ದವು. ಅವಳು ಪೀತಾಂಬರವನ್ನು ಉಟ್ಟಿದ್ದಳು. ಮೈಗೆಲ್ಲ ಸುಗಂಧ-ದ್ರವ್ಯಗಳನ್ನು ಹಚ್ಚಿಕೊಂಡಿದ್ದಳು. ಅವಳು ಎರಡೂ ಕೈಗಳಿಂದ ನೀರನ್ನು ದೂಡುತ್ತ ದಂಡೆಗೆ ಬಂದಳು. ಅವಳನ್ನು ನೋಡಿ, ಬ್ರಾಹ್ಮಣನು ಮನಸಿನಲ್ಲಿ:—ನೀರಿನಲ್ಲಿ ಮುಳುಗಿದ ವಿಧವೆಯು ಏನಾಗಿರಬಹುದು? ಅವಳು ನಿಶ್ಚಯವಾಗಿ ಸತ್ತಿರಬೇಕು; ಆದರೆ ಇವಳು ಯಾರು? ನಾಗಕನ್ಯೆಯೋ ಅಥವಾ ಜಲದೇವತೆಯೋ? ನೀರಿನೊಳಗಿಂದ ಇಂಥ ದಿವ್ಯ ಸ್ತ್ರೀಯು ಬರಬೇಕಾದರೆ ಇದರಲ್ಲಿ ಏನಾದರೂ ಚಮತ್ಕಾರವಿರಲಿಕ್ಕೆ ಬೇಕು. ಹೀಗೆ ಯೋಚಿಸುತ್ತಿರುವಷ್ಟರಲ್ಲಿ, ಆ ಸ್ತ್ರೀಯು ನೆಟ್ಟಗೆ ಬ್ರಾಹ್ಮಣನ ಬಳಿಗೆ ಬಂದು, ಆತನನ್ನು ನಮಸ್ಕರಿಸಿದಳು. ಆಗಂತೂ ಬ್ರಾಹ್ಮಣನು ದಿಗಿಲುಬಿದ್ದು:—ನೀನು ಯಾರು? ಎಲ್ಲಿಯವಳು? ನೀರಿನೊಳಗಿಂದ ಹ್ಯಾಗೆ ಬಂದೆ? ನನ್ನನ್ನು ನಮಸ್ಕರಿಸಿದ ಕಾರಣವೇನು, ಎಂದು ಪ್ರಶ್ನೆಮಾಡಿದನು. ಆಗ ಆ ಸ್ತ್ರೀಯು ನಸುನಕ್ಕು:—ಎಲೈ ಬ್ರಾಹ್ಮಣನೇ, ಇಷ್ಟರಲ್ಲಿಯೇ ಭ್ರಮೆಗೊಂಡೆಯಾ? ಇದೇ ಈಗ ಸಂಕಲ್ಪವನ್ನು ಹೇಳಿ, ನನಗೆ ಸ್ನಾನವನ್ನು ಮಾಡಲಿಕ್ಕೆ ಅಪ್ಪಣೆಯನ್ನು ಕೊಡಲಿಲ್ಲವೇ? ನನ್ನ ಸ್ವರೂಪದಲ್ಲಾದ ಹೆಚ್ಚು-ಕಡಿಮೆಯಿಂದ ನೀವು ಭ್ರಾಂತರಾಗಿರಬಹುದು. ಶ್ರೀ ಚಿದಂಬರ ಕೃಪೆಯಿಂದ ನನಗೆ ಸೌಭಾಗ್ಯವು ಪ್ರಾಪ್ತವಾಗಿರುವದು, ಎಂದು ನುಡಿಯಲು, ಬ್ರಾಹ್ಮಣನು ಅತ್ಯಾಶ್ಚರ್ಯಬಟ್ಟನು. ಬಳಿಕ ಅವನು ಆ ಸ್ತ್ರೀಯ ಕೈಯಿಂದ ಪೂಜೆಯನ್ನು ಮಾಡಿಸಿ, ಅವಳನ್ನು ದೀಕ್ಷಿತರ ಬಳಿಗೆ ಕರತಂದನು. ಹಾಗು ದೀಕ್ಷಿತರನ್ನು

ಕುರಿತು ವರ್ತಿಸಿದ ಸಂಗತಿಯನ್ನೂ, ಸ್ತ್ರೀಯ ಅಭಿಪ್ರಾಯವನ್ನೂ ಅರುಹಿದನು. ಆಗ ಅಲ್ಲಿದ್ದ ಬ್ರಾಹ್ಮಣರು 'ಸೋಜಿಗವು ಸೋಜಿಗವು' ಎಂದು ಏಕಕಂಠವಾಗಿ ಕೂಗಿದರು.

ಆಗ ದೀಕ್ಷಿತರು ಎದುರಿನಲ್ಲಿ ಕೈಜೋಡಿಸಿಕೊಂಡು ನಿಂತಿರುವ ಸ್ತ್ರೀಗೆ:- ತಾಯಿ, ನೀನು ಯಾರು? ಎಲ್ಲಿಂದ ಬಂದಿ? ನಿನ್ನ ವೃತ್ತಾಂತವನ್ನು ಹೇಳು, ಎಂದು ನುಡಿಯಲು, ಆ ಸ್ತ್ರೀಯು:—ತ್ರಿಕಾಲಜ್ಞರಾದ ತಾವು ತಿಳಿದೂ-ತಿಳಿದು ಅಜ್ಞರಂತೆ ಪ್ರಶ್ನೆಮಾಡುವಿರಿ! ತಮ್ಮ ಆಜ್ಞೆಯೇ ನನಗೆ ಮಾನ್ಯವು!! ಎಂದು ನುಡಿದು ತನ್ನ ವೃತ್ತಾಂತವನ್ನು ಹೇಳಹತ್ತಿದಳು:—"ತಾವು ಸ್ನಾನಮಾಡುವ ಕಾಲಕ್ಕೆ ತಮಗೆ ನಮಸ್ಕಾರ ಮಾಡಿದ ವಿಧವೆಯೇ ನಾನು! ತಾವು ಬ್ರಾಹ್ಮಣನಿಗೆ ನನಗೆ ಸಂಕಲ್ಪಪೂರ್ವಕ ಸ್ನಾನಮಾಡಿಸಲು ಹೇಳಿ ಬಂದ ಬಳಿಕ ನಾನು ಮೈ ತೊಳೆಯುತ್ತಿರಲು, ಕೆಲವು ಸ್ತ್ರೀಯರು ಬಂದು ನನ್ನನ್ನು ಒಂದು ರಮ್ಯವಾದ ಪ್ರಾಸಾದದಲ್ಲಿ ಎಳೆದೊಯ್ದರು. ಅಲ್ಲಿ ತಾವೂ ಇದ್ದಿರಿ; ತಾವು ನನ್ನ ತಲೆಯ ಮೇಲೆ ಕೈಯನ್ನಿಟ್ಟಿರಿ; ಕೂಡಲೆ ನನ್ನ ಕೂದಲುಗಳು ದೊಡ್ಡವಾದವು. ಬಳಿಕ ತಾವೇ ನನಗೆ ಸೌಭಾಗ್ಯಾಲಂಕಾರಗಳನ್ನೂ, ವಸ್ತ್ರಗಳನ್ನೂ ಕೊಡಲು ಅಲ್ಲಿಯ ಸ್ತ್ರೀಯರಿಗೆ ಆಜ್ಞಾಪಿಸಿದಿರಿ. ಆಮೇಲೆ ಅವರು ನನ್ನನ್ನು ವಸ್ತ್ರಭೂಷಣಗಳಿಂದ ಅಲಂಕರಿಸಿ, ಅಲ್ಲಿಂದ ನನ್ನನ್ನು ಹೊರದೂಡಿದರು. ಕೂಡಲೆ ನಾನು ಈ ರೂಪದಿಂದ ಹೊಳೆಯ ಹೊರಭಾಗಕ್ಕೆ ಬಂದೆನು, ಎಂದು ನುಡಿದು, ದೀಕ್ಷಿತರನ್ನು ಸ್ತುತಿಸಲಾರಂಭಿಸಿದಳು:—

"ಕರ್ಪೂರಗಾತ್ರನೇ, ಚಂದ್ರಶೇಖರನೇ, ದೀನದಯಾವಂತನೇ, ನನ್ನನ್ನು ಕಾಯಬೇಕು. ಎಲೈ ಜಗದಾತ್ಮನಾದ ಚಿದಂಬರನೇ, ನಿನ್ನ ಲೀಲೆಯನ್ನು ಅರಿಯುವವರಾರು? ಸುರ-ನರರು ನಿನ್ನನ್ನು ಯಾವಾಗಲೂ ಹೊಗಳುತ್ತಿರುವರು. ನೀನು ಸರ್ವಾತೀತನೂ, ಅಗೋಚರನೂ ಆಗಿರುವೆ! ಸಾವಿರ ನಾಲಿಗೆಗಳುಳ್ಳ ಆದಿಶೇಷನೂ, ವೇದ-ವೇದಾಂಗಗಳೂ, ನಿನ್ನನ್ನು ಹೊಗಳುವಾಗ ಮೌನವನ್ನು ತಾಳಿರುವವು. ಅಂದಮೇಲೆ ನನ್ನ ಪಾಡೇನು? ಎಲೈ ಮದನಾಂತಕನೇ, ಮನರಂಜಕನೇ, ಮಂದಾಕಿನಿಧರನೇ, ಮಂದಾರಕುಸುಮ ಪ್ರಿಯನೇ, ಮಂದರಾಚಲ ವಾಸನೇ, ನಿನ್ನ ದಯದಿಂದಲೇ ನಾನು ಸುಖಶಿಖರವನ್ನೇರಿದೆನು. ನಿನ್ನ ದರ್ಶನದಿಂದ ನನಗೆ ಸೌಭಾಗ್ಯವು ಪ್ರಾಪ್ತವಾಯಿತು!" ಎಂದು ಬಗೆಬಗೆಯಿಂದ ಹೊಗಳುತ್ತಿರಲು, ಗಂಗಾತೀರ್ಥದ ಕಾವಡಿಯನ್ನು ಹೊತ್ತುಕೊಂಡಿದ್ದ ಒಬ್ಬ

ಬ್ರಾಹ್ಮಣನು ಅಲ್ಲಿಗೆ ಬಂದು, ದೀಕ್ಷಿತರನ್ನು ಅಭಿವಂದಿಸಿ ನಿಂತುಕೊಂಡನು. ಆಗ ದೀಕ್ಷಿತರು ಅಲ್ಲಿದ್ದ ಸ್ತ್ರೀಯಳಿಗೆ:—ಈ ಬ್ರಾಹ್ಮಣನು ಯಾರು? ಈತನನ್ನು ಚನ್ನಾಗಿ ಪರೀಕ್ಷಿಸಿ ಗುರ್ತಿಸು, ಎಂದು ಹೇಳಲು, ಅವಳು ಆ ಬ್ರಾಹ್ಮಣನನ್ನು ನಖ-ಶಿಖಾಂತವಾಗಿ ನೋಡಹತ್ತಿದಳು. ಆಗ ಅವಳಿಗೆ ಅವನಲ್ಲಿ ಸ್ವ-ಪತಿಯ ಲಕ್ಷಣಗಳು ತೋರಿದವು. ಅವಳ ಗಂಡನು ದೇಶಾಂತರಕ್ಕೆ ಹೋಗಿರಲು, ಗಂಡನು ಸತ್ತನೆಂದು ಸುದ್ದಿಯಾದ್ದರಿಂದ ಆಕೆಯು ವಿಧವೆಯಾಗಿದ್ದಳು. ಈಗ ಅವಳು ತನ್ನ ಗಂಡನನ್ನು ಚನ್ನಾಗಿ ಪರೀಕ್ಷಿಸಿ, ನಾಚಿ ಒತ್ತಟ್ಟಿಗೆ ನಿಂತುಕೊಂಡಳು. ಆಗ ದೀಕ್ಷಿತರು:—ನಾಚಬೇಡ! ನಿನ್ನ ಪೂರ್ವ-ಪುಣ್ಯವು ಬಲವತ್ತರವಾದದ್ದು! ಅಂತೇ ಅದ್ಭುತ-ರೀತಿಯಿಂದ ಪತಿಯನ್ನು ಹೊಂದಿ, ಸೌಭಾಗ್ಯವತಿಯಾದೆ! ಈತನೇ ನಿನ್ನ ಗಂಡನು! ಇದರಲ್ಲಿ ಸ್ವಲ್ಪಾದರೂ ಸಂಶಯವಿಲ್ಲ. ಈತನನ್ನು ಕೂಡಿಕೊಂಡು ಸುಖಿಯಾಗು, ಎಂದು ನುಡಿದು, ಅವರಿಬ್ಬರ ವಿಯೋಗವಾಗಿ ಹನ್ನೆರಡು ವರ್ಷಗಳಾದ್ದರಿಂದ ವಿಧಿಯುಕ್ತವಾಗಿ ಅವರಿಬ್ಬರನ್ನು ಕೂಡಿಸಿದರು. ಬಳಿಕ ಆ ದಂಪತಿಗಳು ದೀಕ್ಷಿತರ ಆಶೀರ್ವಾದವನ್ನು ಪಡೆದು, ಸ್ವಗ್ರಾಮಕ್ಕೆ ಹೋಗಿ, ಆನಂದದಿಂದ ಕಾಲಹರಣ ಮಾಡಹತ್ತಿದರು. ಶ್ರೀ ಚಿದಂಬರ ಕೃಪೆಯಿಂದ ಅವರಿಗೆ ಮುಂದೆ ಸಂತತಿಯಾಯಿತು. ಅವರು ಚಿದಂಬರನನ್ನು ಹಗಲಿರುಳೂ ಧ್ಯಾನಿಸುತ್ತ, ಇಹ-ಪರಗಳಲ್ಲಿ ಸೌಖ್ಯವನ್ನು ಹೊಂದಿದರು. ಹೀಗೆ ಗಾಲವಪುರದಲ್ಲಿ ಪ್ರತಿನಿತ್ಯ ಚಮತ್ಕಾರವನ್ನು ತೋರುತ್ತಿರಲು, ಶಿರಹಟ್ಟಿಯ ಕಾರಭಾರಿಯಾದ ಬಾಳಕೃಷ್ಣನೆಂಬವನು ದೀಕ್ಷಿತರ ದರ್ಶನಕ್ಕೆ ಬಂದು, ತನಗೆ ಅಧಿಕವಾದ ವೈಭವವನ್ನು ಕೊಡಬೇಕೆಂದು ಬೇಡಿಕೊಂಡನು. ಆಗ ದೀಕ್ಷಿತರು ಆ ವಿಷಯದಲ್ಲಿ ಆತನಿಗೆ ವಚನವನ್ನು ಕೊಟ್ಟು ಕಳುಹಿದರು; ಹಾಗೂ ಕೊಟ್ಟ ವಚನವನ್ನು ಕೊನೆಗಾಣಿಸುವದಕ್ಕಾಗಿ, ಮುಂದೆ ಕುಸ ದಿವಸಗಳಲ್ಲಿಯೇ ಗಲಗಲಿಯಿಂದ ಶಿರಹಟ್ಟಿಗೆ ಸಪರಿವಾರವಾಗಿ ಹೊರಟರು.



## ೧೨ನೆಯ ಪ್ರಕರಣ.

## * ಬಾಳಕೃಷ್ಣನ ವೈಭವದ ಹಂಬಲವೂ, ಸಂಚಾರದಲ್ಲಿಯ ಚಮತ್ಕಾರಗಳೂ.

ಹಿಂದೆ ಹೇಳಿದಂತೆ ಶ್ರೀ ಚಿದಂಬರ ದೀಕ್ಷಿತರು ಶಿರಹಟ್ಟಿಗೆ ಬಂದ ಬಳಿಕ ಅಲ್ಲಿ ಕೆಲವು ದಿವಸ ನಿಂತರು. ಬಾಳಕೃಷ್ಣನು ಅವರ ಕಡೆಗೆ ವೈಭವ ದಾಶೆಯಿಂದ ಹಗಲೆಲ್ಲ ಬರಹತ್ತಿದನು. ಈ ಸುಮಾರಕ್ಕೆ ೨ನೇ ಬಾಜೀರಾವ ಪೇಶ್ವೆಯು ಯಾವದೋ ಒಂದು ನಿಮಿತ್ತದಿಂದ ತನ್ನ ಸಹಾಯಕ್ಕೆಂದು ಇಂಗ್ಲಿಷ ರನ್ನು ದಕ್ಷಿಣದಿಂದ ಪುಣೆಗೆ ಕರಿಸಿಕೊಂಡಿದ್ದನು; ಹಾಗೂ ಮಾರ್ಗದೊಳಗಿನ ತನ್ನ ಅಧಿಕಾರಕ್ಕೊಳಪಟ್ಟ ಸ್ಥಳಗಳೊಳಗಿನ ಅಧಿಕಾರಿಗಳಿಗೆ "ಇಂಗ್ಲಿಷರು ನಮ್ಮ ಸಹಾಯಕ್ಕೆ ಬರುತ್ತಿರುವರು. ಅವರಿಗೆ ಅವಶ್ಯವಾದ ಸಹಾಯವನ್ನು ಮಾಡಿ ಇಲ್ಲಿಗೆ ಕರೆದುಕೊಂಡು ಬರಬೇಕು. ಯಾರು ಈ ಕೆಲಸವನ್ನು ಚನ್ನಾಗಿ ಮಾಡುವರೋ, ಅವರಿಗೆ ಸರಕಾರದಿಂದ ವಿಶೇಷ ಲಾಭವಾಗುವದು!" ಎಂದು ಪತ್ರಗಳನ್ನು ಬರೆಯಿಸಿದ್ದನು. ಬಾಳಕೃಷ್ಣನಿಗೂ ಮೇಲೆ ಬರೆದಂತೆ ಪತ್ರವು ಬಂದಿತ್ತು. ಗೊತ್ತಾದ ಪ್ರಕಾರ ಇಂಗ್ಲಿಷರು ಪುಣೆಗೆ ಬರಬೇಕೆಂದು ಹೊರ ಟಿದ್ದರು. ಅವರು ಮಾರ್ಗವನ್ನು ಕ್ರಮಿಸುತ್ತ ಶಿರಹಟ್ಟಿಗೆ ಬಂದರು; ಹಾಗೂ ತಾವು ಬಂದ ಸುದ್ದಿಯನ್ನು ಅಲ್ಲಿಯ ಕಾರಭಾರಿಯಾದ ಬಾಳಕೃಷ್ಣನಿಗೆ ತಿಳಿಸಿ ದರು. ಆಗ ಅವನು ಬಾಜೀರಾಯನ ಕಡೆಯಿಂದ ಬಂದ ಪತ್ರದ ಸುದ್ದಿಯನ್ನು ದೀಕ್ಷಿತರಿಗೆ ಹೇಳಿ, ಪುಣೆಗೆ ಹೋಗಲು, ಅಪ್ಪಣೆಯನ್ನು ಕೇಳಿದನು.

ಅದಕ್ಕೆ ದೀಕ್ಷಿತರು:-"ನೀನು ಈಗ ಅತ್ತ ಕಡೆಗೆ ಹೋಗುವದು ಸರಿದೋ ರುವದಿಲ್ಲ. ವೈಭವದಾಶೆಯು ಒಳ್ಳೇಯದಲ್ಲ! ಈ ವೈಭವವು ಕ್ಷಣಭಂಗುರ ವಾದದ್ದು. ಮಾಯೆಯ ಮೂಲಕ ಮನುಷ್ಯರು ಅದರ ಬೆನ್ನು ಹತ್ತುತ್ತಾರೆ. ನಿಜವಾಗಿ ನೋಡಿದರೆ, ಅದರಲ್ಲಿ ಎಳ್ಳಷ್ಟಾದರೂ ಸೌಖ್ಯವಿಲ್ಲ! ನೀನು ನಮ್ಮ ಮಾತನ್ನು ಮೀರಿ, ಅತ್ತ ಕಡೆಗೆ ಹೋದರೆ, ನಿನಗೆ ದುಃಖವಾದೀತು; ಇಷ್ಟೇ ಅಲ್ಲ; ಜೀವಕ್ಕೆ ಸಹ ಎರವಾಗುವಿ! ನೀನು ಎಲ್ಲಿದ್ದರೂ ನಾನು ನಿನಗೆ ಕೊಟ್ಟ ವಚನವು

* ಇವನ ಉಪನಾಮವು "ಲಾಗು" ಎಂದು ಇದ್ದಂತೆ ತಿಳಿಯುತ್ತದೆ. ಇವನು ಬಾಜೀ ರಾಯನ ಕಾರಭಾರಿಯು.

ಪೂರ್ಣವಾಗುವದು. ಇಷ್ಟರ ಮೇಲೆ ನಿನ್ನ ಮನಬಂದಂತೆ ಮಾಡು" ಎಂದು ಹೇಳಿದರು. ದೀಕ್ಷಿತರ ಮಾತುಗಳು ಬಾಳಕೃಷ್ಣನಿಗೆ ವಿಷದಂತೆ ಕಟುವಾಗಿ ತೋರಿದವು ಅವನಿಗೆ ಐಶ್ವರ್ಯವಂತನಾಗುವ ಹವಣಿಕೆಯು ಬಹಳವಾದ್ದರಿಂದ ಅವನು ಗುರುವಚನವನ್ನು ತಿರಸ್ಕರಿಸಿ, ಇಂಗ್ಲಿಷರಿಗೆ ಭೆಟ್ಟಿಯಾಗಿ ಅವರ ವ್ಯವಸ್ಥೆಯನ್ನು ಚನ್ನಾಗಿ ಮಾಡಿ, ಅವರನ್ನು ಕರಕೊಂಡು ಪುಣೆಗೆ ಹೋದನು. ಇಂಗ್ಲಿಷರ ಶಿಫಾರಸ್ಸಿನಿಂದ ಬಾಜೀರಾಯನು ಆತನಿಗೆ ಎಲ್ಲರಿಗಿಂತ ಹೆಚ್ಚಿನ ಅಧಿಕಾರವನ್ನೂ, ದೇಶದ ಉಂಬಳಿಯನ್ನೂ, ವಿಪುಲ ಧನವನ್ನೂ, ರಥಾಶ್ವಗಳನ್ನೂ ಕೊಟ್ಟನು. ದೀಕ್ಷಿತರ ವಚನದಂತೆ ವೈಭವವು ಬಾಳಕೃಷ್ಣನಿಗೆ ದೊರೆತಂತಾಯಿತು; ಆದರೆ ಅವನು ಗುರುವಚನ ಭಂಗಮಾಡಿದ್ದರಿಂದ ಈ ವೈಭವದ ಉಪಭೋಗವನ್ನು ತಕ್ಕೊಳ್ಳಲಿಲ್ಲ. ಐಶ್ವರ್ಯವನ್ನು ಹೊಂದಿದ ದಿವಸವೇ, ಮಧ್ಯರಾತ್ರಿಯ ಸುಮಾರಕ್ಕೆ ಅವನಿಗೆ ಭಯಂಕರ ಜ್ವರಬಂದು, ಬೆಳಗಾಗುವಷ್ಟರಲ್ಲಿ ಸನ್ನಿಕೂಡಿ, ಮೂರುತಾಸು ಹೊತ್ತು ಏರುವಷ್ಟರಲ್ಲಿ ಅವನು ಮರಣ ಹೊಂದಿದನು. ಆಗ ಆತನ ಸಂಗಡ ಇದ್ದ ಕಾರಕೂನನು ಸನದುಗಳನ್ನು ಬಾಜೀರಾಯನ ವಶಕ್ಕೆ ಕೊಟ್ಟು, ತಿರುಗಿ ಶಿರಹಟ್ಟಿಗೆ ಬಂದು, ಆದ ವರ್ತಮಾನವನ್ನು ಬಾಳಕೃಷ್ಣನ ಹೆಂಡತಿಗೆ ಅರುಹಲು, ಅವಳಿಗೆ ಆಕಾಶವು ಕಳಚಿ ಬಿದ್ದಂತಾಯಿತು. ಅವಳು ಎದೆ-ಎದೆ ಬಡಕೊಂಡ ಶೋಕ ಮಾಡಹತ್ತಿದಳು. ಆಗ ಅವನು ಅವಳಿಗೆ ಚಿದಂಬರ ದೀಕ್ಷಿತರ ಬಳಿಗೆ ಹೋಗು: ಅಂದರೆ ನಿನ್ನ ಕಲ್ಯಾಣವಾಗುವದು, ಎಂದು ಸೂಚಿಸಲು, ಅವಳು ಶೋಕಮಾಡುತ್ತ, ದೀಕ್ಷಿತರ ಹತ್ತರ ಬಂದು:—ಗುರುಗಳೇ, ನನ್ನ ಸೌಭಾಗ್ಯವು ಹಾಳಾಯಿತು! ನನ್ನ ಕುಂಕುಮವು ಮಣ್ಣುಪಾಲಾಯಿತು! ನನಗೆ ಮಕ್ಕಳಿಲ್ಲ! ನನಗೆ ಯಾರೂ ದಿಕ್ಕಿಲ್ಲ! ನಮ್ಮ ಐಶ್ವರ್ಯದ ಗತಿಯೇನು, ಹಾಗೂ ನನ್ನ ಗತಿಯೇನು? ಎಂದು ಪರಿ-ಪರಿಯಿಂದ ಹಲುಬಹತ್ತಿದಳು. ಆಗ ದೀಕ್ಷಿತರು ಅವಳಿಗೆ:-ನೀನು ಸ್ವಲ್ಪಾದರೂ ಹೆದರಬೇಡ ಆದದ್ದು ಆಗಿಹೋಯಿತು. ಇನ್ನು ಶೋಕಮಾಡಿ ಉಪಯೋಗವಿಲ್ಲ. ನೀನು ನಿನ್ನ ವಂಶದೊಳಗಿನ ಹುಡುಗನನ್ನು ದತ್ತಕ-ಮಗನನ್ನಾಗಿ ಮಾಡಿಕೊಂಡರೆ, ನಿನ್ನ ವಂಶವು ಅಭಿವೃದ್ಧವಾಗುವದು. ಇನ್ನು ನೀನು ದುಃಖಿಸದೆ ಮುದಿಯಾಗಿ ಆ ಹುಡುಗನನ್ನು ಹೊಟ್ಟೆಯ ಮಗನಂತೆ ಕಾಪಾಡು. ಬಾಜೀರಾಯನು ಹೊಸದಾಗಿ ಕೊಟ್ಟ ಅಧಿಕಾರದ ಸನದನ್ನೂ, ಸಂಪತ್ತನ್ನೂ ಇಲ್ಲಿಗೇ ತರಿಸಿ ಕೊಡುವೆನು, ಎಂದು ನುಡಿದರು, ಬಳಿಕ ಬಾಳಕೃಷ್ಣನ ಉತ್ತರ ಕ್ರಿಯೆಗಳು ನೆರವೇರಿದ ಬಳಿಕ,

ದೀಕ್ಷಿತರು ಅವನ ಅಣ್ಣನನ್ನು ಕರೆಯಿಸಿ:—ನಿಮ್ಮ ಮೊದಲಿನ ದ್ವೇಷವನ್ನು ಮರೆತು, ನಿನ್ನ ಮೊಮ್ಮಗನಾದ ಕೇಶವನನ್ನು ನಿನ್ನ ತಮ್ಮನ ಮನೆತನಕ್ಕೆ ದತ್ತಕ ಮಾಡು. ಮನಸ್ಸಿನಲ್ಲಿ ಯಾವ ಸಂಶಯವನ್ನೂ ತರಬೇಡ. ನಮ್ಮ ಮಾತನ್ನು ಮೀರಿದರೆ, ನಿನಗೆ ಅಕಲ್ಯಾಣವಾಗುವದು, ಎಂದು ನುಡಿಯಲು, ಅವನು ದೀಕ್ಷಿತರ ಮಾತಿಗೆ ಸಮ್ಮತಿಸಿದನು. ಬಳಿಕ ದೀಕ್ಷಿತರು ಬಾಜೀರಾಯನಿಗೆ ಒಂದು ಪತ್ರವನ್ನು ಬರೆದು, ಒಬ್ಬ ಜಾಣ-ಲೆಕ್ಕಿಗನ ಕೈಯಿಂದ ಬಾಳಕೃಷ್ಣನಿಗೆ ದೊರೆತಿರುವ ತುಂಗಾ-ಕೃಷ್ಣಾ ನದಿಗಳ ಮಧ್ಯಪ್ರದೇಶದ ಸನದನ್ನೂ, ಮಿಕ್ಕ ಸಂಪತ್ತಿಯನ್ನೂ, ಅಧಿಕಾರದ ಕಾಗದಗಳನ್ನೂ ತರಿಸಿಕೊಂಡು, ಒಂದು ಶುಭಮುಹೂರ್ತದ ಮೇಲೆ ಶಾಸ್ತ್ರಕ್ಕೆ ಸರಿಯಾಗಿ ದತ್ತಕ ವಿಧಾನವನ್ನು ಮಾಡಿಸಿದರು. ಮಿಷ್ಟಾನ್ನ-ಭೋಜನದಿಂದಲೂ ದಕ್ಷಿಣೆಯಿಂದಲೂ ಬ್ರಾಹ್ಮಣರು ತುಷ್ಟರಾದರು. ಬಡಬಗ್ಗರಿಗೂ ಅನ್ನದಾನವು ಮಾಡಲ್ಪಟ್ಟಿತು. ಮುಂದೆ ಮತ್ತೊಂದು ಸುಮುಹೂರ್ತದ ಮೇಲೆ ಬಾಳಕೃಷ್ಣನ ಅಧಿಕಾರವನ್ನು ದತ್ತಕ-ಪುತ್ರನಾದ ಕೇಶವನಿಗೆ ಕೊಡಿಸಿದರು. ಕೇಶವನು ಬಹು ಭಾವಿಕನು! ಅವನು ಯಾವತ್ತು ಅಧಿಕಾರ-ವೈಭವಗಳನ್ನು ಗುರುಚರಣದಲ್ಲಿ ಅರ್ಪಿಸಿದನು. ಆಗ ದೀಕ್ಷಿತರು ಯೋಗ್ಯವಾದ ವಚನಗಳಿಂದ ಕೇಶವನನ್ನು ಸಮಾಧಾನಗೊಳಿಸಿದರು. ಅವನು ಗುರ್ವಾಜ್ಞೆಯ ಮೇರೆಗೆ ಬಾಳಕೃಷ್ಣಪಂತನ ಅಧಿಕಾರವನ್ನು ಸಾಗಿಸಹತ್ತಿದನು. ಆ ವಿಪುಲ-ವೈಭವವನ್ನು ನೋಡಿ, ಕೇಶವನ ತಂದೆಯು ಆನಂದಭರಿತನಾದನು. ಬಳಿಕ ಆ ಕುಟುಂಬದವರೆಲ್ಲರು ಶ್ರೀ ಚಿದಂಬರ ದಿಕ್ಷಿತರನ್ನು ಸ್ತುತಿಸುತ್ತ ಸುಖದಿಂದ ಕಾಲಹರಣ ಮಾಡಹತ್ತಿದರು. ಬಾಳಕೃಷ್ಣನು ಸತ್ತ ಆರು ತಿಂಗಳಲ್ಲಿಯೇ ಈ ವ್ಯವಸ್ಥೆಯು ಮಾಡಲ್ಪಟ್ಟಿತು.

ಬಳಿಕ ದೀಕ್ಷಿತರು ಸಂಚಾರದ ಉದ್ದಿಶ್ಯವಾಗಿ ತಾವೊಬ್ಬರೇ ಶಿರಹಟ್ಟಿಯಿಂದ ಹೊರಟು, ಮೊದಲು ಸರ್ಪಪುರಿ (ಹಾವನೂರ) ಗೆ ಬಂದರು. ಆಗ ಕಾರ್ತೀಕ ಮಾಸವಿದ್ದದರಿಂದ ಅಲ್ಲಿ ದೀಪೋತ್ಸವವನ್ನೂ, ಬ್ರಾಹ್ಮಣ-ಭೋಜನವನ್ನೂ ಮಾಡಿಸಿ, ಅಲ್ಲಿಂದ ಕ್ರಮವಾಗಿ ಮಿಶ್ರೀಕೋಟಿ, ಧಾರವಾಡ, ಹುಬ್ಬಳ್ಳಿ, ಲಕ್ಷ್ಮೇಶ್ವರ ಮುಂತಾದ ಸ್ಥಳಗಳಲ್ಲಿ ಸಂಚಾರ ಮಾಡುತ್ತಲೂ, ಭಕ್ತಜನರ ಬಯಕೆಗಳನ್ನು ಪೂರ್ಣ ಮಾಡುತ್ತಲೂ ಒಂದು ತಿಂಗಳ ತರುವಾಯ ಮರಳಿ ಶಿರಹಟ್ಟಿಗೆ ಬಂದರು.

ದೀಕ್ಷಿತರು ಸಂಚಾರಕ್ಕೆ ಹೋದಾಗ, ಅವರು ಧಾರವಾಡದಿಂದ ಎಂಟು

ಹರಿದಾರಿಗಳ ಮೇಲೆ ಒಂದು ಊರಲ್ಲಿ ಉಳಕೊಂಡಿದ್ದರು. ಈ ಸಂಧಿಯಲ್ಲಿ ಧಾರವಾಡದೊಳಗಿನ ಮೂರು-ನಾಲ್ಕು ಜನ ಕಿಲ್ಲೇದಾರರು, ಕಳ್ಳರ ತಂಡವನ್ನು ಕೂಡಿಕೊಂಡು, ದೇಶವನ್ನು ಸುಲಿಯುತ್ತ ಸಂಚಾರ ಮಾಡುತ್ತಿದ್ದರು. ಒಮ್ಮೆ ಕೆಲವುಜನ ಬಣಜಿಗರೂ, ಮುತ್ತು-ರತ್ನಗಳ ವ್ಯಾಪಾರಸ್ಥರೂ ಸಂಗಡ ಬಹಳ ಬೆಲೆಬಾಳುವ ಜೀನಸುಗಳನ್ನು ತಕ್ಕೊಂಡು, ಹುಬ್ಬಳ್ಳಿ ಧಾರವಾಡಗಳ ಕಡೆಗೆ ಹೋಗುತ್ತಿದ್ದರು. ಅವರಿಗೆ ಕಳ್ಳರ ಸುದ್ದಿಯು ತಿಳಿಯಲು, ಅವರು ದೀಕ್ಷಿತರಿಗೆ ಶರಣುಹೋದರು. ಆಗ ದೀಕ್ಷಿತರು ಅವರಿಗೆ ಅಭಯವನ್ನಿತ್ತು, ಕಳ್ಳರನ್ನು ಹಾದಿಗೆ ಹಚ್ಚುವದಕ್ಕಾಗಿ, ಬೇಕಂತ ಅವರೊಡನೆ ರಾತ್ರಿಯಲ್ಲಿಯೇ ಸಂಚಾರ ಮಾಡಹತ್ತಿದರು. ಕರ್ಮ-ಧರ್ಮ ಸಂಯೋಗದಿಂದ ಒಂದುದಿವಸ ರಾತ್ರಿ ಕಳ್ಳರಿಗೂ, ಇವರಿಗೂ ಮಧ್ಯಮಾರ್ಗದಲ್ಲಿ ಗಂಟುಬಿತ್ತು. ಕಳ್ಳರ ಕೈಯಲ್ಲಿ ಬಿಚ್ಚುಗತ್ತಿಗಳಿದ್ದವು. ಅವರನ್ನು ನೋಡಿದ ಕೂಡಲೆ ವ್ಯಾಪಾರಸ್ಥರ ಹರಣವು ಹಾರಿತು. ಅವರ ಸ್ಥಿತಿಯನ್ನು ನೋಡಿ, ದೀಕ್ಷಿತರು ಕಳ್ಳರನ್ನು ಕುರಿತು:— "ನೀನು ಇಂಥವನ ಮಗನು; ನೀನು ಇಂಥವನ ಮೊಮ್ಮಗನು; ಎಂದು ಪ್ರತಿಯೊಬ್ಬರ ವಂಶಾವಳಿಯನ್ನು ಹೇಳಿ, ಇಂತಹ ಘೋರವಾದ ಅನ್ಯಾಯದ ಕೆಲಸಗಳನ್ನು ಮಾಡಬಾರದು. ಮನುಷ್ಯರು ಸತ್ಕಾರ್ಯಗಳನ್ನು ಮಾಡಿ, ಪುಣ್ಯವನ್ನು ಸಂಪಾದಿಸಬೇಕು. ಇಂದಿನಿಂದ ನೀವು ಈ ನೀಚ ಕುಕರ್ಮಗಳನ್ನು ಬಿಟ್ಟುಬಿಡಿರಿ; ಅಂದರೆ ನಿಮ್ಮ ಕಲ್ಯಾಣವಾಗುವದು; ಇಲ್ಲದಿದ್ದರೆ ತುಸ ದಿವಸಗಳಲ್ಲಿಯೇ ನೀವು ನಿಮ್ಮ ಫಲವನ್ನು ಅನುಭವಿಸುವಿರಿ" ಎಂದು ಹೇಳಲು, ಕಳ್ಳರ ಮನಸ್ಸಿನ ಮೇಲೆ ದೀಕ್ಷಿತರ ಮಾತುಗಳ ಪರಿಣಾಮವಾಯಿತು. ಅವರು ಆ ಸಾತ್ವಿಕ ಮೂರ್ತಿಯನ್ನು ನೋಡಿ ಸಂತೋಷಪಟ್ಟರು. ಸತ್ಪುರುಷರ ದರ್ಶನದಿಂದ ಅವರ ಮನಸ್ಸು ಶುದ್ಧವಾಯಿತು. ಅವರು ದೀಕ್ಷಿತರ ಕಾಲಿಗೆರಗಿ, ಇಂದಿನಿಂದ ನಾವು ಇಂಥ ಅನ್ಯಾಯದ ಕೆಲಸಗಳನ್ನು ಮಾಡುವದಿಲ್ಲೆಂದು ಪ್ರತಿಜ್ಞೆಯನ್ನು ಮಾಡಿ, ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ದೀಕ್ಷಿತರು ಈ ಕಳ್ಳರ ಕೈಯಿಂದಲೇ ವ್ಯಾಪಾರಿಗಳನ್ನು ಅವರವರ ಸ್ಥಳಗಳಿಗೆ ಮುಟ್ಟಿಸುವ ವ್ಯವಸ್ಥೆಯನ್ನು ಮಾಡಿದರು. ಆ ವ್ಯಾಪಾರಿಗರು ಹೋದಬಳಿಕ ದೀಕ್ಷಿತರು ಸಂಚಾರಮಾಡುತ್ತ ದೊಡ್ಡವಾಡಕ್ಕೆ ಬಂದರು.

ದೊಡ್ಡವಾಡದಲ್ಲಿ ಆಗ ಒಬ್ಬ ಶೂದ್ರಜಾತಿಯ ಪುಂಡನು ಇದ್ದನು. ಅವನು ಕೆಲವು ಜನರನ್ನು ಕೂಡಿಕೊಂಡು ಕೊಲೆ-ಸುಲಿಗೆಗಳನ್ನು ಮಾಡುತ್ತಿದ್ದನು.

ಅವನು ಒಂದು ದಿವಸ ದೀಕ್ಷಿತರ ದರ್ಶನಕ್ಕೆ ಬಂದನು ಆಗ ದೀಕ್ಷಿತರು ಆತನನ್ನು ಕುರಿತು:—ಎಲಾ, ನನಗೇಕೆ ನಮಸ್ಕಾರ ಮಾಡುವಿ? ನನ್ನ ಎದುರಿಗೆ ನಿಲ್ಲಬೇಡ. ನೀನು ಬಹಳ ಕೆಟ್ಟ ಮನುಷ್ಯನಿರುವಿ! ಜನರನ್ನು ಗೋಳಾಡಿಸಿ ಸುಲಿಗೆಯನ್ನು ಮಾಡುತ್ತಿರುವಿ! ಅಧರ್ಮದ ಫಲವು ನಿನಗೆ ಇನ್ನು ಏಳು ದಿನಗಳಲ್ಲಿ ದೊರೆಯುವದು. ನಡೆ, ಹೋಗು; ಎನಲು, ಪುಂಡನು ಸುಮ್ಮನೆ ಹೊರಟುಹೋದನು. ಬಳಿಕ ದೀಕ್ಷಿತರು ಮತ್ತೆ ಶಿರಹಟ್ಟಿಗೆ ಬಂದರು. ಅಷ್ಟರಲ್ಲಿ ದೀಕ್ಷಿತರ ಸಹಾಯದಿಂದ ಕಳ್ಳರ ಕೈಯೊಳಗಿಂದ ಪಾರಾದ ವ್ಯಾಪಾರಸ್ಥರು ಹತ್ತುಸಾವಿರ ರೂಪಾಯಿಗಳನ್ನು ತಕ್ಕೊಂಡು ದೀಕ್ಷಿತರ ದರ್ಶನಕ್ಕೆ ಬಂದರು; ಹಾಗೂ ಸಂಗಡ ತಂದ ಹಣವನ್ನು ಗುರುಗಳಿಗೆ ಅರ್ಪಣ ಮಾಡಿದರು. ಅದನ್ನು ಕಂಡು ಗುರುಗಳು:—ಈ ಹಣವು ನಮಗೆ ಮುಟ್ಟಿತು. ನಿಮ್ಮ ಭಕ್ತಿಯನ್ನು ನೋಡಿ ಬಹಳ ಆನಂದವಾಯಿತು. ಈ ಹಣವನ್ನು ತಕ್ಕೊಂಡು ಹೋಗಿ, ನಿಮ್ಮ ಕುಲಸ್ವಾಮಿಯ ಬಳಿಯಲ್ಲಿ ಯೋಗ್ಯ ರೀತಿಯಿಂದ ವೆಚ್ಚ ಮಾಡಿರಿ; ಅಂದರೆ ನಿಮಗೆ ಕಲ್ಯಾಣವಾಗುವದು; ಎಂದು ಹೇಳಲು, ವ್ಯಾಪಾರಸ್ಥರು ಆ ಮಾತನ್ನು ಒಪ್ಪಿಕೊಂಡು ಗುರುಗಳ ಅಪ್ಪಣೆಯಮೇರೆಗೆ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಅತ್ತ ದೊಡ್ಡವಾಡದ ಪುಂಡುಗಾರನ ದುಷ್ಕರ್ಮಕ್ಕೆ ಪ್ರಾಯಶ್ಚಿತ್ತವಾಗುವ ಕಾಲವು ಸಮೀಪಿಸಿತು. ಆಗ ಅವನ ಮನಸ್ಸಿನಲ್ಲಿ 'ಪರಶುರಾಮದುರ್ಗ' [ಪರಸಗಡ]ವನ್ನು ಮುತ್ತಬೇಕೆಂಬ ಇಚ್ಛೆಯುಂಟಾಯಿತು. ಕೂಡಲೆ ಅವನು ತನ್ನ ಜನರನ್ನು ಕೂಡಿಕೊಂಡು ಹೋಗಿ ಗಡವನ್ನು ಮುತ್ತಿದನು ಈ ಕಾಲಕ್ಕೆ ಪರಸಗಡವು ಕೊಲ್ಲಾಪುರ ಸರಕಾರದ ವಶದಲ್ಲಿತ್ತು. ಅವರಿಗೆ ಈ ಸುದ್ದಿಯು ತಿಳಿಯಲು, ಅವರು ಬಂಡುಗಾರನನ್ನು ಸೆರೆಹಿಡಕೊಂಡು ಬರಬೇಕೆಂದು ಒಬ್ಬ ಸರದಾರನನ್ನು ಸೈನ್ಯದೊಡನೆ ಕಳಿಸಿಕೊಟ್ಟರು. ಅವನು ಆ ಬಂಡುಗಾರನನ್ನು ಗಾಯಗೊಳಿಸಿ, ಸೋಲಿಸಿ, ಹಿಡುಕೊಂಡು ಹೋಗಿ ಸೆರೆಯಲ್ಲಿಟ್ಟನು. ಆಗ ಆ ಪುಂಡನಿಗೆ ದೀಕ್ಷಿತರ ವಚನದ ನೆನಪಾಗಿ ಅವನು ಪಶ್ಚಾತ್ತಾಪಪಟ್ಟನು. ಹಾಗೂ ಒಮ್ಮನಸ್ಸಿನಿಂದ ದೀಕ್ಷಿತರನ್ನು ಸ್ತುತಿಸಹತ್ತಿದನು. ನಾಮೋಚ್ಚಾರದ ಪ್ರಭಾವದಿಂದ ಅಲ್ಲಿಂದ ತೀವ್ರವೇ ಆತನ ಬಿಡುಗಡೆಯಾಯಿತು. ಬಳಿಕ ಅವನು ದೀಕ್ಷಿತರ ಭೆಟ್ಟಿಯನ್ನು ತಕ್ಕೊಂಡು ಅವರಿಂದ ಆಶೀರ್ವಾದವನ್ನು ಪಡೆದು, ದೀಕ್ಷಿತರ ಕೀರ್ತಿಯನ್ನು ಕೊಗಳುತ್ತ ಪರಸಗಡಕ್ಕೆ ಬಂದನು; ಮತ್ತು ಅಲ್ಲಿಯ

ಕೋಟೆಯಲ್ಲಿ ನಿಂತುಕೊಂಡು, ತನ್ನ ಶೇಷಾಯುಷ್ಯವನ್ನು ಶ್ರೀ ಚಿದಂಬರದೀಕ್ಷಿತರ ಭಜನೆಯಲ್ಲಿಯೇ ಕಳೆದನು!!

## ೧೧ನೆಯ ಪ್ರಕರಣ.

## ದುಷ್ಕಾಳನಿವಾರಣವೂ, ರಾಷ್ಟ್ರೀಯವರ ಉತ್ಕರ್ಷವೂ.

ಶಿರಹಟ್ಟಿಯಲ್ಲಿ ಶ್ರೀ ಪ್ರಾಣದೇವರ ಗುಡಿಯ ಬಳಿಯಲ್ಲಿದ್ದ ಅರಳೀ ಗಿಡದ ಮೇಲೆ ಒಂದು ಬ್ರಹ್ಮರಾಕ್ಷಸವಿತ್ತು. ಅದು ಪಂಡಿತರನ್ನು ಬಹಳವಾಗಿ ಪೀಡಿಸುತ್ತಿತ್ತು. ಈ ಸಂಗತಿಯು ದೀಕ್ಷಿತರಿಗೆ ತಿಳಿಯಲು, ಅವರು ಆ ರಾಕ್ಷಸಕ್ಕೆ ಸದ್ಗತಿಯನ್ನು ಕೊಟ್ಟು, ತಾವು ಶಿರಹಟ್ಟಿಯ ಬಳಿಯಲ್ಲಿರುವ ಲಕ್ಷ್ಮಣಪುರವೆಂಬ ಗ್ರಾಮದಲ್ಲಿ ಒಂದು ನಿಂತುಕೊಂಡರು. ಇದೇ ಸುಮಾರಕ್ಕೆ ನಾಲ್ಕೂ ಕಡೆಗೆ ಮತ್ತೆ ದುಷ್ಕಾಳವು ಒದಗಿತು. ಜನರು ಕೂಳಿಲ್ಲದೆ ಗೋಳಾಡಹತ್ತಿದರು. ಎಷ್ಟೋ ಜನರು ದೀಕ್ಷಿತರ ಬಳಿಗೆ ಬಂದರು. ದೀಕ್ಷಿತರು ಅವರಿಗೆ ಅಭಯವನ್ನಿತ್ತು, ದುಷ್ಕಾಳ ತೀರುವವರೆಗೆ ತಮ್ಮ ಬಳಿಯಲ್ಲಿಯೇ ನಿಂತುಕೊಳ್ಳಲಿಕ್ಕೆ ಅಪ್ಪಣೆಯನ್ನು ಮಾಡಿದರು. ಆಗ ಅವರು ತಮ್ಮ ಆಪ್ತರನ್ನೂ ಇಷ್ಟರನ್ನೂ ಕೂಡಿಕೊಂಡು ಗುಡಿ-ಗುಂಡಾರಗಳಲ್ಲಿಯೂ, ಹರಕು-ಮುರಕು ಮನೆಗಳಲ್ಲಿಯೂ ನಿಂತುಕೊಂಡರು. ಈ ಸುದ್ದಿಯು ಗಾಳಿಯಂತೆ ನಾಲ್ಕೂ ಕಡೆಗೆ ಹಬ್ಬಲು, ನಾಶಿಕ, ವಾಯಿ, ಕರ್ಹಾಡ, ಮಾಹುಲಿ, ಶೂರ್ಪಾಲಿ, ಗೋದಾತೀರ, ಕೃಷ್ಣಾತೀರ, ತುಂಗಾತೀರ ಮಲಾಪಹಾರೀತೀರ, ಧುಳೆ, ಖೇಡ, ತುಳಜಾಪೂರ, ಪಂಢರಪೂರ, ಕೊಲ್ಹಾಪೂರ ಮೊದಲಾದ ಸ್ಥಳಗಳಿಂದ ಎಷ್ಟೋ ಜನರು ಬಂದು ದೀಕ್ಷಿತರ ಆಶ್ರಯದಲ್ಲಿ ನಿಂತುಕೊಂಡರು.

ದೀಕ್ಷಿತರು ಅವರೆಲ್ಲರ ವ್ಯವಸ್ಥೆಯನ್ನು ಮಾಡುವದಕ್ಕಾಗಿ ತಮ್ಮ ಶಿಷ್ಯವರ್ಗವನ್ನು ನೇಮಿಸಿದರು. ಮತ್ತು ಪ್ರತಿಯೊಬ್ಬರಿಗೆ ಅರ್ಧಸೇರು ಆಹಾರದ ಪದಾರ್ಥ ಹಾಗೂ ಒಂದು ಪೈಯಂತೆ ಕೊಡಿರಿ. ಎರೆಯಲಿಕ್ಕೆ ಎಣ್ಣೆಯನ್ನು ಕೊಡಿರಿ: ಮುತ್ತೈದೆಯರಿಗೆ ಅರಿಶಿನ-ಕುಂಕುಮ-ಸೌಭಾಗ್ಯ ದ್ರವ್ಯಗಳನ್ನು ಕೊಡಿರಿ. ಗರ್ಭಿಣಿ-ಸ್ತ್ರೀಯರಿಗೆ ನಿವಾಂತಸ್ಥಳಗಳನ್ನು ಸಿದ್ಧಮಾಡಿ ಕೊಡಿರಿ; ಅಗ್ನಿಹೋತ್ರ ಬ್ರಾಹ್ಮಣರಿಗೆ ಅಗ್ನಿಕಾರ್ಯದ ಸಾಹಿತ್ಯಗಳನ್ನೂ, ಬೇನೆಯವರಿಗೆ ಔಷಧೋಪಚಾರಗಳನ್ನೂ ವೇಳೆಗೆ ಸರಿಯಾಗಿ ತಪ್ಪದೇ ಕೊಡಿರಿ. ಪುಷ್ಪಿಣಿಯಾ

ದವರಿಗೆ ನಾಲ್ಕನೆಯ ದಿವಸ ಎರೆಕೊಳ್ಳುವ ವ್ಯವಸ್ಥೆಯನ್ನು ಮಾಡಿಸಿರಿ. ಅದ ರಂತೆ ಹೊಸದಾಗಿಯಾರಾದರೂ ಋತುವಾದರೆ, ಗರ್ಭಾಧಾನವನ್ನು ಒಳ್ಳೇ ಸಂಭ್ರಮದಿಂದ ಮಾಡಿಸಿರಿ. ಯಾರಲ್ಲಾದರೂ ಶ್ರಾದ್ಧ-ಪಕ್ಷಗಳಿದ್ದರೆ, ಅವರಿಗೆ ಯೋಗ್ಯ ಬ್ರಾಹ್ಮಣರನ್ನು ದೊರಕಿಸಿಕೊಟ್ಟು, ಯಜಮಾನರ ಬಯಕೆಯಂತೆ ಅಡಿಗೆಯನ್ನು ಮಾಡಿಸಿ, ದಕ್ಷಿಣೆಯನ್ನು ಕೊಡಿರಿ. ಒಟ್ಟಿಗೆ ಯಾರಿಗೂ ಯಾವ ಮಾತಿನ ಕೊರತೆಯೂ ಉಂಟಾಗದಂತೆ, ಪ್ರತಿಯೊಬ್ಬರ ಜಾತಿ-ಧರ್ಮದಂತೆ ವ್ಯವಸ್ಥೆಯನ್ನು ಮಾಡಿರಿ, ಎಂದು ಅವರನ್ನು ಆಜ್ಞಾಪಿಸಿದರು. ಆಗ ಶಿಷ್ಯರೆಲ್ಲರು ದೀಕ್ಷಿತರ ಅಪ್ಪಣೆಯಂತೆ ಕೆಲಸಗಳನ್ನು ಮಾಡಹತ್ತಿದರು. ದಿನಾಲು ನುಚ್ಚು-ರೊಟ್ಟಿ ಮತ್ತು ಸಾಂಭಾರಿಗಳು ಎಲ್ಲರಿಗೂ ಬೇಕಾದಷ್ಟು ದೊರೆಯುತ್ತಿತ್ತು. ಜನರು ಪುಷ್ಟರಾದರು. ದೀಕ್ಷಿತರ ಪಂಗ್ತಿಗೆ ದಿನಂಪ್ರತಿ ಸಾವಿರಾರು ಜನರು ಭೋಜನ ಮಾಡುತ್ತಿದ್ದರು. ದೀಕ್ಷಿತರು ಒಂದು ಶಾಲೆಯನ್ನು ಸ್ಥಾಪಿಸಿ, ತಮ್ಮ ಆಶ್ರಯದಲ್ಲಿದ್ದ ಬಾಲಕರಿಗೆ ವಿದ್ಯೆಯನ್ನು ಕಲಿಸುವ ವ್ಯವಸ್ಥೆಯನ್ನು ಸಹ ಮಾಡಿಸಿದರು. ಜನರಿಗೆ ಈ ಪ್ರಕಾರ ಸುಖವಾಗಲು, ಅವರಿಗೆ ಮನೆತನದ ವಿಚಾರಗಳು ನೆನಪಾಗಹತ್ತಿದವು. ಒಂದು ದಿವಸ ಅವರೆಲ್ಲರು ದೀಕ್ಷಿತರ ಬಳಿಗೆ ಬಂದು—ಗುರುಗಳೆ, ನಾವು ತಮ್ಮ ಕೃಪೆಯಿಂದ ಬದುಕಿದೆವು. ತಮ್ಮ ಆಶ್ರಯವು ದೊರೆಯದಿದ್ದರೆ, ಇಷ್ಟು ಹೊತ್ತಿಗೆ ನಾವು ಸತ್ತುಹೋಗುತ್ತಿದ್ದೆವು. ನಾವು ಈ ವರ್ಷ ಸಾಲಮಾಡಿ ಹೊಲಗಳನ್ನು ಬಿತ್ತಿದ್ದೆವು. ಮಳೆಯಾಗದ್ದರಿಂದ ಬೀಜಗಳು ಒಣಗಿ ಹೋದವು. ಇನ್ನು ನಮ್ಮ ಗತಿಯೇನು? ಎಂದು ತಮ್ಮ ಕರ್ಮಕಥೆಯನ್ನು ಹೇಳಿದರು. ಅದಕ್ಕೆ ದೀಕ್ಷಿತರು—ಇನ್ನು ಮೇಲೆ ನೀವು ನಿಶ್ಚಿಂತರಾಗಿ ನಿಮ್ಮ ನಿಮ್ಮ ಗ್ರಾಮಗಳಿಗೆ ಹೋಗಿರಿ; ಈಗ ಬಿತ್ತಿದ್ದ ಹೊಲಗಳನ್ನು ಮತ್ತೆ ಹರಗಿ ಇನ್ನೊಮ್ಮೆ ಬಿತ್ತಿರಿ. ಎಲ್ಲ ಗ್ರಾಮದೇವತೆಗಳನ್ನು ಪೂಜಿಸಿ ಎಡೆಯನ್ನು ಕೊಡಿರಿ; ಬ್ರಾಹ್ಮಣ-ಭೋಜನವನ್ನು ಮಾಡಿಸಿರಿ; ಅಂದರೆ ತ್ರೀವ್ರವೇ ಮಳೆಯಾಗಿ ಸುಕಾಲವಾಗುವದು. ನಮ್ಮ ಮಾತಿನಲ್ಲಿ ನಂಬಿಗೆ ಯಿಡಿರಿ! ಎಂದು ಹೇಳಿ, ಪ್ರತಿಯೊಬ್ಬರಿಗೆ ಅವರವರ ಯೋಗ್ಯತೆಯಂತೆ ವೆಚ್ಚಕ್ಕಾಗಿ ಹಣವನ್ನು ಕೊಟ್ಟರು. ಆಗ ಎಲ್ಲ ಜನರು ಸಂತುಷ್ಟರಾಗಿ, ತಮ್ಮ ತಮ್ಮ ಸ್ಥಳಗಳಿಗೆ ಆನಂದದಿಂದ ಹೊರಟು ಹೋದರು. ಆಗ ಕಾರ್ತೀಕಮಾಸವಿತ್ತು. ಶುದ್ಧ-ಪಂಚಮಿಯ ದಿವಸ ಅಘಟಿತಘಟನಾಶಕ್ತಿಯುಳ್ಳ ಶ್ರೀ ಚಿದಂಬರ ದೀಕ್ಷಿತರು ಮಾಳಿಗೆಯನ್ನೇರಿ ಮೇಘರಾಜನನ್ನು ಪ್ರಾರ್ಥಿಸಿದರು. ಕೂಡಲೆ ಧಾರೆ

ಗಟ್ಟಿ ಸುರಿಯಹತ್ತಿತು. ಕೆರೆ-ಬಾವಿಗಳು ತುಂಬಿ ಹೊರಸೂಸಹತ್ತಿದವು. ಮನೆಗಳು ಬೀಳಹತ್ತಿದವು. ಯಾವತ್ತು ಕೆಲಸಗಳು ಕಟ್ಟಾದವು. ಜನರಿಗೆ ಮಳೆಯು ಸಾಕು-ಸಾಕಾಗಿ ಹೋಯಿತು. ಆಗ ದೀಕ್ಷಿತರು ಮತ್ತೆ ಮೇಘರಾಜನನ್ನು ಪ್ರಾರ್ಥಿಸಲು, ಮಳೆಯು ಕಟ್ಟಾಯಿತು. ಜನರು ಭೂಮಿಯನ್ನು ಬಿತ್ತಿದರು, ಕಾಲಕ್ಕೆ ಸರಿಯಾಗಿ ಬೆಳೆಯು ಅಪೂರ್ವವಾಗಿ ಬಂದಿತು. ರಾಶಿಯನ್ನು ಮಾಡಲು, ಕಾಳುಗಳು ವಿಪುಲವಾದವು. ಆಗ ರೈತರು ಆನಂದಿತರಾಗಿ, ಗುರ್ವಾಜ್ಞೆಯ ಮೇರೆಗೆ ಗ್ರಾಮ-ದೇವತಾರ್ಚನವನ್ನೂ, ಬ್ರಾಹ್ಮಣ-ಭೋಜನವನ್ನೂ ಮಾಡಿಸಿದರು; ಹಾಗೂ ಹಗೆಗಳನ್ನೆಲ್ಲ ಕಾಳುಗಳಿಂದ ತುಂಬಿಕೊಂಡು, ಒಳಿಕ ವಿಪುಲ ಧಾನ್ಯವನ್ನು ತಕ್ಕೊಂಡು, ಗುರುಗಳ ದರ್ಶನಕ್ಕೆ ಬಂದು, ಧಾನ್ಯಗಳನ್ನು ಗುರುಗಳಿಗೆ ಅರ್ಪಿಸಿದರು. ಆಗ ದೀಕ್ಷಿತರು:—ನಾನು ಹೇಳಿದಂತೆ ಮಾಡಿರಿ; ಅಂದರೆ ಮತ್ತೂ ನಿಮ್ಮ ಕಲ್ಯಾಣವಾಗುವದು. ನಮಗಾಗಿ ತಂದ ಧಾನ್ಯವು ನಮಗೆ ಮುಟ್ಟಿತು. ಅದನ್ನು ಬ್ರಾಹ್ಮಣರಿಗೆ ಹಂಚಿಕೊಡಿರಿ, ಎಂದು ಹೇಳಲು, ಗುರುವಚನದಲ್ಲಿ ನಂಬಿಗೆಯುಳ್ಳ ಆ ರೈತರು, ಧಾನ್ಯವನ್ನೆಲ್ಲ ಬ್ರಾಹ್ಮಣರಿಗೆ ಹಂಚಿಕೊಟ್ಟು, ದೀಕ್ಷಿತರ ಕೀರ್ತಿಯನ್ನು ಹೊಗಳುತ್ತ, ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಇರಲಿ;

ಕೃಷ್ಣಾ ತಟಾಕದಲ್ಲಿ ವಾಯಿ ಎಂಬ ಗ್ರಾಮವಿದೆ. ಅದು ಹಲವು ಗುಡಿಗಳಿಂದಲೂ, ಬಗೆ-ಬಗೆಯ ಘಾಟಗಳಿಂದಲೂ ಒಪ್ಪುತ್ತಲಿದೆ. ಆ ಊರಲ್ಲಿ * 'ಗೋಖಲೆ' ಎಂಬ ಉಪನಾಮವುಳ್ಳ ಒಂದು ಪ್ರಸಿದ್ಧವಾದ ಮನೆತನವಿತ್ತು ಪುಣೆಯ ಶ್ರೀಮಂತ ಪೇಶ್ವೆಯವರು ಅವರಿಗೆ ಆಪ್ತರಾಗಿದ್ದರು; ಆದ್ದರಿಂದ ಅವರು ಸೈನ್ಯವನ್ನೂ, ಮುದ್ರೆಯನ್ನೂ ಸಂಪಾದಿಸಿದ್ದರು. ಈ ಗೋಖಲೆ ಮನೆತನದಲ್ಲಿಯ ಕಾಶೀರಾಯ, ಮತ್ತು ಮಾಧವರಾಯ ಎಂಬ ಇಬ್ಬರು ಪ್ರಾಮಾಣಿಕರು ಬಹು ದಿವಸಗಳಿಂದ ಬಾಜೀರಾಯನ ದರಬಾರದಲ್ಲಿದ್ದರು. ಮಾಧವರಾಯನು ಮಂತ್ರಿಯ ಕೆಲಸವನ್ನು ನೋಡುತ್ತಿದ್ದನು. ಬಾಜೀರಾಯನಿಗೂ, ರಾಸ್ತೇಯವರಿಗೂ ಮನಸ್ಸು ನೆಟ್ಟಗಿದ್ದಿಲ್ಲ. ಒಂದುದಿವಸ ಬಾಜೀರಾಯನು ರಾಸ್ತೇಯವರನ್ನು ಏಕಾಂತದಲ್ಲಿ ಕರೆದು, ಇಷ್ಟುದಿವಸ ನಮ್ಮ-ನಿಮ್ಮ ಮನಸುಗಳು ನೆಟ್ಟ

* ಗೋಖಲೇ ಇವರಿಗೇ ರಾಸ್ತೆ ಎಂಬ ಉಪನಾಮವು ದೊರೆತಿರುತ್ತದೆ. ಇದರ ಕಾರಣವೇನಂದರೆ—ಒಂದು ಇಕ್ಕಟ್ಟಿನ ಪ್ರಸಂಗದಲ್ಲಿ ಯಾರ ಮಾತನ್ನೂ ಕೇಳದೆ ರಾಸ್ತ [ಖರೇ] ಮಾತಾಡಿದ್ದರಿಂದ ಈ ಹೆಸರು ಉಂಟಾಯಿತು.

ಗಿದ್ದಿಲ್ಲ; ಆದರೆ ಇನ್ನು ಮೇಲೆ ನಾವೂ-ನೀವೂ ನಿರ್ಮಲ ಮನಸಿನಿಂದ ನಡೆಯೋಣ, ಎಂದು ನುಡಿದು, ಅದರಂತೆ ಆಣೆಯನ್ನು ಮಾಡಿದನು. ಆಗ ರಾಸ್ತೇಯವರು ತಮ್ಮ ಬಿರುದಿನಂತೆ ಬಾಜೀರಾಯನೊಡನೆ ಮನಸು ಬಿಚ್ಚಿ ನಡೆಯಹತ್ತಿದರು. ಬಾಜೀರಾಯನು ಶಪಥವನ್ನು ಮಾಡಿದ್ದರೂ ಅವನ ಮನಸಿನೊಳಗಿನ ವೈರವು ಕುಂದಿದ್ದಿಲ್ಲ. ಒಮ್ಮೆ ಅವನು ರಾಸ್ತೇಯವರಿಂದ ಕೂಡಿಕೊಂಡು ರಾಯಗಡಕ್ಕೆ ಹೋದಾಗ, ರಾಸ್ತೇಯವರನ್ನು ಸೆರೆಯಲ್ಲಿಟ್ಟನು. ಈ ಸುದ್ದಿಯು ರಾಸ್ತೇಯವರ ಆಪ್ತೇಷ್ಟರಿಗೆ ತಿಳಿಯಲು, ಅವರು ಶೋಕಮಾಡುತ್ತ ಶ್ರೀ ಚಿದಂಬರ ದೀಕ್ಷಿತರ ಕಡೆಗೆ ಬಂದು, ಇದ ವರ್ತಮಾನವನ್ನು ಹೇಳಿದರು. ಆಗ ದೀಕ್ಷಿತರು:-ನೀವು ಏನೂ ಚಿಂತೆಮಾಡಬೇಡಿರಿ. ಇನ್ನು ಮೂರು ತಿಂಗಳುಗಳ ಮೇಲೆ ನಿಮಗೆ ರಾಸ್ತೇಯವರ ಭೆಟ್ಟಿಯಾಗುವದು. ಬಾಜೀರಾಯನಿಗೆ ಅಸತ್ಯ ಮಾತಾಡಿದ್ದಕ್ಕಾಗಿ ಚೆನ್ನಾಗಿ ಪ್ರಾಯಶ್ಚಿತ್ತವು ದೊರೆಯುವದು ನಾವು ಹೇಳಿದ ಅವಧಿಯನಂತರ ಬಾಜೀರಾಯನೇ ರಾಸ್ತೇಯವರಿದ್ದಲ್ಲಿಗೆ ಬಂದು, ಅವರನ್ನು ಸನ್ಮಾನಿಸಿ ಕರೆದುಕೊಂಡು ಹೋಗುವನು ಬಹು ಮಾನಮರ್ಯಾದೆಯನ್ನು ಮಾಡುವನು. ನೀವು ರಾಸ್ತೇಯವರ ಬಿಡುಗಡೆಯಾಗುವ ವರೆಗೆ ಇಲ್ಲಿಯೇ ನಿಂತುಕೊಳ್ಳಿರಿ, ಎಂದು ಅಭಯವನ್ನು ಕೊಡಲು, ಆ ಜನರು ಅಲ್ಲಿಯೇ ನಿಂತುಕೊಂಡರು. ಆ ಹೊತ್ತೇ ರಾತ್ರಿ ಕಾರಾಗೃಹದಲ್ಲಿದ್ದ ರಾಸ್ತೇಯವರಿಗೂ ಇದರಂತೆಯೇ ಸ್ವಪ್ನಬಿದ್ದಿತು. ಮೊದಲೇ ದೀಕ್ಷಿತರಲ್ಲಿ ವಿಶ್ವಾಸವುಳ್ಳ ರಾಸ್ತೇಯವರಿಗೆ ಸ್ವಪ್ನದಿಂದ ಅವರ ವಿಷಯವಾಗಿ ಮತ್ತಿಷ್ಟು ಪೂಜ್ಯಬುದ್ಧಿಯುಂಟಾಯಿತು.

ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಬಾಜೀರಾಯನ ರಾಜ್ಯದಲ್ಲಿ ಬಂಡಾಯವೆದ್ದಿತು. ಅವನು ರಾಜ್ಯದಲ್ಲಿ ಕಾಲೂರಿ ನಿಲ್ಲುವದು ಬಿಗಿಯಾಗಲು, ಸಹ್ಯಾದ್ರಿಯ ಕಡೆಗೆ ಓಡಿಹೋಗಬೇಕೆಂದು ಯೋಚಿಸಿ, ಮೊದಲು ರಾಯಗಡಕ್ಕೆ ಹೋಗಿ, ರಾಸ್ತೇಯವರ ಬಿಡುಗಡೆಯನ್ನು ಮಾಡಿ, ತನ್ನ ಸಂಗಡ ಬರಬೇಕೆಂದು ಕೇಳಿಕೊಂಡನು. ಅದಕ್ಕೆ ಅವರು ಒಪ್ಪದಿರಲು, ತಾನೊಬ್ಬನೇ ಸಮುದ್ರತೀರದ ಕಡೆಗೆ ಸಾಗಿದನು. ಇತ್ತ ರಾಸ್ತೇಯವರು ತಮ್ಮ ಜನ್ಮಭೂಮಿಯಾದ ವಾಯಿಗ್ರಾಮಕ್ಕೆ ಬಂದರು; ಹಾಗು ತಮ್ಮ ಬಿಡುಗಡೆಯಾದ ಬಗ್ಗೆ ಒಬ್ಬ ಸೇವಕನ ಕೈಯಿಂದ ದೀಕ್ಷಿತರ ಬಳಿಯಲ್ಲಿದ್ದ ತಮ್ಮ ಆಪ್ತರಿಗೆ ಹೇಳಿಕಳುಹಿದರು. ದೀಕ್ಷಿತರು ಸುದ್ದಿ ತಂದ ಮನುಷ್ಯನನ್ನು ಕುರಿತು:—ನಿಮ್ಮ ಯಜಮಾನರಾದ ರಾಸ್ತೇಯವರಿಗೆ "ಬಾಜೀರಾಯನು, ರಾಜ್ಯದಲ್ಲಿ ಬಂಡಾಯವಾದ್ದರಿಂದ ಸಮುದ್ರ ತೀರಕ್ಕೆ

ಓಡಿಹೋಗಿರುವನು. ಅವನು ಬರುವಷ್ಟರಲ್ಲಿ ನೀವು ಬಾಗಲಕೋಟೆ; ಅಥಣಿ ಮೊದಲಾದ ಸ್ಥಳಗಳನ್ನು ವಶಮಾಡಿಕೊಂಡು ಸ್ವಸ್ಥವಾಗಿರಬೇಕು. ಅವನು ಬಂಡಾಯವು ಶಾಂತವಾದ ಬಳಿಕ ಸ್ವಸ್ಥಾನವನ್ನು ಸೇರಿ, ನಿಮಗೆ ಪತ್ರವನ್ನು ಬರೆದು ಕರೆಸಿಕೊಳ್ಳುವನು; ಹೆಚ್ಚಿಗೆ ರಾಜ್ಯವನ್ನೂ ಕೊಡುವನು. ನೀವು ಪುಣೆಗೆ ಹೋಗುವಾಗ ನಮ್ಮ ಭೆಟ್ಟಿಯಾಗಿ ಹೋಗಬೇಕು" ಈ ಪ್ರಕಾರ ಹೇಳು ಎಂದು ನುಡಿದರು. ಆಗ ಸುದ್ದಿಗಾರನು ಮರಳಿ ವಾಯಿಗೆ ಹೋಗಿ ರಾಸ್ತೇಯುವರಿಗೆ ದೀಕ್ಷಿತರ ಸಂದೇಶವನ್ನೆಲ್ಲ ಹೇಳಿದನು. ಬಳಿಕ ರಾಸ್ತೇಯುವರು ಗುರ್ವಾಜ್ಞೆಯಂತೆ ಬಾಗಲಕೋಟೆ, ಅಥಣಿ ಮೊದಲಾದ ಪ್ರದೇಶಗಳನ್ನು ಹಿಡುಕೊಂಡು, ಅಥಣಿಯಲ್ಲಿ ನಿಂತುಕೊಂಡರು. ಮುಂದೆ ನಾಲ್ಕುತಿಂಗಳುಗಳ ಮೇಲೆ ಬಾಜೀರಾಯನು ಬಂಡಾಯವು ಶಾಂತವಾದ್ದರಿಂದ ತಿರುಗಿ ತನ್ನ ರಾಜ್ಯವನ್ನು ಸೇರಿದನು. ಹಾಗು ರಾಸ್ತೇಯುವರಿಗೆ, ಒಳ್ಳೇ ಪ್ರೇಮಪೂರ್ವಕವಾದ ಪತ್ರವನ್ನು ಬರೆದು, ಮೊದಲಿಗಿಂತ ಹೆಚ್ಚು ಮರ್ಯಾದೆಯನ್ನು ಮಾಡಿ, ಬಹು ಸಂಭ್ರಮದಿಂದ ಅವರನ್ನು ಕರಕೊಂಡು ಬರಬೇಕೆಂದು ಒಬ್ಬ ಸರದಾರನನ್ನು ವಾಯಿಗೆ ಕಳಿಸಿಕೊಟ್ಟನು. ಆ ಸರದಾರನು ವಾಯಿಗೆ ಹೋಗಿ, ರಾಸ್ತೇಯುವರಿಗೆ ಬಾಜೀರಾಯನ ಪತ್ರವನ್ನು ಕೊಟ್ಟು, ಬಹು ಮರ್ಯಾದೆಯನ್ನು ಮಾಡಿ, ಪುಣೆಗೆ ಬರಬೇಕೆಂದು ಬಿನ್ನಹವನ್ನು ಮಾಡಿಕೊಂಡನು. ಆಗ ಅವರು:— ನಾವು ದೀಕ್ಷಿತರ ದರ್ಶನವನ್ನು ತಕ್ಕೊಂಡು, ಆ ಮೇಲೆ ಪುಣೆಗೆ ಬರುವೆವೆಂದು ಹೇಳಿ, ಸರದಾರನನ್ನು ತಿರುಗಿ ಕಳಿಸಿ, ತಾವು ದೀಕ್ಷಿತರ ದರ್ಶನಕ್ಕಾಗಿ ಶಿರಹಟ್ಟಿಗೆ ಬಂದರು. ಆಗ ದೀಕ್ಷಿತರು ಲಕ್ಷ್ಮಣಪುರದಿಂದ ತಿರುಗಿ ಶಿರಹಟ್ಟಿಗೆ ಬಂದಿದ್ದರು. ರಾಸ್ತೇಯುವರು ದೀಕ್ಷಿತರಿಗೆ ನಮಸ್ಕಾರಮಾಡಿ:— ಪ್ರಭುಗಳೇ, ತಮ್ಮ ದೃಷ್ಟಾಂತದಂತೆ ನಮ್ಮ ಬಿಡುಗಡೆಯಾಗಿರುವದು. ಬಾಜೀರಾಯನು ಹೆಚ್ಚಿಗೆ ಮರ್ಯಾದೆಯನ್ನೂ ಮಾಡಿರುವನು. ಇದೆಲ್ಲ ತಮ್ಮ ಅನುಗ್ರಹವೇ ಸರಿ! ಎಂದು ಬಹು ವಿನಯದಿಂದ ನುಡಿಯಲು, ದೀಕ್ಷಿತರು:— ನಿಮ್ಮ ಸುದೈವವು! ಅದರಲ್ಲಿ ನಮ್ಮ ಸಂಬಂಧವೇನು? ಎಂದು ಪ್ರೇಮಪೂರ್ವಕವಾಗಿ ಮಾತನಾಡಿದರು.

ರಾಸ್ತೇಯುವರು ಒಳ್ಳೇ ವೈಭವದಿಂದ ದೀಕ್ಷಿತರ ದರ್ಶನಕ್ಕೆ ಬಂದಿದ್ದರು. ಅವರ ಸಂಗಡ ಆಪ್ತರೂ, ಇಷ್ಟರೂ, ಬ್ರಾಹ್ಮಣರೂ, ಸೈನ್ಯದವರೂ ಹೀಗೆ ಬಹಳ ಪರಿವಾರವಿತ್ತು. ಅವರು ದೀಕ್ಷಿತರ ದರ್ಶನವನ್ನು ತಕ್ಕೊಂಡ ಪ್ರಥಮ

ಪ್ರಸಂಗವು ವರ್ಣಿಸುವ ಹಾಗೆ ಇತ್ತು. ರಾಸ್ತೇಯವರು ಶಿರಹಟ್ಟಿಯನ್ನು ಪ್ರವೇಶಿಸಿದ ಕೂಡಲೆ ವಾದ್ಯಗಳು ಬಾರಿಸಹತ್ತಿ, ತುಬಾಕಿಗಳು ಹಾರಿಸಲ್ಪಟ್ಟವು. ಈ ಸಮಾರಂಭವನ್ನು ಪುರವಾಸಿಗಳು ಮಾಳಿಗೆಗಳನ್ನೇರಿ ನೋಡುತ್ತಿದ್ದರು. ಊರಲ್ಲಿ ರಾಸ್ತೇಯವರು ಬರಿಗಾಲಿನಿಂದಲೇ ನಡೆಯುತ್ತ ದೀಕ್ಷಿತರ ಬಾಗಿಲಕ್ಕೆ ಬರಲು, ದೀಕ್ಷಿತರು ಎದ್ದು ಬಂದು, ಅವರನ್ನು ಕೈಹಿಡಿದು ಕರೆದುಕೊಂಡು ಹೋಗಿ, ತಮ್ಮ ಹತ್ತರ ಕೂಡ್ರಿಸಿಕೊಂಡರು. ಆಗ ರಾಸ್ತೇಯವರು ದೀಕ್ಷಿತರ ಮುಂದೆ ನಾರೀಕೇಲಫಲಗಳನ್ನೂ, ಸಕ್ಕರೆಯನ್ನೂ ಇಟ್ಟು ನಮಸ್ಕಾರ ಮಾಡಿದರು. ಬಳಿಕ ಮಿಕ್ಕ ಜನರು ದೀಕ್ಷಿತರ ಮುಂದೆ ಸಕ್ಕರೆಯನ್ನಿಟ್ಟರು. ಪರ್ವತಪ್ರಾಯವಾಗಿ ಸಕ್ಕರೆಯು ಕೂಡಿತು. ದೀಕ್ಷಿತರು ಆ ಸಕ್ಕರೆಯನ್ನೆಲ್ಲ ರಾಸ್ತೇಯವರ ಕೈಯಿಂದಲೇ ಹಂಚಿಸಿಬಿಟ್ಟರು.

ಇಷ್ಟಾದ ಬಳಿಕ ರಾಸ್ತೇಯವರ ಹೆಂಗಸರು ಬಂದು, ಫಲಗಳನ್ನಿಟ್ಟು ನಮಸ್ಕಾರ ಮಾಡಲು, ದೀಕ್ಷಿತರು ಪ್ರತಿಯೊಬ್ಬರ ಹೆಸರನ್ನು ಕೇಳಿ, 'ನಿಮಗೆ ಸುಫಲವಾಗಲಿ' ಎಂದು ಆಶೀರ್ವದಿಸಿ, ಸ್ವಸ್ಥಾನಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಡಲು, ಎಲ್ಲರು ತಾವು ಇಳುಕೊಂಡ ಸ್ಥಳಕ್ಕೆ ಹೊರಟು ಹೋದರು. ರಾಸ್ತೇಯವರ ಆಪ್ತಜನರ ಹೊರತು, ಅವರ ಸಂಗಡ ಏಳನೂರು ಜನರಿದ್ದರು. ಅವರ ವ್ಯವಸ್ಥೆಯಾದರೂ ಯೋಗ್ಯವಾಗಿ ಮಾಡಲ್ಪಟ್ಟಿತು. ದಿನಾಲು ರಾಸ್ತೇಯವರು ದರ್ಶನಕ್ಕೂ, ಊಟಕ್ಕೂ ಪರಿವಾರದೊಂದಿಗೆ ದೀಕ್ಷಿತರಿದ್ದೆಡೆಗೆ ಬರುತ್ತಿದ್ದರು. ಅವರು ಒಂದು ವರುಷ ದೀಕ್ಷಿತರ ಬಳಿಯಲ್ಲಿದ್ದರು. ಅವರಿಗೆ ಸಂತತಿಯಿದ್ದಿಲ್ಲ. ಆಗ ದೀಕ್ಷಿತರ ಆಶೀರ್ವಾದದಿಂದ ಸಂತತಿಯಾಯಿತು. ಅಷ್ಟರಲ್ಲಿ 'ದೀಕ್ಷಿತರ ಅಪ್ಪಣೆಯನ್ನು ತಕ್ಕೊಂಡು, ತೀವ್ರವಾಗಿ ಹೊರಟು ಬರಬೇಕೆ'ಂದು ಬಾಜೀರಾಯನ ಕಡೆಯಿಂದ ರಾಸ್ತೇಯವರಿಗೆ ಮತ್ತೊಂದು ಪತ್ರವು ಬಂತು. ಆಗ ಅವರು ಪತ್ರದ ಸಂಗತಿಯನ್ನು ದೀಕ್ಷಿತರಿಗೆ ತಿಳಿಸಲು, ದೀಕ್ಷಿತರು:—ಇನ್ನು ನೀವು ನಿರ್ಭಯರಾಗಿ ಹೊರಟು ಹೋಗಿರಿ. ಬಾಜೀರಾಯನು ನಿಮ್ಮ ಪ್ರಭುವಾಗಿರುವದರಿಂದ, ನೀವು ಆತನ ಹೇಳಿಕೆಯಂತೆ ವರ್ತಿಸಿರಿ. "ನಾವಿಷ್ಣುಃಪೃಥ್ವೀಪತಿಃ" ಎಂದು ಹೇಳಿರುವದು, ಎಂದು ಬೋಧಿಸಲು, ಮಾಧವರಾಯನು ಈ ಮಾತಿಗೆ ಒಪ್ಪಿಕೊಂಡನು. ಕಾಶೀರಾಜನು ಮಾತ್ರ 'ನಮ್ಮ ರಾಜನು ವಿಶ್ವಾಸಘಾತಕಿಯಾಗಿರುವದರಿಂದ ನಾನು ಆತನ ಬಳಿಗೆ ಹೋಗಲಾರೆನು! ತಮ್ಮ ಬಳಿಯಲ್ಲಿಯೇ ನಿಲ್ಲಬೇಕೆಂದು ನನ್ನ ಮನಸ್ಸಿನಲ್ಲಿರುವದು, ಎಂದು ತನ್ನ ಅಭಿಪ್ರಾಯವನ್ನು

ವ್ಯಕ್ತ್ತವಾಡಲು, ಅವನನ್ನು ತಮ್ಮ ಒಳಿಯಲ್ಲಿಟ್ಟುಕೊಂಡು ಮಾಧವರಾಯನಿಗೆ ಫಲ-ಮಂತ್ರಾಕ್ಷತೆಗಳನ್ನು ಕೊಟ್ಟು ಪುಣೆಗೆ ಕಳಿಸಿಕೊಟ್ಟರು. ಆತನಿಗೆ ಅಲ್ಲಿ ಬಹಳ ಮರ್ಯಾದೆಯಾಯಿತು. ಕಾಶೀರಾಜನು ಬುದ್ಧಿವಂತನೂ, ಯಜನ-ಯಾಜನಗಳಲ್ಲಿಯೂ, ಶ್ರೌತಕರ್ಮದಲ್ಲಿಯೂ ಪ್ರವೀಣನಾಗಿದ್ದನು. ಆತನಿಗೆ ವೈದ್ಯಶಾಸ್ತ್ರ, ನಾಟ್ಯಕಲೆ, ಅಶ್ವಾದಿಗಳ ಪರೀಕ್ಷೆ ಮೊದಲಾದ ಬಗೆಬಗೆಯ ವಿಷಯಗಳು ಚನ್ನಾಗಿ ಅವಗತವಿದ್ದವು. ಇದಲ್ಲದೆ ಆತನು ಕ್ಷಾತ್ರವಿದ್ಯೆಯಲ್ಲಿ ಪ್ರವೀಣನೂ, ಧೈರ್ಯವುಳ್ಳವನೂ, ಸತ್ಯಪ್ರತಿಜ್ಞನೂ ಆಚಾರವಂತನೂ ಆಗಿದ್ದನು. ದೀಕ್ಷಿತರ ಅಪ್ಪಣೆಯು ದೊರೆತ ಕೂಡಲೆ ಅವನು ಆನಂದದಿಂದ ಅಲ್ಲಿಯೇ ನಿಂತುಕೊಂಡನು. ಬಾಜೀರಾಯನಿಗೂ, ಮಾಧವರಾಯನಿಗೂ ಮುಂದೆ ಒಂದು ಸಾರೆಯಾದರೂ ಜಗಳ ಬರಲಿಲ್ಲ ಮುಂದೆ ಅವರಿಬ್ಬರು ಒಳ್ಳೇ ನಂಬಿಗೆಯಿಂದ ನಡೆದರು.

ಈ ಸುಮಾರಕ್ಕೆ ನಿಪ್ಪಾಣಿಯಲ್ಲಿ ಶಿಂದೋಜಿರಾವ ಅಪ್ಪಾಸಾಹೇಬ ದೇಸಾಯಿ ನಿಂಬಾಳಕರ ಎಂಬವನೊಬ್ಬ ಕುದುರೆಯ ಸವಾರನಿದ್ದನು. ಅವನಿಗೆ ಇಪ್ಪತ್ತು ಕುದುರೆಗಳ ಮೇಲಧಿಕಾರವಿತ್ತು. ಅವನು ಜಾತಿಯಿಂದ ಶೂದ್ರನು. ಹೆಚ್ಚಿಗೆ ಸಂಪತ್ತನ್ನು ಸಂಪಾದಿಸಬೇಕೆಂಬ ಇಚ್ಛೆಯಿಂದ ಅವನು ದೀಕ್ಷಿತರ ಕೀರ್ತಿಯನ್ನು ಕೇಳಿ, 'ಬಲ್ಲಾಳ' ಎಂಬೊಬ್ಬ ತನ್ನ ಆಶ್ರಿತನಾದ ವೃದ್ಧ ಬ್ರಾಹ್ಮಣನೊಡನೆ ದೀಕ್ಷಿತರ ಬಳಿಗೆ ಬಂದು, ಅವರಿಗೆ ತನ್ನ ಅಭಿಪ್ರಾಯವನ್ನು ಅರುಹಿದನು. ಆಗ ದೀಕ್ಷಿತರು ಬಲ್ಲಾಳನನ್ನು ಸಮೀಪಕ್ಕೆ ಕರೆದು:—ನಿನಗೆ ಸಂಪತ್ತು ಬೇಕೋ? ಎಂದು ಪ್ರಶ್ನೆಮಾಡಲು, ಅದಕ್ಕೆ ಬಲ್ಲಾಳನು:—'ನನ್ನ ಒಡೆಯನಾದ ನಿಂಬಾಳಕರನಿಗೆ ಸಂಪತ್ತು ಕೊಟ್ಟರೆ ನನಗೇ ಕೊಟ್ಟಂತಾಯಿತು!' ಎಂದು ತನ್ನ ಸ್ವಾಮಿಭಕ್ತಿಯನ್ನು ವ್ಯಕ್ತಮಾಡಿದನು. ಆಗ ದೀಕ್ಷಿತರು ನಿಂಬಾಳಕರನನ್ನು ಮುಂದಕ್ಕೆ ಕರೆದು:—ನೀನು ಈ ಬಲ್ಲಾಳನು ಹೇಳಿದಂತೆ ನಡೆದರೆ ತೀವ್ರವೇ ಮನದಣಿಯಾಗಿ ಸಂಪತ್ತನ್ನು ಹೊಂದುವಿ. ನನ್ನ ಮಾತಿನಲ್ಲಿ ನಂಬಿಗೆಯನ್ನಿಟ್ಟು ಈ ಬಲ್ಲಾಳನೊಡನೆ ಬಾಜೀರಾಯನ ಕಡೆಗೆ ಹೋಗು, ಎಂದು ಹೇಳಿದರು. ಬಳಿಕ ನಿಂಬಾಳಕರನು:—ಈ ಬಲ್ಲಾಳನು ಬಹು ದಿವಸಗಳಿಂದ ನಮ್ಮ ಆಶ್ರಿತನಾಗಿರುವನು. ಈತನು ನಮಗೆ ನಮ್ಮ ತಂದೆಯಂತೆ ಪೂಜ್ಯನಾಗಿರುವನು. ಅವನು ಹೇಳಿದಂತೆಯೇ ನಡೆಯುವೆನು, ಎಂದು ನುಡಿದು, ದೀಕ್ಷಿತರ ಆಶೀರ್ವಾದವನ್ನು ಹೊಂದಿ, ಅಲ್ಲಿಂದಲೇ ಬಲ್ಲಾಳನೊಡನೆ ಪುಣೆಗೆ ಹೊರಟು

ಹೋದನು. ಬಾಜೀರಾಯನು ಆತನ ಧೈರ್ಯ, ಸಾಹಸ ಮೊದಲಾದ ಗುಣಗಳನ್ನು ನೋಡಿ, ಸ್ವಲ್ಪ ದಿವಸಗಳಲ್ಲಿಯೇ ರಾಸ್ತೇಯವರ ಶಿಫಾರಸ್ಸಿನ ಮೇಲಿಂದ ಅವನಿಗೆ ತನ್ನ ದಂಡಿನಲ್ಲಿ ದೊಡ್ಡ ಅಧಿಕಾರವನ್ನು ಕೊಟ್ಟನು. ಹೀಗೆ ಅವನು ದೈವುಳ್ಳವನಾಗಿ, ದೀಕ್ಷಿತರ ಆಶೀರ್ವಾದದ ಬಲದಿಂದಲೂ, ಬಲ್ಲಾಳನ ಯೋಗ್ಯವಾದ ಆಲೋಚನೆಗಳ ಸಹಾಯದಿಂದಲೂ ಒಳ್ಳೇ ಘನತೆಗೇರಿದನು. ಮುಂದೆ ಅವನು ಸಾಯುವ ವರೆಗೆ ಪ್ರತಿವರ್ಷ ದೀಕ್ಷಿತರ ದರ್ಶನಕ್ಕೆ ಬಂದು, ಕೈಲಾದ ಮಟ್ಟಿಗೆ ಅವರ ಸೇವೆಯನ್ನು ಮಾಡುತ್ತ ಪುಣ್ಯ-ಭಾಜನನಾದನು.

---

## ೧೩ನೆಯ ಪ್ರಕರಣ.

## ಅಣ್ಣಾಭಟ್ಟನ ವ್ರಣನಿವಾರಣವೂ, ಸದ್ಬೋಧಾಮೃತವೂ.

ಶಿಕ್ಕೋಡಿ ಎಂಬ ಗ್ರಾಮದಲ್ಲಿ ಅಣ್ಣಾಭಟ್ಟನೆಂಬವನೊಬ್ಬ ಸದಾಚಾರಿಯಾದ ಬ್ರಾಹ್ಮಣನು ಇರುತ್ತಿದ್ದನು. ಆತನ ಸ್ವಭಾವವು ಸೀಡಕವಾಗಿತ್ತು. ಸಿಟ್ಟು ಬಂದಾಗ ಅವನ ಮೈಮೇಲೆ ಎಚ್ಚರವೇ ಉಳಿಯುತ್ತಿದ್ದಿಲ್ಲ. ಅವನಿಗೆ ಒಬ್ಬ ಮಗನಿದ್ದನು. ಒಂದು ದಿವಸ ಯಾವದೋ ಕಾರಣದಿಂದ ಅವನು ತನ್ನ ಹೆಂಡತಿಯೊಡನೆ ಜಗಳಾಡಿ, ಮನೆಯನ್ನು ತೊರೆದು, ಶ್ರೀ ಚಿದಂಬರ ದೀಕ್ಷಿತರ ದರ್ಶನವನ್ನು ತಕ್ಕೊಳ್ಳಬೇಕೆಂದು ಶಿರಹಟ್ಟಿಗೆ ಬಂದು, ಅಲ್ಲೇ ಇರಹತ್ತಿದನು. ಇತ್ತ ಹೆಂಡತಿಯು, ಗಂಡನು ಸಿಟ್ಟಾಗಿ ಹೋದದ್ದರಿಂದ ಮನಸ್ಸಿನಲ್ಲಿ ಮಿಡುಕುತ್ತ ಕೆಲವು ದಿವಸಗಳನ್ನು ಹಾಗೆಯೇ ಕಳೆದು, ಇಂದು ಬಂದಾರು; ನಾಳೆ ಬಂದಾರು; ಎಂದು ಒಂದು ತಿಂಗಳವರೆಗೆ ಗಂಡನ ಹಾದಿಯನ್ನು ನೋಡಿದಳು. ಆದರೂ ಪತಿಯು ತಿರುಗಿ ಬಾರದ್ದನ್ನು ಕಂಡು, ಸಂಗಡ ಮಗನನ್ನು ಕರೆದುಕೊಂಡು, ಗಂಡನನ್ನು ಹುಡುಕುತ್ತ-ಹುಡುಕುತ್ತ ಅವಳೂ ಶಿರಹಟ್ಟಿಗೆ ಬಂದಳು. ಅಲ್ಲಿ ಅವಳಿಗೆ ತನ್ನ ಗಂಡನು ದೀಕ್ಷಿತರ ಬಳಿಯಲ್ಲಿರುವನೆಂಬದು ಗೊತ್ತಾಯಿತು. ಆಗ ಅವಳು ದೀಕ್ಷಿತರಿದ್ದಲ್ಲಿಗೆ ಹೋಗಿ, ಅವರನ್ನು ನಮಸ್ಕರಿಸಿ, ಪತಿಗೆ ಪುತ್ರನನ್ನು ಒಪ್ಪಿಸ ಹೋದಳು; ಆಗ ಅಣ್ಣಾಭಟ್ಟನು ಮತ್ತೆ ಕೋಪಗೊಂಡು, ಹೆಂಡತಿಯನ್ನು ಶಿಕ್ಷಿಸುವ ಎತ್ತುಗಡೆಯನ್ನು ಮಾಡಹತ್ತಿದನು. ಅದನ್ನು ನೋಡಿ ದೀಕ್ಷಿತರು:-ಭಟ್ಟರೇ, ಪಂಡಿತರಾದವರು ಮೊದಲೇ

ಮದುವೆಯನ್ನು ಮಾಡಿಕೊಳ್ಳಬಾರದು. ಒಮ್ಮೆ ಸ್ತ್ರೀಯನ್ನು ಅಂಗೀಕರಿಸಿದ ಬಳಿಕ, ಅವಳನ್ನು ಬಿಡಲಿಚ್ಛಿಸುವವನು ನರಕಕ್ಕೆ ಹೋಗುತ್ತಾನೆ. ಸ್ತ್ರೀ-ತ್ಯಾಗದ ವಿಷಯವಾಗಿ ಧರ್ಮಶಾಸ್ತ್ರದಲ್ಲಿ ಹೇಳಿದ್ದನ್ನು ನಿಮಗೆ ಹೇಳುತ್ತೇನೆ; ಮನಸು ಗೊಟ್ಟು ಕೇಳಿಕೊಳ್ಳಿರಿ. ಸ್ತ್ರೀಯು ಬಂಜೆಯಾದ ಬಳಿಕ ಹತ್ತುವರುಷಗಳ ತರು ವಾಯ ಅವಳ ಸಂಬಂಧವನ್ನು ಬಿಡಬಹುದು. ಭರ್ತೃದ್ವೇಷಿಯೂ, ಅಧರ್ಮ ದಿಂದ ನಡೆಯುವವಳೂ, ಶಿಶು-ಘಾತಕಿಯೂ ಮತ್ತು ವ್ಯಭಿಚಾರಿಣಿಯೂ ಆದ ಸ್ತ್ರೀಯನ್ನು ಸ್ಥಳ-ಕಾಲಗಳ ವಿಚಾರಮಾಡದೆ ಒಮ್ಮೆಲೆ ಬಿಟ್ಟುಬಿಡಬೇಕು. ಈ ಯಾವ ದೋಷವೂ ಇಲ್ಲದ ಸ್ತ್ರೀಯನ್ನು ತ್ಯಾಗಮಾಡುವವನು ಮಹಾಪಾಪಕ್ಕೆ ಗುರಿಯಾಗುತ್ತಾನೆ. ಆದುದರಿಂದ ನೀನು ನಿನ್ನ ಗುಣವತಿಯಾದ ಸ್ತ್ರೀಯನ್ನು ತ್ಯಾಗಮಾಡದೆ ಅವಳನ್ನು ಕೂಡಿಕೊಂಡು ಪ್ರಪಂಚಮಾಡು. ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಟ್ಟು, ಶಾಸ್ತ್ರ-ವಿರುದ್ಧವಾದ ಆಚರಣವನ್ನು ಆಚರಿಸಬೇಡ, ಎಂದು ಉಪದೇಶಿಸಲು, 'ಮರಣ ಸಮೀಪಿಸಿದ ರೋಗಿಗೆ ಔಷಧವು ಸೇರದಂತೆ' ಅಣ್ಣಾಭಟ್ಟನಿಗೆ ದೀಕ್ಷಿತರ ಈ ಮಾತುಗಳು ಸೇರಲಿಲ್ಲ. ಅವನು, ದೀಕ್ಷಿತರು ಸ್ತ್ರೀ-ಪಕ್ಷಪಾತಿಗಳು, ಎಂದು ಅವರನ್ನು ಹಳಿಯುತ್ತ, ಬೇರೆ ಕಡೆಗೆ ಹೋಗಿ ನಿಂತುಕೊಂಡನು. ಅವನು ಹೋದ ಬಳಿಕ ದೀಕ್ಷಿತರು ಆತನ ಹೆಂಡತಿಗೆ:— ತಾಯಿ, ಧೈರ್ಯತಾಳು. ನೀನು ಸ್ವಲ್ಪಾದರೂ ಚಿಂತೆಮಾಡಬೇಡ. ಸ್ವಲ್ಪ ದಿವಸಗಳಲ್ಲಿಯೇ ನಿನ್ನ ಗಂಡನು ನಿನ್ನನ್ನು ಕರೆದುಕೊಂಡು ಹೋಗಿ, ಸುಖವಾಗಿ ಪ್ರಪಂಚ ಮಾಡುವನು. ಅಲ್ಲಿಯವರೆಗೆ ನೀನೂ ನಿನ್ನ ಮಗನೂ ಇಲ್ಲಿಯೇ ಸ್ವಸ್ಥವಾಗಿ ನಿಂತುಕೊಳ್ಳಿರಿ, ಎಂದು ಹೇಳಲು, ಅವಳು ಅದರಂತೆ ಮಾಡಿದಳು.

ಇತ್ತ ಗುರುವಚನಗಳಿಗೆ ಕಿವಿಗೊಡದೆ, ಸಿಟ್ಟಿನಿಂದ ಬೇರೆ ಕಡೆಗೆ ಬಂದು ನಿಂತುಕೊಂಡ ಅಣ್ಣಾಭಟ್ಟನ ಮೈಯಲ್ಲಿ ಒಮ್ಮೆಲೆ ವ್ರಣಗಳುಂಟಾಗಿ, ಅವು ಗಳೊಳಗಿಂದ ಕೀವು ಸೋರಹತ್ತಿತು. ವ್ಯಥೆಯು ಅಸಹ್ಯವಾಯಿತು. ದಾಹವು ಬೆಳೆಯಿತು. ಇನ್ನು ಮೇಲೆ ಜೀವವು ಉಳಿಯುತ್ತದೋ ಇಲ್ಲೋ ಎಂಬಂತೆ ಅವನ ಸ್ಥಿತಿಯಾಗಲು, ಉಪಾಯಗಾಣದೆ ಅವನು ದೀಕ್ಷಿತರಿಗೆ ಶರಣು ಬಂದು, ಕೃತಾಪರಾಧದ ಬಗ್ಗೆ ಕ್ಷಮೆಯನ್ನು ಬೇಡಿಕೊಂಡು, ಅವರ ಮುಂಭಾಗದಲ್ಲಿ ಉರುಳಾಡಹತ್ತಿದನು. ಆಗ ದೀಕ್ಷಿತರು:—ಇಲ್ಲಿಗೇತಕ್ಕೆ ಬಂದಿ? ನಾವು ಸ್ತ್ರೀ ಪಕ್ಷಪಾತಿಗಳು! ನೀನು ವೈರಾಗ್ಯದ ಮೂರ್ತಿಯು! ಎಂದು ಮಾತಾಡಲು, ಅಣ್ಣಾಭಟ್ಟನು ಹಾಗೆಯೇ ಉರುಳಾಡುತ್ತ:—ಗುರುವರ್ಯನೇ, ನಿನ್ನ ಮಹಿ

ಮೆಯು ಅತರ್ಕ್ಯವಾಗಿದೆ! ನಾನು ನಿನ್ನ ವಚನಗಳನ್ನು ಧಿಃಕರಿಸಿ ಸಂಕಟಕ್ಕೊಳಗಾದೆನು. ಗುರುವೇ, ವೇದನೆಯು ಅಸಹ್ಯವಾಗಿದೆ. ಈ ವ್ಯಥೆಯಿಂದ ನನ್ನನ್ನು ಬಿಡಿಸು. ಇನ್ನು ಮೇಲೆ ನೀನು ಹೇಳಿದ ಮಾತನ್ನು ಮೀರಲಾರೆನು, ಎಂದು ಆಣೆಯನ್ನು ಮಾಡಲು, ದೀಕ್ಷಿತರು ಕನಿಕರಬಟ್ಟು:—ಆದದ್ದಾಯಿತು. ಇನ್ನು ಮೇಲಾದರೂ ಸತಿ-ಸುತರನ್ನು ಕೂಡಿಕೊಂಡು ಸುಖಿಯಾಗಿರು, ಎನಲು, ಅಣ್ಣಾಭಟ್ಟನು ಆ ಮಾತನ್ನು ಒಪ್ಪಿಕೊಂಡನು. ಆಗ ದೀಕ್ಷಿತರು ಅವನಿಗೆ ವಿಭೂತಿ-ತೀರ್ಥಗಳನ್ನು ಮೈಗೆ ಹಚ್ಚಿಕೊಳ್ಳಲಿಕ್ಕೆ ಹೇಳಲು, ಅಣ್ಣಾಭಟ್ಟನು ಅದರಂತೆ ಮಾಡಿದನು. ಆಗ ಆತನ ವ್ರಣಗಳ ಗುರುತು ಸಹ ಇಲ್ಲದಂತಾಯಿತು. ಅವನು ದೀಕ್ಷಿತರನ್ನು ಅತಿಶಯವಾಗಿ ಹೊಗಳಿ:—ನಾನು ಇಲ್ಲಿಯೇ ಇರುವೆನು. ಅಸಾರರೂಪವಾದ ಸಂಸಾರದಲ್ಲಿ ತೊಡಗಿಕೊಳ್ಳಲಿಕ್ಕೆ ನನ್ನ ಮನಸ್ಸು ಹಿಂಜರಿಯುತ್ತಿದೆ, ಎಂದು ಅನ್ನಲು, ದೀಕ್ಷಿತರು ಆತನಿಗೆ ಉಪದೇಶಮಾಡಲಾರಂಭಿಸಿದರು:—

"ಬಾವಿಯೊಳಗಿನ ನೀರನ್ನು ಬಿಟ್ಟು, ಮೃಗಜಲವನ್ನು ಕುಡಿಯಲಿಕ್ಕೆ ಹವಣಿಸುವ ಮೂಢನಂತೆಯೂ, ಪ್ರತ್ಯಕ್ಷ ಪಂಚಪಕ್ವಾನ್ನದ ಭೋಜನವನ್ನು ಬಿಟ್ಟು, ಮನಸಿನೊಳಗಿನ ಮಂಡಿಗೆಯನ್ನು ತಿನ್ನುವ ಮಂದಮತಿಯಂತೆಯೂ, ರಾಜಮಾರ್ಗದಂತಿರುವ ಪ್ರಪಂಚವನ್ನು ಬಿಟ್ಟು, ಕಠಿಣತರವಾದ ವೈರಾಗ್ಯದ ಬೆನ್ನ ಹತ್ತುವದು ಸುಲಭವಲ್ಲ ಸಂಸಾರವು ಅಸಾರವೆಂದು ಅನ್ನಕೂಡದು. ರಾಡಿಯಲ್ಲಿದ್ದ ಕುಂಬಾರಹುಳದಂತೆಯೂ, ನೀರಲ್ಲಿರುವ ಕಮಲಪತ್ರದಂತೆಯೂ ಮನುಷ್ಯನು ಸಂಸಾರದಲ್ಲಿ ಅಲಿಪ್ತನಾಗಿರಬಹುದು. ಎಲ್ಲ ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಶ್ರೇಷ್ಠವಿರುವದರಿಂದ ವಿವೇಕದಿಂದ ಆ ಆಶ್ರಮವನ್ನು ಪಾಲಿಸುವವನು ಧನ್ಯನೇ ಸರಿ! ಆದ್ದರಿಂದ ನೀನು ವಿವೇಕವನ್ನು ತಾಳಿ ಹೆಂಡತಿಯೊಡನೆ ಸಂಸಾರವ ಮಾಡು. ಅದರಿಂದ ನಿನಗೆ ಕಲ್ಯಾಣವಾಗುವದು!" ಎಂದು ಬೋಧಿಸಿದರು. ಅವರ ಈ ಉಪದೇಶದಿಂದ ಅಣ್ಣಾಭಟ್ಟನಲ್ಲಿ ಜ್ಞಾನರವಿಯು ಉದಯವಾಗಿ, ಅವನು ಪಿಟ್ಟೆಂದು ಮಾತಾಡದೆ, ಗುರ್ವಾಜ್ಞೆಯ ಮೇರೆಗೆ ಪತ್ನೀಪುತ್ರರನ್ನು ಕೂಡಿಕೊಂಡು, ಸ್ವಗ್ರಾಮಕ್ಕೆ ಹೋಗಿ, ಸುಖದಿಂದ ಕಾಲಹರಣ ಮಾಡಹತ್ತಿದನು.



## ೧೩ನೆಯ ಪ್ರಕರಣ.

## ಘಂಟಾರವನ ಗರ್ವಹರಣ, ವೇಶ್ಯಾಕುಷ್ಟ ನಿವಾರಣ

ಒಂದು ದಿವಸ ವೇದಪಾರಂಗತನಾದ ಪೂರ್ವದೇಶದ ಒಬ್ಬ ಘಂಟಾರವನೆಂಬ ಘನಪಂಡಿತನು ವಿದ್ಯೆಯಿಂದ ಮತ್ತನಾಗಿ, ದೇಶದ ಮೇಲಿನ ಪಂಡಿತರನ್ನೆಲ್ಲ ವಾದದಲ್ಲಿ ಗೆದ್ದು, ಜಯಪತ್ರಗಳನ್ನು ದೊರಕಿಸಬೇಕೆಂದು ಆಲೋಚಿಸಿ, ದೇಶಸಂಚಾರಕ್ಕಾಗಿ ಹೊರಟನು. ಆತನು ಹೋದ ಹೋದಲ್ಲಿ ಪಂಡಿತರನ್ನು ಗೆದ್ದು, ಜಯಪತ್ರಗಳನ್ನು ಸಂಪಾದಿಸಹತ್ತಿದನು. ಅವನ ಎದುರಿಗೆ ಯಾರೂ ನಿಲ್ಲದಂತಾದರು. ಹುಲಿಯನ್ನು ನೋಡಿ ಎರಳೆಗಳು, ಹಿರಣ್ಯಕಶಿಪುವನ್ನು ನೋಡಿ ದೇವತೆಗಳು, ಪರಶುರಾಮನನ್ನು ನೋಡಿ ಕ್ಷತ್ರಿಯರು ಬೆದರಿ ಓಡಿ ಹೋಗವಂತೆ, ಘಂಟಾರವನ ಆಗಮನವನ್ನು ಕೇಳಿ ಪಂಡಿತರು ಓಡಿಹೋಗಹತ್ತಿದರು. ಇದರಿಂದ ಘಂಟಾರವನ ಸೊಕ್ಕು ಮಿತಿಮೀರಿತ್ತು. ಅವನು ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯನ್ನು ಕೇಳಿ, ಅವರೊಡನೆಯಾದರೂ ವಾದಮಾಡಬೇಕೆಂದೆಣಿಸಿ ಶಿರಹಟ್ಟಿಗೆ ಬಂದನು. ಆಗ ದೀಕ್ಷಿತರು ಸಭಾಸ್ಥಾನದಲ್ಲಿ ಕುಳಿತುಕೊಂಡಿದ್ದರು. ಆ ಸಭೆಯ ಶೋಭೆಯು ಅಪೂರ್ವವಾಗಿತ್ತು. ಸಭಾಮಧ್ಯದಲ್ಲಿ ಭವ್ಯವೂ ಎತ್ತರವೂ ಆದ ವ್ಯಾಸಪೀಠದ ಮೇಲೆ ದೀಕ್ಷಿತರು ಕುಳಿತುಕೊಂಡಿದ್ದು, ಅವರ ಸುತ್ತಲೂ ವಿದ್ವಾನ್ ಬ್ರಹ್ಮವೃಂದವು ಒಪ್ಪುತ್ತಿತ್ತು. ಮುಂಭಾಗದಲ್ಲಿ ಅಲಂಕಾರ ಮಂಡಿತರಾದ ರಾಜಕೀಯ ಪುರುಷರು ತಮ್ಮ ತಮ್ಮ ಯೋಗ್ಯತೆಗೆ ಸರಿಯಾಗಿ ವಿನಯದಿಂದ ಕುಳಿತುಕೊಂಡಿದ್ದರು. ದೀಕ್ಷಿತರ ದರ್ಶನಕ್ಕೆಂದು ಬಂದಂಥ ಎಷ್ಟೋ ಪೌರಜನರು ಸುತ್ತಲೂ ತಟಸ್ಥರಾಗಿ ನಿಂತುಕೊಂಡಿದ್ದರು. ಅವರು ಮುಕ್ತಕಂಠದಿಂದ ನಡನಡುವೆ ಶಿವಚಿದಂಬರ-ಗುರುಚಿದಂಬರ ಎಂಬ ನಾಮಗರ್ಜನೆಯನ್ನು ಮಾಡುತ್ತಿದ್ದರು. ದ್ವಾರದಲ್ಲಿ ಬರ-ಹೋಗುವವರ ಸ್ವಾಗತವನ್ನು ಮಾಡುವದಕ್ಕಾಗಿ ಕೆಲವು ಜನರು ನಿಂತಿದ್ದರು ಘಂಟಾರವನು ಈ ಸಭಾಸ್ಥಾನವನ್ನು ನೋಡಿ ಆಶ್ಚರ್ಯಚಕಿತನಾದನು. ಯಾವ ಕಾರಣದಿಂದಲೋ ಆತನ ಮನಸ್ಸಿನಲ್ಲಿ ಭೀತಿಯುತ್ಪನ್ನವಾಯಿತು. ಇದು ದೀಕ್ಷಿತರ ಸಭೆಯೋ, ಅಥವಾ ಕೈಲಾಸವೋ, ವಿಷ್ಣುಲೋಕವೋ ಎಂಬ ಭ್ರಾಂತಿಯು ಅವನಲ್ಲುಂಟಾಯಿತು ಆದರೂ ಮಹಾಭಿಮಾನಿಯಾದ ಆ ಪಂಡಿ

ತನು ಹಾಗೆಯೇ ಸಭೆಯನ್ನು ಪ್ರವೇಶಿಸಿದನು ಸರ್ವಾಂಗದಲ್ಲಿ ಭಸ್ಮವನ್ನು ಧಾರಣ ಮಾಡಿ ಕರ-ಕಂಧರಗಳಲ್ಲಿ ರುದ್ರಾಕ್ಷಮಾಲೆಗಳನ್ನು ಧರಿಸಿದಂಥ ಶ್ರೀ ಚಿದಂಬರದೀಕ್ಷಿತರು, ಅವನಿಗೆ ಸಾಕ್ಷಾತ್ ಶಿತಿ-ಕಂಠನಂತೆ ತೋರಿದರು. ಘಂಟಾರವನು ದೀಕ್ಷಿತರ ಸಮೀಪಕ್ಕೆ ಬರಲು, ಅವರು ಪಂಡಿತನನ್ನು ಮನ್ನಿಸಿ, ಒಂದು ಉತ್ತಮವಾದ ಆಸನದಲ್ಲಿ ಕೂಡಲಿಕ್ಕೆ ಹೇಳಿ—ತಾವು ಎಲ್ಲಿಯವರು? ತಮ್ಮ ನಾಮಧೇಯವೇನು? ಇಲ್ಲಿಗೆ ಎಲ್ಲಿಂದ ಬರೋಣವಾಯಿತು? ಮುಂದೆ ಎಲ್ಲಿಗೆ ಹೋಗತಕ್ಕವರು? ನಿಮ್ಮ ಕೈಗಳಲ್ಲಿ ಗಂಟೆಗಳೇಕೆ? ಇಲ್ಲಿಗೆ ಬಂದ ಕಾರ್ಯಾಂತರವೇನು? ಇದನ್ನೆಲ್ಲ ವಿಸ್ತಾರವಾಗಿ ಹೇಳಬೇಕೆಂದು ಸೂಚಿಸಿದರು. ದೀಕ್ಷಿತರ ಪ್ರಶ್ನೆಗಳ ಮರ್ಮವನ್ನರಿಯದೆ, ಆ ಮತ್ತನಾದ ಪಂಡಿತನು ತನ್ನ ಪೌರುಷವನ್ನೇ ಹೇಳಿಕೊಳ್ಳಹತ್ತಿದನು:—ನಾವು ಪೂರ್ವದೇಶದವರು. ನನಗೆ ಘಂಟಾರವ ಪಂಡಿತನೆನ್ನುತ್ತಾರೆ. ನಾವು ದಿಗ್ವಿಜಯದ ಉದ್ದಿಶ್ಯವಾಗಿಯೇ ಇಲ್ಲಿಗೆ ಬಂದಿರುವೆವು; ಮತ್ತು ಮುಂದಕ್ಕೆ ಹೋಗತಕ್ಕವರು. ನಮ್ಮ ಕೈಯಲ್ಲಿರುವ ಘಂಟೆಗಳು ನಮ್ಮ ದಿಗ್ವಿಜಯದ ಸೂಚಕವಾದ ಬಿರುದುಗಳಾಗಿರುವವು. ಈ ಗಂಟೆಗಳನ್ನು ಧಾರಣ ಮಾಡಿದ್ದರಿಂದ ನನಗೆ ಘಂಟಾರವ ಎಂಬ ಹೆಸರು ಉಂಟಾಗಿದೆ. ಚತುರ್ವೇದಗಳೂ, ಷಟ್ಶಾಸ್ತ್ರಗಳೂ, ಅಷ್ಟಾದಶ-ಪುರಾಣಗಳೂ ನಮಗೆ ಅವಗತವಿರುತ್ತವೆ. ಉಳಿದ ಎಲ್ಲ ವಿಷಯಗಳನ್ನಾದರೂ ಬಲ್ಲೆವು. ನಾನು ಈ ವರೆಗೆ ಬಹು ದೇಶಗಳನ್ನು ಸಂಚರಿಸಿದೆನು; ಆದರೆ ನನ್ನ ಗೂಡ ವಾದ ಮಾಡುವವರು ಒಬ್ಬರೂ ದೊರೆಯಲಿಲ್ಲ. ನನಗೆ ಭೆಟ್ಟಿಯಾದವರೆಲ್ಲರು ವಾದದಲ್ಲಿ ಸೋತು, ಜಯಪತ್ರಗಳನ್ನು ಕೊಟ್ಟು ಹೋಗುತ್ತಾರೆ! ನಾವು ನಿಮ್ಮ ಕೀರ್ತಿಯನ್ನು ಕೇಳಿ ಇಲ್ಲಿಗೆ ಬಂದಿರುವೆವು. ಕಾರಣ ವಾದವನ್ನು ಆರಂಭಿಸಬೇಕು; ಅಥವಾ ಸುಮ್ಮನೆ ಜಯಪತ್ರವನ್ನು ಕೊಡಬೇಕು. ದೀಕ್ಷಿತರು ಘಂಟಾರವನ ಮಾತುಗಳನ್ನು ಕೇಳಿ—ನಮಗೆ ವಾದಮಾಡಲಿಕ್ಕೆ ಬರುವದಿಲ್ಲ! ತಾವು ಮಹಾನ್ ಪಂಡಿತರು!! ವಿದ್ವದ್ವೈಭವವನ್ನು ಸಂಪಾದಿಸಿದವರು!!! ಹೀಗಿದ್ದರೂ ನನ್ನದೊಂದು ಮಾತನ್ನು ಕೇಳಿಕೊಳ್ಳಬೇಕು. ಯಾವಾಗಲೂ ಬ್ರಾಹ್ಮಣರ ಆಶೀರ್ವಾದವನ್ನು ಪಡೆಯಬೇಕೇ ಹೊರತು, ಅವರ ಕ್ಷೋಭವನ್ನು ಸಂಪಾದಿಸಬಾರದು. ಬ್ರಹ್ಮ-ಕ್ಷೋಭವು ಮಹಾಹಾನಿಕರವಾಗಿದೆ. ಆದುದರಿಂದ ನೀವು ವಾದೇಚ್ಛೆಯನ್ನು ಬಿಟ್ಟು, ಆನಂದದಿಂದ ತಿರುಗಿ ಹೋಗುವದು ನಮಗೆ ಯೋಗ್ಯವಾಗಿ ತೋರುತ್ತದೆ. ಇದು ನಿಮ್ಮ ಹಿತದ ಮಾತಾಗಿದೆ!

ಇದನ್ನು ಅಲ್ಲಗಳೆದರೆ ಇಲ್ಲಿ ಕೂಡಿದಂಥ ಜನರಲ್ಲಿ ಒಬ್ಬ ಬಾಲಕನು ಸಹ ನಿಮ್ಮನ್ನು ಸೋಲಿಸಲು ಸಮರ್ಥನಾಗುವನು. ನೆಟ್ಟಗೆ ವಿಚಾರ ಮಾಡಿ ಮುಂದಣ ಕಾರ್ಯಕ್ಕೆ ಕೈ ಹಾಕಿರಿ, ಎಂದು ನುಡಿದರು. ಇದಕ್ಕೆ ಘಂಟಾರವನು ಹಾಸ್ಯ ಮಾಡಿ, ಮತ್ತೆ ತನ್ನ ಪೌರುಷವನ್ನು ಕೊಚ್ಚ ಹತ್ತಿದನು. ನನ್ನ ವಾದದ ಜಾಣ ತನವನ್ನು ಅರಿಯದೆ, ನೀನು ವ್ಯರ್ಥವಾಗಿ ಮಾತಾಡುವಿಯಲ್ಲ. ನನ್ನೊಡನೆ ಶಾಸ್ತ್ರಾರ್ಥ ವಿಚಾರ ಮಾಡಲಿಕ್ಕೆ ಬ್ರಹ್ಮನಾದರೂ ಅಸಮರ್ಥನಾಗಿರುವನು! ಅಂದಬಳಿಕ ನಿಮ್ಮಂಥವರ ಪಾಡೇನು? ಷಣ್ಮುಖನನ್ನು ಸೋಲಿಸುವೆನು; ವ್ಯಾಸ ರನ್ನು ನಡುಗಿಸುವೆನು; ದೀಕ್ಷಿತನೇ, ನಡುವಗಲೊಡೆಯನ ಮುಂದೆ ಉಡುಗಳ ಪ್ರಕಾಶದ ಪಾಡೇನು? ಸಮಗ್ರ ಸಮುದ್ರವನ್ನು ಪ್ರಾಶನ ಮಾಡುವವನಿಗೆ ಹಳ್ಳದ ಅಂಜಿಕೆಯೇನು? ಸಿಂಹವು ಗಜರಾಜನಿಗೆ, ಗರುಡವು ಉರಗನಿಕರಕ್ಕೆ ಅಂಜುವವೇ? ಅಥವಾ ಅವುಗಳೊಡನೆ ಕಾದಾಡಲಿಕ್ಕೆ ಹಿಂಜರಿಯಬಹುದೇ? ಆನೆಯನ್ನು ಸೋಲಿಸಲಿಕ್ಕೆ ಆಡುಗಳ ಸಮೂಹವನ್ನು ಕಳಿಸಬಹುದೋ? ಇಲ್ಲಿಯ ಪಂಡಿತರು ತಮ್ಮ ತಮ್ಮ ಮಾನವನ್ನು ಕಾಯ್ದುಕೊಂಡು ಸುಮ್ಮನೆ ಕುಳಿತ ಲ್ಲಿಯೇ ಕುಳಿತುಕೊಳ್ಳಲಿ! ನಿನ್ನ ಬೆಳಕು ಹೊರಬೀಳಲಿ! ಇಲ್ಲದಿದ್ದರೆ ಜಯಪತ್ರ ವನ್ನು ಕೊಡು.

ಈ ಪ್ರಕಾರ ವಿದ್ಯಾಮದದಿಂದ ಮತ್ತನಾದ ಘಂಟಾರವನು ಆಡಿದ ಮಾತು ಗಳನ್ನು ಕೇಳಿ ದೀಕ್ಷಿತರು—ಪಂಡಿತವರ್ಯನೇ, ಹೀಗೆ ವಿದ್ಯಾಮದದಿಂದ ಉಬ್ಬಿ ಹೋಗುವದು! ಸರಿಯಲ್ಲ ಅಭಿಮಾನದ ಮೋರೆಯು ಯಾವಾಗಲೂ ಕೆಳಗೆ ಆಗುವ ದೆಂದು ಶಾಸ್ತ್ರವು ಸಾರುತ್ತಿರುವದು. ನಿನ್ನ ಮನಸ್ಸಿನಲ್ಲಿ ವಾದವನ್ನು ಮಾಡುವ ದ್ದಿದ್ದರೆ, ಈ ಹುಡುಗನನ್ನು ಮೊದಲು ಸೋಲಿಸಿ, ಆ ಮೇಲೆ ನನ್ನಿಂದ ಜಯಪತ್ರ ವನ್ನು ದೊರಕಿಸು. ಎಂದು ನುಡಿದು, ಅಲ್ಲೇ ಸಮೀಪದಲ್ಲಿ ಕುಳಿತ ಒಬ್ಬ ಐದು ವರ್ಷದ ಮೂಕ ಬಾಲಕನನ್ನು ಮುಂದಕ್ಕೆ ಕರೆದು, ಆತನ ಮುಖದಲ್ಲಿ ತೀರ್ಥ-ವಿಭೂತಿಗಳನ್ನು ಹಾಕಿ ಅವನನ್ನು ವಾದಕ್ಕೆ ಅಣಿಮಾಡಿದರು. ವಿಭೂ ತಿಯು ಮುಖದಲ್ಲಿ ಬೀಳಲು, ಬಾಲಕನು ಸರ್ವಶಾಸ್ತ್ರವಿದನಾಗಿ ಮುಂದುವರಿದು 'ಪಂಡಿತರೇ, ಪೂರ್ವಪಕ್ಷವನ್ನು ಅಂಜಿಕೆಯಿಲ್ಲದೆ ಆರಂಭಿಸಿರಿ' ಎಂದು ಸ್ಪಷ್ಟ ವಾಗಿ ನುಡಿದನು. ಆಗ ಪಂಡಿತನ ಮೈಯಲ್ಲಿ ನಡುಗು ಹುಟ್ಟಿತು; ಆದರೂ ಅವನು ವಾದವನ್ನು ಆರಂಭಿಸಬೇಕೆನ್ನುವಷ್ಟರಲ್ಲಿ ಕಲಿತ ಶಾಸ್ತ್ರವೆಲ್ಲ ಮರೆತು ಹೋಯಿತು. ನೆನಪಿಗೆ ಯಾವ ವಿಷಯವೂ ಬಾರದ್ಹಂತಾಯಿತು. ಯಾವ

ನೊಬ್ಬ ಮಾಂತ್ರಿಕನು ಮಂತ್ರಾಕ್ಷತೆಯನ್ನು ಚಲ್ಲಿದ ಕೂಡಲೆ ಹಾವು ಸುಮ್ಮ ನಿರುವಂತೆ, ಬಾಲಕನ ಪ್ರಶ್ನದಿಂದ ಪಂಡಿತನು ಮೂಕನಾದನು. ಅವನ ಮೈ-ಮೇಲೆ ಮುಹೂರ್ತ-ಮಾತ್ರವೂ ಎಚ್ಚರವಿಲ್ಲದಂತಾಯಿತು. ಬಳಿಕ ಅವನು ವರ್ತಿಸಿದ ಈ ಅದ್ಭುತ ಚಮತ್ಕಾರದಿಂದ ಭ್ರಾಂತನಾದನು. ಇತ್ತ ಬಾಲಕನು ಶಾಸ್ತ್ರಗಳೊಳಗಿನ ಪೂರ್ವಪಕ್ಷವನ್ನು ಪಠಿಸಹತ್ತಿದನು. ಆಗ ಘಂಟಾರವನು ಪೂರ್ಣ ಪಶ್ಚಾತ್ತಾಪಪಟ್ಟನು. ಆತನ ವಿದ್ಯಾಮದ-ಮಾತಂಗವು, ದೀಕ್ಷಿತರ ಅಗಾಧ ಶಕ್ತಿಯೆಂಬಸಿಂಹದ ಚರಣಗಳ ಮೇಲೆ ಉರುಳಾಡಿತು. ಕೃತಾಪರಾಧದ ಬಗ್ಗೆ ಕ್ಷಮೆಯನ್ನು ಯಾಚಿಸಹತ್ತಿದನು. ಸತ್ಸಂಗತಿಯ ಮಹಿಮೆಯು ಆತನ ನಿದರ್ಶನಕ್ಕೆ ಬಂದಿತು. ಅವನು ಕೈಜೋಡಿಸಿ ಸ್ತುತಿಸಹತ್ತಿದನು. ಆಗ ಭಕ್ತಾಭಿಮಾನಿಗಳೂ, ದೀನರಲ್ಲಿ ದಯೆಯುಳ್ಳವರೂ ಆದ ದೀಕ್ಷಿತರು, ಪಂಡಿತ ನಿಗೆ ಅಭಯವನ್ನಿತ್ತರು. ಆಗ ಅವನು ಎದ್ದು, ದೀಕ್ಷಿತರನ್ನು ಮತ್ತೆ ಮತ್ತೆ ಹೊಗಳಹತ್ತಿದನು; ಹಾಗೂ ಸಾಯುವವರೆಗೆ ಅಲ್ಲಿಯೇ ಇದ್ದುಕೊಂಡು ನಾಲ್ವತ್ತು ವಿಷಯುಗಳ ಅವಧಾನಿಯೆಂದು ಹೆಸರನ್ನು ಹೊಂದಿ, ತನ್ನ ಜನ್ಮದ ಸಾರ್ಥಕ್ಯವನ್ನು ಮಾಡಿಕೊಂಡನು.

ಮುಂದೆ ಒಂದು ದಿವಸ ಮುಳಗುಂದ ಗ್ರಾಮದಿಂದ ಒಬ್ಬ ಪ್ರಾಯಸ್ಥ ಳಾದ ಪಾತರದವಳು ದೀಕ್ಷಿತರ ದರ್ಶನಕ್ಕಾಗಿ ಶಿರಹಟ್ಟಿಗೆ ಬಂದಳು. ಅವಳು ಚಲುವಿಕೆಯಲ್ಲಿ ಅಪ್ಸರ ಸ್ತ್ರೀಯರನ್ನು ಮೀರಿದ್ದಳು. ಗಾನವಿದ್ಯೆಯನ್ನು ಬಲ್ಲವ ಳಾಗಿದ್ದಳು. ಆದರೆ ಅವಳಿಗೆ ಜನ್ಮಾಂತರದ ಮಹತ್ಪಾಪದಿಂದ ಒಮ್ಮೆಲೆ ಕುಷ್ಟ ರೋಗವು ಮೈಯನ್ನೆಲ್ಲ ವ್ಯಾಪಿಸಿತು. ಮನಸ್ಸಿಗೆ ಸೊಗಸಾಗಲೊಲ್ಲದು. ಬೇನೆಗೆ ಬಗೆ ಬಗೆಯ ಔಷಧೋಪಚಾರಗಳನ್ನು ಮಾಡಿದರೂ ಅದು ವಾಸಿಯಾಗುವ ಚಿಹ್ನವು ತೋರಲೊಲ್ಲದು. ದಿನವೊಂದಕ್ಕೆ ಬೇನೆಯು ಅಸಹ್ಯವಾಯಿತು. ಆಗ ಅವಳು ಚಿದಂಬರ ದೀಕ್ಷಿತರ ಕೀರ್ತಿಯನ್ನು ಕೇಳಿ, 'ರೋಗವು ವಾಸಿಯಾಗಲಿ, ಅಥವಾ ಮರಣವೊದಗಲಿ; ಇಂದಿನಿಂದ ನಾನು ನನ್ನ ಜೀವನ ಸರ್ವಸ್ವವನ್ನು ದೀಕ್ಷಿತರ ಚರಣತಲದಲ್ಲಿ ಅರ್ಪಿಸುವೆನು! ಅವರು ತಮ್ಮ ಮನಬಂದಂತೆ ನನ್ನ ವ್ಯವಸ್ಥೆಯನ್ನು ಮಾಡಲಿ!' ಎಂದು ಮನದೊಳಗೆ ನಿಶ್ಚಯಿಸಿ, ದೀಕ್ಷಿತರಿದ್ದೆಡೆಗೆ ಬಂದಿದ್ದಳು. ಅವಳು ಶಿರಹಟ್ಟಿಗೆ ಬಂದ ಬಳಿಕ ಮೈ ತೊಳೆದುಕೊಂಡು, ಶ್ರೀ ಚಿದಂಬರ ದೀಕ್ಷಿತರ ಮನೆಯ ಹೆಬ್ಬಾಗಿಲಿಗೆ ಬಂದು ಮೂರು ಸಾರೆ ನಮಿಸಿ ನಿಂತುಕೊಂಡಳು. ಒಂದು ಪ್ರಹರದ ವರೆಗೆ ಅವಳು ಹಾಗೆಯೇ ನಿಂತುಕೊಂಡಿ

ದ್ದರೂ, ಅವಳನ್ನು ಯಾರೂ ವಿಚಾರಿಸಲಿಲ್ಲ. ಆದರೂ ಅವಳು ನಿರುತ್ಸಾಹ ಪಡದೆ, ಮನೆಗೆ ಹೊರಟು ಹೋದಳು. ಅವಳು ಮೇಲೆ ಹೇಳಿದಂತೆಯೇ ಮೂರು ದಿವಸಗಳವರೆಗೆ ಮಾಡಲು, ಅವಳ ವಿಷಯವಾಗಿ ದೀಕ್ಷಿತರ ಮನಸ್ಸಿನಲ್ಲಿ ದಯೆಯುಂಟಾಗಿ, ಅವರು ಮೂರನೆಯ ದಿವಸ ಹೆಬ್ಬಾಗಿಲಿಗೆ ಬಂದರು. ವೇಶ್ಯೆಯು ಅವರನ್ನು ನೋಡಿ, ಆನಂದಿತಳಾಗಿ ಅಭಿವಂದಿಸಿ, ಕೈಜೋಡಿಸಿ ನಿಂತುಕೊಂಡಳು. ಜನರು ಅವಳಿಗೆ ದೂರ ಸರಿಯಬೇಕೆಂದು ಸಂಜ್ಞೆಯನ್ನು ಮಾಡಹತ್ತಿದರು ಅವಳು ಹಿಂದಕ್ಕೆ ಸರಿಯಹತ್ತಿದಳು. ಅವಳ ಭಾಗ್ಯೋದಯದ ಕಾಲವು ಸಮೀಪಿಸಿತು. ಮಹಾಸ್ವಾಮಿಯವರು ಆ ವೇಶ್ಯೆಯನ್ನು ಮುಂದಕ್ಕೆ ಕರೆಯಹತ್ತಿದರು. ಆಗ ಜನರಿಗೆ ಆಶ್ಚರ್ಯವಾಯಿತು.

ವೇಶ್ಯೆಯು ಮುಂದಕ್ಕೆ ಬರಲು, ದೀಕ್ಷಿತರು ನಗುತ್ತ ಅವಳನ್ನು ಕುರಿತು—ನಿನ್ನ ಪೂರ್ವಜನ್ಮದ ಮಹತ್ತ್ರವು ಪಾಪದ ಯೋಗದಿಂದ ಈ ಕೆಟ್ಟ ರೋಗವು ಉಂಟಾಗಿರುವದು. ನೀನು ರೋಗನಿವಾರಣದ ಹೊರೆಯನ್ನು ನನ್ನ ಮೇಲೆ ಹಾಕಿ ಇಲ್ಲಿಗೆ ಬಂದಿರುವಿಯಷ್ಟೇ? ಆದುದದರಿಂದ ನಾನು ಹೇಳುವ ಮಾತನ್ನು ಕೇಳಿಕೊ. ನೀನು ಬಹು ಭಕ್ತಿಯಿಂಥ ಬ್ರಾಹ್ಮಣರ ಎಂಜಲದೊಳಗೆ ಮೂರುದಿವಸ ಹೊರಳಾಡಿದರೆ, ನಿನ್ನ ರೋಗವು ಹೇಳ-ಹೆಸರಿಲ್ಲದಂತಾಗಿ ಶರೀರಕಾಂತಿಯು ಬಂಗಾರಬಣ್ಣದಂತಾಗುವದು. ನಮ್ಮ ಮಾತಿನ ಮೇಲೆ ನಂಬಿಗೆಯಿದ್ದರೆ, ಈ ಉಪಾಯವನ್ನು ಆಚರಿಸು, ಎಂದು ಹೇಳಿ, ತಮ್ಮ ಸ್ಥಾನವನ್ನೈದಿದರು. ಇತ್ತ ಗುರುವಚನದಲ್ಲಿ ಮನಸಾ ವಿಶ್ವಾಸವುಳ್ಳ ವೇಶ್ಯೆಯು ಕೂಡಲೆ ಊರಹೊರಬದಿಯಲ್ಲಿ ಬಿದ್ದ ಪರ್ವತಪ್ರಾಯವಾದ ಬ್ರಾಹ್ಮಣರ ಎಂಜಲ ಎಲೆಗಳ ಮೇಲೆ ಹೋಗಿ, ಮನದಣೀ ಹೊರಳಾಡಿ ಮನೆಗೆ ಬಂದಳು. ಆ ಹೊತ್ತು ಅವಳ ಬೇನೆಯು ಅರ್ಧಕ್ಕರ್ಧ ಕಡಿಮೆಯಾಯಿತು. ಮರುದಿವಸ ತೀರ ಕಡಿಮೆಯಾಗಿ, ಮೂರನೆಯ ದಿವಸ ಅದರ ಹೆಸರು ಸಹ ಉಳಿಯಲಿಲ್ಲ. ಮೈಬಣ್ಣವು ಮೊದಲಿಗಿಂತ ಮನೋಹರವಾಯಿತು. ಆಗ ಆ ವೇಶ್ಯೆಯು ಆನಂದಭರಿತಳಾಗಿ, ತನ್ನ ಪರಿವಾರವನ್ನು ಕೂಡಿಕೊಂಡು, ದೀಕ್ಷಿತರ ಬಳಿಗೆ ಬಂದು, ನಮಸ್ಕಾರ ಮಾಡಿ, ಗಾಯನವನ್ನೂ ನರ್ತನವನ್ನೂ ಆರಂಭಿಸಿದಳು. ಅವಳು ಗಾಯನ-ನರ್ತನವಿದ್ಯೆಗಳಲ್ಲಿ ಚನ್ನಾಗಿ ನುರಿತವಳಾದ್ದರಿಂದ ಸ್ವಲ್ಪಾವಕಾಶದಲ್ಲಿಯೇ ಜನರನ್ನು ದಂಗುಬಡಿಸಿದಳು. ಜನರು ಕಲೆದೂಗಹತ್ತಿದರು. ದೀಕ್ಷಿತರೂ ಸಂತುಷ್ಟರಾದರು. ವೇಶ್ಯೆಯು ಮೂರು ತಾಸುಗಳ

ವರೆಗೆ ಮೇಲೆ ಹೇಳಿದಂತೆ ಸೇವೆಯನ್ನು ಮಾಡಿದ ಬಳಿಕ, ಕೈಜೋಡಿಸಿಕೊಂಡು:- ಮಹಾರಾಜ, ತಾವು ಮನುಷ್ಯರಂತೆ ಕಂಡರೂ ಮನುಷ್ಯರಲ್ಲ, ಸಾಕ್ಷಾತ್ ಶಂಕರನೇ ಆಗಿರುವಿರಿ! ಭವರೋಗವನ್ನು ಹರಣಮಾಡುವ ಭವಾನೀಪತಿಯೇ ಇರುತ್ತೀರಿ! ಹಾಗಿರದಿದ್ದರೆ ಪಾಪಿಷ್ಠಳಾದ ನನ್ನ ರೋಗವು, ತಾವು ಕೃಪಾದೃಷ್ಟಿಯಿಂದ ನೋಡಿದ ಮಾತ್ರಕ್ಕೇ ನೆಟ್ಟಗಾಗಬಹುದೋ? ಅಸಾಧ್ಯವಾದ ನನ್ನ ಬೇನೆಯನ್ನು ಹೋಗಲಾಡಿಸಿ, ಈ ದೀನಳನ್ನು ಉದ್ಧರಿಸಿದಿರಿ!! ಸಭಿಕರೇ, ನೀವು ನಿಜವಾದ ಪುಣ್ಯವಂತರು! ಯಾಕಂದರೆ, ಇಂತಹ ಕೃಪಾನಿಧಿಯ ಸಾನ್ನಿಧ್ಯವು ಪಾಪಾತ್ಮರಿಗೆ ಹೇಗೆ ದೊರೆಯಬೇಕು? ಇಂದಿನಿಂದ ನಾನು ನನ್ನ ಜೀವನಸರ್ವಸ್ವವನ್ನು ಗುರುಚರಣದಲ್ಲಿ ಮನೋವಾಕ್ಕಾಯಗಳಿಂದ ಅರ್ಪಣ ಮಾಡಿರುವೆನು! ಎಂದು ನುಡಿದು, ಸಂಗೀತದಿಂದ ಸದ್ಗುರುಗಳ ಸ್ತೋತ್ರವನ್ನು ಮಾಡಹತ್ತಿದಳು. ಅವಳ ಕಣ್ಣೊಳಗಿಂದ ಆನಂದಬಾಷ್ಪಗಳು ಉದುರಹತ್ತಿದವು. ಕಂಠವು ಸದ್ಗದಿತವಾಯಿತು. ಭಕ್ತಿಪರವಶಳಾದ ವೇಶ್ಯೆಯ ಭಕ್ತಿಯಿಂದ ತುಷ್ಟರಾದ ದೀಕ್ಷಿತರು, ವೇಶ್ಯೆಯನ್ನುದ್ದೇಶಿಸಿ:—'ನಿನ್ನ ಗಾಯನವನ್ನು ನಿಲ್ಲಿಸು. ನಿನ್ನ ಭಕ್ತಿಗೆ ಮೆಚ್ಚಿ, ನಾನು ಪ್ರಸನ್ನನಾಗಿದ್ದೇನೆ. ಏನು ಬೇಡುತ್ತೀ ಬೇಡಿಕೋ,' ಎಂದು ಹೇಳಿದರು. ಆಗ ವೇಶ್ಯೆಯು:—ಜಗದೊಡೆಯನೇ, ನೀನೇ ಪ್ರಸನ್ನನಾಗಿರುತ್ತಿರಲು, ಮತ್ತೇನು ಬೇಡಲಿ? ಕೊಡತಕ್ಕದ್ದಿದ್ದರೆ, ನಿನ್ನಲ್ಲಿ ನನ್ನ ಭಕ್ತಿಯು ಅಚಲವಾಗಿರಬೇಕು! ನನಗೆ ಮಾಯಾಪಾಶದ ಗಾಳಿಯೂ ಕೂಡ ಸೋಂಕಬಾರದು!! ಇದೇ ನನ್ನ ಬಯಕೆಯು!!! ಎಂದು ಪ್ರಾರ್ಥಿಸಿದಳು. ಆಗ ಮಹಾಸ್ವಾಮಿಗಳು:—ಎಲೈ ವೇಶ್ಯೆಯೇ, ನಿನ್ನ ರೋಗವು ಬ್ರಾಹ್ಮಣರ ಉಚ್ಛಿಷ್ಟದಿಂದ ಹೋಗಿರುವದು. ಆದುದರಿಂದ ನೀನು ದಿನಾಲು ಬ್ರಾಹ್ಮಣಾರಾಧನೆಯನ್ನು ಮಾಡಬೇಕು; ಅಂದರೆ ನಿನ್ನ ಬಯಕೆಯು ಪೂರ್ಣವಾಗುವದು. ಅದರಿಂದ ನಾನೂ ಸಂತುಷ್ಟನಾಗುವೆನು! ಎಂದು ಹೇಳಿದರು. ಆ ವೇಶ್ಯೆಯು ಗುರುವರ್ಯರ ವಚನದಂತೆ ವೈರಾಗ್ಯವೃತ್ತಿಯಿಂದ ಬ್ರಾಹ್ಮಣಾರಾಧನೆಯನ್ನು ಮಾಡುತ್ತ, ಪಿಂಗಲೆಯಂತೆ ಪ್ರಖ್ಯಾತಳಾಗಿ, ಇಹ-ಪರಗಳಲ್ಲಿ ಸುಖವನ್ನು ಹೊಂದಿದಳು.



# ೧೪ನೆಯ ಪ್ರಕರಣ.

## ಕಾಮತರಿಗೆ ಪುತ್ರಪ್ರಾಪ್ತಿಯೂ, ಕುಂದಗೋಳದಲ್ಲಿಯ ಮಹಿಮೆಗಳೂ.

ಗೋಕಾಕ ಗ್ರಾಮದಲ್ಲಿ ನಾರಾಯಣ ಧೊಂಡದೇವ ಕಾಮತ ಎಂಬ ಒಬ್ಬ ಗೃಹಸ್ಥರು ಮನೆಮಾಡಿಕೊಂಡಿದ್ದರು. ಇವರು ಸಾರಸ್ವತ ಬ್ರಾಹ್ಮಣರು. ಬಹು ದಿವಸಗಳವರೆಗೆ ಮಕ್ಕಳಾಗದ್ದರಿಂದ, ಒಂದರಹಿಂದೊಂದು ಹೀಗೆ ಮೂರು ಮದುವೆಗಳನ್ನು ಮಾಡಿಕೊಂಡರು. ಆದರೂ ಅವರಿಗೆ ೩೫ನೆಯ ವರ್ಷದವರೆಗೆ ಸಂತತಿಯಾಗಲಿಲ್ಲ. ಆದುದರಿಂದಲೇ ಅವರಲ್ಲಿ ಚಿಂತೆಯುಂಟಾಯಿತು. ಅವರು ಸಂತತಿಯ ಚಿಂತೆಯಿಂದ ನೊಂದು, ದೀಕ್ಷಿತರ ದರ್ಶನವನ್ನಾದರೂ ತಕ್ಕೊಳ್ಳಬೇಕೆಂದು ಯೋಚಿಸಿ, ದೀಕ್ಷಿತರು ಗಲಗಲಿಯಲ್ಲಿರುವಾಗ ಅವರ ಭೆಟ್ಟಿಗೆ ಅಲ್ಲಿಗೆ ಹೋದರು. ಅಲ್ಲಿ ಕಾಮತರಿಗೆ ದರ್ಶನವಾಗಲಿಲ್ಲ. ಆಗ ಅವರು ದರ್ಶನವಾಗುವವರೆಗೆ ಬಿಡಲಿಕ್ಕಿಲ್ಲೆಂದು ಮನಸಾ ನಿಶ್ಚಯಿಸಿ, ಶಿರಹಟ್ಟಿಗೆ ಬಂದರು. ಅಲ್ಲಿಯೂ ಕೆಲವು ದಿವಸಗಳವರೆಗೆ ದರ್ಶನವಾಗಲಿಲ್ಲ. ನಾನು ಇಷ್ಟು ದಿವಸಗಳವರೆಗೆ ತಿರುಗಾಡಿದರೂ ದರ್ಶನವಾಗಲೊಲ್ಲದು. ಇದಕ್ಕೆ ನಮ್ಮ ದುರ್ದೈವವೇ ಕಾರಣವು! ಇಂದು ದರ್ಶನವಾಗದಿದ್ದರೆ, ಪ್ರಾಣತ್ಯಾಗವನ್ನು ಮಾಡಿ, ಈ ಸಂಸಾರವನ್ನು ನೀಗುವೆನು, ಎಂದು ಮನಸ್ಸಿನಲ್ಲಿ ನಿಶ್ಚಯಮಾಡಿ, ನಾರಾಯಣ ಕಾಮತರು ಒಂದು ದಿವಸ ಊರ ಹೊರಗೆ ಬಂದು, ಒಂದು ಆಲದಮರದ ಬುಡದಲ್ಲಿ ಕುಳಿತುಕೊಂಡರು. ಸರ್ವಸಾಕ್ಷಿಗಳಾದ ದೀಕ್ಷಿತರು ಜ್ಞಾನದೃಷ್ಟಿಯಿಂದ ನಾರಾಯಣ ಕಾಮತರ ನಿಶ್ಚಯವು ತಿಳಿಯಲು, ಅವರನ್ನು ಕರೆಯುವದಕ್ಕಾಗಿ ಬ್ರಾಹ್ಮಣನನ್ನು ಕಳಿಸಿದರು. ಕ್ಷುಧಿತನಿಗೆ ಮಿಷ್ಟಾನ್ನವು ದೊರೆತರೆ, ಇಲ್ಲವೆ ದರಿದ್ರನಿಗೆ ಧನಸಂಚಯವು ಸಿಕ್ಕರೆ, ಅಥವಾ ತೃಷಿತನಿಗೆ ಶೀತಲಜಲವು ಪ್ರಾಪ್ತವಾದರೆ ಸಂತೋಷವಾಗುವಂತೆ ನಾರಾಯಣ ಕಾಮತರಿಗೆ ಕರೆಯಬಂದ ಬ್ರಾಹ್ಮಣನ ದರ್ಶನವು ಸುಖಕರವಾಯಿತು ಕಾಮತರು ದೀಕ್ಷಿತರ ಬಳಿಗೆ ಬಂದರು. ಆ ದಿವಸ ಶಾಲಿವಾಹನ ಶಕೆ ೧೬೭೭ ವೈಶಾಖ ಶುದ್ಧ ತೃತೀಯೆಯಾಗಿತ್ತು. ಕಾಮತರು ಶ್ರೀಗಳಿಗೆ ನಮಸ್ಕಾರಮಾಡಿ, ಸುಮ್ಮನೆ ನಿಂತುಕೊಂಡರು. ಆಗ ದೀಕ್ಷಿತರು:—ಭಕ್ತಾ,

ನಿನ್ನ ನಿರ್ಧಾರವು ಬಲು ದೊಡ್ಡದು. ಇಂದಿನ ವರೆಗೆ ನೀನು ನಮ್ಮ ಸಂಗಡ ಬಹಳ ತಿರುಗಾಡಿದಿ. ನಿನ್ನ ಭಾಗ್ಯೋದಯಕಾಲವು ಇಂದಿಗೆ ಸಮೀಪಿಸಿತು. ಆದ್ದರಿಂದ ಕುಳಿತುಕೊಳ್ಳು, ಎಂದು ನುಡಿದು, ತಮ್ಮ ಎದುರಿನಲ್ಲಿ ಕುಳ್ಳಿರಿಸಿ ಕೊಂಡು, ಅವರ ಕೈಯಲ್ಲಿ ಒಂದು ಉತ್ತತ್ತಿಯನ್ನು ಕೊಟ್ಟು, ಇದನ್ನು ತಿನ್ನಿ ರೆಂದು ಹೇಳಲು, ಕಾಮತರು ಉತ್ತತ್ತಿಯನ್ನು ಒಡೆದರು. ಆಗ ಅದರೊಳ ಗಿಂದ ಒಂದು ಶಂಖವು ಹೊರಟಿತು. ಶಂಖವನ್ನು ಹತ್ತರಿಟ್ಟುಕೊಂಡು ಉತ್ತತ್ತಿಯನ್ನು ತಿಂದುಬಿಟ್ಟರು. ಆ ಮೇಲೆ ದೀಕ್ಷಿತರು ಮತ್ತೆ ಕಾಮತರಿಗೆ ಕ್ರಮವಾಗಿ ಒಂದು ಬಾಳೇಹಣ್ಣು, ಒಂದು ಉತ್ತತ್ತಿ ಮತ್ತೂ ಒಂದು ಬಾಳೇ ಹಣ್ಣು, ಒಂದು ಉತ್ತತ್ತಿ ಕೊಟ್ಟು, ಉತ್ತತ್ತಿಗಳನ್ನು ತಿನ್ನಲು ಆಜ್ಞಾಪಿಸಿದರು. ಉತ್ತತ್ತಿಯನ್ನು ಕಾಮತರು ಒಡೆಯಲು, ಎರಡನೆಯ ಉತ್ತತ್ತಿಯೊಳಗಿಂದ ಒಂದು ಚಕ್ರವೂ, ಮೂರನೆಯದರೊಳಗಿಂದ ಒಂದು ಹುಳವೂ ಹೊರಬಿದ್ದವು. ಹುಳವನ್ನು ಹೊರಗೆ ಒಗೆದು ಚಕ್ರವನ್ನು ಬಳಿಯಲ್ಲಿ ಇಟ್ಟುಕೊಂಡು, ಉತ್ತತ್ತಿ ಗಳನ್ನು ತಿಂದುಬಿಟ್ಟರು; ಬಳಿಕ ದೀಕ್ಷಿತರು ಅವರಿಗೆ ಫಲ-ಮಂತ್ರಾಕ್ಷತೆ ಗಳನ್ನು ಕೊಟ್ಟು:—ಇನ್ನು ಮೇಲೆ ನೀನು ಸುಖದಿಂದ ಮನೆಗೆ ಹೋಗು; ಮತ್ತು ನಾವು ಕೊಟ್ಟ ನಾರೀಕೇಲದ ಪ್ರಸಾದವನ್ನು ಪತ್ನಿಯಿಂದ ಕೂಡಿ ಕೊಂಡು ಭಕ್ಷಿಸು. ಅಂದರೆ ನಿನ್ನ ಮನೋರಥವು ಪೂರ್ಣವಾಗುವದು. ನಿನ್ನ ಹೊಟ್ಟೆಯಲ್ಲಿ ಒಬ್ಬ ಕುಲದೀಪಕನಾದ ಮಗನು ಜನಿಸುವನು! ನೀನು ಮನೆ ಯನ್ನು ಸೇರಿ (೧೦) ವರ್ಷಗಳಾದ ಬಳಿಕ ನಿನ್ನ ಅಣ್ಣ-ತಮ್ಮಂದಿರು ನಿನ್ನೊಡನೆ ಜಗಳಾಡಿ, ನಿನ್ನನ್ನು ಮನೆಯಿಂದ ಹೊರದೂಡುವರು. ನೀನು ಅವರೊಡನೆ ವ್ಯಾಜ್ಯವನ್ನು ಮಾಡದೆ, ಮುರಗೋಡಿಗೆ ಹೋಗಿ, ಅಲ್ಲಿ ಸುಖದಿಂದ ಕಾಲ ಹರಣ ಮಾಡಬೇಕು. ನಿನಗೆ ಕೊಟ್ಟ ತೆಂಗಿನಕಾಯಿಯಲ್ಲಿ ಒಂದು ಶಾಲಿ ಗ್ರಾಮವು ಹೊರಡುವದು. ಅದನ್ನೂ, ಶಂಖ-ಚಕ್ರಗಳನ್ನೂ ದಿನಾಲು ಪೂಜಿ ಸುತ್ತ ಹೋಗು. ಅಂದರೆ ನಿನ್ನ ಕಲ್ಯಾಣವಾಗುವದು. ಮೊದಲು ಕೊಟ್ಟ ಮೂರು ಉತ್ತತ್ತಿಗಳ ಯೋಗದಿಂದ ಮೂರು ಗಂಡುಮಕ್ಕಳೂ, ಬಾಳೇಹಣ್ಣು ಗಳನ್ನು ಭಕ್ಷಿಸುವದರಿಂದ ಇಬ್ಬರು ಹೆಣ್ಣುಮಕ್ಕಳೂ ಹುಟ್ಟುವರು. ಇವರಲ್ಲಿ ಹುಳವು ಹೊರಟ ಉತ್ತತ್ತಿಯ ಯೋಗದಿಂದ ಹುಟ್ಟಿದವನು ಅಲ್ಪಾಯುಷಿಯಾಗು ವನು. ನಾರೀಕೇಲಫಲದ ಯೋಗದಿಂದ ಹುಟ್ಟುವ ಹುಡುಗನಂತೂ ಕುಲೋ ದ್ಧಾರಕನಾಗುವನು, ಎಂದು ಹೇಳಿ, ಆಶೀರ್ವದಿಸಿ, ನಾರಾಯಣ ಕಾಮತರಿಗೆ

ಸ್ವಗ್ರಾಮಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನಿತ್ತರು. ಆಗ ಕಾಮತರು ಮುದಿತ ರಾಗಿ, ಶ್ರೀ ಗುರುಗಳ ಪಾದಾರವಿಂದಗಳಿಗೆರಗಿ, ಅಲ್ಲಿಂದ ಹೊರಟು ಗೋಕಾಕಕ್ಕೆ ಬಂದರು. ೧೦ ವರ್ಷಗಳ ತರುವಾಯ ಶ್ರೀ ಚಿದಂಬರ ದೀಕ್ಷಿತರು ಹೇಳಿದಂತೆ, ಕಾಮತರ ಮನೆಯಲ್ಲಿ ಒಡಿದಾಟಕ್ಕೆ ಆರಂಭವಾಯಿತು. ಆಗ ನಾರಾಯಣ ಕಾಮತ ಇವರು ನಂದಗಡ ಅಥವಾ ಬೈಲಹೊಂಗಲದಲ್ಲಿ ಇರಬೇಕೆಂದು ಯತ್ನಿಸಿದರು; ಆದರೆ ಅಲ್ಲಿಯೂ ಅಣ್ಣ-ತಮ್ಮಂದಿರ ಉಪಟಳವಾಗಲು, ಅವರು ಮುರಗೋಡಿಗೆ ಶಕೆ ೧೭೪೬ರಲ್ಲಿ ಬಂದರು. ಇವರು ಗೋಕಾಕವನ್ನು ಶಕೆ ೧೭೪೪ರಲ್ಲಿ ಬಿಟ್ಟಿದ್ದರು. ಇವರು ಗೋಕಾಕ ಬಿಟ್ಟು ಹೊರಟಾಗ ಇವರಿಗೆ ಐದು ಸಂತತಿಗಳಾಗಿದ್ದವು. ಮುಂದೆ ಅವರು ಮುರಗೋಡಿಗೆ ಬಂದಬಳಿಕ ಶಕೆ ೧೭೫೧ರಲ್ಲಿ ನಾರೀಕೇಲದ ಪ್ರಸಾದದ ಯೋಗದಿಂದ ರಾಮಚಂದ್ರ ಕಾಮತ ಎಂಬವನು ಹುಟ್ಟಿದನು. ಶ್ರೀ ದೀಕ್ಷಿತರ ವಚನದಂತೆ ಈ ಬಾಲಕನು ಹುಟ್ಟಿದಂದಿನಿಂದ ಕಾಮತರ ಏಳ್ಗೆಗೆ ಆರಂಭವಾಯಿತು. ನಾರಾಯಣ ಕಾಮತರು ಅನೇಕ ತರದ ಸೌಖ್ಯಗಳನ್ನನುಭೋಗಿಸಿ, ಶಕೆ ೧೭೯೧ರಲ್ಲಿ ಪರಲೋಕವನ್ನೈದಿದರು.

ಬಳಿಕ ದೀಕ್ಷಿತರು ಶಿರಹಟ್ಟಿಯನ್ನು ಬಿಟ್ಟು ಕುಂದಗೋಳಕ್ಕೆ ಹೋಗಬೇಕೆಂದು ಹೊರಟರು. ಅವರು ಮಾರ್ಗಕ್ರಮಣ ಮಾಡುತ್ತಿರಲು, ದಾರಿಯಲ್ಲಿ 'ಛಬ್ಬಿ' ಎಂಬ ಗ್ರಾಮವು ಹತ್ತಿತು. ಅಲ್ಲಿ ದೀಕ್ಷಿತರು ಮೂರು ತಿಂಗಳುಗಳ ವರೆಗೆ ನಿಂತುಕೊಂಡರು ಆ ಊರಿಗೆ ನೀರು ತುಂಬುವ ಬಾವಿಯು ಒಂದೇ ಇದ್ದು, ಅದರಲ್ಲಿ ನೀರು ತಕ್ಕಷ್ಟು ಇದ್ದಿದ್ದಿಲ್ಲ. ದೀಕ್ಷಿತರು ಅಲ್ಲಿ ನಿಂತುಕೊಂಡದ್ದರಿಂದ ಜನರ ಸಂದಣಿಯು ಬೆಳೆಯಹತ್ತಿ ನೀರು ಸಾಲದಂತಾದವು ಜನರು ಗೊಳಾಡಹತ್ತಿದರು. ಆಗ ಆ ಗ್ರಾಮದ ಒಳಿಯಲ್ಲಿದ್ದ ಹಳ್ಳದಲ್ಲಿ ಒಂದು ವರ್ತಿಯನ್ನು ತೆಗೆದರು. ಅದರಲ್ಲಿ ನೀರೇ ಬಿಳಲಿಲ್ಲ. ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು ಇಂಥ ಸ್ಥಳದಲ್ಲಿ ವರ್ತಿಯನ್ನು ತೆಗೆಯಿರಿ, ಎಂದು ಹೇಳಿ ವರ್ತಿಯನ್ನು ತೆಗೆಸಿದರು. ಅಲ್ಲಿ ನೀರು ವಿಪುಲವಾಗಿ ಬಿದ್ದವು. ಅಂದಿನಿಂದ ಆ ಗ್ರಾಮದ ನೀರಿನ ಕೊರತೆಯು ಹಿಂಗಿತು. ದೀಕ್ಷಿತರ ಮಕ್ಕಳಾದ ಶಂಕರ ದೀಕ್ಷಿತರ ಪತ್ನಿಯು ಅಲ್ಲಿಯೇ ಪುಷ್ಪವತಿಯಾದಳು. ಆಗ ದೀಕ್ಷಿತರು ಒಳ್ಳೇ ಸಮಾರಂಭದಿಂದ ಗರ್ಭಾಧಾನವನ್ನು ಮಾಡಿಸಿ, ಬ್ರಾಹ್ಮಣ ಭೋಜನವನ್ನು ಮಾಡಿಸಿದರು. ಬಳಿಕ ಅಲ್ಲಿಂದ ಹೊರಟು ಕುಂದಗೋಳಕ್ಕೆ ಬಂದರು.

ಶ್ರೀ ದೀಕ್ಷಿತರು ಕುಂದಗೋಳಕ್ಕೆ ಬರುವ ಸುದ್ದಿಯು * ಪರಶುರಾಮ ನಿಗೆ ತಿಳಿಯಲು, ಅವನು ತನ್ನ ಮಕ್ಕಳಾದ ರಾಮಚಂದ್ರ, ಮತ್ತು ಹರಿ ಎಂಬವ ರನ್ನು ಕೂಡಿಕೊಂಡು, ದೀಕ್ಷಿತರನ್ನು ಎದುಗೊಂಡು ಬಳ್ಳೇ ಸಮಾರಂಭದಿಂದ ಊರೊಳಗೆ ಕರೆದುಕೊಂಡು ಬಂದನು. ಅವರಿಗೆ ಇಳಿದುಕೊಳ್ಳಲಿಕ್ಕೆ ಕೋಟೆ ಯಲ್ಲಿ ಸ್ಥಳ ಮಾಡಿತ್ತು. ಪರಶುರಾಮನ ವ್ಯವಸ್ಥೆಗೆ ದೀಕ್ಷಿತರು ಸಂತುಷ್ಟ ರಾದರು. ಅವರು ದಿನಾಲು ಭಕ್ತರಿಗೆ ವಿಧವಿಧದ ಚಮತ್ಕಾರಗಳನ್ನು ತೋರಿ ಸುತ್ತ, ಕಾಲಹರಣ ಮಾಡುತ್ತಿರಲು, ಒಂದುದಿವಸ ಚಮತ್ಕಾರದ ಸಂಗತಿಯು ವರ್ತಿಸಿತು ಅದೇನಂದರೆ—ಒಬ್ಬ ಆಂಗ್ಲ ವ್ಯಾಪಾರಸ್ಥನು, ವ್ಯಾಪಾರ ಮಾಡು ವದಕ್ಕಾಗಿ ದ್ವೀಪಾಂತರಕ್ಕೆ ಹೊರಟಿದ್ದನು. ಮಧ್ಯಮಾರ್ಗದಲ್ಲಿ ಒಮ್ಮಿಂದೊಮ್ಮೆ ಬಿರುಗಾಳಿಯು ಬೀಸಹತ್ತಿ ಆತನ ಹಡಗವು ಈಗ ಮುಳುಗುತ್ತದೋ, ಇನ್ನೊಂದು ಗಳಿಗೆಗೆ ಮುಳುಗುತ್ತದೋ ಎಂಬ ಸ್ಥಿತಿಯು ಪ್ರಾಪ್ತವಾಯಿತು. ಆಗ ವ್ಯಾಪಾ ರಿಯು ಅಂಜಿ, ಮುಂದುಗಾಣದೆ ತನ್ನ ಬ್ರಾಹ್ಮಣಜಾತಿಯ ಲೆಕ್ಕಿಗನನ್ನು ಸಮೀ ಪಕ್ಕೆ ಕರೆದು:—ಹಿಂದುಗಳಾದ ನೀವು ಸಂಕಟಸಮಯದಲ್ಲಿ ದೇವರನ್ನು ನೆನಿಸಿ, ಅದರೊಳಗಿಂದ ಪಾರಾಗುತ್ತೀರಂತೆ! ಈಗ ನಾವು ನಿಮ್ಮ ದೇವರನ್ನು ಬೇಡಿ ಕೊಂಡರೆ, ಒದಗಿದ ಸಂಕಟದೊಳಗಿಂದ ಪಾರಾಗುವೆವೋ? ಎಂದು ಪ್ರಶ್ನೆ ಮಾಡಲು, ಶ್ರೀ ಚಿದಂಬರ ಗುರುಗಳನ್ನು ನೆನಿಸಿದರೆ ನಿಶ್ಚಯವಾಗಿ ಪಾರಾಗು ವಿರಿ, ಎಂದು ಅವನು ಉತ್ತರ ಕೊಟ್ಟನು. ಆಗ ವ್ಯಾಪಾರಿಯು—ನಾವು ಈ ಸಂಕಟದೊಳಗಿಂದ ಪಾರಾದೆವೆಂದರೆ, ನಮಗಾಗುವ ಲಾಭದೊಳಗಿಂದ ಕಾಲು ಪಾಲು ಲಾಭವನ್ನು ನಿಮ್ಮ ಆ ಚಿದಂಬರನಿಗೆ ಕೊಡುವೆನು, ಎಂದು ಪ್ರತಿಜ್ಞೆ ಯನ್ನು ಮಾಡಿ, ಒಮ್ಮನಸ್ಸಿನಿಂದ ದೀಕ್ಷಿತರನ್ನು ನೆನಿಸಿದನು. ಆಗ ಗಾಳಿಯು ಕಟ್ಟಾಯಿತಲ್ಲದೆ, ದಿಕ್ಕುಗೆಟ್ಟು ಓಡುತ್ತಿದ್ದ ಹಡಗವು ಒಂದು ನಡುಗಡ್ಡೆಯನ್ನು ಸೇರಿತು. ಆ ವ್ಯಾಪಾರಸ್ಥನಿಗೆ ಆನಂದವಾಯಿತು. ಅವನು ವ್ಯಾಪಾರವನ್ನು ತೀರಿಸಿ, ಮನೆಯನ್ನು ಸೇರಿ ಲೆಕ್ಕಮಾಡಿ ನೋಡಲು, ೫ ಲಕ್ಷ ರೂಪಾಯಿ ಲಾಭವಾಗಿದ್ದವು. ಆಗ ಅವನು ಪ್ರತಿಜ್ಞೆ ಮಾಡಿದಂತೆ ಒಂದೂಕಾಲಲಕ್ಷ ರೂಪಾಯಿಗಳನ್ನು ದೀಕ್ಷಿತರಿದ್ದೆಡೆಗೆ ಕಳುಹಿದನು. ಅವರು ಅವುಗಳನ್ನು ಒಂದೆ ಡೆಯಲ್ಲಿರಿಸಿದರು. ಈ ರೂಪಾಯಿಗಳನ್ನು ಬೇರೆ ಇಡಿಸಿದ ಕಾರಣವು ಮುಂದೆ ಬರೆದ ಸಂಗತಿಯಿಂದ ತಿಳಿಯುವದು.

* ಈತನು ಶಾಳಲಶಾಖೆಯವನು.

ಶ್ರೀ ಶೇಷಾಚಲದಲ್ಲಿ(ವೇಂಕಟಗಿರಿಯಲ್ಲಿ)ಕೆಲವರು ಸಂತತಿಯ ಸಲುವಾಗಿ ಕೆಲವರು ಧನಪ್ರಾಪ್ತಿಯ ಸಲುವಾಗಿ, ಬೇರೆ ಕೆಲವರು ಮೋಕ್ಷೇಚ್ಛೆಯಿಂದ ಹೀಗೆ ಹಲವರು ಹಲವು ಬಗೆಯ ಕಾಮನೆಗಳನ್ನು ಧರಿಸಿಕೊಂಡು, ಅನುಷ್ಠಾನವನ್ನು ಮಾಡುತ್ತಿದ್ದರು. ಅವರಿಗೆಲ್ಲ ಶ್ರೀ ಚಿದಂಬರ ದೀಕ್ಷಿತರ ಕಡೆಗೆ ಹೋಗಿರಿ; ಅಂದರೆ ನಿಮ್ಮ ಬಯಕೆಗಳು ಪೂರ್ಣವಾಗುವವು, ಎಂದು ದೃಷ್ಟಾಂತಗಳಾಗುತ್ತಿದ್ದವು. ಅದರಂತೆ ಅವರು ದೀಕ್ಷಿತರ ಕಡೆಗೆ ಬರಲು, ಅವರ ಮನೋರಥಗಳು ಪೂರ್ಣವಾಗುತ್ತಿದ್ದವು. ಹೀಗಿರಲು ಒಂದು ದಿವಸ ಗಿರಿಯೊಳಗಿನ ಪೂಜಾರಿಯ ಸ್ವಪ್ನದಲ್ಲಿ ಸಾಕ್ಷಾತ್ ರಮಾಧವನು:—ನನ್ನ ಉತ್ಸವಮೂರ್ತಿ, ಮುದ್ರಾ-ಪತ್ರ, ಮೊದಲಾದ ಸಾಮಗ್ರಿಗಳನ್ನು ಸಜ್ಜುಗೊಳಿಸಿರಿ. ಯಾಕಂದರೆ, ನಾನು ಚಿದಂಬರ ದರ್ಶನಕ್ಕೆ ಹೋಗತಕ್ಕವನಿದ್ದೇನೆ. ಶಿಬಿಕೆ(ಪಲ್ಲಕ್ಕಿ)ಯನ್ನು ಸಿದ್ಧಪಡಿಸಿರಿ. ಈಗ ದೀಕ್ಷಿತರು ಕುಂದಗೋಳದಲ್ಲಿರುತ್ತಾರೆ. ಬ್ರಾಹ್ಮಣರಿಂದ ಕೂಡಿಕೊಂಡು ನೀವು ನಡೆಯಬೇಕು. ನಾವು ಗುಪ್ತವಾಗಿ ಬರುವೆವು ಈಗ ನಿಮ್ಮ ಹತ್ತರ ನನ್ನ ಗುರುತಿನ ಒಂದು ಪತ್ರವನ್ನು ಕೊಡುತ್ತೇನೆ ಅದನ್ನು ಮೊದಲು ದೀಕ್ಷಿತರ ಕೈಯಲ್ಲಿ ಕೊಡಿರಿ. ಅವರು ಮೊದಲು ಪಲ್ಲಕ್ಕಿಗೆ ನಮಸ್ಕಾರ ಮಾಡಿ ಹಿಂದುಗಡೆಯಲ್ಲಿ ಪತ್ರಕ್ಕೆ ನಮಸ್ಕಾರ ಮಾಡಿ, ಅದನ್ನು ಓದುವರು. ಆಗ ಅವರನ್ನು ನೀವು ಚನ್ನಾಗಿ ಹೊಗಳಿರಿ. ನಾನೂ ಅವರೂ ಒಂದೇ ಇರುವೆವು. ನನ್ನ ರೂಪವೇ ಅವರು! ಅವರ ರೂಪವೇ ನಾನು! ನಮ್ಮಿಬ್ಬರಲ್ಲಿ ಏನೂ ಭೇದ ಎಲ್ಲ. ಅವರು ನಿಮಗೆ ನಿರೂಪ ಕೊಟ್ಟಾಗ ನೀವು ತಿರುಗಿ ಬರಬೇಕು, ಎಂದು ಹೇಳಿದನು. ಮರುದಿವಸ ಪೂಜಾರಿಗೆ ಹಾಸಿಗೆಯಲ್ಲಿ ಒಂದು ಪತ್ರವು ದೊರೆಯಿತು. ಅವರು ಸ್ವಪ್ನದೊಳಗಿನ ರಮಾರಮಣನ ಆಜ್ಞೆಯಂತೆ ಯಾವತ್ತು ಸೌರಣೆಯನ್ನು ಮಾಡಿಕೊಂಡು, ಬ್ರಾಹ್ಮಣರಿಂದ ಕೂಡಿಕೊಂಡು ಕುಂದಗೋಳಕ್ಕೆ ಬಂದರು. ದೀಕ್ಷಿತರು ಅವರನ್ನು ಎದುರುಗೊಂಡರು. ಅವರು ಮೊದಲು ಗುಪ್ತವಾಗಿ ಬಂದ ರಮಾಧವನನ್ನು ನಮಸ್ಕರಿಸಿ, ಬಳಿಕ ಪಲ್ಲಕ್ಕಿಗೆ ಸ್ಪರ್ಶಮಾಡಿ, ಗೋವಿಂದ-ಗೋವಿಂದ ಎಂದು ಗರ್ಜಿಸಿದರು. ಆ ಮೇಲೆ ಗೋವಿಂದನಾಮಘೋಷವನ್ನು ಮಾಡುತ್ತ ಪುರವನ್ನು ಪ್ರವೇಶಿಸಿದರು.

ಮೊದಲೇ ಇಳಿದುಕೊಳ್ಳಲಿಕ್ಕೆ ಗೊತ್ತುಮಾಡಿ, ಸಿದ್ಧಪಡಿಸಿದ್ದ ಸ್ಥಳದಲ್ಲಿ ಪೂಜಾರಿಗಳು ಇಳಕೊಂಡರು. ಅಲ್ಲಿಯೇ ದಿನಾಲು ಶ್ರೀರಮಣನ ಉತ್ಸವವು ನಡೆಯಿತು. ಮೂರುತಿಂಗಳುಗಳ ವರೆಗೆ ಹೀಗೆಯೇ ನಡೆಯಿತು. ದೀಕ್ಷಿತರು

ದಿನಂಪ್ರತಿ ದರ್ಶನಕ್ಕೆ ಹೋಗುತ್ತಿದ್ದರು. ಅವರು ದರ್ಶನಕ್ಕೆ ಹೋದ ಸಮಯ ದಲ್ಲಿ ಪೂಜಾರಿಗಳು ಅವರನ್ನು ಹೊಗಳುತ್ತಿದ್ದರು. ಆಗ ದೀಕ್ಷಿತರು:--ನಾನು ದೀನನು! ನೀವು ಶ್ರೀಶ್ವರ ಸೇವಕರು! ನಮಗೆ ನಮಸ್ಕಾರ ಮಾಡುವದೇಕೆ? ನಮ್ಮನ್ನು ಹೊಗಳುವದೇಕೆ? ಎಂದು ನುಡಿಯುತ್ತಿದ್ದರು. ಒಂದುದಿವಸ ಪೂ-ಜಾರಿಗಳು ಫಲ-ಮಂತ್ರಾಕ್ಷತೆಗಳನ್ನೂ, ಪತ್ರವನ್ನೂ ದೀಕ್ಷಿತರ ಮುಂದೆ ಇಡಲು, ದೀಕ್ಷಿತರು ಚಟ್ಟನೆ ಎದ್ದು, ಅವುಗಳಿಗೆ ನಮಸ್ಕಾರ ಮಾಡಿದರು; ಹಾಗು ನೆಲ ವನ್ನು ಸಾರಿಸಿ, ರಂಗವಲ್ಲಿಯನ್ನೂ ಅರಿಷಿಣ-ಕುಂಕುಮಗಳನ್ನೂ ಚಿತ್ರ-ವಿಚಿತ್ರ ರೀತಿಯಿಂದ ಹಾಕಿಸಿ, ಒಂದು ಅಂದವಾದ ಗದ್ದುಗೆಯ ಮೇಲೆ ಅವುಗಳನ್ನು ಸ್ಥಾಪಿಸಿದರು. ಒಳಿಕ ಬಹಳ ಬ್ರಾಹ್ಮಣರಿಂದ ಕೂಡಿಕೊಂಡು, ಅವುಗಳನ್ನು ಪೂಜಿಸಿ, ಅದರೊಳಗಿನ ಪತ್ರವನ್ನು ತಕ್ಕೊಂಡು ಅದರ ಕೆಳಗಿರುವ ಮಾಧವನ ಮುದ್ರೆಯನ್ನು ನೋಡಿ, ರಹಸ್ಯವಾಗಿ ಅದನ್ನೋದಿ, ಬ್ರಾಹ್ಮಣರನ್ನು ಕುರಿತು:-ನಾನು ದರಿದ್ರನು! ಆ ಲಕ್ಷ್ಮೀಪತಿಯು ಪತ್ರದಲ್ಲಿ 'ನನಗೆ ಬಹಳ ಸಾಲವಾಗಿದೆ; ಕಾರಣ ಬ್ರಾಹ್ಮಣರನ್ನು ನಿನ್ನೆಡೆಗೆ ಕಳಿಸಿರುವೆನು. ಅವರ ಸಂಗಡ ಒಂದೂಕಾಲ ಲಕ್ಷ ರೂಪಾಯಿಗಳನ್ನು ಕೊಟ್ಟು ಕಳಿಸಬೇಕು' ಎಂದು ಬರೆದಿರುವನು. ನಾನು ಇಷ್ಟು ಹಣವನ್ನು ಎಲ್ಲಿಂದ ಕೊಡಲಿ? ಈಶೇಚ್ಛೆ!! ಎಂದು ಮಾತನಾಡಿ ಪಲ್ಲಕ್ಕಿಯನ್ನು ತರಿಸಿ, ಅದರೊಳಗಿನ ಉತ್ಸವ ಮೂರ್ತಿಯನ್ನು ವಿಧ್ಯುಕ್ತವಾಗಿ ಪೂಜಿಸಿ, ದಕ್ಷಿಣಾರ್ಥವಾಗಿ ಅದರ ಮುಂದೆ ಐದು ಮೋಹರುಗಳನ್ನಿಟ್ಟು ಪ್ರೇಮ ಪೂರ್ವಕವಾಗಿ ನಮಸ್ಕಾರ ಮಾಡಿದರು; ಹಾಗು ಪೂಜಾರಿಗಳಿಗೆ ಪಲ್ಲಕ್ಕಿ ಯನ್ನು ತಕ್ಕೊಂಡು ಶೇಷಾಚಲಕ್ಕೆ ಹೋಗಿರಿ, ಎಂದು ಆಜ್ಞಾಪಿಸಿದರು. ಪೂಜಾರಿಗಳು ಭೋಜನೋತ್ತರದಲ್ಲಿ ಮಹಾಸ್ವಾಮಿಯ ಅಪ್ಪಣೆಯನ್ನು ತಕ್ಕೊಂಡು, ಕುಂದಗೋಳದಿಂದ ಮರಳಿ ವೆಂಕಟರಮಣನ ಗಿರಿಗೆ ಬಂದರು. ಉತ್ಸವ ಮೂರ್ತಿಯನ್ನು ಕೆಳಗಿಳಿಸಲು, ಅದರ ಬುಡದಲ್ಲಿ ಹೊನ್ನುಗಳ ರಾಶಿಯು ಅವರ ಕಣ್ಣಿಗೆ ಬಿತ್ತು. ಆಗ ಅವರು ಅವನ್ನೆಣಿಸಹತ್ತಲು, ಅವು ಸರಿಯಾಗಿ ಒಂದೂಕಾಲ ಲಕ್ಷ ಹೊನ್ನುಗಳೇ ಇದ್ದವು. ಆಗ ಅವರಿಗೆ ಬಹು ಆಶ್ಚರ್ಯ ವಾಯಿತು. ಅವರು ಮನದಲ್ಲಿ ದೀಕ್ಷಿತರನ್ನು ಕೊಂಡಾಡಿ, ಆ ಹಣವನ್ನು ಶ್ರೀ ಹರಿಯ ಬೊಕ್ಕಸದಲ್ಲಿ ಇಟ್ಟರು. ಶ್ರೀ ಚಿದಂಬರ ದೀಕ್ಷಿತರು, ಭಕ್ತಾವಳಿಗೆ ಈ ಚಮತ್ಕಾರದ ಸಂಗತಿಯನ್ನು ಮೇಲಿಂದ ಮೇಲೆ ಹೇಳುತ್ತಿದ್ದರಂತೆ!!

---

## ೧೫ನೆಯ ಪ್ರಕರಣ.

## ಭಕ್ತಶ್ರೇಷ್ಠ ರಾಜಾರಾಮ ಮಹಾರಾಜರು.

ಗೋದಾವರಿಯ ತೀರದಲ್ಲಿ 'ಜಾಬುಳಗಾವ' ಎಂಬದೊಂದು ಗ್ರಾಮವಿರುವದು. ಅಲ್ಲಿಯ ಗೌಡರು ರಜಪೂತ ಕುಲದವರು. ವಂಶಪರಂಪರಾಗತ ಗೌಡಕಿಯ ಕೆಲಸವನ್ನು ಅವರೇ ನೋಡುತ್ತಿದ್ದರು. ಇವರ ವಂಶದಲ್ಲಿಯೇ ರಾಜಾರಾಮಮಹಾರಾಜರು ಹುಟ್ಟಿದರು. ಅವರಲ್ಲಿ ಭಗವದಂಶವು ಹೆಚ್ಚಿಗಿದ್ದದರಿಂದ ಭಕ್ತಿ-ವೈರಾಗ್ಯಾದಿ ಗುಣಗಳು ಅವರ ವಯಸ್ಸಿನ ಐದನೆಯ ವರ್ಷದಲ್ಲಿಯೇ ಜನರ ನಿದರ್ಶನಕ್ಕೆ ಬರಹತ್ತಿದವು. ಅವರ ಕೃತಿಗಳು ಜನರನ್ನು ಆಶ್ಚರ್ಯಗೊಳಿಸಹತ್ತಿದವು. ಐದಾರು ವರ್ಷದ ಹುಡುಗನೆಂದರೇನು? ದಿನಾಲು ಪ್ರಾತಃಕಾಲದಲ್ಲಿ ಸ್ನಾನಮಾಡಿ, ಬಳಿಕ ಶಿವಪೂಜೆಯನ್ನು ಮುಗಿಸಿ, ತಂದೆ-ತಾಯಿಗಳಿಗೆ ಅಭಿವಂದಿಸಿ, ಧ್ಯಾನಾಸಕ್ತನಾಗಿ ಕುಳಿತುಕೊಳ್ಳುವದನ್ನು ನೋಡಿ ಯಾರಿಗೆ ತಾನೇ ಆಶ್ಚರ್ಯವಾಗಲಿಕ್ಕಿಲ್ಲ! ಹೀಗೆಯೇ ಕೆಲವು ಕಾಲ ಕ್ರಮಿಸಿದ ಬಳಿಕ ರಾಜಾರಾಮ ಮಹಾರಾಜರು ಒಂದುದಿವಸ ಧ್ರುವಚರಿತ್ರವನ್ನು ಕೇಳಿ ಚಕಿತರಾದರು. ಅವರು ಮನಸ್ಸಿನಲ್ಲಿ—ಐದೇವರ್ಷಗಳ ವಯಸ್ಸುಳ್ಳ ಧ್ರುವನಿಗೆ ಶ್ರೀಹರಿಯು ದರ್ಶನವಾಯಿತು! ನಾನು ಏಳೆಂಟು ವರ್ಷದವನಾದರೂ ಇನ್ನೂ ನನಗೆ ದರ್ಶನವಾಗಲೊಲ್ಲದು. ಈಶ್ವರನ ಸಗುಣರೂಪವನ್ನು ನೋಡದವನ ಬಾಳುವೆಯು ವ್ಯರ್ಥವಾದದ್ದು! ಆತನ ಜನನ-ಮರಣಗಳು ತಪ್ಪಲಾರವು! ಭವಬಂಧನವು ಆತನನ್ನು ಬಿಗಿದು ಬಿಡುವದು! ಎಂದು ವ್ಯಸನ ಪಡಹತ್ತಿದರು. ಅವರ ಮನಸು ಸ್ಥಿರವಾಗಲೊಲ್ಲದು. ಹೀಗಿರಲು, ಅವರು ಒಂದು ದಿವಸ ಶಿವಪೂಜೆಯನ್ನು ಮಾಡಿ, ಧ್ಯಾನನಿರತರಾಗಿ ಕುಳಿತಿರಲು, ಒಬ್ಬ ಮುನೀಶ್ವರನು ಅವರ ಎದುರಿನಲ್ಲಿ ಬಂದು ನಿಂತುಕೊಂಡನು. ಆಗ ರಾಜಾರಾಮ ಮಹಾರಾಜರು ಆ ಮುನಿಯನ್ನು ನಮಸ್ಕರಿಸಿ, ದಿವ್ಯಾಸನದಲ್ಲಿ ಕುಳ್ಳಿರಿಸಿ, ಷೋಡಶೋಪಚಾರಗಳಿಂದ ಅವರನ್ನು ಪೂಜಿಸಿ, ಸಾಷ್ಟಾಂಗವೆರಗಿ ಕೈಜೋಡಿಸಿ, ತಮ್ಮ ಮನೋಬಯಕೆಯನ್ನು ಅರುಹಿದರು. ಆಗ ಮುನಿಯು:—ಭಗವಂತನು ನಿನಗೆ ತೀವ್ರವಾಗಿಯೇ ಭೆಟ್ಟಿಯಾಗುವನು. ವತ್ಸಾ, ನಿನ್ನ ಅನುಷ್ಠಾನವು ಮಾತ್ರ ಹೀಗೆಯೇ ನಡೆಯಲಿ, ಎಂದು ಹೇಳಿ ಅಂತರ್ಧಾನವನ್ನೈದಿದನು.

ಅಂದಿನಿಂದ ರಾಜಾರಾಮ ಮಹಾರಾಜರ ಮನಸಿಗೆ ಬಹಳ ಚಡಪಡಿಕೆಯಾಯಿತು. ಅಡವಿಗೆ ಹೋದ ಆಕಳು ಮನೆಯಲ್ಲಿದ್ದ ತನ್ನ ಕರುವನ್ನು ಕಾಣಲು, ಆತುರಪಡುವಂತೆ ರಾಜಾರಾಮ ಮಹಾರಾಜರು ಈಶ್ವರನನ್ನು ಕಾಣಲು, ಹಾತೊರೆಯಹತ್ತಿದರು. ಅವರು ಮನಸ್ಸಿನಲ್ಲಿ:—ದೀನರಲ್ಲಿ ದಯೆಯುಳ್ಳ ಸದಾಶಿವನು ನನ್ನನ್ನು ಏಕೆ ಉಪೇಕ್ಷಿಸುತ್ತಿರಬಹುದು? ನನಗೆ ಏಕೆ ದರ್ಶನಕೊಡಲೊಲ್ಲನು? ನನ್ನ ಆಯುಷ್ಯದ ಪ್ರತಿಯೊಂದು ಕ್ಷಣವು ವ್ಯರ್ಥವಾಗಿ ಹೋಗಹತ್ತಿತಲ್ಲ! ತಾಯಿಯೇ ಮಗುವನ್ನು ಉಪೇಕ್ಷಿಸಿದರೆ, ಅದು ಏನುಮಾಡಬೇಕು? ಯಾರಿಗೆ ಶರಣುಹೋಗಬೇಕು? ಯಾರ ಆಶ್ರಯವನ್ನಪೇಕ್ಷಿಸಬೇಕು? ಕೃಪಾನಿಧಿಯೇ, ನಿನ್ನ ಹೊರತು ನನಗೆ ಯಾರ ಆಶ್ರಯವೂ ಇಲ್ಲ! ಸದ್ಗುರುವೇ ನಿನ್ನಗೋಸುಗ ಬಳಲುವ ಈ ದೀನನನ್ನು ಉದ್ಧರಿಸು. ಎಂದು ಹಗಲಿರಳು ಗುರುಧ್ಯಾನವನ್ನು ಮಾಡುತ್ತಿರಲು, ಅವರ ವೈರಾಗ್ಯವು ಹೆಚ್ಚಿತು. ಆಗ ಅವರಿಗೆ ಮೊದಲು ದರ್ಶನಕೊಟ್ಟ ಗುರುಗಳು ಅವರ ವೈರಾಗ್ಯವೃತ್ತಿಗೆ ಮೆಚ್ಚಿ, ಮತ್ತೊಮ್ಮೆ ಬಾಲರೂಪದಿಂದ ದರ್ಶನಕೊಟ್ಟು, ಅವರ ಕಿವಿಯಲ್ಲಿ ಮಹಾವಾಕ್ಯವನ್ನು ಉಪದೇಶಿಸಿದರು ಹಾಗೂ ತೀವ್ರವೇ ನಿನಗೆ ಸದ್ಗುರುವಿನ ದರ್ಶನವಾಗುವದೆಂದು ಅಭಯವನ್ನಿತ್ತು ಅಂತರ್ಧಾನವನ್ನೈದಿದರು.

ಇತ್ತ ರಾಜಾರಾಮ ಮಹಾರಾಜರು ಸಗುಣರೂಪ ಧ್ಯಾನದಲ್ಲಿ ರತರಾದರು. ಅವರ ವೈರಾಗ್ಯವೃತ್ತಿಗೂ ಭಕ್ತಿಗೂ ಮೆಚ್ಚಿ ಶ್ರೀ ಚಿದಂಬರನು ವಿಪ್ರರೂಪದಿಂದ ಅವರ ಸ್ವಪ್ನದಲ್ಲಿ ದರ್ಶನಕೊಟ್ಟು—ಈಹೊತ್ತಿನಿಂದ ಮನಸ್ಸಿನೊಳಗೆ ಸಮಾಧಾನವನ್ನು ಧರಿಸು. ನಿನ್ನ ಬಯಕೆಯು ಬೇಗನೆ ಪೂರೈಸುವದು, ಎಂದು ಹೇಳಿದನು. ಈ ದೃಷ್ಟಾಂತವಾದ ಬಳಿಕ ಕೆಲವು ದಿವಸಗಳ ತರುವಾಯ ರಾಜಾರಾಮ ಮಹಾರಾಜರು ಕಾರ್ಯನಿಮಿತ್ತವಾಗಿ ಹುಸಂಗಾಬಾದಿಗೆ ಹೋದರು. ಅಲ್ಲಿಯ ಅರಸನು ಇವರಿಗೆ ಐನೂರುಕುದುರೆಗಳ ಮೇಲಿನ ಅಧಿಕಾರವನ್ನು ಕೊಟ್ಟನು. ಪ್ರಪಂಚದಲ್ಲಿ ನಿರಾಶೆಯುಳ್ಳ ರಾಜಾರಾಮ ಮಹಾರಾಜರು ಅದನ್ನು ಅಲ್ಲಗಳೆಯಹತ್ತಿದರು; ಆದರೆ ಕುಟುಂಬದವರ ಒತ್ತಾಯದಿಂದ ನಿರ್ವಾಹವಿಲ್ಲದೆ ಅದನ್ನು ಸ್ವೀಕರಿಸಬೇಕಾಯಿತು. ಅವರು ದೊಡ್ಡ ಸರದಾರರಾದರೂ ಅವರ ಶಿವ-ನಾಮೋಚ್ಚಾರವು ಒಂದೇಸವನೆ ನಡೆಯುತ್ತಲೇ ಇತ್ತು. ಹೀಗಿರಲು, ಒಂದುದಿವಸ ಕೃಷ್ಣಭಟ್ಟನೆಂಬ ಬ್ರಾಹ್ಮಣನು ರಾಜಾರಾಮ ಮಹಾರಾಜರ ಭೆಟ್ಟಿಗೆ ಬಂದಾಗ, ಶ್ರೀ ಚಿದಂಬರ ಚರಿತ್ರವನ್ನು ಬಹು ಸರಸ

ವಾಗಿ ವರ್ಣಿಸಿದನು. ಅದನ್ನು ಕೇಳಿ ಮಹಾರಾಜರು ಬಹು ಸಂತೋಷಪಟ್ಟರು. ಇದೇ ಸಂಧಿಯಲ್ಲಿ ಅವರು ಕಾಶಿಗೆ ಹೋಗಬೇಕೆಂದು ಗೊತ್ತುಮಾಡಿದ್ದರು; ಆದರೆ ಅವರು ತಮ್ಮ ಆ ಸಂಕಲ್ಪವನ್ನು ಬದಿಗಿಟ್ಟು, ಶ್ರೀ ಚಿದಂಬರ ದರ್ಶನ ತಕ್ಕೊಳ್ಳುವದನ್ನು ನಿಶ್ಚಯಿಸಿ, ಕೃಷ್ಣಭಟ್ಟನನ್ನೂ, ನಿಂಬಾಜಿ ಎಂಬ ಹೆಸರಿನ ತನ್ನ ತಮ್ಮನನ್ನೂ ಕೂಡಿಕೊಂಡು ಹೊರಟರು. ಹೋಗ ಹೋಗುತ್ತ ಮಾರ್ಗ ದಲ್ಲಿ ಅವರಿಗೆ ಒಂದು ಕಟ್ಟಡವಿಯು ಹತ್ತಿತು. ಅವರು ಹಾದೀತಪ್ಪಿ ಅಡವೀ ಬಿದ್ದರು. ಎಷ್ಟು ಶೋಧಿಸಿದರೂ ಅವರಿಗೆ ದಾರಿಯು ದೊರೆಯಲೊಲ್ಲದು. ಊರು ಕಾಣಲೊಲ್ಲದು. ಹಿಂಸ್ರಪಶುಗಳು ಕರ್ಕಶ ಧ್ವನಿಯಿಂದ ಒದರತೊಡಗಿ ದವು. ಆಗ ಆ ಮೂವರು ಅರಿಯದ ಸ್ಥಳದಲ್ಲಿ ಏನು ಮಾಡಬೇಕೆಂಬದು ತಿಳಿ ಯದೆ ಗಾಬರಿಯಾದರು; ಹಾಗು ಶ್ರೀ ಚಿದಂಬರನನ್ನು ಒಮ್ಮನಸಿನಿಂದ ಸ್ತುತಿಸ ತೊಡಗಿದರು. ಆಗ ಭವಾರಣ್ಯದ ಮಾರ್ಗದರ್ಶಕನೂ, ಭಯಹಾರಕನೂ ಆದ ಚಿದಂಬರನು, ಭಕ್ತರ ಸಂಕಟವನ್ನು ಭಂಜಿಸಲು, ಬಲು ಮನೋಹರವಾದ ದನ ಗಾಹಿಯ ವೇಷವನ್ನು ಧರಿಸಿ, ಬಾಲರೂಪದಿಂದ ಅಲ್ಲಿಗೆ ಪ್ರಾಪ್ತನಾದನು. ಅವನು ಶ್ಯಾಮವರ್ಣದವನಿದ್ದು, ಕಂಬಳಿಯನ್ನು ಹೊತ್ತಿದ್ದನು. ಕುಂಡಿಯ ಚಣ್ಣವನ್ನು ಹಾಕಿದ್ದನು ಆತನ ಕೈಯಲ್ಲಿ ಚಿಕ್ಕದೊಂದು ಬಿದರ ಬಡಿಗೆಯಿತ್ತು. ಆತನನ್ನು ನೋಡಿ, ಆ ಮೂವರ ಮನಸ್ಸು ಕರಗಿತು. ಅವರು ಆ ಹುಡುಗ ನನ್ನು ಕುರಿತು:--ಬಾಳಾ, ಇಂತಹ ಘೋರಾರಣ್ಯದಲ್ಲಿ ಹೇಗೆ ಬಂದಿರುವಿ? ಹಾದಿಯನ್ನು ತಪ್ಪಿ, ಸಂಗಡಿಗರನ್ನು ಅಗಲಿ, ಏಕಾಕಿಯಾಗಿ ತಿರುಗಾಡುತ್ತಿರು ವಿಯಾ? ಎಂದು ಪ್ರಶ್ನಮಾಡಿದರು. ಅದಕ್ಕೆ ಬಾಲರೂಪಧಾರಿಯಾದ ಚಿದಂಬ ರನು:—ಈ ಭಯಂಕರ ಅಡವಿಯಲ್ಲಿ ದಾರಿಕಾರರು ಬಹಳಮಾಡಿ ದಾರಿಯನ್ನು ತಪ್ಪುತ್ತಾರೆ. ದಾರಿಯು ದೊರೆಯದ್ದರಿಂದ ಗಾಬರಿಯಾಗುತ್ತಾರೆ. ಅಂಥವರಿಗೆ ದಾರಿಯನ್ನು ತೋರಿಸುವದಕ್ಕಾಗಿ, ನಾನು ಇಲ್ಲಿಯೇ ಅಡ್ಡಾಡುತ್ತಿರುತ್ತೇನೆ. ನೀವಾದರೂ ಹಾದೀತಪ್ಪಿ ಗಾಬರಿಯಾದ್ದರಿಂದ, ನಿಮ್ಮನ್ನು ಹಾದಿಗೆ ಹಚ್ಚುವ ದಕ್ಕಾಗಿ ಓಡಿಬಂದೆನು. ನೀವು ನನ್ನ ಸಂಗಡ ಬನ್ನಿರಿ, ಎಂದು ನುಡಿದು ಮುಂದಕ್ಕೆ ಸಾಗಹತ್ತಿದನು.

ಆ ಮೂವರು ಆತನ ಹಿಂದಿಂದೇ ಕೆಲವು ದಾರಿಯನ್ನು ಕ್ರಮಿಸುವಷ್ಟ ರಲ್ಲಿ ಮಟಮಟ ಮಧ್ಯಾಹ್ನವಾಯಿತು. ಆಗ ಆ ಹುಡುಗನು ಅವರನ್ನು ಒಂದು ಜಲಾಶಯದ ಬಳಿಗೆ ಕರೆದೊಯ್ದು:—ನನಗೆ ಹಸಿವು ಆಗಿದೆ. ನಾನು ಉಣ್ಣು

ತ್ರೀನೆ. ನಿಮಗಾದರೂ ಹೊಟ್ಟೆಯು ಹಸಿದಿರಬಹುದು. ಕಾರಣ ನೀವೂ ಜಳಕಮಾಡಿ ಏನನ್ನಾದರೂ ತಿನ್ನಿರಿ, ಎಂದು ನುಡಿದು, ತಾನು ಒಂದು ಗಿಡದಡಿಯಲ್ಲಿ ಕುಳಿತುಕೊಂಡನು. ಆ ಮೂವರೂ ಆತನ ಮಾತಿಗೆ ಸಮ್ಮತಿಸಿ, ಸ್ನಾನವನ್ನು ಮಾಡಿ, ಉಪಹಾರಕ್ಕೆ ಕುಳಿತುಕೊಂಡರು. ಅವರು ಹುಡುಗನಿಗೆ ಉಪಹಾರದ ಪದಾರ್ಥಗಳನ್ನು ಕೊಡಹೋದರು; ಆದರೆ ಅವನು ಅವುಗಳನ್ನು ಸ್ವೀಕರಿಸಲಿಲ್ಲ. ಎಲ್ಲರ ಉಪಹಾರವು ತೀರಿತು. ಬಳಿಕ ಎಲ್ಲರೂ 'ಮತ್ತೆ ಮಾರ್ಗಸ್ಥರಾದರು. ಬಾಲಕನು ಬಡಿಗೆಯನ್ನು ತಿರುವುತ್ತ ಮುಂದಾದನು. ಕೆಲವು ದಾರಿ ಕ್ರಮಿಸಿದ ಬಳಿಕ ಒಂದು ಊರು ಕಾಣಹತ್ತಿ ಒಂದು ದೊಡ್ಡ ಮಾರ್ಗವೂ ಬಂತು. ಆ ಹುಡುಗನು ಒಮ್ಮಿಂದೊಮ್ಮೆ ಗುಪ್ತನಾದನು. ಆಗ ಆ ಮೂವರು ಹುಡುಗನನ್ನು ಹಲವೆಡೆಗಳಲ್ಲಿ ಹುಡುಕಿದರು; ಆದರೆ ಆತನು ದೊರೆಯಲಿಲ್ಲ. ಆಗ ಅವರು ಮನಸಿನಲ್ಲಿ:—ಹುಡುಗನು ಅಕಸ್ಮಾತ್ತಾಗಿ ಹೇಗೆ ಮಾಯವಾದನು? ಅವನು ಹುಡುಗನಲ್ಲ. ಸಾಕ್ಷಾತ್ ಚಿದಂಬರನೇ ನಮಗೆ ಬಾಲರೂಪದಿಂದ ದರ್ಶನಕೊಟ್ಟು, ಮಾರ್ಗವನ್ನು ತೋರಿಸಿದನೆಂದು ಭಾವಿಸಿಕೊಂಡು, ಗುಪ್ತವಾದ ಸ್ಥಳಕ್ಕೆ ನಮಸ್ಕಾರಮಾಡಿ, ಮುಂದಕ್ಕೆ ಸಾಗುತ್ತ ಕುಂದಗೋಳಕ್ಕೆ ಬಂದು ತಲ್ಪಿದರು.

ಕುಂದಗೋಳದಲ್ಲಿ ದಿನೇದಿನೇ ಯಾತ್ರಿಕರ ಸಂದಣಿಯು ಹೆಚ್ಚಾಗಹತ್ತಿದ್ದರಿಂದ, ದೀಕ್ಷಿತರ ದರ್ಶನವಾಗುವದು ಬಿಗಿಯಾಗಿತ್ತು. ರಾಜಾರಾಮ ಮಹಾರಾಜರಿಗೆ ನಾಲ್ಕು ದಿವಸಗಳವರೆಗೆ ದರ್ಶನವಾಗಲಿಲ್ಲ. ಅವರು ದರ್ಶನವಾದ ಹೊರತು ಅನ್ನಗ್ರಹಣ ಮಾಡಲಿಕ್ಕಿಲ್ಲೆಂದು ನಿಶ್ಚಯಮಾಡಿ, ಏಕಾಸನದಲ್ಲಿ ಕುಳಿತುಕೊಂಡರು. ಶ್ರೀ ಚಿದಂಬರ ದೀಕ್ಷಿತರು ಅವರ ದೃಢನಿಶ್ಚಯಕ್ಕೆ ಮೆಚ್ಚಿ, ನಾಲ್ಕನೆಯ ದಿವಸ ಮಧ್ಯರಾತ್ರಿಯ ಸುಮಾರಕ್ಕೆ, ಎಲ್ಲರೂ ಗಾಢನಿದ್ರೆಯಲ್ಲಿದ್ದ ಸಂಧಿಯನ್ನು ಸಾಧಿಸಿ, ರಾಜಾರಾಮ ಮಹಾರಾಜರ ಬಳಿಗೆ ಬಂದು, ಅವರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮೈದಡವಿದರು. ಹಾಗೂ:—"ರಾಜಾರಾಮನೇ, ಈ ಉಗ್ರ-ತಪವನ್ನು ತೊರೆದು, ಸಾತ್ವಿಕ-ಭಕ್ತಿಯಿಂದ ದೇವರನ್ನು ಆರಾಧಿಸು. ಅದರಿಂದಲೇ ಆತನು ಒಲಿಯುವನು!" ಎಂದು ಬಗೆಬಗೆಯಿಂದ ಬೋಧಿಸಿ, ತಮ್ಮ ಕೈಮುಟ್ಟ ಸಕ್ಕರಿ-ಕೊಬ್ಬರಿಯನ್ನು ಅವರ ಬಾಯಿಯಲ್ಲಿ ಹಾಕಹತ್ತಿದರು. ಗುರುಹಸ್ತದಿಂದ ಪ್ರಸಾದವನ್ನು ಸ್ವೀಕರಿಸಿ, ಮಹಾರಾಜರು ತೃಪ್ತರಾದರು. ಬಳಿಕ ದೀಕ್ಷಿತರು ರಾಜಾರಾಮ ಮಹಾರಾಜರ ಕಿವಿಯಲ್ಲಿ

ತಾರಕವಾದ ಮಂತ್ರೋಪದೇಶವನ್ನು ಮಾಡಿದರು; ಹಾಗು ಜಗನ್ನಿಯಾಮಕ ನಾದ ಪರಮೇಶ್ವರನು ತಾನೇ ಎಂತಲೂ, ತನ್ನ ಹೆಸರು ಚಿದಂಬರನೆಂತಲೂ ಹೇಳಿ, ತಮ್ಮ ನಿಜಸ್ವರೂಪವನ್ನು ಪ್ರಕಟಿಸಿದರು. ಆ ದಿವ್ಯರೂಪವನ್ನು ನೋಡ ಲಾರದೆ ಮಹಾರಾಜರ ಕಣ್ಣುಗಳು ಸಂಕುಚಿತವಾದವು; ಶರೀರವೆಲ್ಲ ರೋಮಾಂಚಿತವಾಯಿತು.

'ಆಗ ಅವರು ತಟ್ಟನೆ ಎದ್ದು, ಸಾಷ್ಟಾಂಗ-ನಮಸ್ಕಾರವನ್ನು ಹಾಕಿದರು. ಆಗ ದೀಕ್ಷಿತರು ತೇಜೋಮಯವಾದ ರೂಪವನ್ನು ಉಪಸಂಹರಿಸಿ, ಮತ್ತೆ ಬ್ರಾಹ್ಮಣ ರೂಪವನ್ನು ಧರಿಸಿ:—ವತ್ಸಾ, ಬೆಳಗಾಗುತ್ತಲೇ ದರ್ಶನಕ್ಕೆ ಬಾ, ಎಂದು ನುಡಿದು, ಒಮ್ಮೆಲೆ ಗುಪ್ತರಾದರು. ರಾಜಾರಾಮ ಮಹಾರಾಜರಿಗೆ ಇದೆಲ್ಲ ಸಂಗತಿಯು ಸ್ವಪ್ನದೊಳಗೆ ವರ್ತಿಸಿದಂತಾಯಿತು. ದೀಕ್ಷಿತರು ಗುಪ್ತ ರಾದ ಬಳಿಕ ಸ್ವಪ್ನ ಸ್ಥಿತಿಯೊಳಗಿಂದ ಎಚ್ಚರವಾಗುವಂತೆ ಅವರು ಪ್ರಜ್ಞೆಯುಳ್ಳ ವರಾದರು; ಅದರೆ ದೀಕ್ಷಿತರು ಎಲ್ಲಿಯೂ ಕಾಣಲಿಲ್ಲ. ಅವರು ನಾಲ್ಕುದಿವಸ ಉಪವಾಸವಿದ್ದರೂ ಹೊಟ್ಟೆಯು ತುಂಬಿದಂತಾಗಿತ್ತು. ಮನಸ್ಸು ಶಾಂತಿಯನ್ನು ಹೊಂದಿತ್ತು. ಮಂತ್ರದ ಸ್ಮರಣವು ಪೂರ್ಣವಿತ್ತು. ಬೆಳಗಾದ ಬಳಿಕ ಅವರು ಶುಚಿರ್ಭೂತರಾಗಿ ದೀಕ್ಷಿತರ ದರ್ಶನಕ್ಕೆ ಬಂದರು. ಇತ್ತ ಶ್ರೀ ಚಿದಂಬರ ದೀಕ್ಷಿತರು ಸಭೆಯೊಳಗಿನ ಜನರಿಗೆ:—ಈಗ ಒಬ್ಬ ಮಹಾಜ್ಞಾನಿಯಾದ ಮಹಾ ತ್ಮನು ಬರುತ್ತಾನೆ ಆತನ ದರ್ಶನವನ್ನು ತಕ್ಕೊಳ್ಳೋಣ, ಎಂದು ಹೇಳಿ, ಬ್ರಾಹ್ಮಣರೊಡನೆ ಭಕ್ತನನ್ನು ಕಾಣುವದಕ್ಕಾಗಿ ಬಾಗಲಿಗೆ ಬಂದರು. ರಾಜಾ ರಾಮ ಮಹಾರಾಜರು ದೀಕ್ಷಿತರನ್ನು ನೋಡಿದ ಕೂಡಲೆ ಹೆಜ್ಜೆ-ನಮಸ್ಕಾರಗಳ ನ್ನಿಕ್ಕುತ್ತ ಮಹಾಸ್ವಾಮಿಯ ಬಳಿಗೆ ಬಂದರು. ಆಗ ದೀಕ್ಷಿತರು ಭಕ್ತನನ್ನು ಪ್ರೇಮಪೂರ್ವಕವಾಗಿ ಆಲಿಂಗಿಸಿ, ತಲೆಯನ್ನು ಅವಘ್ರಾಣಿಸಿ ಸುಮ್ಮನೆ ನಿಂತು ಕೊಂಡರು. ರಾಜಾರಾಮ ಮಹಾರಾಜರ ಕಣ್ಣುಗಳಿಂದ ಆನಂದಾಶ್ರುಗಳು ಉದುರಹತ್ತಿದವು. ಕಂಠವು ಗದ್ಗದಿತವಾಯಿತು. ಮೈಮೇಲೆಲ್ಲ ರೋಮಾಂಚಗ ಳೆದ್ದು ಕ್ಷಣಹೊತ್ತು ಸ್ಮೃತಿಯಿಲ್ಲದಂತಾಯಿತು. ಗುರು-ಶಿಷ್ಯರ ಈ ಆನಂದ ವನ್ನು ನೋಡಿ, ಈ ಮಹಾಪುರುಷನು ಯಾರಿರಬಹುದು? ದೀಕ್ಷಿತರು ಈತನ ಮೇಲೆ ಇಷ್ಟು ಪ್ರೇಮವನ್ನು ಏಕೆ ಮಾಡುತ್ತಿರಬಹುದು? ಎಂದು ಬ್ರಾಹ್ಮಣರು ಮನಸ್ಸಿನಲ್ಲಿ ಬಗೆ-ಬಗೆಯ ಎಣಿಕೆಯನ್ನು ಹಾಕಹತ್ತಿದರು. ದೀಕ್ಷಿತರು ರಾಜಾ ರಾಮ ಮಹಾರಾಜರ ಕೈಯನ್ನು ಹಿಡಿದು, ವರವನ್ನು ಬೇಡಿಕೊ! ಎನಲು,

ರಾಜಾರಾಮ ಮಹಾರಾಜರು:—'ಏಕಾಂತದಲ್ಲಿ ಕೇಳಿಕೊಳ್ಳುವೆನು' ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದರು.

ಮುಂದೆ ಒಂದು ದಿವಸ ಶ್ರೀ ಚಿದಂಬರ ದೀಕ್ಷಿತರು ಏಕಾಂತದಲ್ಲಿ ಕುಳಿತುಕೊಂಡು, ಭಕ್ತಶಿಖಾಮಣಿ ರಾಜಾರಾಮ ಮಹಾರಾಜರನ್ನು ಕರೆಯಿಸಿಕೊಂಡರು; ಹಾಗೂ ಹತ್ತರದಲ್ಲಿ ಕುಳ್ಳಿರಿಸಿಕೊಂಡು:—ಭಾಗ್ಯಶಾಲಿಯಾದ ರಾಜಾರಾಮನೇ, ನೀನು ಮನಸ್ಸಿನೊಳಗಿನ ಸಂಶಯಗಳನ್ನೆಲ್ಲ ಬಿಟ್ಟು, ನಿನ್ನ ಬಯಕೆಯನ್ನು ಮನಸ್ಸು ಬಿಚ್ಚಿ ಬೈಲಿಗಿಡು ನಿನ್ನ ಬಯಕೆಯು ಎಂಥ ದುರ್ಘಟವಿದ್ದರೂ ಅದನ್ನು ಪೂರ್ಣಮಾಡುವೆನು! ಎಂದು ನುಡಿಯಲು, ರಾಜಾರಾಮ ಮಹಾರಾಜರು ಗುರುಚರಣದಲ್ಲಿ ಮಸ್ತಕವನ್ನಿಟ್ಟು:-"ಗುರುರಾಯಾ, ಪ್ರತ್ಯಕ್ಷ ನೀನೇ ಪ್ರಸನ್ನನಾಗಿರಲು, ಮತ್ತೇನು ಬೇಡಲಿ? ನನಗೆ ಯಾವ ಇಚ್ಛೆಯೂ ಇಲ್ಲ. ಕೊಡುವದಿದ್ದರೆ ನಿನ್ನ ಭಕ್ತಿಯೊಂದನ್ನಷ್ಟು ಕೊಟ್ಟುಬಿಡು," ಎಂದು ಬೇಡಿಕೊಂಡರು. ಆಗದೀಕ್ಷಿತರು—ನಿನಗೆ ಈ ಮೊದಲೇ ದೃಷ್ಟಾಂತಕೊಟ್ಟಂತೆ ಸಗುಣರೂಪದರ್ಶನವನ್ನು ಕೊಡುವೆನು. ಅಂದರೆ ನಿನ್ನ ಸಂಶಯವು ಬಯಲಾಗುವದು ಎಂದು ನುಡಿಯುತ್ತಿರಲು, ಅವರ ರೂಪವು ಬದಲಾಗಿ ಸಾಕ್ಷಾತ್ ಶ್ರೀ ಹರಿಯ ರೂಪವು ಪ್ರಕಟವಾಯಿತು. ಚತುರ್ಭುಜಗಳೂ, ಅವುಗಳಲ್ಲಿ ಶಂಖ-ಚಕ್ರ-ಗದಾ-ಪದ್ಮಗಳೂ ಒಪ್ಪುತ್ತಿದ್ದವು. ಕೌಸ್ತುಭಮಣಿಯಿಂದ ಶೋಭಿಸುವ ವನ-ಮಾಲೆಯು ಕಂಠ-ಊರುಪ್ರದೇಶಗಳನ್ನು ಪ್ರಕಾಶಗೊಳಿಸಿತ್ತು. ಶ್ಯಾಮ ಸುಂದರಶರೀರವೂ, ಕಿರೀಟ-ಕರ್ಣ-ಕುಂಡಲಗಳೂ ನೋಡುವವರ ಚಿತ್ತವನ್ನು ಆಕರ್ಷಿಸುತ್ತಿದ್ದವು. ಯೋಗಿಗಳಿಗೂ ಕೂಡ ಅಗಮ್ಯವಾದ ಇಂತಹ ಮನೋಹರವೂ, ದಿವ್ಯವೂ ಆದ ಸುಕುಮಾರ ರೂಪವನ್ನು ನೋಡಿ, ರಾಜಾರಾಮಮಹಾರಾಜರು ಪರಮಾಶ್ಚರ್ಯಪಟ್ಟು, ಆನಂದಾಶ್ರುಗಳನ್ನುದುರಿಸುತ್ತ, ಪ್ರಭುವಿನ ಚರಣಕ್ಕೆರಗಿ, ಕಣ್ಣುಗಳನ್ನು ಮುಚ್ಚಿ, ಬದ್ಧಾಂಜಲಿಯುಳ್ಳವರಾಗಿ ಸ್ತೋತ್ರವನ್ನಾರಂಭಿಸಿದರು.

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಮ್|
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಮ್||
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಮ್|
ವಂದೇವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಮ್ ||೧||

ಈ ಪ್ರಕಾರ ಸ್ತೋತ್ರವನ್ನು ಮಾಡಿ, ಮತ್ತೆ ಚರಣಕ್ಕೆರಗಿ ಏಳುವಷ್ಟ

ರಲ್ಲಿ ವಿಷ್ಣು-ರೂಪವು ಅದೃಶ್ಯವಾಗಿತ್ತು. ಶ್ರೀ ಚಿದಂಬರ ದೀಕ್ಷಿತರು ಭಕ್ತನನ್ನು ಕುರಿತು ಮಾತಾಡಹತ್ತಿದರು.

“ರಾಜಾರಾಮಾ, ನೀನು ಜನ್ಮಾಂತರದಲ್ಲಿ ಜ್ಞಾನಿಯಾಗಿದ್ದರೂ, ಅನ್ಯ ದೇಹವು ಪ್ರಾಪ್ತವಾದ ಕೂಡಲೆ, ಅಂತರಂಗದಲ್ಲಿ ಸಹಜವಾಗಿ ಪ್ರಮಾದವುಂಟಾಗಿ, ಪೂರ್ವಜನ್ಮದ ಸ್ಮರಣವು ಇಲ್ಲದಾತಾಗುವದು. ಈಗ ಪೂರ್ವಸ್ಮೃತಿಯಾಗುವದಕ್ಕಾಗಿ ಜ್ಞಾನದ ನಾಲ್ಕು ಮಾತುಗಳನ್ನು ಹೇಳುತ್ತೇನೆ. ಕೇಳಿಕೊಳ್ಳು. ಸಾಧಕನಾಗಲಿಚ್ಛಿಸುವವನು ಮೊದಲು ಚಿತ್ತಶುದ್ಧಿಗಾಗಿ ವರ್ಣಾಶ್ರಮ ಧರ್ಮಾನುಸಾರವಾಗಿ ಕರ್ಮವನ್ನಾಚರಿಸಬೇಕಾಗುವದು. ಕರ್ಮವನ್ನು ಬಿಟ್ಟು ನಡೆಯುವಂತಿಲ್ಲ. ಆಮೇಲೆ ಮನೋ-ವಾಕ್ಕಾಯಗಳಿಂದ ಸಗುಣಮೂರ್ತಿಯನ್ನು ಭಕ್ತಿಭಾವದಿಂದ ಆರಾಧಿಸಬೇಕು. ದೇವತಾರೂಪಗಳಲ್ಲಿ ಭೇದವನ್ನೆಣಿಸಲಾಗದು! ಫಲಾಶೆಯನ್ನು ಹಿಡಿಯದೆ ಕೃಷ್ಣಾರ್ಪಣ ಬುದ್ಧಿಯಿಂದ ಕರ್ಮಗಳನ್ನು ಮಾಡುತ್ತಿರಬೇಕು. ಎಲ್ಲೆಡೆಗಳಲ್ಲಿ ಪರಮಾತ್ಮನೇ ಇರುವನೆಂಬ ಭಾವನೆಯನ್ನು ದೃಢಪಡಿಸಬೇಕು. ಇಂಥ ಭಕ್ತಿಮಾರ್ಗದಿಂದ ಭಗವಂತನ ಆರಾಧನೆಯನ್ನು ಮಾಡಿದರೆ ಜ್ಞಾನಾಧಿಕಾರವು ಕೈಸೇರುವದು. ಬಳಿಕ ಜ್ಞಾನಾಂಗಗಳ ಅಭ್ಯಾಸವನ್ನು ಮಾಡಬೇಕು. ಈ ಅಂಗಗಳು ಒಂಭತ್ತು ಇರುವವು. (೧) ವಿಷಯದಲ್ಲಿ ವೈರಾಗ್ಯ (೨) ಪ್ರಾಣಗಳನ್ನು ಜಯಿಸೋಣ (೩) ಇಂದ್ರಿಯಗಳನ್ನು ತಡೆಯೋಣ (೪) ದ್ವಂದ್ವ ಅಂದರೆ ಸುಖ-ದುಃಖದಂಥ ವಿರುದ್ಧ ಧರ್ಮಗಳುಳ್ಳ ಪ್ರಸಂಗಗಳನ್ನು ತಾಳಿಕೊಳ್ಳೋಣ (೫) ಗುರುವಚನದಲ್ಲಿ ನಂಬಿಗೆಯನ್ನಿಡೋಣ (೬) ದೃಢತರವಾದ ಅಭ್ಯಾಸ (೭) ಅಹಂಕಾರದತ್ಯಾಗ (೮) ಸಾಧುಸಮಾಗಮವನ್ನು ಮಾಡೋಣ (೯) ವಾಸನಾಕ್ಷಯ.

ಈ ಒಂಬತ್ತು ಅಂಗಗಳು ಸಾಧ್ಯವಾದವೆಂದರೆ, ಒಮ್ಮೆಸಿನಿಂದ ಗುರುಚರಣಾರವಿಂದಗಳನ್ನು ಆಶ್ರಯಿಸಬೇಕು; ಅಂದರೆ ಜ್ಞಾನಪ್ರಾಪ್ತವಾಗುವದು. ಹೀಗೆ ಶ್ರೀ ಚಿದಂಬರ ದೀಕ್ಷಿತರು, ರಾಜಾರಾಮ ಮಹಾರಾಜರಿಗೆ ಬೋಧಮಾಡಿ, ಅವರ ತಲೆಯ ಮೇಲೆ ವರದಹಸ್ತವನ್ನಿಟ್ಟು, ಬಾಯಿಯಲ್ಲಿ ವಿಭೂತಿಯನ್ನು ಹಾಕಿದರು. ಆಗ ಅವರಿಗೆ ಸತ್ಯ-ಜ್ಞಾನವಾಯಿತು. ಅಂದಿನಿಂದ ಅವರು ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯನ್ನು ಹೊಗಳುವಂಥ ಅಭಂಗಗಳನ್ನು ರಚಿಸತೊಡಗಿದರು. ಒಟ್ಟಿಗೆ ಅವರು ಒಂದುಲಕ್ಷ ಐವತ್ತೊಂದುಸಾವಿರದ ನಾನೂರು ಅಭಂಗಗಳನ್ನು ರಚಿಸಿ, ಗುರುಗಳಿಗರ್ಪಣ ಮಾಡಿದರು. ಈ ಅಭಂಗಗಳು

ಜ್ಞಾನಪರ, ಕರುಣಾಪರ, ಭಕ್ತಿಪರ ಮತ್ತು ಕಥಾಪರ ಹೀಗೆ ನಾಲ್ಕು ವಿಧವಾಗಿರುವವು. ರಾಜಾರಾಮ ಮಹಾರಾಜರು ಶ್ರೀ ಗುರುನಾಥನಾದ ಚಿದಂಬರನ ಉತ್ಸವ-ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೂಡಿಸಿ, ವೀಣಾ ಮದ್ದಲಿಗಳನ್ನೂ, ತಾಳಗಳನ್ನೂ ಬಾರಿಸುತ್ತ, ಅಭಂಗಗಳನ್ನು ಅನ್ನುತ್ತ, ಮೆರೆಸುತ್ತ, ದೇಶ-ಸಂಚಾರ ಮಾಡಹತ್ತಿದರು. ಅವರು ಈ ಕಾರ್ಯವನ್ನು ಗುರುಗಳ ಕಿವಿಯ ಮೇಲಿಟ್ಟೇ ಆರಂಭ ಮಾಡಿದ್ದರು. ಅವರು ಮೊದಲು ಗುರುಸನ್ನಿಧಿಯಿಂದ ಅಪ್ಪಣೆಯನ್ನು ಹೊಂದಿ, ಗುರುಗಳ ಜೋಡುಗಳನ್ನು ಎದೆಗೆ ಕಟ್ಟಿಕೊಂಡು, ತೀರ್ಥಯಾತ್ರೆ ಮಾಡಿದರಂತೆ! ಶ್ರೀ ಚಿದಂಬರ ದೀಕ್ಷಿತರೊಡನೆ ರಾಜಾರಾಮ ಮಹಾರಾಜರ ಕೀರ್ತಿಯಾದರೂ ಬೆಳೆಯಿತು. ಅವರು ಬಾಬುಳಗಾವದಲ್ಲಿ ಶ್ರೀ ಚಿದಂಬರ ದೀಕ್ಷಿತ * ಹಾಗೂ ಅವರ ಪತ್ನಿಯವರ ಕಲ್ಲಿನ ಮೂರ್ತಿಗಳನ್ನು ಸ್ಥಾಪಿಸಿರುವರು. ತುಕಾರಾಮ ಮಹಾರಾಜರೇ ರಾಜಾರಾಮ ಮಹಾರಾಜರ ರೂಪದಿಂದ ಅವತರಿಸಿದ್ದರೆಂದು ಭಾವಿಕರು ಅನ್ನುತ್ತಿರುವರು. ರಾಜಾರಾಮ ಮಹಾರಾಜರ ಯೋಗ್ಯತೆಯು ಬಲುದೊಡ್ಡದಿತ್ತು! ಅವರ ದೇಹಾವಸಾನವು ಆದ ವೇಳೆಯಲ್ಲಿ, ಶವವನ್ನು ಸಿದಿಗೆಯ ಮೇಲೆ ಹಾಕಿದ ಬಳಿಕ, ಸಿದಿಗೆಯನ್ನು ಹೊರಲಿಕ್ಕೆ ಅವರ ಜಾತಿಯ ಜನರು ದೊರೆಯದ್ದರಿಂದ ಅನ್ಯಜಾತಿಯವರನ್ನು ಕರೆದರಂತೆ! ಆದರೆ ಅವರು ಬರುವಷ್ಟರಲ್ಲಿ ಮಹಾರಾಜರ ಶವವು ಸುಟ್ಟು ಬೂದಿಯಾಗಿತ್ತಂತೆ! ಆಗ ಮಹಾರಾಜರ ಶವಕ್ಕೆ ದಕ್ಷಿಣಾಂಗುಷ್ಠದಿಂದ ಬೆಂಕಿಹತ್ತಿದ್ದನ್ನು ಬಹು ಜನರು ನೋಡಿದರಂತೆ!

---

## ೧೬ನೆಯ ಪ್ರಕರಣ.

## ದಾನಶೂರನಾದ ಮಲ್ಲಪ್ಪನು.

ಕ್ಷಯನಾಮ ಸಂವತ್ಸರದಲ್ಲಿ ಬರಗಾಲವು ತನ್ನ ಉಗ್ರಸ್ವರೂಪವನ್ನು ವ್ಯಕ್ತಮಾಡಿತು. ಏನು ಮಾಡಿದರೂ ಜನರ ಹೊಟ್ಟೆಯು ತುಂಬದಾಯಿತು. ಎಲ್ಲರೂ ಬರದ ಕಾಟವನ್ನು ತಾಳಲಾರದೆ, ತಳಮಳಿಸಹತ್ತಿದರು. ಕೂಳಿಗಾಗಿ ಕಂಡ ಕಂಡ ಕಡೆಗೆ ಸಂಚರಿಸಹತ್ತಿದರು. ಹಾದಿ ಹಾದಿಗಳಲ್ಲಿಯೇ ಹೆಣಗಳು ಬೀಳಹತ್ತಿದವು! ಹೊಟ್ಟೆಯು ಬೆನ್ನಿಗೆ ಹತ್ತಿ, ಜನರ ಶರೀರಗಳು ಬರೇ ಎಲುಬಿನ

* ಈ ಚರಿತ್ರದ ಆದಿಯಲ್ಲಿ ಕೊಟ್ಟ ಭಾವಚಿತ್ರವು ಈ ಮೂರ್ತಿಗಳದೇ ಇರುತ್ತದೆ.

ಹಂದರದಂತೆ ಕಾಣಹತ್ತಿದವು. ಈ ಕಾಲಕ್ಕೆ ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯು ನಾಲ್ಕೂಕಡೆಯಲ್ಲಿ ಹರಡಿಕೊಂಡದ್ದರಿಂದ ಜನರು ಗುಂಪು ಗುಂಪಾಗಿ ದೀಕ್ಷಿತರ ಬಳಿಗೆ ಬರಹತ್ತಿದರು. ದೀಕ್ಷಿತರು ಬಂದವರಿಗೆಲ್ಲ ನುಚ್ಚು ಭಕ್ಕರಿಗಳನ್ನು ಕೊಟ್ಟು, ಸಂತೃಪ್ತಿಸಹತ್ತಿದರು

ಶ್ರೀ ಚಿದಂಬರ ದೀಕ್ಷಿತರು ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ರಾಜಾರಾಮ ಮಹಾರಾಜರ ಮೇಲೆ ಅನುಗ್ರಹವನ್ನು ಮಾಡಿದ ಬಳಿಕ ಮೇಲೆ ಹೇಳಿದಂತೆ ದುಷ್ಕಾಳ ಪೀಡಿತ ಜನರಿಗೆ ಆಶ್ರಯವನ್ನಿತ್ತರು ಹಾಗು ಅವರೊಡನೆ ತಮ್ಮ ಕುಲಸ್ವಾಮಿಯ ದರ್ಶನಕ್ಕಾಗಿ ಹಿಪ್ಪರಿಗಿಗೆ ಹೋಗಬೇಕೆಂದು, ಕುಂದಗೋಳದಿಂದ ಹೊರಟು ಬೆಟಸೂರಿಗೆ ಬಂದರು. ಅಲ್ಲಿಯ ನಿವಾಸಿಗಳು ಅವರು ಬಂದ ಸುದ್ದಿಯನ್ನು ಕೇಳಿ, ಆನಂದಬಟ್ಟು ಫಲಗಳನ್ನು ಅವರ ಮುಂದಿಟ್ಟು, ಭಕ್ತಿಯಿಂದ ಸಾಷ್ಟಾಂಗವೆರಗಿದರು. ಆಗ ದೀಕ್ಷಿತರು ಎಲ್ಲರ ಕುಶಲವಾರ್ತೆಯನ್ನು ಕೇಳಿದರು. ಅಮೇಲೆ ಪರಮ ಭಕ್ತನೂ, ದೊಡ್ಡ ಗೃಹಸ್ಥನೂ ಆದ ಮಲ್ಲಪ್ಪನ ಕ್ಷೇಮವಾರ್ತೆಯನ್ನು ಕೇಳಿ:—ನಿನ್ನ ಧರ್ಮಾಶ್ರಿತನಾದ ನನ್ನನ್ನು ನೀನು ನೆನಿಸುತ್ತೀಯಾ? ನಾನಂತೂ ಚಾತಕವು ಚಂದ್ರನನ್ನು ನೆನಿಸುವಂತೆ ದಿನಾಲು ನಿನ್ನನ್ನು ಪ್ರೀತಿಪೂರ್ವಕವಾಗಿ ನೆನಿಸುತ್ತಿರುತ್ತೇನೆ. ಈ ದಿನ ನಿನ್ನ ದರ್ಶನಕ್ಕಾಗಿ ಬಂದಿರುವೆನು, ಎಂದು ನುಡಿಯಲು, ಮಲ್ಲಪ್ಪನು:—ಎಲೈ ಸರ್ವಾಶ್ರಯನೇ, ಜಗನ್ನಾಥನೇ, ಇಂಥ ಮಾತುಗಳಿಂದ ನನ್ನನ್ನು ಏಕೆ ಮರುಳು ಮಾಡುವಿ? ನಾನು ನಿನಗೆ ಶರಣು ಬಂದಿದ್ದೇನೆ. ನಾನು ನಿನ್ನ ದಾಸನಿರುವೆನು. ಬೆಟಸೂರ ಗ್ರಾಮವೂ, ನನ್ನ ಮನೆಯೂ ತಮ್ಮ ವಾಸಸ್ಥಾನವೇ ಆಗಿರುವವು. ಆದುದರಿಂದ ನೀವು ನಮ್ಮ ಮನೆಗೆ ದಯಮಾಡಿಸಬೇಕು, ಎಂದು ಪ್ರಾರ್ಥಿಸಿದನು. ಆಗ ದೀಕ್ಷಿತರು ಮಲ್ಲಪ್ಪನ ಮಾತನ್ನು ಮನ್ನಿಸಿ, ಯಾತ್ರಾಜನರೊಂದಿಗೆ ಮಲ್ಲಪ್ಪನ ಮನೆಗೆ ಹೋದರು. ಮಲ್ಲಪ್ಪನಾದರೂ ಎಲ್ಲರ ಆದರಾತಿಥ್ಯವನ್ನು ಚನ್ನಾಗಿ ಮಾಡಿದನು. ಅತನು ಮೊದಲು ದೀಕ್ಷಿತರನ್ನು ಪೂಜಿಸಿ ಎಲ್ಲರಿಗೂ ಸುಗ್ರಾಸಭೋಜನವನ್ನಿತ್ತು ಸಂತೋಷಗೊಳಿಸಿದನು.

ಇಳಿಯ ಹೊತ್ತಿನ ಮುಂದೆ ದೀಕ್ಷಿತರು ಮಲ್ಲಪ್ಪನೊಡನೆ ಮಾತಾಡುತ್ತ ಕುಳಿತುಕೊಂಡಿದ್ದರು. ಅಷ್ಟರಲ್ಲಿ ದುಷ್ಕಾಳ-ಪೀಡಿತರಾದ ಇಬ್ಬರು ಬ್ರಾಹ್ಮಣರು ದೀಕ್ಷಿತರ ಬಳಿಗೆ ಬಂದರು. ಅವರ ಹೊಟ್ಟೆಯು ಬೆನ್ನಿಗೆ ಹತ್ತಿತ್ತು, ಕಣ್ಣುಗಳು ಒಳಸೇರಿದ್ದವು, ಪ್ರಾಣವು ಕಣ್ಣೊಳಗೆ ಮಾತ್ರ ಉಳಿದಿತ್ತು. ಅವರ

ಶರೀರಗಳು ಅಸ್ಥಿಯ ಪಂಜರಗಳಂತಾಗಿದ್ದವು ಅವರು ದೀಕ್ಷಿತರನ್ನು ನೋಡಿ ನಮಸ್ಕಾರ ಮಾಡಿ:—ಎಲೈ ಚಿದಂಬರನೇ, ತ್ರಿಪುರಾರಿಯೇ, ತ್ರಿಭುವನ ಪಾಲಕನೇ, ತ್ರಿಶೂಲಧಾರಿಯೇ, ತ್ರಿಗುಣಾತೀತನೇ ಸುದೈವದಿಂದ ನಮಗೆ ತಮ್ಮ ದರ್ಶನವಾಯಿತು! ನಾವಿಬ್ಬರು ಬಡಬ್ರಾಹ್ಮಣರು, ನಮ್ಮ ಮನೆಯಲ್ಲಿ ಕುಟುಂಬವು ಬಹಳವಿರುವದು. ಬರಗಾಲದ ಮೂಲಕ ಅವರ ಉದರ ಪೋಷಣವು ಕಠಿಣವಾಗಿದೆ; ಅರೆಹೊಟ್ಟೆ ಅನ್ನ ದೊರೆಯುವದಾದರೂ ದುರ್ಲಭವಾಗಿದೆ. ಈ ಸ್ಥಿತಿಯನ್ನು ತಾಳಲಾರದೆ ನಾವೆಲ್ಲರು ಪ್ರಾಣವನ್ನು ಬಿಡಬೇಕೆಂದು ನಿಶ್ಚಯಿಸಿದೆವು, ಅಷ್ಟರಲ್ಲಿ ನಿಮ್ಮ ಅನ್ನದಾನದ ಕೀರ್ತಿಯು ನಮ್ಮ ಕಿವಿಗೆ ಬೀಳಲು, ನಾವು ಧಾವಿಸಿ, ನಿಮ್ಮ ಬಳಿಗೆ ಬಂದಿರುವೆವು. ಮನೆಯಲ್ಲಿ ಹೆಂಡಿರು-ಮಕ್ಕಳು ಕೂಳಿಲ್ಲದೆ ಬಳಲುತ್ತಿರುವರು. ನಮ್ಮೆಲ್ಲರ ರಕ್ಷಣ ಮಾಡಲು, ನೀನೇ ಸಮರ್ಥನು! ದೀನದಯಾಳುವೇ, ಹೊಟ್ಟೆತುಂಬ ಆಹಾರವನ್ನಿತ್ತು ನಮ್ಮನ್ನೂ, ನಮ್ಮ ಕುಟುಂಬಗಳನ್ನೂ ಕಾಪಾಡಬೇಕು, ಎಂದು ತಮ್ಮ ದೈನ್ಯವನ್ನು ತೋಡಿಕೊಂಡರು; ಹಾಗು ಕಣ್ಣುತುಂಬ ನೀರುತಂದು ದೀಕ್ಷಿತರ ಮುಂಭಾಗದಲ್ಲಿ ಹೊರಳಾಡಹತ್ತಿದರು. ಆಗ ಮಕ್ಕಳ ಕಷ್ಟವನ್ನು ನೋಡಿ, ತಾಯಿಯ ಹೊಟ್ಟೆಯಲ್ಲಿ ಕಸವಿಸಿಯಾಗುವಂತೆ, ದೀಕ್ಷಿತರ ಅಂತರಂಗವು ಆ ವಿಪ್ರರ ಸ್ಥಿತಿಯನ್ನು ನೋಡಿ, ಕಳವಳಗೊಂಡಿತು. ಅವರು ದಯಾರ್ದ್ರರಾಗಿ ಬ್ರಾಹ್ಮಣರನ್ನು ಎಬ್ಬಿಸಿ:—ಬ್ರಾಹ್ಮಣರೇ, ಏನೂ ಚಿಂತೆಮಾಡಬೇಡಿರಿ ನಿಮ್ಮ ಹಿಂದಿನ ಕಷ್ಟಗಳು ಇನ್ನು ಮುಂದೆ ಬಯಲಾದವೆಂದು ತಿಳಿಯಿರಿ. ಧೈರ್ಯವನ್ನು ತಾಳಿರಿ. ನಿಮ್ಮ ಬಯಕೆಗಳನ್ನು ಪೂರ್ಣಮಾಡಲು, ಶ್ರೀ ಸಾಂಬನು ಸಮರ್ಥನಿರುವನು! ಆದುದರಿಂದ ಚಿಂತೆಯನ್ನು ತೊರೆದು, ಮೊದಲು ಭೋಜನವನ್ನು ತೀರಿಸಿರಿ, ಎಂದು ಅಭಯವನ್ನು ಕೊಡಲು, ಬ್ರಾಹ್ಮಣರು ಊಟಕ್ಕೆ ಹೋದರು. ಇತ್ತ ದೀಕ್ಷಿತರು ಮಲ್ಲಪ್ಪನನ್ನು ಕುರಿತು:—"ದುರ್ಭಿಕ್ಷದಲ್ಲಿ ಅನ್ನದಾನ ಮಾಡುವವನೂ, ಸುಭಿಕ್ಷದಲ್ಲಿ ದ್ರವ್ಯದಾನ ಮಾಡುವವನೂ, ಅಂಜಿದವರಿಗೆ ಅಭಯವನ್ನು ನೀಡುವವನೂ ಶಂಕರನಿಗೆ ಪ್ರಿಯನಾಗುತ್ತಾನೆ; ಆದುದರಿಂದ ಈಗ ಹೊಸದಾಗಿ ಬಂದ ಬ್ರಾಹ್ಮಣರಿಗೆ, ಅವರ ಕುಟುಂಬ ಪೋಷಣೆಗೆ ವರ್ಷದ ವರೆಗೆ ಬೇಕಾಗುವಷ್ಟು ಧಾನ್ಯವನ್ನು ಕೊಟ್ಟು, ಶ್ರೀ ಶಂಕರನ ಪ್ರೀತಿಗೆ ಪಾತ್ರನಾಗು ನೀನು ಬರಗಾಲದಲ್ಲಿ ಅಲ್ಪ ದಾನವನ್ನು ಮಾಡಿದರೂ, ಈಶ್ವರನು ನಿನಗೆ ಅಮಿತ ಧಾನ್ಯವನ್ನು ಕೊಡುವನು. ಇದರಲ್ಲಿ ಸ್ವಲ್ಪಾದರೂ ಸಂಶಯವಿಲ್ಲ! ಎಂದು ದೀಕ್ಷಿತರು ನುಡಿಯಲು:—

ಮಲ್ಲಪ್ಪ:—ಗುರುಗಳೇ, ಈಗಿನ ಕ್ಷಾಮಕಾಲವು ಬಹು ಕಠಿಣವಾಗಿರುವದು. ನನ್ನ ಮನೆಯಲ್ಲಾದರೂ ಕುಟುಂಬವು ವಿಶೇಷವಾಗಿರುವದು. ದಿನಾಲು ಅತಿಥಿ-ಅಭ್ಯಾಗತರಂತೂ ಬಂದೇ ಬರುತ್ತಾರೆ ಆದುದರಿಂದ ಈ ವರ್ಷದಲ್ಲಿ ಹೇಗೆ ಪಾರಾದೇನೆಂದು ಯೋಚಿಸುತ್ತಿರುವೆನು. ಆದರೂ ತಮ್ಮ ಅಪ್ಪಣೆಯಂತೆ ನಡೆದುಕೊಳ್ಳುವೆನು.

ದೀಕ್ಷಿತರು:—ಎಲಾ ಮಲ್ಲಪ್ಪಾ, ನಿನ್ನ ಹತ್ತರ ನಿಜವಾಗಿ ಎಷ್ಟು ಧಾನ್ಯ ಇರುವದು ಹೇಳು? ಅಂದರೆ ನಿನ್ನ ಕಲ್ಯಾಣದ ಮಾರ್ಗವನ್ನು ಸೂಚಿಸುವೆನು.

ಮಲ್ಲಪ್ಪ:—ಮನೆಯ ಅಂಗಳದಲ್ಲಿ ಇಪ್ಪತ್ತೈದು ಹೇರಿನ ಒಂಭತ್ತು ಹಗೆಗಳು ಉತ್ತಮ ಜೋಳದಿಂದ ತುಂಬಿರುವವು.

ದೀಕ್ಷಿ:—ಏನು ಮಲ್ಲಪ್ಪಾ, ಇಷ್ಟು ಧಾನ್ಯವನ್ನು ಮನೆಯಲ್ಲಿಟ್ಟುಕೊಂಡು ವ್ಯರ್ಥವಾಗಿ ಏಕೆ ಜೀನತನವನ್ನು ಮಾಡುವಿ? ಪಾಪ-ಪುಣ್ಯಗಳ ವಿಚಾರವು ನಿನಗಿಲ್ಲವೇ? ಹೆಂಡಿರು-ಮಕ್ಕಳು, ಆಪ್ತೇಷ್ಟರು, ಬಂಧು-ಬಳಗದವರು ಯಾರವರು? ನೀನು ಅವರಿಗಾಗಿ ಇಷ್ಟು ಚಡಪಡಿಸುವದೇಕೆ? ಚನ್ನಾಗಿ ತಿಳಿದು ನೋಡು. ನೀನು ಮಾಡುವ ಪ್ರಯಾಸವು ನನಗಂತೂ ವ್ಯರ್ಥವಾಗಿ ತೋರುತ್ತದೆ. ಈ ಮಾಯಾಮಯ ಸಂಸಾರದಲ್ಲಿ ವಿಶ್ವಾಸಕ್ಕೆ ಪಾತ್ರವಾದ ವಸ್ತುವು ಒಂದೂ ಇಲ್ಲ. ಯಾವತ್ತು ಭೋಗಗಳು ನಶ್ವರವಾಗಿರುವವು. ನಮ್ಮ ಆಯುಷ್ಯವಂತೂ ಕಾದ ಕಬ್ಬಿಣದ ಮೇಲೆ ಬಿದ್ದ ನೀರಿನಂತಿರುವದು. ಹಾವಿನ ಬಾಯಿಯಲ್ಲಿ ಸಿಕ್ಕ ಕಪ್ಪೆಯು ನೊಣವನ್ನು ಹಿಡಿಯಹೋದಂತೆ, ಸಂಸಾರವೆಂಬ ಸರ್ಪದ ಬಾಯಿಯಲ್ಲಿ ಸಿಕ್ಕ ನಾವು ಸುಖೋಪಭೋಗಗಳನ್ನು ಇಚ್ಛಿಸುತ್ತಿರುವೆವು. ಅದು ಇನ್ನೊಂದು ಕ್ಷಣದಲ್ಲಿ ನಮ್ಮನ್ನು ನುಂಗಿಬಿಡುತ್ತದೆಂಬದರ ಅರಿವೇ ನಮಗಿಲ್ಲ. ನಾವು ಸುಖಕ್ಕಾಗಿ ಮಾಡುವ ಯತ್ನಗಳಿಂದ ನಮಗೆ ಸುಖವು ದೊರೆಯದೆ ಆ ಯತ್ನಗಳೆಲ್ಲ ದುಃಖಕ್ಕೆ ಕಾರಣಗಳಾಗುತ್ತವೆ. ಈ ಮಾತು ವಿಚಾರಿಯಾದ ಪ್ರತಿಯೊಬ್ಬನಿಗೆ ತಿಳಿಯುವಂತಿದೆ. ರಾತ್ರಿಯಲ್ಲಿ ಪಕ್ಷಿಸಮೂಹವು ಒಕ್ಕಟ್ಟಿಗೆ ಕಲೆತು, ಪ್ರಾತಃಕಾಲದಲ್ಲಿ ಒಂದನ್ನೊಂದು ಅಗಲಿ ಹೋಗುವಂತೆ, ಈ ಸಂಸಾರದೊಳಗಿನ ಹೆಂಡಿರು-ಮಕ್ಕಳ ಸಂಬಂಧವಿರುವದು. ಸಂಪತ್ತಿಯು ಮಿಂಚಿನಂತೆ ಚಂಚಲವಾಗಿರುವದು. ತಾರುಣ್ಯವು ತೆರೆಗಳಂತಿರುವದು ಶರೀರವು ರೋಗದ ತೌರುಮನೆಯಾಗಿರುವದು. ಅಂದಮೇಲೆ ಸುಖವೆಲ್ಲಿಯದು? ಮಲ್ಲಪ್ಪಾ, ನೀನು ಯಾವ ದೇಹದ ಸಲುವಾಗಿ ಸುಖವನ್ನು ಸಂಪಾ

ದಿಸಲು ಹಗೆಲಿರುಳೂ ಹೆಣಗುವಿಯೋ, ಆ ದೇಹವು ಅರಕ್ಷಣದಲ್ಲಿ ಮಣ್ಣುಗೂಡಿ ಹೋಗುವದು ಇವೆಲ್ಲ ಸಂಗತಿಗಳನ್ನು ವಿಚಾರಿಸಿ, ಅಜ್ಞಾನವನ್ನು ಹೊರದೂಡಿ, ಜ್ಞಾನವಂತನಾಗು. ಧಾನ್ಯವನ್ನು ಕೊಟ್ಟು ಬ್ರಾಹ್ಮಣರನ್ನು ಸಂತೋಷಗೊಳಿಸು.

ಈ ಪ್ರಕಾರ ದೀಕ್ಷಿತರು ಬೋಧಿಸಲು, ಮಲ್ಲಪ್ಪನ ಅಜ್ಞಾನವೆಲ್ಲ ತೊಲಗಿ ಆತನು ಜ್ಞಾನವಂತನಾದನು. ಆತನು ಅದೇ ಕ್ಷಣದಲ್ಲಿ ಬ್ರಾಹ್ಮಣರನ್ನು ಕರೆದು, ಅಂಗಳದೊಳಗಿನ ಹಗೆಯ ಬಾಯಿಯನ್ನು ತೆಗೆಯಿಸಿ, 'ನಿಮ್ಮ ಕುಟುಂಬಗಳಿಗೆ ವರ್ಷದವರೆಗೆ ಸಾಲುವಷ್ಟು ಧಾನ್ಯವನ್ನು ತೆಗೆದುಕೊಂಡು ಹೋಗಿರಿ' ಎಂದು ಅಂದನು. ಆಗ ಬ್ರಾಹ್ಮಣರು ತಮ್ಮ ತಮ್ಮ ಕುಟುಂಬಕ್ಕೆ ಬೇಕಾಗುವಷ್ಟು ಧಾನ್ಯವನ್ನು ತಕ್ಕೊಂಡು ಗುರುಗಳನ್ನು ಅಭಿವಂದಿಸಿ, ಸ್ವಗ್ರಾಮಕ್ಕೆ ಹೊರಟು ಹೋದರು ಈ ಸುದ್ದಿಯು ಹಾ ಹಾ ಅನ್ನುವದರೊಳಗಾಗಿ ದೇಶದ ಮೇಲೆ ಹಬ್ಬಲು, ಜನರು ತಂಡತಂಡಾಗಿ ಮಲ್ಲಪ್ಪನ ಮನೆಗೆ ಬರಹತ್ತಿದರು. ಅವರು ದೀಕ್ಷಿತರನ್ನು ನಮಸ್ಕರಿಸಿ, ಮಲ್ಲಪ್ಪನಿಗೆ:—ಎಲೈ ದಾನಶೂರನಾದ ಮಲ್ಲಪ್ಪನೇ, ನಿನ್ನ ಕೀರ್ತಿಯನ್ನು ಕೇಳಿ ಇಲ್ಲಿಗೆ ಬಂದಿರುವೆವು. ನಮ್ಮ ಹೊಟ್ಟೆಗೆ ಕೊಟ್ಟು ನಮ್ಮನ್ನು ಕಾಪಾಡು, ಎಂದು ಹೇಳಿಕೊಳ್ಳುತ್ತಿದ್ದರು. ದೀಕ್ಷಿತರಾದರೂ:— 'ಮಲ್ಲಪ್ಪಾ, ಗಾಳಿಬಿಟ್ಟಾಗ ತೂರಿಕೊಳ್ಳುವದು ನೆಟ್ಟಗೆ! ಹಸಿವೆಯಿಂದ ಬಳಲುವವರಿಗೆ ಅನ್ನವನ್ನು ಕೊಟ್ಟು ಪುಣ್ಯವನ್ನು ಸಂಪಾದಿಸು, ಎಂದು ಮೇಲಿಂದ ಮೇಲೆ ಸೂಚಿಸುತ್ತಿದ್ದರು. ಆಗ ಮಲ್ಲಪ್ಪನು ಯಾವತ್ತು ಹಗೆಗಳೊಳಗಿನ ಧಾನ್ಯವನ್ನು ಹೊರಗೆ ತೆಗೆಯಿಸಿ, ಒಂದೆಡೆಯಲ್ಲಿ ರಾಶಿಯನ್ನು ಹಾಕಿಸಿ, 'ಶ್ರೀ ಚಿದಂಬರಾ, ನನ್ನ ಕುಟುಂಬರಕ್ಷಣದ ಹೊರೆಯು ನಿನ್ನ ಮೇಲಿರುವದು' ಎಂದು ಮನಸಾ ಚಿಂತಿಸಿ, ರಾಶಿಯ ಮೇಲೆ ತುಲಸೀಪತ್ರವನ್ನಿಟ್ಟು, ನಿಮಗೆ ಬೇಕಾಗುವಷ್ಟು ಧಾನ್ಯವನ್ನು ತೆಗೆದುಕೊಂಡು ಹೋಗಿರಿ, ಎಂದು ಯಾಚಕ ವೃಂದಕ್ಕೆ ಹೇಳಿದನು

ಆಗ ಕೆಲವರು ಹೆಗಲ ಮೇಲೂ, ಬೇರೆ ಕೆಲವರು ತಲೆಯ ಮೇಲೂ ಹೊತ್ತುಕೊಂಡು, ಬೇರೆ ಹಲವರು ಬಂಡಿ-ಕುದುರೆಗಳ ಮೇಲೆ ಹೇರಿಕೊಂಡು, ಧಾನ್ಯದ ರಾಶಿಯನ್ನು ನೋಡುನೋಡುವಷ್ಟರಲ್ಲಿ ಆಗಮಾಡಿ ಬಿಟ್ಟರು. ಆಗ ದೀಕ್ಷಿತರು ಮಲ್ಲಪ್ಪನ ಧೈರ್ಯವನ್ನು ಒರೆಗೆ ಹಚ್ಚುವದಕ್ಕಾಗಿ ಆತನನ್ನು ತಮ್ಮೆಡೆಗೆ ಕರೆಸಿಕೊಂಡು:—ಏನೋ ಮಲ್ಲಪ್ಪಾ, ನಾನು ಸುಮ್ಮನೆ ಮಾತಾಡಿದ್ದಕ್ಕಾಗಿ ಎಲ್ಲ ಧಾನ್ಯವನ್ನು ಕೊಟ್ಟುಬಿಟ್ಟೆಯಲ್ಲ! ಮುಂದೇನು ಗತಿ? ನಿನ್ನ ಕುಟುಂಬ

ಸಂರಕ್ಷಣದ ವಿಚಾರವೇನು? ಎಂದು ಬೇಕಂತ ಪ್ರಶ್ನೆಮಾಡಿದರು. ಅದಕ್ಕೆ ಮಲ್ಲಪ್ಪನು ಸ್ವಲ್ಪಾದರೂ ಹೆದರದೆ:—ವಿಶ್ವಪಾಲಕನಾದ ವಿಶ್ವೇಶ್ವರನು ಅನ್ನ ದಾತೃವಾಗಿರುತ್ತಿರಲು, ನಾನು ಚಿಂತಿಸುವ ಕಾರಣವೇನು? ಎಂದು ನುಡಿಯಲು ದೀಕ್ಷಿತರು ಆತನ ನಿಷ್ಠೆಗೆ ಮೆಚ್ಚಿ, ತಮ್ಮ ಸೆರಗಿನಲ್ಲಿ ಒಂಬತ್ತು ಮುಷ್ಟಿ ಜೋಳ ವನ್ನು ಕಟ್ಟಿಕೊಂಡು, ಮಲ್ಲಪ್ಪನೊಡನೆ ಆತನ ಹಗೆಗಳಿದ್ದಲ್ಲಿಗೆ ಬಂದು, ಪ್ರತಿ ಯೊಂದು ಹಗೆಯಲ್ಲಿ ಒಂದೊಂದು ಮುಷ್ಟಿ ಜೋಳವನ್ನು ಹಾಕಿ, ಅವುಗಳ ಬಾಯಿಗಳನ್ನು ಮುಚ್ಚಿಸಿ, ಮಲ್ಲಪ್ಪನನ್ನು ಕುರಿತು:-ಇಂದಿನಿಂದ ನಾಲ್ಕನೇ ದಿನ ಈ ಹಗೆಗಳ ಬಾಯಿಗಳನ್ನು ತೆಗೆಯಿಸಿ, ನಿನ್ನೆಡೆಗೆ ಬಂದ ಯಾಚಕರಿಗೆಲ್ಲ ಅನ್ನದಾನ ವನ್ನು ಮಾಡು; ನಿನ್ನ ಪೂರ್ವ-ಸುಕೃತದಿಂದ ಹಗೆಗಳು ತುಂಬಿ, ಧಾನ್ಯವು ಅಕ್ಷ ಯ್ಯವಾಗುವದು. ನೀನು ದಿನಾಲು ತೀವ್ರವಾಗಿ ಸ್ನಾನ-ಸಂಧ್ಯಾವಂದನ, ದೇವತಾರ್ಚನ ಮತ್ತು ವೈಶ್ವದೇವವನ್ನು ತೀರಿಸಿ, ಬಳಿಕ ಯಾಚಕರಿಗೆ ಅನ್ನ ದಾನವನ್ನು ಮಾಡಿ, ಆ ಮೇಲೆ ಉಣ್ಣುತ್ತ ಹೋಗು. ಅಂದರೆ ನಿನ್ನ ಕರ್ಮ ಬಂಧನಗಳು ಸಡಿಲಾಗಿ ಹರಿದು ಹೋಗುವವು. ನನ್ನ ಮಾತಿನಲ್ಲಿ ವಿಶ್ವಾಸ ವಿರಲಿ? ವಿಶ್ವಾಸದ ಬಲವು ದೊಡ್ಡದು! ಅದರ ಯೋಗದಿಂದ ಬೇಕಾದಂಥ ಕಠಿಣ ಕಾರ್ಯಗಳಾದರೂ ಸುಲಭಸಾಧ್ಯವಾಗುತ್ತವೆ. ಎಂದು ಬೋಧಿಸಿ, ತಾವು ಪರಿವಾರದೊಂದಿಗೆ, ಅಲ್ಲಿಂದ ದೇವರಹಿಪ್ಪರಿಗಿಗೆ ಹೋಗಬೇಕೆಂದು ಹೊರ ಟರು. ಮಲ್ಲಪ್ಪನು ಅವರನ್ನು ಕಳಿಸಿ ಬಂದು, ಮೂರು ದಿವಸಗಳ ವರೆಗೆ ತನ್ನೆಡೆಗೆ ಬಂದ ಯಾಚಕರಿಗೆ ಧೈರ್ಯಕೊಟ್ಟು, ಅಲ್ಪ ಸ್ವಲ್ಪ ಅನ್ನವನ್ನು ಕೊಟ್ಟನು. ನಾಲ್ಕನೆಯ ದಿವಸ ಗುರುಗಳ ಹೇಳಿಕೆಯಂತೆ, ಹಗೆಗಳ ಬಾಯಿ ಗಳನ್ನು ತೆಗೆಯಿಸಿ ನೋಡಲು, ಅವು ಧಾನ್ಯಗಳಿಂದ ಪೂರ್ಣವಾಗಿ ತುಂಬಿದ್ದವು. ಮಲ್ಲಪ್ಪನು ಅವುಗಳನ್ನು ನೋಡಿ ಸಂತೋಷಪಟ್ಟು, ಧಾನ್ಯವನ್ನು ಗುರುಗಳು ಹೇಳಿದ ಕ್ರಮದಿಂದಲೇ ಯಾಚಕರಿಗೆ ಕೊಟ್ಟು, ಶ್ರೀಗುರುಕೃಪೆಯಿಂದ ದಾನ ಶೂರ ಮಲ್ಲಪ್ಪನೆಂದು ಖ್ಯಾತಿಯನ್ನು ಹೊಂದಿದನು. ಬರಗಾಲವು ತೀರುವ ವರೆಗೆ ಮನದಣಿ ಧಾನ್ಯವನ್ನು ದಾನಮಾಡಿದರೂ ಧಾನ್ಯವು ತೀರಿದ್ದಿಲ್ಲವಂತೆ!



## ೧೭ನೆಯ ಪ್ರಕರಣ.

### ಯಜ್ಞಸಮಾರಂಭ

ಯಜ್ಞೋಪೋದ್ಘಾತವು, ಯಜ್ಞಸಿದ್ಧತೆಯೂ:—ಹಿಂದೆ ಹೇಳಿದಂತೆ ಚಿದಂಬರ ದೀಕ್ಷಿತರು ಬಾಪೂಗೋಖಲೆಯ ವಿಜ್ಞಾಪನೆಗೆ ಚಿತ್ತಗೊಟ್ಟು, ಪರಿವಾರದೊಂದಿಗೆ ನವಲಗುಂದಕ್ಕೆ ಬಂದರು. (ಶಕೆ ೧೭೨೮) ಆ ಊರವರು ದೀಕ್ಷಿತರ ಬರುವಿಕೆಯನ್ನು ಕಂಡು ಸಂತೋಷಪಟ್ಟು, ಮರ್ಯಾದೆಯಿಂದ ಅವರನ್ನು ಊರೊಳಗೆ ಕರಕೊಂಡು ಹೋದರು. ದೀಕ್ಷಿತರು ಅವರೆಲ್ಲರ ಕ್ಷೇಮವಾರ್ತೆಯನ್ನು ಕೇಳಿಕೊಂಡು, ಪುರವಾಸಿಗಳನ್ನು ಆನಂದಗೊಳಿಸಿದರು. ದೀಕ್ಷಿತರು ಕೆಲವು ದಿವಸ ಗಡದಲ್ಲಿಯೂ, ಕೆಲವು ದಿವಸ ಊರಲ್ಲಿಯೂ ಇರುತ್ತ, ಹಲವು ವಿಚಿತ್ರ-ಚರಿತ್ರಗಳನ್ನು ಪ್ರಕಟಿಸುತ್ತ ಕ್ರೀಡಿಸುತ್ತಿದ್ದರು. ಶ್ರೀ ಸದ್ಗುರುವು ಉಪಾಧಿರಹಿತನಾಗಿದ್ದರೂ ಲೋಕೋದ್ಧಾರಾರ್ಥವಾಗಿ ಮನುಷ್ಯರಂತೆ ನಟಿಸಿ ಅದ್ಭುತಲೀಲೆಗಳನ್ನು ಮಾಡುತ್ತಿದ್ದನು.

ಹೀಗಿರಲು, ಒಂದು ದಿವಸ ದಿವಾಕರ ದೀಕ್ಷಿತರೂ ಕೆಲವು ಪ್ರಮುಖ ಭಕ್ತರೂ ದೀಕ್ಷಿತರಿಗೆ:—ಮಹಾಸ್ವಾಮಿ, ದೇಶದಲ್ಲಿ ಮತ್ತೆ ಬರಗಾಲವು ತನ್ನ ಭಯಂಕರ ಸ್ವರೂಪವನ್ನು ಪ್ರಕಟ ಮಾಡುತ್ತಿರುವದು. ಜನರ ಗೋಳಾಟಕ್ಕೆ ಪಾರವೇ ಇಲ್ಲದಂತಾಗಿರುವದು. ನೀನು ನಿನ್ನ ಮಹಿಮೆಯಿಂದ ಜನರನ್ನು ರಕ್ಷಿಸುತ್ತಿರುವೆ; ಆದರೂ ದುರ್ಭಿಕ್ಷವು ನಾಶವಾಗಿ ಜನರು ಸುಖವುಳ್ಳವರಾಗಲಿಕ್ಕೆ ಉಪಾಯವೇನಾದರೂ ಇದ್ದರೆ, ದಯಮಾಡಿ ಹೇಳಬೇಕೆಂದು ಬೇಡಿಕೊಂಡರು. ಆಗ ದೀಕ್ಷಿತರು:—ಅಪ್ಪಾ, ದಿವಾಕರಾ, ಬರಗಾಲಕ್ಕೆ ಮುಖ್ಯವಾಗಿ ಅನಾವೃಷ್ಟಿಯೇ ಕಾರಣವಾಗಿರುವದು. ಪಾಪಪ್ರವೃತ್ತಿಯು ಬೆಳೆಯಹತ್ತಿದರೆ ಅನಾವೃಷ್ಟಿಯಾಗುವದು. ವೃಷ್ಟಿಯು ಪುಣ್ಯದ ಫಲವಾಗಿರುವದು. ಆದ್ದರಿಂದ ಮಳೆಯಾಗಲಿಕ್ಕೆ ಉಪಾಯವನ್ನು ಯೋಚಿಸಬೇಕು. ಭಗವಂತನು ಭಗವದ್ಗೀತೆಯಲ್ಲಿ ಮಳೆಯ ಉತ್ಪತ್ತಿಯ ಕಾರಣವನ್ನು ಹೇಳಿದ್ದಾನೆ. ನಿನಗೋಸುಗ ಅದನ್ನೇ ಹೇಳುತ್ತೇನೆ ಕೇಳು:—

ಅನ್ನಾತ್ ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ|
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ||೧||

ಕರ್ಮಬ್ರಹ್ಮೋದ್ಭವಂ ವಿದ್ಧಿಬ್ರಹ್ಮಾಕ್ಷರ ಸಮುದ್ಭವಂ ||
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೆ ಪ್ರತಿಷ್ಠಿತಂ | ||೨||

ಭಗವದ್ಗೀತಾ.

ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ. ಅನ್ನೋತ್ಪತ್ತಿಗೆ ಮಳೆಯು ಕಾರಣವಾಗಿದೆ. ಮಳೆಯಾಗಲಿಕ್ಕೆ ಯಜ್ಞವು ಬೇಕು. ಯಜ್ಞವು ಪುಣ್ಯಕರ್ಮಗಳಿಂದ ಸಾಂಗವಾಗುತ್ತದೆ ಕರ್ಮಕ್ಕೆ ಆದಿಕಾರಣವು ಬ್ರಹ್ಮವೆಂದು ತಿಳಿ; ಬ್ರಹ್ಮವು ಅವಿನಾಶಿಯಾದದ್ದು. ಆದ್ದರಿಂದ ಚರಾಚರ ವ್ಯಾಪಿಯಾದ ಬ್ರಹ್ಮವು ಯಾವಾಗಲೂ ಯಜ್ಞದಲ್ಲಿ ಪ್ರತಿಷ್ಠಿತವಾಗಿದೆ ಆದ್ದರಿಂದ ಮಳೆಯಾಗಿ ಸರ್ವರಿಗೂ ಸುಖವಾಗಬೇಕೆಂದು ನೀನು ಬಯಸುತ್ತಿದ್ದರೆ, ಒಬ್ಬ ಯೋಗ್ಯನಾದ ಬ್ರಾಹ್ಮಣನಿಂದ ಯಜ್ಞವನ್ನು ಮಾಡಿಸು, ಅಂದರೆ ಮಳೆಯಾಗಿ ದುರ್ಭಿಕ್ಷವು ದೂರಾಗುವದು, ಎಂದು ಹೇಳಿದರು. ಆಗ ದಿವಾಕರನು:—ತಂದೆಯೇ, ಯಜ್ಞಮಾಡಲು, ಭೂಮಿಯಲ್ಲಿ ನಿನಗಿಂತ ಹೆಚ್ಚಿನ ಯೋಗ್ಯತೆಯುಳ್ಳ ಬ್ರಾಹ್ಮಣನು ಅದಾವನಿರುವನು? ಎನಲು, ಚಿದಂಬರ ದೀಕ್ಷಿತರು:—ಯಜ್ಞ ಮಾಡುವ ಇಷ್ಟೆಯು ನನಗಿಲ್ಲ! ಯಾಕಂದರೆ ಯಜ್ಞಪದ್ಧತಿಯು ಬಹಳ ದುಸ್ತರವಾಗಿರುವದು. ಆದ್ದರಿಂದ ಬೇರೆ ಯೋಗ್ಯ ಬ್ರಾಹ್ಮಣನನ್ನೇ ನೋಡಿ, ಸೋಮಯಾಗವನ್ನು ಮಾಡಿಸು, ಎಂದು ಹೇಳಿದರು. ಆಗ ದಿವಾಕರ ದೀಕ್ಷಿತರು:—ಧರ್ಮರಾಜನು ರಾಜಸೂಯ ಯಜ್ಞವನ್ನು ಮಾಡಿದಂತೆ ಹಿಂದಕ್ಕೆ ಯಾರೂ ಮಾಡಿಲ್ಲ. ಮುಂದೆ ಯಾರೂ ಮಾಡಲಿಕ್ಕಿಲ್ಲ, ಎಂದು ಭಾರತದಲ್ಲಿ ಬರೆದಿರುವದು. ಆದ್ದರಿಂದ ರಾಜಸೂಯ ಯಜ್ಞಕ್ಕೆ ಸಮಾನವಾದ ಸೋಮಯಾಗವನ್ನು ನೀವೇ ಮಾಡಬೇಕೆಂಬ ಇಚ್ಛೆಯದೆ, ಎಂದು ನುಡಿಯಲು, ಚಿದಂಬರ ದೀಕ್ಷಿತರು ನಕ್ಕು:—ಕೃಷ್ಣನ ಸಹಾಯದಿಂದ ದ್ವಾಪರಯುಗದಲ್ಲಾದ ರಾಜಸೂಯ ಯಜ್ಞಕ್ಕೆ ಸರಿಯಾದ ಯಜ್ಞವು ಕಲಿಯುಗದಲ್ಲಿ ಮನುಷ್ಯರ ಕೈಯಿಂದ ಆಗಲಾರದು, ಎಂದು ನುಡಿಯಲು, ದಿವಾಕರ ದೀಕ್ಷಿತರು:—ನೀನು ಯಜ್ಞದೀಕ್ಷಿತನಾದರೆ, ಬೇಕಾದ ಯಾಗವನ್ನು ಕೊನೆಗಾಣಿಸುವೆನು. ಮೋಹದ ಮಾತುಗಳನ್ನಾಡಿ, ವ್ಯರ್ಥವಾಗಿ ನನ್ನನ್ನು ಮೋಹಗೊಳಿಸಬೇಡ. ನೀನು ಎಂಥ ಮನುಷ್ಯನಿರುತ್ತೀ ಎಂಬದನ್ನು ನಾನು ಬಲ್ಲೆನು. ಆದ್ದರಿಂದ ಯಜ್ಞಸಂಕಲ್ಪವನ್ನು ಮಾಡಬೇಕು, ಎಂದು ಹೇಳಿದರು.

ದಿವಾಕರ ದೀಕ್ಷಿತರ ಆಗ್ರಹವನ್ನು ನೋಡಿ, ಚಿದಂಬರ ದೀಕ್ಷಿತರು:—ದಿವಾಕರಾ, ಕಲಿಯುಗದಲ್ಲಿ ಯಜ್ಞದ ಸಲುವಾಗಿ ಆಗ್ರಹವನ್ನು ತೊಡಬೇಡ; ಯಾಕಂದರೆ ನಾನು ದೀಕ್ಷಾಬದ್ಧನಾದರೆ, ನಿನಗೆ ಮಿಕ್ಕ ಕೆಲಸಗಳಲ್ಲಿ ಸಹಾಯ ಮಾಡುವವರಾರು? ದೊಡ್ಡ ದೊಡ್ಡ ಕಾರ್ಯಗಳು ಜನ ಸಹಾಯವಿಲ್ಲದೆ ಕೊನೆಗಾಣಲಾರವು; ಇನ್ನೊಮ್ಮೆ ವಿಚಾರಮಾಡು. ಅನಾರಂಭೋಹಿಕಾರ್ಯಾಣಾಮ್ ಪ್ರಥಮ್ ಬುದ್ಧಿಲಕ್ಷಣಮ್ | ಆರಂಭಿತಸ್ಯಾಂತಗಮನಮ್ ದ್ವಿತೀಯಮ್ ಬುದ್ಧಿಲಕ್ಷಣಮ್ || ೧ || ಎಂದು ಹೇಳಿರುವದು; ಆದ್ದರಿಂದ ಪೂರ್ಣ ವಿಚಾರಮಾಡಿ, ಏನೆಂಬದನ್ನು ಅರುಹು, ಎಂದು ನುಡಿಯಲು, ದಿವಾಕರ ದೀಕ್ಷಿತರು:-ಏನೂ ಚಿಂತೆಯಿಲ್ಲ. ತಾವು ಯಜ್ಞದೀಕ್ಷೆಯನ್ನು ಕೈಕೊಳ್ಳಬೇಕು. ತಮ್ಮ ಕಾರ್ಯಕ್ಕೆ ಬ್ರಹ್ಮಾದಿ ದೇವತೆಗಳು ಸಹಾಯಮಾಡಲು, ಕೈಕಟ್ಟಿಕೊಂಡು ನಿಲ್ಲುವರು. ನಾನು ಮೊದಲೇ ಪೂರ್ಣ ವಿಚಾರಮಾಡಿ, ಈ ಕಾರ್ಯಕ್ಕೆ ಕೈಹಾಕಿರುವೆನು; ಆದ್ದರಿಂದ ಯಜ್ಞದ ಸಾಮಗ್ರಿಗಳನ್ನು ಒದಗಿಸಲಿಕ್ಕೆ ಅಪ್ಪಣೆಯಾಗಬೇಕು, ಎಂದು ಅಂದರು! ಆಗ ಚಿದಂಬರ ದೀಕ್ಷಿತರು ಪುತ್ರನ ಪರಮಾವಧಿಯ ಆಗ್ರಹಕ್ಕೆ ಒಪ್ಪಿ:—ಯಾಕಾಗಲೊಲ್ಲದು, ಯಜ್ಞವನ್ನು ಮಾಡುತ್ತೇನೆಂದು ಸಂಕಲ್ಪ ಮಾಡಿದರು. ಆಗ ಸರ್ವರಿಗೂ ಸಮಾಧಾನವಾಯಿತು. ಬಳಿಕ ದಿವಾಕರ ದೀಕ್ಷಿತ ಮೊದಲಗೊಂಡು, ಎಲ್ಲರು ಯಜ್ಞದ ಸಿದ್ಧತೆಯನ್ನು ಆರಂಭಿಸಿದರು.

ಕಾರ್ಯವು ಸಣ್ಣದಿರಲಿ, ದೊಡ್ಡದಿರಲಿ, ಸುಲಭವಿರಲಿ, ಕಠಿಣವಿರಲಿ, ಒಳ್ಳೆಯದಿರಲಿ, ಕೆಟ್ಟದಿರಲಿ, ಮನುಷ್ಯನು ತಾನು ಆರಂಭಿಸಿದ ಕಾರ್ಯಕ್ಕೆ ಅನ್ಯರ ಅನುಮತಿಯು ದೊರೆತರೆ, ಅವನಿಗೆ ಸಂತೋಷವಾಗಿ, ಕೆಲಸ ಮಾಡಲಿಕ್ಕೆ ಹುರುಪು ಉಂಟಾಗುತ್ತದೆ; ಹೀಗಿರಲು, ಚಿದಂಬರ ದೀಕ್ಷಿತರಂಥ ಸಮರ್ಥರು ಕಾರ್ಯದಕ್ಷತೆಯುಳ್ಳ ದಿವಾಕರ ದೀಕ್ಷಿತ, ವಿಶ್ವಂಭರ ಗೋಖಲೆಯಂಥವರು ಆಲೋಚಿಸಿದ ಯಜ್ಞಕಾರ್ಯದಂಥ ಸತ್ಕಾರ್ಯಕ್ಕೆ ಸಮ್ಮತಿಸಿದ ಬಳಿಕ, ಯಾವ ಮಾತಿನ ಕೊರತೆಯುಂಟಾಗುವದು. ದಿವಾಕರ ದೀಕ್ಷಿತರು, ತಮ್ಮ ತಮ್ಮಂದಿರಾದ ಶಂಕರ ದೀಕ್ಷಿತರನ್ನೂ, ವಿಶ್ವಂಭರ ಮೊದಲಾದ ಭಕ್ತರನ್ನೂ ಕೂಡಿಕೊಂಡು, ಏನೇನು ಸಿದ್ಧತೆಯನ್ನು ಮಾಡತಕ್ಕದ್ದೆಂಬದನ್ನು ವಿಚಾರಿಸತೊಡಗಿದರು. ಅವರು ಮೊದಲು ಅಲ್ಲಿಯ ಕೆಲವು ಕುಶಲ, ಹಾಗೂ ವೃದ್ಧ ಬ್ರಾಹ್ಮಣರನ್ನು ಕರೆಯಿಸಿ:—ಯಜ್ಞಮಾಡಲಿಕ್ಕೆ ಯೋಗ್ಯವಾದ ಅಂದರೆ, ನೀರು-ನೆಳಲುಗಳಿಂದಲೂ, ಪವಿತ್ರವಾದ ದೇವಾಲಯಗಳಿಂದಲೂ ಕೂಡಿದ ಸ್ಥಳವು ಎಲ್ಲಿಯಾ

ದರೂ ಇರುವದೋ, ಎಂದು ಕೇಳಿದರು. ಅದಕ್ಕೆ ಬ್ರಾಹ್ಮಣರು :—ಇಲ್ಲಿಂದ ತುಸ ಅಂತರದ ಮೇಲೆ ಗುಣನಗರ (ಗೊಣ್ಣಾಗರ) ಎಂಬ ಪವಿತ್ರ ಭೂಮಿಯಿರುವದು. ಅಲ್ಲಿ ಒಂದು ಉಗ್ರವಾದ ಪ್ರಾಣದೇವರ ದೇವಾಲಯವಿದ್ದು, ಅಲ್ಲೇ ಸಮೀಪದಲ್ಲಿ ಶಬರಿಯ ವಾಸಸ್ಥಾನವಿರುವದು. ಮಲ (ಪಾಪ) ವನ್ನು ಹೋಗಲಾಡಿಸಲು, ಸಮರ್ಥವಾದ ಮಲಾಪಹಾರಿ (ಮಲಪ್ರಭಾ) ನದಿಯು ಹರಿಯುತ್ತಿರುವದು. ಪ್ರಶಸ್ಥವಾದ ಮಾವಿನ ತೋಪು ಇರುವದು. ಇದೇ ಯಾಗಕ್ಕೆ ಯೋಗ್ಯಸ್ಥಳವಾಗಿದೆ, ಎಂದು ಹೇಳಿದರು. ಬಳಿಕ ದಿವಾಕರ ದೀಕ್ಷಿತರು ತಂದೆಯ ಅನುಮತಿಯಿಂದ ಅದೇ ಸ್ಥಳವನ್ನು ಗೊತ್ತುಮಾಡಿದರು; ಹಾಗೂ ಸುಮುಹೂರ್ತದ ಮೇಲೆ ಅಲ್ಲಿ ಬೇರೆ ಬೇರೆ ಸುಶೋಭಿತವಾದ ಸಾವಿರಾರು ಹಂದರಗಳನ್ನು ಹಾಕಿಸಿ, ಸಾಮಾನುಗಳ ಸರ್ವಸಿದ್ಧತೆಯನ್ನು ಮಾಡಿದರು. ಊರೂರಿಗೆ ನಿಮಂತ್ರಣ ಪತ್ರಿಕೆಗಳನ್ನು ಕಳಿಸಿ, ತಾವು ಚಿದಂಬರ ದೀಕ್ಷಿತರನ್ನು ಕರೆಯಲಿಕ್ಕೆ ಬಂದರು. ಆಗ ದೀಕ್ಷಿತರು ಸುಮುಹೂರ್ತದ ಮೇಲೆ ಅಗ್ನಿಯನ್ನು ಸಮಾರೋಪಿಸಿ, ಪತ್ನಿ-ಪರಿವಾರಗಳಿಂದ ಕೂಡಿಕೊಂಡು, ಗೊಣ್ಣಾಗರಕ್ಕೆ ಹೊರಟರು. ಈ ಸುದ್ದಿಯು ಊರೊಳಗೆ ತಿಳಿಯಲು, ಆ ಊರವರೂ ಯಾಗವನ್ನು ನೋಡಲಿಕ್ಕೆ ಹೊರಟರು. ಕೆಲವರು ಗಾಡಿಯನ್ನು ಹೂಡಿದರು; ಕೆಲವರು ಕುದುರೆಗಳನ್ನು ಸಿದ್ಧಮಾಡಿದರು. ಬೇರೆ ಕೆಲವರು ರಥವನ್ನು ತಯಾರಿಸಿದರು; ಅನಾಥರಾದ ಎಷ್ಟೋ ಜನರು ನಮ್ಮ ಗತಿಯೇನು? ನಮಗೆ ಯಜ್ಞ ನೋಡಲಿಕ್ಕೆ ಹೇಗೆ ಸಿಕ್ಕೀತು? ಎಂದು ಚಿಂತಾತುರರಾದರು. ಆಗ ದೀಕ್ಷಿತರು ಅಂಥವರನ್ನು ಕರೆಯಿಸಿ, ಕೈಲಾಗದವರಿಗೆ ವಾಹನಗಳನ್ನೂ, ‹ ವಾಹನಗಳಿದ್ದವರಿಗೆ ತೃಣ-ಧಾನ್ಯಗಳನ್ನೂ' ಮತ್ತೆ ಬೇರೆ ಜನರಿಗೆ ಬೇಕಾದ ಪದಾರ್ಥಗಳನ್ನೂ ಕೊಟ್ಟು, ಮಾರ್ಗದಲ್ಲಿ ನೀರು ಇಲ್ಲದಲ್ಲಿ ನೀರನ್ನು ಪೂರೈಸುತ್ತ, ದಸ್ಯುಗಳ ಭಯವಿದ್ದಲ್ಲಿ ರಕ್ಷಕರನ್ನು ಇಡುತ್ತ, ಉತ್ಸಾಹದಿಂದ ಎಲ್ಲರನ್ನು ಕೂಡಿಕೊಂಡು ಗೊಣ್ಣಾಗರಕ್ಕೆ ಮುಟ್ಟಿದರು. ಅಲ್ಲಿ ಮೊದಲೇ ತಯಾರಿಸಿದ್ದ ಬೇರೆ ಬೇರೆ ಮಂಟಪಗಳಲ್ಲಿ ಪ್ರೇಕ್ಷಕರ ವ್ಯವಸ್ಥೆಯನ್ನು ಮಾಡಿ, ತಾವು ಬೇರೊಂದು ಹಂದರದಲ್ಲಿ ಇಳಕೊಂಡರು.

## —: ನಿಮಂತ್ರಣ ಪತ್ರಿಕೆಯ ಮಾದರಿ :—

ಪತ್ರಿಕೆಯ ಮೇಲ್ಬದಿಯಲ್ಲಿ ಮೋಹರು (ಮುದ್ರೆ) ಇತ್ತು. ಈ ಪತ್ರಿಕೆಯನ್ನು ಪಂಡಿತ, ಜ್ಞಾನಿ, ಗುರು, ಆಚಾರ್ಯ ಮೊದಲಾದವರಿಗೆ ಗೀರ್ವಾಣ

ಭಾಷೆಯಲ್ಲಿಯೂ, ವಿಕ್ಕವರಿಗೆ ಮಹಾರಾಷ್ಟ್ರಭಾಷೆಯಲ್ಲಿಯೂ ಯೋಗ್ಯವಾದ ಒಕ್ಕಣಿಕೆಗಳನ್ನು ಉಪಯೋಗಿಸಿ, ಅಚ್ಚ ಕಪ್ಪು ಮಸಿಯಿಂದ ಬರೆದಿದ್ದರು. ಇದರ ಮೇಲೆ ಉಸುಕು ಹಾಕಿತ್ತು, ಇದರೊಳಗಿನ ಸಾಲುಗಳು ಸರಳವಾಗಿದ್ದು, ಅಕ್ಷರಗಳು ಮುತ್ತಿನಂತಿದ್ದವು ಪತ್ರಿಕೆಯ ಮೇಲ್ಬದಿಯಲ್ಲಿ "ಶ್ರೀ ಯಜ್ಞೇಶ್ವರೋ ಜಯತು" ಅಂತಾ ಬರೆದಿದ್ದು, ಕೆಳಭಾಗಕ್ಕೆ ಶ್ರೀ ಚಿದಂದರ ದೀಕ್ಷಿತರು ಸಹಿ ಮಾಡಿದ್ದರು. ಇಷ್ಟೇ ಅಲ್ಲ, ಯಾವತ್ತು ಪತ್ರಿಕೆಗಳನ್ನು ದೀಕ್ಷಿತರೇ ಬರೆದಿದ್ದರು. ಯಾವತ್ತು ಪತ್ರಿಕೆಯ ಮೇಲೆ ಜಲಮಿಶ್ರಿತ ಕುಂಕುಮ-ಕೇಶರವನ್ನು ಸಿಂಪಡಿಸಿದ್ದರು. ಪತ್ರಿಕೆಯೊಳಗಿನ ಮುಖ್ಯ ಅಭಿಪ್ರಾಯವೇನಂದರೆ:—ಶಕೆ ೧೭೨೯ ನೆಯ ಪ್ರಭವ ಸಂವತ್ಸರದ ಚೈತ್ರಶುದ್ಧ ಪಂಚಮಿ ಸೋಮವಾರ ದಿವಸ ಯಾಗಕ್ಕೆ ಆರಂಭವಾಗುವದು. ಕಾರಣ ತತ್ಪೂರ್ವದಲ್ಲಿ ಸರ್ವರೂ ಪರಿವಾರ ಸಹಿತರಾಗಿ ಬಂದು ಯಜ್ಞಕಾರ್ಯವನ್ನು ಸಾಂಗಗೊಳಿಸಬೇಕು. ಕಾರ್ಯವು ತಮ್ಮದೇ ಇರುವದು.

ಈ ಪ್ರಕಾರವಿರುವ ಪ್ರತ್ಯಕ್ಷ ಮಹಾಸ್ವಾಮಿಗಳ ಹಸ್ತಾಕ್ಷರಗಳಿಂದ ಮಂಡಿತವಾದ ನಿಮಂತ್ರಣ ಪತ್ರಿಕೆಗಳು ಕೈಸೇರಲು, ಜನರು ಅವುಗಳನ್ನು ಮನ್ನಿಸತೊಡಗಿದರು; ಕೆಲವರು ಅವುಗಳನ್ನು ನಮಸ್ಕರಿಸುತ್ತಿದ್ದರು; ಕೆಲವರು ತಲೆಯ ಮೇಲಿಟ್ಟುಕೊಳ್ಳುತ್ತಿದ್ದರು. ಬೇರೆ ಕೆಲವರು ಪ್ರೇಮದಿಂದ ಪೂಜಿಸುತ್ತಿದ್ದರು ಇಂತು ಪತ್ರಿಕೆಗಳನ್ನು ಸನ್ಮಾನಿಸಿ, ನಾಲ್ಕೂಕಡೆಯ ಜನರು ಯಜ್ಞವನ್ನು ನೋಡುವದಕ್ಕಾಗಿ ಗೊಣ್ಣಾಗರಕ್ಕೆ ಬರಬೇಕೆಂದು ಹೊರಟರು. ಪಾಲಿ, ಪುಳೆ, ಪೋತೂರ, ಪ್ರೇಮುರಿ, ಬೀದರ, ಜೇಜೂರೀ, ನಳದುರ್ಗ, ಹಿಪ್ಪರಿಗಿ, ಮೈಲಾರಗಿರಿ, ಮಾಹೂರ, ಸಪ್ತಶೃಂಗ, ತುಳಜಾಪುರ, ಕೊಲ್ಲಾಪುರ, ಅವಂತೀ, ಕಂಚಿ, ಅಲಂಪುರ, ಸಿಂಹಳ, ಮಥುರಾ ಇವೇ ಮೊದಲಾದ ಎಲ್ಲ ಸ್ಥಳಗಳಿಂದ ದಶವಿಧ ಬ್ರಾಹ್ಮಣರೂ, ದಶವಿಧ ಸಂನ್ಯಾಸಿಗಳೂ, ಮಾಂಡಲಿಕರೂ, ಪಟವರ್ಧನ ಮೊದಲಾದ ಸರದಾರರೂ, ಸೆಟ್ಟರೂ, ಸಾಹುಕಾರರೂ, ಗಾಯಕರೂ ಗೊಣ್ಣಾಗರಕ್ಕೆ ಬಂದರು. ಅರಸರು ತಮ್ಮ ಸೈನ್ಯ ಸಮೇತರಾಗಿ ಪ್ರಯಾಣವನ್ನು ಬೆಳಿಸಿದರು. ಅವರು, ಗೊಣ್ಣಾಗರವು ಸಮೀಪಿಸಲು, ಪಾದಚಾರಿಗಳಾಗಿ ದೀಕ್ಷಿತರ ಬಳಿಗೆ ಬಂದು, ನಮಸ್ಕರಿಸಿ, ಮಹಾಫಲಗಳನ್ನಿಟ್ಟು, ಸುಮ್ಮನೆ ನಿಂತುಕೊಳ್ಳುತ್ತಿದ್ದರು. ಆಗ ದಿವಾಕರ ದೀಕ್ಷಿತರು ಅವರೆಲ್ಲರನ್ನು ಸನ್ಮಾನಿಸಿ, ಇಳುಕೊಳ್ಳಲಿಕ್ಕೆ ಯೋಗ್ಯವಾದ ಸ್ಥಳಗಳನ್ನು ತೋರಿಸುತ್ತಿದ್ದರು. ಇಂತು ಯಜ್ಞ ಸಮಾ

ರಂಭವನ್ನು ನೋಡಲಿಕ್ಕೆ ಜನಸಮುದಾಯವು ಅಗಣಿತವಾಗಿ ಕೂಡಿತು. ಅವರೆಲ್ಲರು ಯಜ್ಞ ಸಿದ್ಧತೆಯನ್ನು ನೋಡಿ ಬೆರಗಾದರು.

ಯಜ್ಞಮಂಟಪಗಳು ವಿಶೇಷವಾಗಿ ಶೃಂಗರಿಸಲ್ಪಟ್ಟಿದ್ದವು. ಶ್ರೀ ಗುರುಗಳ ದೊಡ್ಡ ಮಂಟಪವು ಮಧ್ಯಭಾಗದಲ್ಲಿದ್ದು, ಅದರ ಪೂರ್ವಕ್ಕೆ ನದಿಯ ತೀರದಲ್ಲಿ ವೈದಿಕ ಮಂಟಪವೂ, ವಿಶಾಲವಾದ ಪಾಕಶಾಲೆಯೂ, ದಕ್ಷಿಣಕ್ಕೆ ಸೈನ್ಯದ ನಿವಾಸಸ್ಥಳಗಳೂ, ಕಾರ್ಯಕಾರಿ ಜನರ ವಾಸಸ್ಥಳಗಳೂ, ಪಶ್ಚಿಮಕ್ಕೆ ರಾಜರ ವಾಸಸ್ಥಳಗಳೂ, ಉತ್ತರಕ್ಕೆ ಬ್ರಾಹ್ಮಣರ ನಿವಾಸಸ್ಥಳಗಳೂ ಇದ್ದವು ಈ ಪ್ರಕಾರ ಹಲವು ಹಂದರಗಳ ಮಧ್ಯದಲ್ಲಿ ಸುಂದರವಾದ ಕದಳೀ ಸ್ತಂಭಗಳಿಂದ ಶೋಭಿಸುವ, ಮಹಾಸ್ವಾಮಿಯ ಮುಖ್ಯ ಮಂಟಪವು ಕಮಲದಳಗಳಿಂದ ಆವರಿಸಲ್ಪಟ್ಟ ಕರ್ಣಿಕೆಯಂತೆ ಕಂಗೊಳಿಸುತ್ತಿತ್ತು.

ಮೇಲೆ ಹೇಳಿದಂತೆ ದಿವಾಕರ ದೀಕ್ಷಿತರು ನಿಮಂತ್ರಿತ ಜನರ ವ್ಯವಸ್ಥೆಯನ್ನು ಮಾಡಿದ ಬಳಿಕ ಮುಖ್ಯ ಮಂಟಪಕ್ಕೆ ಬಂದು, ಚಿದಂಬರ ದೀಕ್ಷಿತರನ್ನು ಅಭಿವಂದಿಸಿ:—ತಾವು ಕೃಪಾಕಟಾಕ್ಷದಿಂದ ಉಗ್ರಾಣಸ್ಥಳಗಳನ್ನೂ ಮುಖ್ಯವಾಗಿ ಅವುಗಳೊಳಗಿನ ಸಾಮಗ್ರಿಯನ್ನೂ ಅವಲೋಕಿಸಬೇಕೆಂದು ಬೇಡಿಕೊಂಡರು. ಆಗ ಚಿದಂಬರ ದೀಕ್ಷಿತರು—ನಿನ್ನ ಅಭಿಪ್ರಾಯದಂತೆಯೇ ಆಗಲಿ ಎಂದು ನುಡಿದು, ಉಗ್ರಾಣವನ್ನು ನೋಡಲಿಕ್ಕೆ ಹೊರಟರು. ಸಂಗಡ ವಿಶ್ವಂಭರ ಗೋಖಲೆ ಹಾಗು ದಿವಾಕರ ದೀಕ್ಷಿತರಿದ್ದರು. ಉಗ್ರಾಣವು ಸಮೀಪಿಸಲು, ವಿಶ್ವಂಭರನು ಮುಂದಕ್ಕೆ ಬಂದು, ಮೊದಲು ಅರಿಷಿಣ-ಕುಂಕುಮಗಳಿಂದ ತುಂಬಿದ ಚೀಲಗಳನ್ನು ತೋರಿಸಿದನು. ಅವುಗಳನ್ನು ನೋಡಿ, ಶ್ರೀ ಗುರುಗಳು-ವಿಶ್ವಂಭರಾ, ಇನ್ನು ಮೇಲೆ ದಿವಾಕರನು ಸಿದ್ಧಗೊಳಿಸಿದ ಸಾಮಗ್ರಿಗಳನ್ನು ಸಂಪೂರ್ಣವಾಗಿ ನೋಡುವ ಕಾರಣವಿಲ್ಲ. ಎಲ್ಲವೂ ಪೂರ್ಣವಾಗಿರುವದು ಎಂದು ಹೇಳಿದರು. ಅದಕ್ಕೆ ವಿಶ್ವಂಭರನು:—ಆದರೂ ಎಲ್ಲ ಸಾಹಿತ್ಯವನ್ನು ಮಹಾಸ್ವಾಮಿಗಳು ನೋಡಿದರೆ, ಅವು ಅಕ್ಷಯ್ಯವಾಗುವವು ಎಂದು ಬೇಡಿಕೊಳ್ಳಲು, ಶ್ರೀ ಗುರುಗಳು ಅದಕ್ಕೆ ಒಪ್ಪಿಕೊಂಡು ಹಾಗೆಯೇ ಮುಂದಕ್ಕೆ ಸಾಗಿದರು. ವಿಶ್ವಂಭರನು ಅಕ್ಕಿ, ಗೋಧಿ, ಕಡಲೆ ಮುಂತಾದ ಅಷ್ಟಾದಶಧಾನ್ಯಗಳನ್ನೂ, ಅವುಗಳಿಂದ ತಯಾರಿಸಿದ ಹಿಟ್ಟು, ಕಣಕ, ಬೇಳೆ, ಸಜ್ಜಿಕೆ ಮೊದಲಾದ ಪದಾರ್ಥಗಳನ್ನೂ, ಸಕ್ಕರೆ, ತುಪ್ಪ, ಬೆಲ್ಲ, ಎಲೆ, ಅಡಿಕೆ, ಸುಗಂಧದ್ರವ್ಯ, ಯಾಜ್ಞಿಕದ ಬೇರೆ ಸಾಮಾನುಗಳು ಮುಂತಾದ ಮಿಕ್ಕ ಜಿನಸುಗಳನ್ನೂ ಕ್ರಮ

ವಾಗಿ ತೋರಿಸಿದನು. ಅವುಗಳನ್ನು ಚಿದಂಬರ ದೀಕ್ಷಿತರು ಕೃಪಾದೃಷ್ಟಿಯಿಂದ ನೋಡಿ:—ಎಲ್ಲ ಜೀನಸುಗಳು ಸಮೃದ್ಧಿಯಾಗಿರುವವು. ಚಿಂತೆಮಾಡಬೇಡಿರಿ, ಎಂದು ನುಡಿಯುತ್ತಿರಲು, ದಿವಾಕರ ದೀಕ್ಷಿತರು:—ಜಮಾಖರ್ಚ ಬರೆಯಲಿಕ್ಕೆ ಯಾರನ್ನು ನೇಮಿಸಬೇಕೆಂದು ಕೇಳಿದರು. ಅದಕ್ಕೆ ಗುರುಗಳು:—ಜಮಾ ಖರ್ಚ ಬರೆಯಿಸುವದು ದೈವವುಳ್ಳವರ ಕೆಲಸವು; ಅದರ ಗೊಡವೆಯು ವೈದಿಕರಾದ ನಮಗೇತಕ್ಕೆ? ಎಂದು ಹೇಳಿ, ಸಂಧ್ಯಾವಂದನೆಗಾಗಿ ನದೀತೀರಕ್ಕೆ ಹೊರಟು ಹೋದರು. ಆದರೂ ದಿವಾಕರ ದೀಕ್ಷಿತರು ಜಮಾಖರ್ಚ ಬರೆಯುವದಕ್ಕಾಗಿ ಎಷ್ಟೋ ಜನ ಲೆಕ್ಕಿಗರನ್ನು ನೇಮಿಸಿದರು.

ಚಿದಂಬರ ದೀಕ್ಷಿತರು ನದಿ ತಟಾಕದಲ್ಲಿ ಮಾಧ್ಯಾಹ್ನ ಕರ್ಮವನ್ನು ತೀರಿ ಸುತ್ತಿರಲು, ಶಾಮಭಟ್ಟರೆಂಬ ಒಬ್ಬ ಯೋಗಿವರ್ಯರು ಅಲ್ಲಿಗೆ ಬಂದರು. ಆಗ ದೀಕ್ಷಿತರು ಅವರಿಗೆ ಅಭ್ಯುತ್ಥಾನವನ್ನು ಮಾಡಿ, ಪರಸ್ಪರರು ಪ್ರೇಮ ದರ್ಶನ ದಿಂದ ತಲ್ಲೀನರಾದರು. ತುಸಕಾಲ ಗತಿಸಿದ ಬಳಿಕ ಶಾಮಭಟ್ಟರು:—ದೀಕ್ಷಿ ತರೇ, ನಿಮಗೆ ಸೋಮಪಾನದಲ್ಲಿ ಇಚ್ಛೆಯುಂಟಾಯಿತೇ? ಯಜ್ಞದಲ್ಲಿ ಹವಿ ರ್ಭಾಗವನ್ನು ಸ್ವೀಕರಿಸುವವರಾರು? ಎಂದು ಕೇಳಲು, ದೀಕ್ಷಿತರು:—ಯಜ್ಞ ಮಾಡುವ ಇಚ್ಛೆಯು ನನ್ನಲ್ಲಿ ಎಳ್ಳಷ್ಟಾದರೂ ಇರುವದಿಲ್ಲ. ದಿವಾಕರನ ಆಗ್ರ ಹಕ್ಕಾಗಿ ಈ ಕೆಲಸವನ್ನು ಕೈಕೊಳ್ಳಬೇಕಾಯಿತೆಂದು ಹೇಳಿದರು. ಅದಕ್ಕೆ ಶಾಮಭಟ್ಟರು:—ಆದದ್ದು ಒಳ್ಳೇದಾಯಿತು. ತಮ್ಮ ಯಜ್ಞಾರಂಭದಿಂದ ನನಗೆ ಬಹಳ ಸಂತೋಷವಾಗಿರುವದು. ಯಾಗದ ಕೀರ್ತಿಯು ಮೂರು ಲೋಕ ಗಳಿಗೂ ಮುಟ್ಟುವದು. ನಾನು ಯಜ್ಞವನ್ನು ನೋಡಲಿಕ್ಕೆ ಬಂದಿರುವೆನೆಂದು ಹೇಳಿದರು. ಇಷ್ಟಾದ ಬಳಿಕ ದೀಕ್ಷಿತರು ಶಾಮಭಟ್ಟರಿಂದ ಕೂಡಿಕೊಂಡು ಮಂಟಪಕ್ಕೆ ಬಂದರು.

ಅಷ್ಟರಲ್ಲಿ ಶ್ರೌತಕರ್ಮವಿಶಾರದರಾದ ಬ್ರಾಹ್ಮಣರು ಅಲ್ಲಿಗೆ ಬರಲು, ದೀಕ್ಷಿತರು ಯಾಗ ಮಂಟಪವನ್ನು ನೋಡುವದಕ್ಕಾಗಿ ಅವರೊಡನೆ ಹೊರ ಟರು. ಯಜ್ಞ ಶಾಲೆಯು ಸಶಾಸ್ತ್ರವಾಗಿ ಸಿದ್ಧಮಾಡಲ್ಪಟ್ಟಿತ್ತು. ಅಲ್ಲದೆ ಅದನ್ನು ಲೌಕಿಕಾರ್ಥವಾಗಿ ಕದಳೀಸ್ತಂಬಗಳಿಂದಲೂ, ಧ್ವಜ-ಪತಾಕಿಗಳಿಂ-ದಲೂ, ವಿಚಿತ್ರವಾದ ವಸ್ತ್ರಗಳಿಂದಲೂ, ನಳಿನಳಿಸುವ ಇಕ್ಷುಗಳಿಂದಲೂ, ತಳಿ ರ್ತೋರಣಗಳಿಂದಲೂ ಶೃಂಗರಿಸಿದ್ದರು. ಅಲ್ಲಿಯ ಭೂಮಿಯು ರಮ್ಯವಾದ ರಂಗವಲ್ಲಿಗಳಿಂದ ರಮಣೀಯವಾಗಿ ತೋರುತ್ತಿತ್ತು. ದೀಕ್ಷಿತರ ಈ ತರದ

ಸುಶೋಭಿತವಾದ ಯಾಗ ಶಾಲೆಯನ್ನು ಭಟ್ಟರು ನೋಡಿ ಸಂತೋಷಪಟ್ಟರು. ಅಷ್ಟರಲ್ಲಿ ಒಬ್ಬ ಯುವನನು ಭರದಿಂದ ಬಂದು, ಯಜ್ಞಶಾಲೆಯನ್ನು ಸೇರಿದನು. ಆಗ ದಿವಾಕರ ಮೊದಲ್ಗೊಂಡು ಎಷ್ಟೋ ಜನರು ಆ ಯುವನನನ್ನು ಹೊಡೆಯು ಹೋದರು. ಅದನ್ನು ನೋಡಿ, ಚಿದಂಬರ ದೀಕ್ಷಿತರು ಓಡಿ ಹೋಗಿ, ಆ ಯುವನನ ಕೈಹಿಡಿದು, ಯಾವತ್ತು ಯಜ್ಞ ಶಾಲೆಯನ್ನು ತೋರಿಸಿ, ವೇದಿಯ ಹತ್ತಿರ ಬಂದರು. ಕೂಡಲೆ ಯುವನನು ಅಲ್ಲಿಯ ಮಹಾ ವೇದಿಯಲ್ಲಿ ಗುಪ್ತನಾದನು. ಆಗ ಜನರೆಲ್ಲ ದಿಗಿಲು ಬಿದ್ದು ದೀಕ್ಷಿತರಿಗೆ:—ಮಹಾಸ್ವಾಮಿಯೇ, ಈ ಯುವನನಾರು? ಅವನು ಮಹಾವೇದಿಯಲ್ಲಿ ಒಮ್ಮಿಂದೊಮ್ಮೆ ಹೇಗೆ ಗುಪ್ತನಾದನು? ಎಂದು ಕೇಳಲು, ದೀಕ್ಷಿತರು:—ಇಲ್ಲಿ ಬಂದವನು ಯುವನನಲ್ಲ! ಸಾಕ್ಷಾತ್ ಯಜ್ಞೇಶ್ವರನು!! ಅವನು ತನ್ನ ಸ್ಥಳದಲ್ಲಿ ಅದೃಶ್ಯನಾದನು!!! ಎಂದು ಹೇಳಿದರು. ಬಳಿಕ ಎಲ್ಲರು ತಮ್ಮ ತಮ್ಮ ಕಾರ್ಯಗಳಿಗೆ ಹೊರಟು ಹೋದರು.

## —:ಯಜ್ಞೋಪಕ್ರಮ:—

ಶಕೆ ೧೭೨೯ ನೆಯ ಪ್ರಭವ ಸಂವತ್ಸರದ ಚೈತ್ರಶುದ್ಧ ಪಂಚಮಿಯ ಸೋಮವಾರ, ಮೃಗಶಿರಾ ನಕ್ಷತ್ರ, ಬಾಲವಕರ್ಣ, ಶೋಭನಯೋಗ, ಚಂದ್ರ ಗುರುಗಳ ಯುತಿಯಿರಲು, ಹನ್ನೊಂದು ಗಳಿಗೆಗೆ ಯಜ್ಞವನ್ನು ಆರಂಭಿಸಿದರು. ಆ ಹೊತ್ತು ಚಿದಂಬರ ದೀಕ್ಷಿತರು ಮೊದಲುಗೊಂಡು ಯಾವತ್ತರು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು, ಮೊದಲು ಸ್ನಾನಾದಿ ನಿತ್ಯಕರ್ಮಗಳನ್ನೆಲ್ಲ ನೆರವೇರಿಸಿ, ವೇದಬಲ್ಲ ಬ್ರಾಹ್ಮಣರ ಸನ್ನಿಧಿಯನ್ನು ಸೇರಿದರು. ಸುಸ್ನಾತರೂ, ವಸ್ತ್ರಾಭರಣ ಭೂಷಿತರೂ, ಜಗನ್ಮಾತೆಯವರೂ, ಆದ ಸರಸ್ವತೀ-ಸಾವಿತ್ರೀ ಎಂಬ ಇಬ್ಬರು ಹೆಂಡಿರು, ದೀಕ್ಷಿತರನ್ನು ಅನುಸರಿಸಿದ್ದರು. ಮೊಟ್ಟಮೊದಲು ಚಿದಂಬರ ದೀಕ್ಷಿತರು ಕುಲಸ್ವಾಮಿಯಾದ ಮಾರ್ತಂಡ ಭೈರವನನ್ನೂ, ದ್ವಿಜಸ್ತೋಮವನ್ನೂ ನಮಸ್ಕರಿಸಿ, ಸಭಾಸದರ ಅಪ್ಪಣೆಯಿಂದ * ಸೋಮಯಾಗದ ಸಂಕಲ್ಪವನ್ನು ಮಾಡಿದರು ಬಳಿಕ ಗಣಪತಿ ಪೂಜೆಯಾಗಿ ಪುಣ್ಯಾಹವಾಚನವು ಪೂರ್ಣವಾಯಿತು. ಅನಂತರ ನಾಂದೀ ಸ್ಥಾಪನೆಯಾಯಿತು. ಆಗ ದೀಕ್ಷಿತರು ಬ್ರಾಹ್ಮಣ

* ಮುಖ್ಯ ಯಾಗಗಳು ಎಂಟು - ೧ ಅಗ್ನಿಷ್ಟೋಮ, ೨ ಅತ್ಯಗ್ನಿಷ್ಟೋಮ, ೩ ಅತಿರಾತ್ರ ೪ ಅಪ್ತೋರ್ಯಾಮ, ೫ ವಾಜಪೇಯ, ೬ ಪೌಂಡ್ರಿಕ, ೭ ಅಶ್ವಮೇಧ, ೮ ರಾಜಸೂಯ, ಸೂತ್ರಾಮಣಿ, ಪಶುಗಂಧಾ ಇವುಗಳ ಸಮಾವೇಶ ಇದರಲ್ಲಿಯೇ ಆಗುತ್ತದೆ.

ರಿಗೆ:—ಯಜ್ಞಕ್ಕಾಗಿ ಹದಿನಾರುಜನ ‡ ಋತ್ವಿಜರು ಬೇಕಾಗಿರುವರು. ದಯವಿಟ್ಟು ಅವರನ್ನು ನನ್ನ ಬಳಿಗೆ ಕಳುಹಿದರೆ, ಋತ್ವಿಗ್ವರ್ಣನವನ್ನು ಮಾಡುವೆನು, ಎಂದು ಹೇಳಿದರು. ಆಗ ದಕ್ಷಿಣೆಯ ಆಶೆಯಿಂದ ನಾಮುಂದೆ, ನಾಮುಂದೆ ಎಂದು ಸಭಾಸ್ಥಾನದೊಳಗಿನ ಪಂಡಿತ ಬ್ರಾಹ್ಮಣರು ತಮ್ಮ-ತಮ್ಮಲ್ಲಿ ವ್ಯಾಜ್ಯವನ್ನು ನಡಿಸಿದರು. ಆಗ ಶ್ರೀ ಗುರುಗಳು:—ದ್ವಿಜವರ್ಯರೆ, ಹೀಗೆ ಗೊಂದಲ ಮಾಡಬೇಡಿರಿ, ತಮ್ಮೆಲ್ಲರನ್ನು ಋತ್ವಿಜರಂತೆ ಸಮಬುದ್ಧಿಯಿಂದ ಸತ್ಕರಿಸುವೆನು, ಎಂದು ವಿನಯಯುಕ್ತವಾದ ಸವಿಮಾತುಗಳಿಂದ ಮಾತನಾಡಲು, ತತ್ಕಾಲಕ್ಕೆ ಸಭಾಸ್ಥಾನದಲ್ಲಿ ಶಾಂತತೆಯುಂಟಾಯಿತು. ಆ ಮೇಲೆ ಹದಿನಾರು ಜನರು ಗುರುಗಳ ಸನ್ನಿಧಿಗೆ ಬಂದರು; ಇವರ ಹೊರತು ಕಾರ್ಯಬಾಹುಲ್ಯದ ಮೂಲಕ ದಿವಾಕರ ದೀಕ್ಷಿತರು ಗುರುಗಳ ಅಪ್ಪಣೆಯ ಮೇರೆಗೆ ಮತ್ತೆ ನಾಲ್ಕುಮಂದಿ ಋತ್ವಿಜರನ್ನು ಕ್ರಮಗೊಳಿಸಿದರು. ಬಳಿಕ ಶ್ರೀ ಗುರುಗಳು ಋತ್ವಿಜರ ಪಾದಪ್ರಕ್ಷಾಲನೆಯನ್ನು ಮಾಡಿ, ಅವರಿಗೆ ಗಂಧ-ಪುಷ್ಪಾಕ್ಷತೆಗಳನ್ನು ಸಮರ್ಪಿಸಿ, ಅವರನ್ನು ಮುಕ್ತಾಭರಣಗಳಿಂದಲೂ, ಶಾಲು-ಪೀತಾಂಬರಗಳಿಂದಲೂ ಶೃಂಗರಿಸಿ, ಮಧುಪರ್ಕ ಪೂಜೆಯನ್ನು ಯಥಾವಿಧಿಯಿಂದ ನೆರವೇರಿಸಿದರು ಬಳಿಕ ಚಿದಂಬರ ದೀಕ್ಷಿತರು ಯಜ್ಞಕರ್ಮವನ್ನು ಆರಂಭಿಸುವದಕ್ಕಾಗಿ ಯಜ್ಞಶಾಲೆಗೆ ಹೊರಟರು. ಆ ಕಾಲದ, ಪರಿವಾರದಿಂದೊಡಗೂಡಿದ ಶ್ರೀ ದೀಕ್ಷಿತರ ಭವ್ಯ ಮೂರ್ತಿಯು ವರ್ಣಿಸುವ ಹಾಗೆ ಇತ್ತು. ಶುಭ್ರವಸ್ತ್ರದಿಂದ ಅವರ ಶರೀರವೂ, ಭಸ್ಮದಿಂದ ಭಾಲವೇ ಮೊದಲಾದ ಸರ್ವಾವಯವಗಳೂ, ರುದ್ರಾಕ್ಷದಿಂದ ಕರಕಂಧರಗಳೂ, ಅಮೃತಪ್ರಪೂರ್ಣ ಕಲಶದಿಂದ ಬಲಗೈಯೂ ಶೋಭಿಸುತ್ತಿದ್ದವು. ಅಮೂಲ್ಯ ವಸ್ತ್ರಾಲಂಕಾರಗಳಿಂದ ಅಲಂಕೃತರಾಗಿದ್ದ ಸರಸ್ವತೀ-ಸಾವಿತ್ರೀ ಮಾತೆಯವರು ದೀಕ್ಷಿತರನ್ನನುಸರಿಸಿ, ಮಂದಗಮನದಿಂದ ಅವರ ಹಿಂದಿಂದೆ ಸಾಗಿದ್ದರು. ಅವರ ಹಿಂದೆ ಅವರ ಐವರು ಮಕ್ಕಳೂ ಮೆಲ್ಲ ಮೆಲ್ಲನೆ ಸಾಗಿದ್ದರು. ಅವರ ಹಿಂದೆ ಋತ್ವಿಜರು ಯಜ್ಞ ಸಾಹಿತ್ಯಗಳನ್ನು ತಕ್ಕೊಂಡು ನಡೆದಿದ್ದರು, ಪಂಡಿತರು ಪ್ರಮುದಿತರಾಗಿ, ಗೀರ್ವಾಣ ಭಾಷೆಯಿಂದ ಶಾಸ್ತ್ರವಿಷಯವನ್ನು

‡ ೧ ಅಧ್ವರ್ಯು ೨ ಹೋತಾ ೩ ಬ್ರಹ್ಮ ೪ ಆಗ್ನೀಧ್ರ ಇವರು ಮುಖ್ಯ ಋತ್ವಿಜರು. ೫ ಪ್ರತಿಪ್ರಸ್ಥಾತಾ ೬ ಸೋಮಪ್ರವಾಕ್ ೭ ಅಚ್ಛಾವಾಕ್ ೮ ಮೈತ್ರಾವರುಣ ೯ ನೇಷ್ಟಾ ೧೦ ಪೋತಾ ೧೧ ಉದ್ಗಾತಾ ೧೨ ಪ್ರಸ್ತೋತಾ ೧೩ ಪ್ರತಿಹರ್ತಾ ೧೪ ಬ್ರಾಹ್ಮಣಾಚ್ಛಂಸಿ ೧೫ ಉನ್ನೇತಾ ೧೬ ಸುಬ್ರಹ್ಮಣ್ಯ ಇವರು ಉಪಋತ್ವಿಜರು.

ಚರ್ಚಿಸುತ್ತ ಋತ್ವಿಜರ ಹಿಂದಿಂದೆ ನಡೆದಿದ್ದರು. ಇವರೆಲ್ಲರ ಮೇಲೆ ಶಾಸ್ತ್ರೋಕ್ತವಾಗಿ ಮಹಾ ವಸ್ತ್ರದ ಛಾಯೆಯನ್ನುಂಟು ಮಾಡಿದ್ದರು. ಅವರ ಹಿಂದೆ ರಾಜರು ಅಮೂಲ್ಯ ಅಲಂಕಾರಗಳಿಂದ ಅಲಂಕೃತರಾಗಿ ನಡೆದಿದ್ದರು. ಅವರ ಸುತ್ತು ಮುತ್ತು ಚಾಣಭಟರು ಶಸ್ತ್ರಾಸ್ತ್ರಗಳಿಂದ ಯುಕ್ತರಾಗಿ ನಡೆದಿದ್ದರು ಅಲ್ಲಲ್ಲಿ ಸ್ತುತಿ-ಪಾಠಕರು ಶ್ರೀ ಗುರುಗಳ ಕೀರ್ತಿಯನ್ನು ಗಂಭೀರ ಸ್ವರದಿಂದ ಹೊಗಳುತ್ತಿದ್ದರು. ತೂರ್ಯ, ಪಟಹ, ಡಿಂಡಿಮ ಮೊದಲಾದ ವಾದ್ಯಗಳ ಮಹಾಧ್ವನಿಯೂ, ಅದರ ಪ್ರತಿಧ್ವನಿಯೂ, ವೀಣಾ-ಮೃದಂಗಗಳ ಮಂಜುಳ ಧ್ವನಿಗಳೂ ದಶದಿಕ್ಕುಗಳನ್ನು ತುಂಬಿಕೊಂಡಿದ್ದವು. ಇವಲ್ಲದೆ ವೈದಿಕರ ವೇದ ಘೋಷವೂ, ಭಕ್ತರ ನಾಮಘೋಷವೂ ವೇಶ್ಯಾಸ್ತ್ರೀಯರ ಗಾನರವವೂ ಅಸ್ಪಷ್ಟವಾಗಿ ಕೇಳಬರುತ್ತಿದ್ದವು. ಜನಸಂದಣಿಯು ಬಹಳವಾದ್ದರಿಂದ ಮಹಾಸ್ವಾಮಿಯು ಒಂದೊಂದೇ ಹೆಜ್ಜೆಗಳನ್ನಿಡುತ್ತ, ಮಂದಗಮನದಿಂದ ಮುಂದಕ್ಕೆ ಸಾಗುತ್ತಿದ್ದನು. ಆ ಮದನಾರಿಯು ಮಂದಹಾಸದಿಂದ ಭಕ್ತವೃಂದವನ್ನು ನೋಡುವಾಗ ಅವನ ಕುಂದದಶನಗಳ ಪ್ರಭೆಯು ಮುಖಕಮಲವನ್ನು ವಿಶೇಷವಾಗಿ ಅಲಂಕರಿಸುತ್ತಿತ್ತು. ಎಲ್ಲರ ಮುಂಭಾಗದಲ್ಲಿ ಮುತ್ತೈದೆಯರು ವಾರಿಪೂರಿತ ಕುಂಭಗಳನ್ನು ಹೊತ್ತುಕೊಂಡು ನಡೆಯುತ್ತಿದ್ದರು. ಮಿಕ್ಕ ಸ್ತ್ರೀಯರ ಸಮೂಹವು ಎಲ್ಲರ ಹಿಂಗಡೆಯಲ್ಲಿ ಸಾಗಿತ್ತು ಇಂತು ಸಂಭ್ರಮದಿಂದ ಹೋಗುತ್ತಿರುವ ದೀಕ್ಷಿತ ಮುಕುಟಮಣಿಯನ್ನು ಜನರು ಕಣ್ತುಂಬಾ ನೋಡಿ, ತಮ್ಮ ತಮ್ಮ ನೇತ್ರಸಾಫಲ್ಯವನ್ನು ಮಾಡಿಕೊಂಡರು. ಎಷ್ಟು ಸಂಭ್ರಮವಿದು! ಈ ತರದ ಸಂಭ್ರಮವನ್ನು ನೋಡಿದ ಜನರು ಪುಣ್ಯಾತ್ಮರಲ್ಲವೆ?

## —: ಮೊದಲನೆಯ ದಿವಸ (ಚೈತ್ರ ಶುದ್ಧ ಪಂಚಮಿ.) :—

ಶ್ರೀ ಚಿದಂಬರ ದೀಕ್ಷಿತರು ಯಜ್ಞಮಂಟಪದ ಸಮೀಪಕ್ಕೆ ಬರುತ್ತಲೆ, ಪಾದಪ್ರಕ್ಷಾಲನೆಯನ್ನು ಮಾಡಿಕೊಂಡು, ಎರಡೂ ಅರಣಿಗಳನ್ನು ಕೈಯಲ್ಲಿ ತೆಕ್ಕೊಂಡು ಮಂತ್ರಘೋಷದೊಡನೆ ಮಂಟಪವನ್ನು ಪ್ರವೇಶಿಸಿದರು. ಶಿಷ್ಯನು ಗುರುಗಳ ವಾಕ್ಯಗಳನ್ನು ಮಥಿಸಿ, ಹೃದಯ ಕುಂಡದಲ್ಲಿ ಜ್ಞಾನಾಗ್ನಿಯನ್ನು ಸ್ಥಾಪಿಸುವಂತೆ, ದೀಕ್ಷಿತರು ಎರಡೂ ಅರಣಿಗಳನ್ನು ಮಥಿಸಿ ಐದು ಕುಂಡಗಳಲ್ಲಿ ಅಗ್ನಿಯನ್ನು ಸ್ಥಾಪಿಸಿದರು ‡ ಅಧ್ವರ್ಯ ಕರ್ಮವು ಕಾತ್ಯಾಯಿನಿ ಸೂತ್ರದಂತೆ ನಡೆಯಿತು. ಬಳಿಕ ಋತ್ವಿಜರೆಲ್ಲರು ಕೂಡಿ, ಮೊದಲನೆಯ ದಿವಸದ ಕಾರ್ಯ

‡ ಅಧ್ವರ್ಯವಿನ ಕೆಲಸವನ್ನು ಶಂಕರ ದೀಕ್ಷಿತರು ಮಾಡುತ್ತಿದ್ದರು.

ವಾದ ದೀಕ್ಷಣೀಯಾದಿ ಕರ್ಮಗಳನ್ನು ನೆರವೇರಿಸಿ, ಶ್ರೀ ಗುರುಗಳ ಚರಣಕಮಲಗಳಿಗೆರಗಿದರು. ಆ ದಿನ ಕೃಷ್ಣಾಜಿನ ದೀಕ್ಷಾಬದ್ಧರಾದ ದೀಕ್ಷಿತರು ಮಂಟಪದಲ್ಲಿಯೇ ಕುಳಿತುಕೊಂಡರು. ಮಧ್ಯಾಹ್ನವಾಗಲು, ಅವರು ದ್ವಿಜಾರಾಧನೆಗಾಗಿ ದಿವಾಕರ ದೀಕ್ಷಿತರನ್ನು ಆಜ್ಞಾಪಿಸಿದರು. ಆಗ ದಿವಾಕರ ದೀಕ್ಷಿತರು ಭೋಜನದ ಸೂಚನೆಯನ್ನು ಮಾಡಲು, ಚತುಃಶಾಖೆಯ ಬ್ರಾಹ್ಮಣರು ಮಾವಿನ ತೋಪಿನಲ್ಲಿ ಆನಂದದಿಂದ ಕುಳಿತು ವೇದಘೋಷವನ್ನು ಮಾಡತೊಡಗಿದರು. ಕೆಲವರು ಸಾಮಗಾನವನ್ನೂ, ಕೆಲವರು ತ್ರಿಸುಪರ್ಣವನ್ನೂ, ಬೇರೆ ಹಲವರು ಶತಪಥ ಪಂಚಕವನ್ನೂ ಇಂತು ಪ್ರತಿಯೊಬ್ಬರು ತಮ್ಮ ಇಷ್ಟಾನುಸಾರವಾಗಿ ವೇದಘೋಷವನ್ನು ಮಾಡತೊಡಗಿದರು. ಇತ್ತ ದಿವಾಕರ ದೀಕ್ಷಿತರು ಪಾಕಶಾಲೆಗೆ ಹೋಗಿ ಅನ್ನಪೂರ್ಣೆಯ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡುವಷ್ಟರಲ್ಲಿ ಬಡಿಸುವ ಜನರು ಅಲ್ಲಿಗೆ ಬಂದರು. ಆಗ ದಿವಾಕರ ದೀಕ್ಷಿತರು ಅವರ ತಲೆಯ ಮೇಲೆ ಅರಿಷಿಣ-ಕುಂಕುಮಗಳನ್ನು ಹಾಕಿ—ಪಂಗ್ತಿಯನ್ನು ನೆಟ್ಟಗೆ ಕುಳ್ಳಿರಿಸಿರಿ, ಗದ್ದಲ ಮಾಡಬೇಡಿರಿ, ಎಲೆ ಹಾಕಿರಿ, ಎಲ್ಲರೂ ನಿಮ್ಮ ನಿಮ್ಮ ಕೆಲಸಗಳನ್ನು ದಕ್ಷತೆಯಿಂದ ಮಾಡಿರಿ, ಉಪ್ಪು ಬಿದ್ದಲ್ಲಿ ತುಪ್ಪ ಬೀಳಲಿಕ್ಕೆ ಬೇಕು ಎಂದು ಹೇಳಿ, ತಾವು ಬ್ರಹ್ಮವೃಂದವನ್ನು ಪೂಜಿಸುವದಕ್ಕಾಗಿ ಪಂಗ್ತಿಗೆಬಂದರು. ಅತ್ತ ಸುವಾಸಿನಿಯರಿಗೆ ಅರಿಷಿಣ-ಕುಂಕುಮಗಳನ್ನು ಹಚ್ಚಿ, ಉಡಿತುಂಬುವ ಕೆಲಸವು ನಡದೇ ಇತ್ತು. ದ್ವಿಜಪೂಜೆಯು ತೀರುವಷ್ಟರಲ್ಲಿ ಬಡಿಸುವ ಕೆಲಸವಾದರೂ ಮುಗಿಯಿತು. ಕೂಡಲೆ ದಿವಾಕರದೀಕ್ಷಿತರು ಏಕೋವಿಷ್ಣು............ ಮಂತ್ರವನ್ನು ಅಂದು ಉದಕವನ್ನು ಬಿಟ್ಟರು. ಕೂಡಲೆ ತೋಫು ಹಾರಿತು. ಆಗ ಎಲ್ಲರೂ ಹರಹರ ಮಹಾದೇವ ಎಂದು ಗರ್ಜಿಸಿ ಭೋಜನಕ್ಕೆ ಕುಳಿತುಕೊಂಡರು.

ಬಾಪೂಗೋಖಲೆಯು ಪರಿವಾರದೊಂದಿಗೆ ಅನ್ನವನ್ನೂ, ಜಮಖಂಡಿಯ ಪರಶುರಾಮಪಂತನು ಭಕ್ಷ್ಯಗಳನ್ನೂ, ಶ್ರೀ ಅಕ್ಕಲಕೋಟೆಯ ಸ್ವಾಮಿಗಳು ಹಾವನೂರ ದೇಸಾಯಿಯರನ್ನು ಕೂಡಿಕೊಂಡು ತುಪ್ಪವನ್ನೂ, ಛತ್ರಪತಿಯ ಅಷ್ಟಪ್ರಧಾನರು ಅಂಬೋಡಿ ಮೊದಲಾದ ಅಪೂಪ ಪದಾರ್ಥಗಳನ್ನೂ, ನರೇಂದ್ರದ ದೇಶಪಾಂಡೆ ಮೊದಲಾದವರು ಕೋಸಂಬರಿ, ಪಲ್ಲೆ ಮುಂತಾದ ವ್ಯಂಜನ ಪದಾರ್ಥಗಳನ್ನೂ ಬಡಿಸುತ್ತಿದ್ದರು. ಇವರ ಸಹಾಯಕ್ಕೆ ಮತ್ತೆ ಹದಿನಾರು ನೂರು ಜನರು ಬಡಿಸುವ ಕೆಲಸದಲ್ಲಿ ತೊಡಗಿದ್ದರು. ಕೆಲವರು ಪಾಕಶಾಲೆಯಿಂದ

ಅನ್ನವನ್ನು ತಂದು ಪಂಗ್ತಿಯಲ್ಲಿ ಇಡುತ್ತಿದ್ದರು. ಕೆಲವರು ಬಡಿಸುವವರ ಕೈಯಲ್ಲಿ ಅನ್ನದ ಪಾತ್ರೆಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಬೇರೆ ಹಲವರು ಬಿದ್ದ ಕೆಲಸವನ್ನು ಮಾಡಲು ಸಿದ್ಧರಾಗಿದ್ದರು. ಇಂತು ಬಡಿಸುವ ವ್ಯವಸ್ಥೆಯು ನಡೆದಿರಲು, ಚೌಘಡೆಯು ಸುನಾದದಿಂದ ಜಾರಿಸತೊಡಗಿತು. ಭೋಜನದಲ್ಲಿ ಯಾವ ಪದಾರ್ಥಗಳ ಕೊರತೆಯೂ ಬೀಳಲಿಲ್ಲ. ಶ್ರೀ ಸದ್ಗುರುಗಳೇ ಅನ್ನವನ್ನು ಪೂರೈಸುತ್ತಿದ್ದದರಿಂದ ಕೊರತೆಯುಂಟಾಗುವ ಬಗೆಯೇನು? ದಿವಾಕರ-ಶಂಕರ ದೀಕ್ಷಿತರು ಪಂಙ್ತಿಯ ಮಧ್ಯದಲ್ಲಿ ಅಡ್ಡಾಡುತ್ತ, ಸಾವಕಾಶವಾಗಲಿ, ಬೇಕಾದ ಪದಾರ್ಥಗಳನ್ನು ಬೇಡಿ ಹಾಕಿಸಿಕೊಳ್ಳಿರಿ, ಎಂದು ಆಗಾಗ್ಗೆ ಪ್ರಾರ್ಥಿಸುತ್ತಿದ್ದರು. ಎಲ್ಲ ಬ್ರಹ್ಮವೃಂದವು ಆಕಂಠ ಭೋಜನಮಾಡಿ ತೃಪ್ತಿ ಹೊಂದಿತು. ದಿವಾಕರ ದೀಕ್ಷಿತರು ಭೋಜನೋತ್ತರದಲ್ಲಿ ತಾಂಬೂಲ-ದಕ್ಷಿಣೆ-ಪರಿಮಳಗಳಿಂದ ಬ್ರಾಹ್ಮಣರನ್ನು ಸತ್ಕರಿಸಿದರು. ಆ ಹೊತ್ತು ಮೊದಲನೆಯ ಪಂಙ್ತಿಗೆ ೫೨,೨೦೦ ಜನರು ಉಂಡರು; ಅಲ್ಲದೆ ಬಡಿಸುವವರೂ, ಎರಡು ಲಕ್ಷ ಸೈನಿಕರೂ ಊಟ ಮಾಡಿದ್ದು ಬೇರೆ. ಈ ಪ್ರಕಾರ ಸಮಸ್ತರು ಪ್ರಸಾದವನ್ನು ಸ್ವೀಕರಿಸಿ, ಆನಂದ ದಿಂದ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಶ್ರೀ ದೀಕ್ಷಿತರು ಪತ್ನಿಯರಿಂದ ಕೂಡಿಕೊಂಡು ಆಕಳ ಹಾಲನ್ನು ಸೇವಿಸಿ, ಯಾಗಮಂಟಪದಲ್ಲಿ ಬಂದು ಕುಳಿತುಕೊಂಡರು. ಆಗ ಪಂಡಿತರು ದರ್ಶನಕ್ಕಾಗಿ ಬಂದು, ದೀಕ್ಷಿತರನ್ನು ನಮಿಸಿ, ಶಾಸ್ತ್ರಧರ್ಮವನ್ನು ವಿಚಾರಿಸತೊಡಗಿದರು. ಮಹಾಸ್ವಾಮಿಗಳು ಉಚಿತೋತ್ತರಗಳಿಂದ ಅವರನ್ನು ಸಂತೈಸಿ, ರಾತ್ರಿಯು ಆದ್ದರಿಂದ ಅವರೆವರಿಗೆ ಸ್ವಸ್ಥಳಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟು ಕಳುಹಿ, ತಾವು ಅಲ್ಲೇ ಕೃಷ್ಣಾಜಿನದ ಮೇಲೆ ವಿಶ್ರಮಿಸಿದರು.

\+ + + + + + +

## —: ಎರಡನೆಯ ದಿವಸ (ಚೈತ್ರ ಶುದ್ಧ ಷಷ್ಠಿ.) :—

ಈ ದಿವಸ ಪ್ರಾತಃಕಾಲದಲ್ಲಿ ಋತ್ವಿಜರು ಸ್ನಾನವನ್ನು ಮಾಡಿ ನಿತ್ಯಾನುಷ್ಠಾನಾರ್ಥವಾಗಿ ದೀಕ್ಷಿತರ ಬಳಿಗೆ ಬಂದರು. ಆಗ ದೀಕ್ಷಿತರು ಎದ್ದು, ಯಜ್ಞೇಶ್ವರನನ್ನು ಅಭಿವಂದಿಸಿ, ಕುಳಿತುಕೊಂಡರು. ಋತ್ವಿಜರು ಸೋಮಕ್ರಿಯೆ ಮೊದಲಾದ ಸರ್ವ ಕರ್ಮಗಳನ್ನು ನೆರವೇರಿಸಿ, ಅನಂತರ ಪ್ರವರ್ಗ್ಯ ಧರ್ಮವನ್ನು ಆರಂಭಿಸಿದರು. ಇಬ್ಬರು ಸ್ಥಾತಾಧ್ವರ್ಯುಗಳು ಘರ್ಮವನ್ನು ಹಿಡಿದುಕೊಂಡು, ಮಂಟಪದ ಹಿಂಭಾಗಕ್ಕೆ ಒಯ್ದು, ಅಜಪಾಯವನ್ನು ಸುರ

ವಿದ ಕೂಡಲೆ, ಅಗ್ನಿಜ್ವಾಲೆಯು ಚಿತ್ರಗತಿಯಿಂದ ಎದ್ದಿತು. ಘರ್ಮಕ್ರಿಯೆಯನ್ನು ನೋಡುವಾಗ ಅಗ್ನಿಜ್ವಾಲೆಯು ಇಲ್ಲಿಯ ಸುದ್ದಿಯನ್ನು ದೇವತೆಗಳಿಗೆ ಅರಹುವದಕ್ಕಾಗಿ ಆಕಾಶಕ್ಕೆ ಹೋಗುವಂತೆ ತೋರಿತು. ಋತ್ವಿಜರು ಘರ್ಮಯಾಗವನ್ನು ಮಾಡಿ, ಯಜ್ಞಭಾಗವನ್ನು ಸೇವಿಸಿದರು. ಇಷ್ಟರಲ್ಲಿ ಮಧ್ಯಾಹ್ನವಾಗಲು, ಬ್ರಾಹ್ಮಣ ಭೋಜನದ ಸಿದ್ಧತೆಯಾಯಿತು. ಶಂಕರ ದೀಕ್ಷಿತರು ಈ ಹೊತ್ತು ಮೊದಲನೆಯ ದಿವಸದಂತೆ, ವಿಧವಿಧದ ಪಕ್ವಾನ್ನಗಳಿಂದ ಬ್ರಾಹ್ಮಣರನ್ನು ತೃಪ್ತಪಡಿಸಿದರು; ಇತ್ತ ದಿವಾಕರ ದೀಕ್ಷಿತರು ಶ್ರೀ ಗುರುಗಳ ಆಜ್ಞೆಯ ಮೇರೆಗೆ ಋತ್ವಿಜರನ್ನು ನಾನಾವಿಧದ ಮಧುರ-ಪಕ್ವ-ಫಲಗಳಿಂದ ಆನಂದಗೊಳಿಸಿದರು. ಈ ದಿನ ೬೨,೫೦೦ ಜನ ಬ್ರಾಹ್ಮಣರ ಭೋಜನವಾಯಿತು. ಹೊರತು ಸೈನಿಕ ಮೊದಲಾದವರ ಸಂಖ್ಯೆಯು ಮೊದಲನೆಯ ದಿವಸದಷ್ಟು. ಭೋಜನೋತ್ತರದಲ್ಲಿ ರಾಜರೂ, ಪಂಡಿತರೂ ಮೊದಲಾದವರು ಸದ್ಬೋಧಾಮೃತವನ್ನು ಸೇವಿಸುವ ಇಚ್ಛೆಯಿಂದ ಶ್ರೀ ಚಿದಂಬರ ದೀಕ್ಷಿತರ ಬಳಿಗೆ ಬಂದರು. ಆಗ ದೀಕ್ಷಿತರು ಬಾಲಬೋಧ ರೀತಿಯಿಂದ ಸನ್ಮಾರ್ಗವನ್ನು ಉಪದೇಶಿಸತೊಡಗಿದರು. ಇಷ್ಟರಲ್ಲಿ ಒಂದು ಚಮತ್ಕಾರವಾಯಿತು. ಮಲಾಪಹಾರಿಯಲ್ಲಿ ಈಸುತ್ತಿದ್ದ ಒಬ್ಬ ಬ್ರಾಹ್ಮಣನು ಕೈಸೋತು ಒಮ್ಮೆಲೆ ಮುಳುಗಿದನು. ಅದೇ ಕಾಲಕ್ಕೆ ಇತ್ತ ಸಭೆಯಲ್ಲಿ ದೀಕ್ಷಿತರು ಎರಡೂ ಕೈಗಳನ್ನು ಮೇಲಕ್ಕೆತ್ತಿ ಕಣ್ಣುಮುಚ್ಚಿಕೊಂಡು ಸುಮ್ಮನೆ ಕುಳಿತುಕೊಂಡರು. ಅರಕ್ಷಣದಲ್ಲಿ ಅವರ ವಸ್ತ್ರಗಳೊಳಗಿಂದ ನೀರು ಸ್ರವಿಸತೊಡಗಿದವು; ಈ ಅಧ್ಭುತವನ್ನು ನೋಡಿ ಜನರಿಗೆ ಆಶ್ಚರ್ಯವಾಯಿತು.

ಇತ್ತ ನದಿಯಲ್ಲಿ ಬ್ರಾಹ್ಮಣನು ಮುಣುಗುತ್ತಿರಲು, ಅವನಿಗೆ ತನ್ನ ತೋಳುಗಳನ್ನು ಹಿಡಿದು, ಯಾರೋ ಮೇಲಕ್ಕೆತ್ತಿದಂತೆಯಾಗಿ ಅವನು ಮೇಲೆ ಬರಲು, ಸಮೀಪದಲ್ಲಿ ಒಂದು ಶಿಲೆಯು ಕಂಡಿತು. ತೃಷಾರ್ತನಿಗೆ ಜಲಪ್ರಾಪ್ತಿಯಿಂದ ಆನಂದವಾಗುವಂತೆ, ಆ ಬ್ರಾಹ್ಮಣನಿಗೆ ಶಿಲಾದರ್ಶನದಿಂದ ಆನಂದವಾಗಿ ಅವನು ಅದನ್ನು ಗಟ್ಟಿಯಾಗಿ ಹಿಡಕೊಂಡು, ಮೆಲ್ಲನೆ ಅದರ ಮೇಲೆ ಏರಿ ಕುಳಿತುಕೊಂಡನು; ಹಾಗು ತನ್ನನ್ನು ಯಾರು ಉಳಿಸಿರಬಹುದೆಂದು ವಿಚಾರಿಸತೊಡಗಿದನು; ಆದರೆ ಅಲ್ಲಿ ಅವನಿಗೆ ಯಾರೂ ಕಾಣಿಸಲಿಲ್ಲ. ಆಗ ಅವನು:— ಇದೆಲ್ಲ ಶ್ರೀ ಚಿದಂಬರ ದೀಕ್ಷಿತರ ಮಹಿಮೆಯೇ ಹೊರತು, ಬೇರೆ ಇಲ್ಲ! ಎಂದು ಯೋಚಿಸಿ, ದೊಡ್ಡ ಧ್ವನಿಯಿಂದ ನಾಮೋಚ್ಚಾರವನ್ನು ಮಾಡತೊಡಗಿದನು.

ಆಗ ನದಿಯ ಸಮೀಪದಲ್ಲಿದ್ದ ಭೂಸುರರು, ನಾಮಘೋಷವನ್ನು ಕೇಳಿ, ಅಲ್ಲಿಗೆ ಹೋಗಿ, ಆ ಬ್ರಾಹ್ಮಣನನ್ನು ದಂಡೆಗೆ ಕರಕೊಂಡು ಬಂದರು. ಕೂಡಲೆ ಶಿಲೆಯು ಅದೃಶ್ಯವಾಯಿತು. ಆಗ ಅಲ್ಲಿಯ ಜನರಿಗೆ ಆಶ್ಚರ್ಯವಾಯಿತು. ಇತ್ತ ಶ್ರೀ ಗುರುಗಳು ಕ್ಷಣಹೊತ್ತು ಶ್ರಮಿಸಿದ ಬಳಿಕ ಎದ್ದು, ಬೇರೆ ವಸ್ತ್ರಗಳನ್ನುಟ್ಟುಕೊಂಡು, ಮತ್ತೆ ಭಕ್ತರನ್ನು ಬೋಧಿಸತೊಡಗಿದರು. ಇಷ್ಟರಲ್ಲಿ ನದಿಯಿಂದ ಜನರು ಬ್ರಾಹ್ಮಣನನ್ನು ಕರಕೊಂಡು ಬಂದು ದೀಕ್ಷಿತರಿಗೆ ನದಿಯಲ್ಲಿ ವರ್ತಿಸಿದ ವೃತ್ತಾಂತವನ್ನು ಹೇಳಿದರು. ಅದನ್ನು ಕೇಳಿ, ಅಲ್ಲಿಯ ಜನರು ಆನಂದಾಶ್ಚರ್ಯಗಳಿಂದ ಕೂಡಿದವರಾಗಿ, ದೀಕ್ಷಿತರನ್ನು ಮೇಲಿಂದ ಮೇಲೆ ಅಭಿವಂದಿಸಿ, ಜಯಜಯಕಾರವನ್ನು ಗರ್ಜಿಸ ತೊಡಗಿದರು. ಲೀಲಾಧಾರಿಯಾದ ಶ್ರೀ ಗುರುವಿನ ವಿಚಿತ್ರ ಚರಿತ್ರಗಳನ್ನು ಎಷ್ಟೆಂದು ವರ್ಣಿಸಬೇಕು!

ಸಾಯಂಕಾಲವಾಗಲು, ಶುಚಿಷ್ಮಂತರಾದ ಋತ್ವಿಜರು ಸಾಯಂಪ್ರಾವರ್ಗ್ಯಕರ್ಮಗಳನ್ನು ತೀರಿಸಿ, ಗುರುಗಳ ಅಪ್ಪಣೆಯಿಂದ ಸಂಧ್ಯಾವಂದನೆಗಾಗಿ ನದಿಗೆ ಹೋದರು. ದೀಕ್ಷಿತರು ಪಯಃಪಾನವನ್ನು ಮಾಡಿ, ಸುಖಾಸನದಲ್ಲಿ ಕುಳಿತುಕೊಂಡರು. ಆಗ ಪೌರಾಣಿಕರು ಪುರಾಣದಿಂದ, ಗಾಯಕರು ಗಾನದಿಂದ, ಭಕ್ತರು ಭಜನದಿಂದ ವೈದಿಕರು ವೇದಘೋಷದಿಂದ ಮಹಾಸ್ವಾಮಿಯನ್ನು ಸೇವಿಸತೊಡಗಿದರು. ಎಷ್ಟೋ ಪುರಂಧ್ರೀ ಜನರು ಪಂಚಾರತಿಯನ್ನು ಸದ್ಭಾವದಿಂದ ಬೆಳಗುತ್ತಿದ್ದರು. ಇಂತು ಕೆಲವು ಕಾಲ ಸಮಸ್ತ ಭಕ್ತರು ಮಹಾಸ್ವಾಮಿಯ ಸೇವೆಯನ್ನು ಮಾಡಿ, ತಮ್ಮ ಸ್ಥಳಗಳಿಗೆ ಹೊರಟುಹೋದರು.

ಅಷ್ಟರಲ್ಲಿ ದಿವಾಕರ ದೀಕ್ಷಿತರು ಮ್ಲಾನಮುಖದಿಂದ ಮುಖಮಂಟಪಕ್ಕೆ ಬಂದು, ಶ್ರೀ ಗುರುಗಳಿಗೆ ನಮಸ್ಕರಿಸಿ:—ತಂದೆಯೇ, ಇನ್ನೇನು ಮಾಡಲಿ! ನಾನು ಸಂಗ್ರಹಿಸಿದ ಉಗ್ರಾಣದೊಳಗಿನ ಸಾಮಗ್ರಿಯು ನಾಲ್ಕರಲ್ಲಿ ಮೂರು ಪಾಲು ಇಷ್ಟರಲ್ಲಿಯೇ ತೀರಿಹೋಯಿತು. ಮುಂದೇನು ಗತಿ? ಜನರಂತೂ ದಿನೇ ದಿನೇ ಹೆಚ್ಚುತ್ತಲಿರುವರು!! ಲೆಕ್ಕ-ಪತ್ರಗಳ ವ್ಯವಸ್ಥೆಯು ಚನ್ನಾಗಿ ಇದ್ದರೂ ಸಾಮಗ್ರಿಯು ಈಡಾಗಲಿಲ್ಲ. ನನ್ನ ಕೈಕಾಲುಗಳೇ ಹೋಗಿರುವವು. ಮುಂದೆ ಏನು ಮಾಡಬೇಕೆಂಬದನ್ನು ನಿವೇದಿಸಬೇಕೆಂದು ಬೇಡಿಕೊಂಡರು. ಆಗ ದೀಕ್ಷಿತರು ನಕ್ಕು:—ದಿವಾಕರಾ, ನಾನು ನಿನಗೆ ಯಜ್ಞದ ಗೊಡವಿಗೆ ಹೋಗಬೇಡೆಂದು ಮೊದಲೇ ಹೇಳಲಿಲ್ಲವೇ? ಲೆಕ್ಕಪತ್ರವನ್ನು ಇಡಿಸುವ ಹವ್ಯಾಸಕ್ಕೆ ಯಾಕೆ ಬಿದ್ದೆ? ಸಮಾಧಾನವೇ ನಮ್ಮ ಧನವು! ಚಿತ್ತೈಕಾಗ್ರತೆಯನ್ನು

ಹೋಗಲಾಡಿಸುವ ಹಣದ ಲೆಕ್ಕವನ್ನು ಬರೆಸಬೇಡ, ಕೊಡುವವರಾರು? ತಕ್ಕೊಳ್ಳುವವರಾರು? ಪ್ರಾಣಿಯು ವ್ಯರ್ಥವಾಗಿ ಅಭಿಮಾನಕ್ಕೆ ಒಳಗಾಗುತ್ತಾನೆ. ಎಲ್ಲರನ್ನು ಸಂರಕ್ಷಿಸುವ ಸದಾಶಿವನು ಸರ್ವಕಾಲ ಜಾಗರೂಕನಾಗಿರುವನು. ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆ ಆಹಾರವನ್ನು ಕೊಡುವವನೊಬ್ಬನು ಇದ್ದೇ ಇದ್ದಾನೆ ಧೈರ್ಯತಾಳು; ಸುಮ್ಮನೆ ವಿಕಾರವಶನಾಗಿ ಚಿಂತಿಸಬೇಡ. ಸರ್ವವೂ ಸಮಾಧಾನದಿಂದಲೇ ಸಾಂಗವಾಗುವದು, ಎಂದು ಬೋಧಿಸಿ, ಅವರಿಗೆ ಹೋಗಲಪ್ಪಣೆಯನ್ನು ಕೊಟ್ಟು, ತಾವು ನಿಜಾನಂದದಲ್ಲಿ ಮಗ್ನರಾಗಿ, ಅಲ್ಲಿಯೇ ವಿಶ್ರಮಿಸಿದರು. ಇತ್ತ ದಿವಾಕರ ದೀಕ್ಷಿತರು ತಂದೆಯು ಬೋಧದಿಂದ ಧೈರ್ಯಗೊಂಡು, ಉತ್ಸಾಹವುಳ್ಳವರಾಗಿ, ತಮ್ಮ ಕಾರ್ಯದಲ್ಲಿ ಮಗ್ನರಾದರು.

* * * * *

## —: ಮೂರನೆಯ ದಿವಸ (ಚೈತ್ರ ಶುದ್ಧ ಸಪ್ತಮಿ) :—

ಈ ದಿನ ಪ್ರಭಾತ ಸಮಯದಲ್ಲಿ ಋತ್ವಿಜರು ಶುಚಿರ್ಭೂತರಾಗಿ, ನಿತ್ಯಕರ್ಮಗಳನ್ನು ನೆರವೇರಿಸಿ, ಪ್ರಾವರ್ಗ್ಯಾಚರಣವನ್ನು ಆರಂಭಿಸಿದರು ಅಧ್ವರ್ಯುಗಳು ಅನ್ನುವ ಮಂತ್ರವನ್ನೂ ಉದ್ಗಾತೃಗಳು ಸುಸ್ವರದಿಂದ ಅನ್ನುವ ಸಾಮಗಾನವನ್ನೂ, ಹೋತೃಗಳ ಪ್ರಣವೋಚ್ಚಾರಗಳನ್ನೂ ಜನಸಂದೋಹವು ಆನಂದದಿಂದ ಕೇಳುತ್ತಿತ್ತು. ಋತ್ವಿಜರು ಪ್ರಾಪಸ್ತ್ಯವಿಧಿಯು ಮುಗಿದ ಬಳಿಕ, ಮಿಕ್ಕ ಪ್ರಾತರನುಷ್ಠಾನಗಳನ್ನು ತೀರಿಸಿ, ಸಂಧ್ಯಾವಂದನೆಯನ್ನು ಮಾಡುವದಕ್ಕಾಗಿ ಮಲಾಪಹಾರಿಗೆ ಹೊರಟು ಹೋದರು.

ಭೋಜನ ಸಮಯವು ಪ್ರಾಪ್ತವಾಗಲು, ದಿನದಂತೆ ಬ್ರಾಹ್ಮಣಸಂತರ್ಪಣೆಗೆ ಆರಂಭವಾಯಿತು. ಆಗ ವಸಂತಋತುವಿದ್ದದರಿಂದ ಆಮ್ರವೃಕ್ಷಗಳಿಗೆ ನವ-ಪಲ್ಲವಾಂಕುರ-ಹಣ್ಣು-ಹಂಪಲುಗಳುಂಟಾಗಿ, ಆ ಸಮಂತಭಾಗಕ್ಕೆ ಅಮೋಘಶೋಭೆಯುಂಟಾಗಿತ್ತು. ಆಮ್ರತರುಗಳ ಶೀತಲಛಾಯೆಯಲ್ಲಿ ಬ್ರಹ್ಮವೃಂದವು ಸಮಾಧಾನದಿಂದ ಕುಳಿತುಕೊಂಡಿತ್ತು. ಎಲೆಗಳು ಬಡಿಸಲ್ಪಟ್ಟವು; ಇನ್ನು ಊಟಕ್ಕೆ ಕೂಡ್ರುವವರು, ಅಷ್ಟರಲ್ಲಿ ಒಂದು ವಿಘ್ನವು ಉಂಟಾಯಿತು. ಅದೇನಂದರೆ:—ಪಲ್ಲೆಯನ್ನು ತುಂಬಿಕೊಡುವ ಒಬ್ಬ ಅಡಿಗೆಯವನು ಕಾಲುಜಾರಿ, ಕೂಷ್ಮಾಂಡಶಾಕಾ ಸಂಗ್ರಹದ ಹೌದಿನಲ್ಲಿ ಬಿದ್ದನು. ಅವನ ಶರೀರವು ಬೆಂದು ಹೋಯಿತು. ಕೆಲವು ಜನ ಅಡಿಗೆಯವರು ಓಡಿಬಂದು, ಅವನನ್ನು ಹೊರಗೆ

ಶಿಗೆದು ಹಾಹಾಃಕಾರವನ್ನುಂಟು ಮಾಡಿದರು. ಎಷ್ಟೋ ಜನರು ಅಲ್ಲಿ ನೆರೆದು, ಮೃತಪ್ರಾಯನಾದ ಬ್ರಾಹ್ಮಣನನ್ನು ನೋಡಿ, ದುಃಖಿಸತೊಡಗಿದರು; ಕೆಲವು ಜನರು ಮಹಾಸ್ವಾಮಿಯು ಒಳಿಗೆ ಓಡಿಬಂದು ನಡೆದ ಸಂಗತಿಯನ್ನೆಲ್ಲ ಹೇಳಿದರು.

ಆಗ ಗುರುಗಳು:—ಹಾ! ಅಮಂಗಲವನ್ನು ನುಡಿಯಬೇಡಿರಿ! ಅಡಿಗೆಯವನಿಗೆ ಏನಾಗಿದೆ! ನೋಡೋಣ ನಡೆಯಿರಿ, ಎಂದು ನುಡಿದು, ಪಾಕಶಾಲೆಗೆ ಹೋಗುವದಕ್ಕಾಗಿ ಹೊರಟರು. ಪಂಗ್ತಿಯೊಳಗಿನ ಜನರು ಯಜ್ಞನಾರಾಯಣನಂತೊಪ್ಪುವ ದೀಕ್ಷಿತರಿಗೆ ಅಭ್ಯುತ್ಥಾನವನ್ನು ಮಾಡಿ ನಮಸ್ಕರಿಸುತ್ತಿದ್ದರು. ಶ್ರೀ ಚಿದಂಬರ ದೀಕ್ಷಿತರು ವಿಪ್ರರ ನಮಸ್ಕಾರಗಳನ್ನು ಸ್ವೀಕರಿಸುತ್ತ, ಅವರನ್ನು ಕೃಪಾದೃಷ್ಟಿಯಿಂದ ಅವಲೋಕಿಸುತ್ತ ಪಾಕಗೃಹಕ್ಕೆ ಬಂದರು. ಅವರು ಆ ಕಂಠಗತಪ್ರಾಣಧಾರಿಯಾದ ಬ್ರಾಹ್ಮಣನನ್ನು ನೋಡಿ ಕನಿಕರಪಟ್ಟು, ಆವನ ಮೈಮೇಲೆ ಕಲಶದೊಳಗಿನ ಜಲವನ್ನು ವರದಹಸ್ತದಿಂದ ಸಿಂಚಿಸಿ, ಕೃಪಾದೃಷ್ಟಿಯಿಂದ ನೋಡಿದರು; ಹಾಗು ಅವನ ಮೈತುಂಬ ಜೇನತುಪ್ಪವನ್ನು ಹಚ್ಚಿಸಿ, ಯಾಗಮಂಟಪದ ಬಳಿಯಲ್ಲಿ ಬಾಳೇ ಎಲೆಯೊಳಗೆ ಅವನನ್ನು ಮಲಗಿಸಿ, ತಾವು ಆಮ್ರವನಕ್ಕೆ ಬಂದು:—ಚಿಂತಿಸಬೇಡಿರಿ! ಅರಿಷ್ಟನಿವಾರಣೆಯಾಯಿತು. ಬ್ರಾಹ್ಮಣನು ಬದುಕಿರುವನು!! ಸ್ವಸ್ಥಮನಸ್ಸಿನಿಂದ ಭೋಜನ ಮಾಡಿರಿ. ಈ ಹೊತ್ತು ಇಚ್ಛಾಭೋಜನವು. ಫಲ ಮೂಲ-ಶಾಕ-ಪಕ್ವಾನ್ನಗಳಲ್ಲಿ ಬೇಕಾದದ್ದನ್ನು ನಿರ್ಭಯದಿಂದ ಬೇಡಬೇಕು, ಎಂದು ಮಧುರವಚನಗಳಿಂದ ಮಾತಾಡಿ, ಮಹಾಸ್ವಾಮಿಯು ಪಂಗ್ತಿಯಲ್ಲಿ ತಿರುಗಾಡಹತ್ತಿದನು. ಋತುಪರತ್ವದಿಂದ ದುರ್ಲಭವಾದ ಪದಾರ್ಥಗಳನ್ನು ಮಹಾಸ್ವಾಮಿಗಳು ತಮ್ಮ ಸ್ವಸತ್ತೆಯಿಂದ ನಿರ್ಮಾಣ ಮಾಡಿ, ದ್ವಿಜವೃಂದವನ್ನು ತೃಪ್ತಿಬಡಿಸಿದರು. ಆ ಹೊತ್ತಿನ ಭೋಜನಲಾಭವನ್ನು ಹೊಂದಿದ ಜನರು ಪರಮ ಪುಣ್ಯಾತ್ಮರಲ್ಲವೆ? ಗುರುಪ್ರಸಾದದ ಸ್ವಾದವನ್ನು ವರ್ಣಿಸುವವರಾರು? ಭೋಜನೋತ್ತರದಲ್ಲಿ ದೀಕ್ಷಿತರು ಹೇರಳದಕ್ಷಿಣೆಯಿಂದ ಬ್ರಾಹ್ಮಣರನ್ನು ಸತ್ಕರಿಸಿ, ತಾಂಬೂಲ-ಪರಿಮಳದ್ರವ್ಯಗಳನ್ನು ಕೊಟ್ಟು ಅವರನ್ನು ಆದರದಿಂದ ಸ್ವಸ್ಥಾನಕ್ಕೆ ಕಳುಹಿದರು. ಈ ದಿನ ೮೦,೦೦೦ ಜನ ಬ್ರಾಹ್ಮಣರು ಮೊದಲನೆಯ ಪಂಗ್ತಿಗೆ ಉಂಡರು. ಮಿಕ್ಕ ಜನರ ಪ್ರಮಾಣವು ಪ್ರಥಮ ದಿವಸದಂತೆ!

ಎಂದಿನಂತೆ ಋತ್ವಿಜರು ಉಪಾಹಾರವನ್ನು ತೀರಿಸಿಕೊಂಡು, ಯಾಗಮಂಟಪಕ್ಕೆ ಬಂದು, ಗುರುಗಳನ್ನು ವಂದಿಸಿ ಕುಳಿತುಕೊಂಡರು. ಮಾತಿಗೆ

ಮಾತು ಹೊರಟು, ಋತ್ವಿಜರು ಗುರುಗಳಿಗೆ:--ತಾವು ಬಳಿಯಲ್ಲಿರುತ್ತಿರಲು, ಈ ಅಡಿಗೆಯವನಿಗೆ ಇಷ್ಟು ಕಷ್ಟವೇಕೆ? ಈ ಮೊದಲು ತಾವು ಮೃತಕನ್ಯೆಯನ್ನು ಸಜೀವಗೊಳಿಸಲಿಲ್ಲವೆ? ವಿಧವೆಗೆ ಸೌಭಾಗ್ಯವನ್ನು ಕೊಡಲಿಲ್ಲವೇ? ಹಿಪ್ಪರಿಗೆಯಲ್ಲಿ ಕಲ್ಲುಬಿದ್ದು ಸತ್ತ ವಿಪ್ರನನ್ನು ಬದುಕಿಸಲಿಲ್ಲವೆ? ಹೀಗಿದ್ದು, ಈ ಅಡಿಗೆಯವನು ಇನ್ನೂ ಏಕೆ ವ್ಯಥೆಯನ್ನು ಅನುಭವಿಸುತ್ತಿರುವನು? ಇವನು ನಿಜವಾಗಿ ದುರ್ದೈವಿಯೆ? ಎಂದು ಕೇಳಿದರು. ಆಗ ಚಿದಂಬರ ದೀಕ್ಷಿತರು:—ದ್ವಿಜೋತ್ತಮರೇ, ಹಾಗಲ್ಲ, ಇವನ ಪೂರ್ವ ವೃತ್ತಾಂತವನ್ನು ಹೇಳುತ್ತೇನೆ, ಲಕ್ಷ್ಯಗೊಟ್ಟು ಕೇಳಿರಿ: ಈ ಬ್ರಾಹ್ಮಣನು ಹಿಂದಕೊಮ್ಮೆ "ಶ್ರೀ ಗುರುವೆ, ನಾನು ಬದುಕಿರುವ ವರೆಗೆ ನನಗೆ ನಿನ್ನ ಸೇವೆಯು ಘಟಿಸಲಿ; ಕಡೆಗೆ ನಿನ್ನ ಸನ್ನಿಧಿಯಲ್ಲಿಯೇ ನನ್ನ ದೇಹಾವಸಾನವಾಗಬೇಕು; ಹಾಗು ನನಗೆ ಅಂತ್ಯದಲ್ಲಿ ಕೈಲಾಸ ಪ್ರಾಪ್ತಿಯಾಗಬೇಕೆಂಬ ಇಚ್ಛೆಯಿರುವದು" ಎಂದು ಪ್ರಾರ್ಥಿಸಿದ್ದನು. ಈದಿನ ಇವನ ದೇಹಾವಸಾನವಾಗತಕ್ಕದ್ದು; ಆದರೆ ಮಹಾಕಾರ್ಯಕ್ಕೆ ವಿಘ್ನವುಂಟಾಗಬಾರದೆಂಬದಾಗಿ, ಮೃತ್ಯುಂಜಯನನ್ನು ಪ್ರಾರ್ಥಿಸಿ, ಈತನಿಗೆ ಹತ್ತು ದಿವಸಗಳ ಆಯುಷ್ಯವನ್ನು ಕೊಡಿಸಿರುವೆನು. ಇಂದಿನಿಂದ ಹನ್ನೊಂದನೆಯ ದಿವಸ ಪ್ರಾತಃಕಾಲಕ್ಕೆ ಈತನ ದೇಹಾವಸಾನವಾಗಿ, ಇವನು ನಿಶ್ಚಯವಾಗಿ ಕೈಲಾಸವನ್ನೈದುವನು. ಈ ಭವಿಷ್ಯವು, ಎಂದೂ ಸಟೆಯಾಗಲಾರದು. ಸದ್ಯಕ್ಕೆ ಅವನಿಗೆ ಸ್ವಲ್ಪಾದರೂ ವ್ಯಥೆಯಾಗುವದಿಲ್ಲ. ಹಾಲು-ನೀರು ಸಮರಸವಾಗುವಂತೆ, ಇವನ ಮನಸು ಶಿವಸ್ಮರಣಾನಂದದಲ್ಲಿ ಸಮರಸವಾಗಿರುವದು, ಎಂದು ಹೇಳಲು, ಋತ್ವಿಜರು ಆಶ್ಚರ್ಯಹೊಂದಿ, ಸಾಯಂಕರ್ಮವನ್ನಾಚರಿಸಲು, ನದಿಗೆ ಹೋದರು. ಇತ್ತ ಚಿದಂಬರ ದೀಕ್ಷಿತರು ಪಯಃಪಾನಮಾಡಿ, ನಿತ್ಯದಂತೆ ಭಕ್ತರಿಗೆ ಬೋಧಿಸಿದ ಬಳಿಕ ಸುಖಾಸನದಲ್ಲಿ ವಿಶ್ರಮಿಸಿದರು.

* § * § *

## —:ನಾಲ್ಕನೆಯ ದಿವಸ (ಚೈತ್ರಶುದ್ಧ ಅಷ್ಟಮಿ):—

ಈ ಹೊತ್ತಿನ ಅಗ್ನಿಷ್ಟೋಮೀಯದ ವಿಧಾನವು ಮಹತ್ವದ್ದಾಗಿರುವದು. ಋತ್ವಿಜರು ದಿನದಂತೆ ಪ್ರಾತಃಸಮಯದಲ್ಲಿ ಸ್ನಾನಮಾಡಿ ನಿತ್ಯ ಕರ್ಮಗಳನ್ನು ಆರಂಭಿಸುವದಕ್ಕಾಗಿ ಶ್ರೀ ಗುರುಗಳ ಬಳಿಗೆ ಬಂದರು. ಅಂದು ಸಾವಿತ್ರೀಮಾತೆಯು ಋತುಮತಿಯಾದಳು. ಪಂಡಿತರು ಶಾಸ್ತ್ರಾರ್ಥವನ್ನು ನೋಡಿ, ಹಿರಿಯ ಹೆಂಡತಿಯು ಬಳಿಯಲ್ಲಿರಲು, ಇದರಿಂದ ಕಾರ್ಯಕ್ಕೆ ಪ್ರತಿಬಂಧವು ಬರ

ಲಾರದು; ಆದ್ದರಿಂದ ಕಾರ್ಯವನ್ನು ಆರಂಭಿಸಲಿಕ್ಕೆ ಅಪ್ಪಣೆಯಾಗಬೇಕೆಂದು ತಿಳಿಸಿದರು. ಆಗ ಶ್ರೀ ಗುರುಗಳು:-ಗಡಬಿಡಿಯಾಕೆ? ಅನಾಯಾಸವಾಗಿ ನಾಲ್ಕು ದಿವಸ ಬ್ರಾಹ್ಮಣ ಭೋಜನವಾಗುತ್ತದೆ. ಆಗಲಿ; ಎಂಟನೆಯು ದಿವಸ ಅಗ್ನಿಷ್ಟೋಮಿಯುವನ್ನು ಮಾಡಬಹುದು, ಎಂದು ಹೇಳಿದರು. ಈ ಮಾತಿಗೆ ಎಲ್ಲರು ಸಮ್ಮತಿಸಿದರು. ನಾಲ್ಕು ದಿವಸ ಯಥೇಚ್ಛವಾಗಿ ಬ್ರಾಹ್ಮಣ ಸಂತರ್ಪಣೆಯಾಯಿತು. ಈ ನಾಲ್ಕು ದಿವಸಗಳಲ್ಲಿ ಕೂಡಿ ೩,೬೦,೦೦೦ ಜನ ಬ್ರಾಹ್ಮಣರ ಭೋಜನವಾಯಿತು. ಉಳಿದ ಸೈನಿಕರು ಪ್ರತಿದಿನದಂತೆ!

†‡† ‡†‡ †‡† ‡†‡ †‡†

## —:* ಚೈತ್ರಶುದ್ಧ ದ್ವಾದಶಿ:—

ಈ ಹೊತ್ತು ಬ್ರಾಹ್ಮ್ಯ ಮುಹೂರ್ತದಲ್ಲಿ ಎಲ್ಲ ಋತ್ವಿಜರು ಸುಸ್ನಾತರಾಗಿ, ಶುಚಿರ್ಭೂತರಾಗಿ, ಮಖಮಂಟಪಕ್ಕೆ ಬಂದು, ಶ್ರೀ ಗುರುಗಳಿಗೆ ವಂದಿಸಿ ಎರಡೂ ಪ್ರಾವರ್ಗ್ಯಗಳನ್ನು ಮುಗಿಸಿದರು. ಬಳಿಕ ಪ್ರಾವರ್ಗ್ಯೋತ್ಸಾದನವನ್ನು ಮಾಡಿ, ಬೇಗನೆ ಅಗ್ನಿ ಪ್ರಣಯನವನ್ನು ಮಾಡಿದರು. ಆ ಮೇಲೆ ಅಗ್ನಿಷ್ಟೋಮಿಯ ಕಾರ್ಯಕ್ಕೆ ಆರಂಭವಾಯಿತು ಯಾವತ್ತು ಕಾರ್ಯಗಳು ವಿಧಿಪೂರ್ವಕವಾಗಿ ಸಾಂಗವಾದ ಬಳಿಕ ಬ್ರಾಹ್ಮಣ ಭೋಜನಕ್ಕೆ ಆರಂಭವಾಯಿತು. ಪ್ರತಿನಿತ್ಯದಂತೆ ಸರ್ವ ಪದಾರ್ಥಗಳನ್ನು ನಿಯಮಿತ ಕಾರ್ಯಾಧಿಕಾರಿಗಳು ಬಡಿಸುತ್ತಿರಲು, ಅರ್ಧಪಙ್ತಿಗೆ ತುಪ್ಪವು ತೀರಿತು. ಆಗ ಘೃತಾಧಿಕಾರಿಯು ಬೆದರಿ ಶ್ರೀ ಗುರುಗಳ ಹತ್ತಿರ ಬಂದು:—ಹೇ ಮಹಾಪ್ರಭೋ, ತುಪ್ಪವು ಅರ್ಧಪಂಙ್ತಿಗೆ ತೀರಿತು. ಇನ್ನೇನು ಮಾಡಲಿ? ನನ್ನಿಂದ ಬ್ರಾಹ್ಮಣ ಭೋಜನಕ್ಕೆ ಕೊರತೆಯು ಬಂದಿತಲ್ಲ! ಹೇಗಾದರೂ ಮಾಡಿ ಈ ಬಡವನನ್ನು ಕಾಪಾಡಬೇಕು. ದಿವಾಕರ ದೀಕ್ಷಿತರ ಸಂಗಡ ವ್ಯವಹಾರವಿರುವದು, ಎಂದು ಪರಿಪರಿಯಿಂದ ಹೇಳಿಕೊಂಡನು. ಆಗ ಶ್ರೀಗುರುಗಳು:—ಚಿಂತಿಸಬೇಡ. ಮಲಾಪಹಾರಿಯಲ್ಲಿ ಬೇಕಾದಷ್ಟು ತುಪ್ಪವನ್ನು ಕೈಗಡ ಇಸುಕೊಂಡು ಬಂದು, ಕಾರ್ಯವನ್ನು ಕೊನೆಗಾಣಿಸಬೇಕೆಂದು ಉಗ್ರಾಣದ ಅಧಿಪತಿಗಳಾದ ಗರಗದ ಮಡಿವಾಳಪ್ಪನವರಿಗೆ ಹೇಳಲು, ಅವರು ಹರ್ಷಿತರಾಗಿ, ಸೇವಕರೊಡನೆ ಮಲಾಪಹಾರಿಗೆ ಹೋಗಿ ಶ್ರೀ ಚಿದಂಬರ ನಾಮಘೋಷವನ್ನು ಪಠಣ ಮಾಡುತ್ತ, ಮಲಾಪಹಾರಿಯನ್ನು ಪ್ರಾರ್ಥಿಸಿ, ನೂರಾರು ಕೊಡಗಳನ್ನು ತುಂಬಿಸಿದರು. ಆಗ ಅದೇ

* ಈ ಹೊತ್ತು ನಾಲ್ಕನೆಯ ದಿವಸದ ಕಾರ್ಯಗಳು ಜರುಗಿದವು.

ಕಾಸಿದ ತುಪ್ಪದಂತೆ ಸುವಾಸನೆಯು ನಾಲ್ಕೂ ಕಡೆಗೆ ಪಸರಿಸಿತು ಬಳಿಕ ತುಪ್ಪದ ಅಧಿಕಾರಿಯು ಅದನ್ನು ತಂದು ಯಥೇಚ್ಛವಾಗಿ ಬಡಿಸಿದನು. ಈಹೊತ್ತು ತುಪ್ಪದಲ್ಲಿ ಸಮಸ್ತರ ಪ್ರೀತಿಯು ವೃದ್ಧಿಸಿತು. ಎಲ್ಲರೂ ತುಪ್ಪವನ್ನೇ ವಿಶೇಷ ವಾಗಿ ಸೇವಿಸಿದರು. ಭೋಜನವು ಮುಗಿದ ಕೂಡಲೆ ಬ್ರಹ್ಮವೃಂದವು ತಾಂಬೂಲ ದಕ್ಷಿಣೆಗಳಿಂದ ಸತ್ಕರಿಸಲ್ಪಟ್ಟಿತು. ಆ ದಿನ ಒಟ್ಟಿಗೆ ೯೪,೮೦೦ ಜನ ಬ್ರಾಹ್ಮಣರ ಭೋಜನವಾಯಿತು. ಮಿಕ್ಕವರ ಪ್ರಮಾಣವು ಮೊದಲನೆಯ ದಿವಸದಂತೆ! ಇತ್ತ ದೀಕ್ಷಿತರು ಗೋಕ್ಷೀರವನ್ನು ಪಾನಮಾಡಿ, ಮಂಟಪದಲ್ಲಿ ಆನಂದದಿಂದ ಕುಳಿತುಕೊಂಡರು ನಿತ್ಯದಂತೆ ಸದ್ಬೋಧಶ್ರವಣ ಮಾಡಿ ಜನರೆಲ್ಲರು ಸ್ವಸ್ಥಾನ ಗಳಿಗೆ ಹೋದ ಬಳಿಕ ಶ್ರೀಗುರುಗಳು ಕೃಷ್ಣಾಜಿನದ ಮೇಲೆ ವಿಶ್ರಮಿಸಿದರು.

* * * * *

## —: ಐದನೆಯ ದಿವಸ (ಚೈತ್ರಶುದ್ಧ ತ್ರಯೋದಶೀ) :—

ಈ ಹೊತ್ತು ಋತ್ವಿಜರು ಅಪರರಾತ್ರಿಯಲ್ಲಿ ಎದ್ದು, ಸುಸ್ನಾತರಾಗಿ ಮಂಟಪಕ್ಕೆ ಬಂದು ಶ್ರೀಗುರುಗಳನ್ನು ವಂದಿಸಿ, ಸುತ್ಯಾಕರ್ಮವನ್ನು ಆರಂಭಿಸಿದರು. ಅದು ವಿಧಿಪೂರ್ವಕವಾಗಿ ಮುಗಿಯಲು, ಪ್ರಾತಃಸವನಕ್ಕೆ ಆರಂಭವಾಯಿತು. ಆಗ ಆಕಾಶದಲ್ಲಿ ದೇವತೆಗಳು ಸೋಮಪಾನಕ್ಕಾಗಿ ಧಾವಿಸಿ ಬರುತ್ತಿದ್ದರಂತೆ! ಈ ಸಂಗತಿಯನ್ನು ಸಖಾರಾಮ ಹಾಗು ರಾಜಾರಾಮ ಮೊದಲಾದವರು ಪ್ರತ್ಯಕ್ಷ ವಾಗಿ ನೋಡಿದರಂತೆ! ಇರಲಿ ಮಂತ್ರಘೋಷದಿಂದ ಮಖಮಂಟಪವೆಲ್ಲ ತುಂಬಿಹೋಯಿತು. ಋತ್ವಿಜರು ಹುತಶೇಷವನ್ನು ಪಾನಮಾಡಲು ಉತ್ಸುಕ ರಾದರು. ಸೋಮಯಾಗ(ಅಗ್ನಿಷ್ಟೋಮ)ದ ಯಾವತ್ತು ವಿಧಿಗಳು ಮುಗಿದು ಋತ್ವಿಜರೂ, ದೇವತೆಗಳೂ ಸೋಮವನ್ನು ಪಾನಮಾಡಿ ತೃಪ್ತರಾದರು. ಇಂತು ಪ್ರಾತಃಸವನವು ಸಂಭ್ರಮದಿಂದ ಸಂಪೂರ್ಣವಾಗಲು, ಚತುರರಾದ ಋತ್ವಿಜರು ದ್ವಿತೀಯ ಯಾಮದಲ್ಲಿ ಮಾಧ್ಯಾಹ್ನಸವನವನ್ನು ಆರಂಭಿಸಿ, ಸೋಮ ಯಾಗದ ವಿಧಿಗಳನ್ನು ಪೂರ್ಣಮಾಡಿದರು. ಬಳಿಕ ದಕ್ಷಿಣಹೋಮವು ಮಾಡ ಲ್ಪಟ್ಟಿತು. ಆಮೇಲೆ ಶ್ರೀಗುರುಗಳು ಋತ್ವಿಜರನ್ನು ಪೂಜಿಸುವದಕ್ಕಾಗಿ ಸದೋ ಮಂಟಪಕ್ಕೆ ಬಂದರು. ಮೊಟ್ಟಮೊದಲು ಅವರು ಋತ್ವಿಜರ ಕಾಲುಗಳನ್ನು ತೊಳೆದು, ಚರಣತೀರ್ಥವನ್ನು ತಲೆಯ ಮೇಲೆ ಸಿಂಪಡಿಸಿಕೊಂಡು, ಅರ್ಘ್ಯ ಪಾದ್ಯಾದಿಗಳಿಂದಲೂ, ನಾನಾ ವಿಧ ವಸ್ತ್ರಾಲಂಕಾರಗಳಿಂದಲೂ ಅವರನ್ನು ಪೂಜಿಸಿ, ಸಾಕಷ್ಟು ದಕ್ಷಿಣೆಯನ್ನು ಕೊಟ್ಟರು. ಸೂತ್ರಪ್ರಕಾರ ಸಾಲಂಕೃತ

ವಾದ ನೂರು ಗೋವುಗಳನ್ನು ಋತ್ವಿಜರಿಗೆ ದಾನಮಾಡಿದರು. ಆಮೇಲೆ ಚಮಸಾಧ್ವರೋಪ ಋತ್ವಿಜರನ್ನೂ, ಮಿಕ್ಕ ಶಾಸ್ತ್ರಿ, ಪಂಡಿತ, ಬ್ರಾಹ್ಮಣ ಮೊದಲಾದವರನ್ನೂ ದಕ್ಷಿಣೆಯಿಂದ ಆನಂದಗೊಳಿಸಿದರು.

ಶ್ರೀ ಗುರುಗಳ ದಾತೃತ್ವಶಕ್ತಿಯನ್ನು ವರ್ಣಿಸುವವರಾರು? ದೀಕ್ಷಿತರ ಕೈಯಿಂದ ದಕ್ಷಿಣೆಯನ್ನು ತಕೊಂಡವರ ದಾರಿದ್ರ್ಯ-ದುರಿತಗಳು ದೂರಾದವು. ಎಲ್ಲರಿಗೂ ಸಂತೋಷವಾಯಿತು. ಈ ಪ್ರಕಾರ ದಕ್ಷಿಣೆಯ ಸಮಾರಂಭವು ಮುಗಿದ ಕೂಡಲೆ, ಋತ್ವಿಜರು ಉಳಿದ ಯಜ್ಞಕರ್ಮಗಳನ್ನು ಮುಗಿಸಿದರು. ಅನಂತರ ದಿವಾಕರ ದೀಕ್ಷಿತರು ತಂದೆಯ ಆಜ್ಞೆಯ ಮೇರೆಗೆ ಬ್ರಾಹ್ಮಣ ಸಂತರ್ಪಣವನ್ನು ಆರಂಭಿಸಿದರು. ಆ ಹೊತ್ತು ಹಲವು ಪಕ್ವಾನ್ನಗಳಿಂದ ಜನರು ಆಕಂಠ ಭೋಜನ ಮಾಡಿ, ತೃಪ್ತಿಹೊಂದಿದರು. ಈ ದಿನ ೯೬,೦೦೦ ಜನ ಬ್ರಾಹ್ಮಣರ ಭೋಜನವಾಯಿತು. ಮಿಕ್ಕ ಸೈನಿಕ ಮೊದಲಾದವರ ಸಂಖ್ಯೆಯು ಮೊದಲಿನಷ್ಟೇ! ಋತ್ವಿಜರು ತೃತೀಯಾ ಸವನವನ್ನು ಮುಗಿಸಿ; ಉಪಾಹಾರ ತಕೊಂಡು, ವಿಶ್ರಾಂತಿಗಾಗಿ ತಮ್ಮ ತಮ್ಮ ಗೃಹಗಳಿಗೆ ಹೋದರು. ಇತ್ತ ಮಿಕ್ಕ ಬ್ರಾಹ್ಮಣರೂ ಶ್ರೀಗುರುಗಳ ಅಪ್ಪಣೆಯನ್ನು ತಕೊಂಡು ಸ್ವಸ್ಥಳಗಳಿಗೆ ಹೋದರು. ಈ ಪ್ರಕಾರ ಮಹಾಸ್ವಾಮಿಯಿಂದ ಆರಂಭಿಸಲ್ಪಟ್ಟ ಮಹಾಮಖವು ಮಹೋತ್ಸಾಹದಿಂದ ಮುಗಿಯಿತು.

---

## ೧೯ನೆಯ ಪ್ರಕರಣ.

### ಅವಭೃತಸ್ನಾನವೂ-ಯಜ್ಞರಹಸ್ಯವೂ.

ಯಾವದೊಂದು ಮಹತ್ವದ ಮಂಗಲಕಾರ್ಯವು ಮುಗಿದ ಬಳಿಕ ಅದರ ಉತ್ತರಾಂಗವಾಗಿದ್ದ ಅವಭೃತಸ್ನಾನವನ್ನು ಮಾಡುವದು ಶಾಸ್ತ್ರಸಮ್ಮತವಾಗಿರುವದರಿಂದ ಅದರಂತೆ ಶ್ರೀ ದೀಕ್ಷಿತರು ಯಜ್ಞಸಮಾರಂಭವು ಮುಗಿದ ಬಳಿಕ ಅವಭೃತಸ್ನಾನಕ್ಕಾಗಿ ನದಿಗೆ ಹೊರಟರು. ಅವರು ಆದಿನ ಸುಪ್ರಭಾತದ ಸುಸಮಯದಲ್ಲಿ ಸಪತ್ನೀಕರಾಗಿ ಸುತರಿಂದಲೂ, ಋತ್ವಿಜರಿಂದಲೂ, ಬ್ರಾಹ್ಮಣ ಮೊದಲಾದ ಪರಿವಾರದಿಂದಲೂ ಕೂಡಿಕೊಂಡು ಸಾಗಿದ್ದರು. ಎಲ್ಲ ಅರಸರು ತಮ್ಮ ತಮ್ಮ ವೈಭವದೊಂದಿಗೆ ದೀಕ್ಷಿತರನ್ನು ಹಿಂಬಾಲಿಸಿದರು. ಪಟಹ,

ಡಿಂಡಿಮ, ಶಂಖ, ತಾಳ, ತೂರ್ಯ, ಮೃದಂಗ ಮುಂತಾದ ವಾದ್ಯಗಳ ಧ್ವನಿಯೂ, ಕುದುರೆಗಳ ಹೇಷಾರವವೂ, ಗಜ-ಘಂಟೆಗಳ ಘಂಟಾರವವೂ, ವೈದಿಕರ ಗಂಭೀರವಾದ ವೇದಘೋಷವೂ, ಭಕ್ತರ ಭಜನವೂ, ಸ್ತುತಿಪಾಠಕರ ಸ್ತುತಿಯ ಧ್ವನಿಯೂ ಒಟ್ಟುಗೂಡಿದ್ದರಿಂದ ಅಲ್ಲಿಯ ಭೂಮಿಯು ನಿನಾದಮಯವಾಯಿತು. ಅಸಂಖ್ಯ ಛತ್ರ-ಚಾಮರಗಳಿಂದಲೂ, ಧ್ವಜ-ಪತಾಕೆಗಳಿಂದಲೂ ಅಲ್ಲಿಯ ಆ ಸಮಂತಭಾಗಕ್ಕೆ ಅವರ್ಣನೀಯವಾದ ಶೋಭೆಯುಂಟಾಗಿತ್ತು. ದೇವದುಂದುಭಿಗಳು ಮೊಳಗಹತ್ತಿದವು ಆಕಾಶದಿಂದ ಪುಷ್ಪವೃಷ್ಟಿಯು ಆಗುತ್ತಿತ್ತು. ಭಾಲದಾರ-ಚೋಪದಾರರು ಜನರ ದಟ್ಟಣೆಯೊಳಗಿಂದ ದಾರಿಯನ್ನು ತೆಗೆಯುತ್ತಿದ್ದರು. ದಿವಾಕರ ದೀಕ್ಷಿತರು ಶ್ರೀ ಚಿದಂಬರ ದೀಕ್ಷಿತರ ಮೇಲೆ ಶ್ವೇತಛತ್ರವನ್ನು ಹಿಡಿದಿದ್ದರು. ಬೇರೆ ಎಷ್ಟೋ ಜನರು ಚಾಮರಗಳನ್ನು ಸೂಸುರಿಯುತ್ತಿದ್ದರು. ಬೇರೆ ಹಲವರು ಉತ್ತತ್ತಿ, ಹಣ್ಣು, ಹೂವು, ಅರಳುಗಳನ್ನು ಮಹಾಸ್ವಾಮಿಯ ಮೇಲೆ* ತೂರುತ್ತಿದ್ದರು ಜನರು ತಮ್ಮತಮ್ಮೊಳಗೆ ಓಕಳಿಯನ್ನಾಡುತ್ತಿದ್ದರು ಈ ಪ್ರಕಾರ ವಿನೋದದಿಂದೊಡಗೂಡಿದ ಪರಿವಾರ ಸಹಿತ ಶ್ರೀ ಗುರುಗಳು ನದಿಗೆ ಬಂದರು.

ವಾರುಣಹೋಮವು ವಿಧ್ಯುಕ್ತವಾಗಿ ಮುಗಿಯಲು, ಶ್ರೀ ಚಿದಂಬರ ದೀಕ್ಷಿತರು ಋತ್ವಿಜರಿಂದ ಕೂಡಿಕೊಂಡು, ಸಪತ್ನೀಕರಾಗಿ ನದಿಯನ್ನು ಪ್ರವೇಶಿಸಿದರು. ಇದನ್ನು ನೋಡಿ, ಭೂಪಾಲಕರೇ ಮೊದಲಾದವರು ತಮ್ಮ ತಮ್ಮ ಸತಿ-ಸುತರಿಂದ ಕೂಡಿಕೊಂಡು ನದಿಯನ್ನು ಸೇರಿದರು. ಶ್ರೀ ದೀಕ್ಷಿತರೊಡನೆಯೇ ಎಲ್ಲರೂ ಸ್ನಾನಮಾಡಬೇಕೆಂಬ ಉದ್ದೇಶದಿಂದ ಒಂದು ಸಂಕೇತವನ್ನು ಮಾಡಿದ್ದರು. ಅದು ಯಾವದೆಂದರೆ:—ಮುಖ್ಯ ಆನೆಯ ಮೇಲಿನ ದೊಡ್ಡ ನಿಶಾನಿಯು ಕೆಳಗೆ ಬಿದ್ದು, ಐದು ತೋಫುಗಳಾದ ಕೂಡಲೆ ಎಲ್ಲರೂ ಸ್ನಾನಮಾಡಬೇಕು. ಈ ಸಂಕೇತವು ಡಂಗುರದ ಮುಖಾಂತರವಾಗಿ ಮೊದಲೇ ಎಲ್ಲರಿಗೂ ತಿಳಿಸಲ್ಪಟ್ಟಿತ್ತು. ಶ್ರೀ ದೀಕ್ಷಿತರು ಗಂಗೆಯನ್ನು ಸ್ತುತಿಸಿ, ಮುಣಗ ಹಾಕಲು, ಸಂಕೇತದಂತೆ ಎಲ್ಲರೂ ಮುಣುಗಹಾಕಿದರು. ಸ್ನಾನವಿಧಿಯು ಮುಗಿಯಲು, ದೀಕ್ಷಿತರು ಮೇಲಕ್ಕೆ ಬಂದು, ಶುಚಿಯಾದ ಶುಭ್ರವಸ್ತ್ರಗಳನ್ನುಟ್ಟುಕೊಂಡು, ಭಸ್ಮ-ಚಂದನಾದಿಗಳಿಂದ ಅಲಂಕೃತರಾಗಿ ಋತ್ವಿಜರೇ ಮೊದಲಾದ ಸಮಸ್ತ ಪರಿವಾರದಿಂದ ಕೂಡಿಕೊಂಡು, ಒಳ್ಳೇ ಸಂಭ್ರಮದಿಂದ ಯಾಗಮಂಟಪಕ್ಕೆ ಬಂದರು.



—: ಚಂದ್ರಮುಸಿ. :—

ಈ ಪ್ರಕಾರ ಶ್ರೀ ಗುರುಗಳು ಅವಭೃತವಿಧಿಯನ್ನು ಮುಗಿಸಿ, ಯಾಗ ಮಂಟಪದಲ್ಲಿ ಕುಳಿತಿರಲು, ದಿವಾಕರ ದೀಕ್ಷಿತರು ಅಲ್ಲಿಗೆ ಬಂದು ಚಂದ್ರ ಮುಸಿಯ ಸಲುವಾಗಿ ಪ್ರಾರ್ಥಿಸಿದರು. ಅದಕ್ಕೆ ಶ್ರೀ ಗುರುಗಳು:—ತಮ್ಮಾ ದಿವಾಕರಾ, ದಾನಸ್ವೀಕಾರವು (ಪ್ರತಿಗ್ರಹವು) ಕಠಿಣವಾಗಿರುವದು. ಯಾಗ ದಂಥ ಸತ್ಕಾರ್ಯದಲ್ಲಂತೂ ನಾನು ದಾನವನ್ನು ಸ್ವೀಕರಿಸಲಾರೆ! ಹಟವನ್ನು ಹಿಡಿಯಬೇಡ, ಎಂದು ಹೇಳಿದರು. ಆಗ ದಿವಾಕರ ದೀಕ್ಷಿತರು:—ಹಾಗಲ್ಲ, ಯಾಗಕರ್ಮದಲ್ಲಿ ವೇದ ಪ್ರತಿಪಾದ್ಯವಾದ ಚಂದ್ರಮುಸಿಯನ್ನು ಸ್ವೀಕರಿಸಲೇ ಬೇಕಾಗುವದು, ಎನಲು ದೀಕ್ಷಿತರು:—ಚಂದ್ರಮುಸಿಯು ಪವಿತ್ರವೆಂದು ಸಿದ್ಧ ವಿದ್ದರೆ, ಮೂರುಗಳಿಗೆಯ ಅವಕಾಶವನ್ನು ಕೊಟ್ಟಿರುವೆನು; ವೇಳೆಮೀರಿ ಬಂದ ಚಂದ್ರಮುಸಿಯನ್ನು ಸ್ವೀಕರಿಸಲಾರೆನು, ಎಂದು ಹೇಳಿದರು. ಚಂದ್ರಮುಸಿಯ ಸುದ್ದಿಯು ನಾಲ್ಕೂ ಕಡೆಗೆ ಹಬ್ಬಲು, ರಾಜರು ಸ್ವಾಸ್ತಿ-ವೃತ್ತಿಗಳ ಕಾಗದ ಗಳನ್ನು ಬರಕೊಂಡು ಬಂದು ನಾನು ಮೊದಲು ನಾನು ಮೊದಲು ಎಂದು ಪ್ರತಿಯೊಬ್ಬರು ಅವಸರ ಮಾಡಹತ್ತಿದರು. ನಾಲ್ಕೂ ಕಡೆಗೆ ಗದ್ದಲವುಂಟಾ ಯಿತು. ಅದನ್ನು ನೋಡಿ ಶ್ರೀ ಗುರುಗಳು:—ಮೊದಲು ಬಡಬಗ್ಗರು ಬರಲಿ, ಹಿಂದುಗಡೆ ಅರಸರು ಬರಲಿ, ಎಂದು ಆಜ್ಞಾಪಿಸಿದರು. ಈ ಮಾತು ಕೇಳಿ, ದಿವಾಕರ ದೀಕ್ಷಿತರು ಖಿನ್ನರಾದರು; ಆದರೆ ಮಾಡುತ್ತಾರೇನು? ಅಪ್ಪಣೆಯಂತೆ ಮೊದಲು ಬ್ರಾಹ್ಮಣರನ್ನು ಮುಂದಕ್ಕೆ ಕರೆದರು. ಬ್ರಾಹ್ಮಣರು ಆನಂದದಿಂದ ಒಂದೆರಡುರೂಪಾಯಿ ಮೊದಲ್ಗೊಂಡು ತಮ್ಮ ಯೋಗ್ಯತಾನು ಸಾರವಾಗಿ ಚಂದ್ರಮುಸಿಯನ್ನು ಕೊಟ್ಟು, ಪುಣ್ಯವಂತರಾದರು. ಬ್ರಾಹ್ಮಣರ ಚಂದ್ರಮುಸಿಯೂ, ಚಂದ್ರಮುಸಿಯ ಅವಧಿಯೂ ಒಮ್ಮೆಲೆ ಮುಗಿಯಲು, ಶ್ರೀ ಗುರುಗಳು:—ಚಂದ್ರಮುಸಿಗಾಗಿ ನೇಮಿಸಿದ ಕಾಲವು ತೀರಿತು. ಇನ್ನು ಮೇಲೆ ನಾವು ದಾನವನ್ನು ಸ್ವೀಕರಿಸಲಾರೆವು, ಎಂದು ನುಡಿದರು. ಈ ವಚನ ವನ್ನು ಕೇಳಿ, ಅರಸರಿಗೆ ಅಸಮಾಧಾನವಾಯಿತು. ಆ ಕಾಲಕ್ಕೆ ಅವರು ನಮ್ಮಿಂದ ಏನಾದರೂ ಈ ಸಮಯಕ್ಕೆ ಮಹಾಸ್ವಾಮಿಗಳು ಸ್ವೀಕರಿಸಬೇಕೆಂದು ಅನ್ನಲು ದೀಕ್ಷಿತರು:—ರಾಜ್ಯವು ನನ್ನದೇ ಇರುವದು. ಅಂದಬಳಿಕ ಇಷ್ಟು ಆಗ್ರಹವೇಕೆ? ಇವೇ ಮೊದಲಾದ ಸವಿಮಾತುಗಳಿಂದ ಸಮಸ್ತ ರಾಜರನ್ನು ಸಮಾ ಧಾನಗೊಳಿಸಿದರು.

ಚಂದ್ರಮುಸಿಯ ಕಾರ್ಯವು ಮುಗಿಯಲು, ಶ್ರೀ ಚಿದಂಬರ ದೀಕ್ಷಿತರು ಶೇಷಕರ್ಮಗಳನ್ನೆಲ್ಲ ನೆರವೇರಿಸಿ, ಯಾವತ್ತು ಕರ್ಮಫಲವನ್ನು "ತತ್ಸತ್ ಬ್ರಹ್ಮಾರ್ಪಣಮಸ್ತು" ಎಂದು ನುಡಿದು ಈಶ್ವರನಿಗೆ ಅರ್ಪಿಸಿದರು. ತರುವಾಯ ಯಾಗ ಸಾಂಗವಾಗುವದಕ್ಕೆ ಬ್ರಾಹ್ಮಣ ಸಂತರ್ಪಣದ ಸಂಕಲ್ಪವನ್ನು ಮಾಡಿ, ಪಾಕಶಾಲೆಗೆ ಬಂದರು. ಪಾಕವು ಸಿದ್ಧವಾಗಿಯೇ ಇತ್ತು. ಹಲವು ತರದ ಪಕ್ವಾನ್ನಗಳಿಂದ ಬ್ರಾಹ್ಮಣ ಭೋಜನವಾಯಿತು. ತಾಂಬೂಲ-ದಕ್ಷಿಣೆಗಳಿಂದ ದ್ವಿಜವೃಂದವು ಸಂತೋಷಗೊಂಡಿತು. ಮುಂದೆ ರಾಜರ ಭೋಜನವಾಯಿತು. ಬಳಿಕ ಶ್ರೀ ಗುರುಗಳು ರಾಜರನ್ನು ಸತ್ಕರಿಸಿ, ತಾವು ಭೋಜನಕ್ಕೆ ಹೋದರು. ಈ ದಿನ ೯೬,೦೦೦ ಜನ ಬ್ರಾಹ್ಮಣ ಭೋಜನವಾಯಿತು. ಯಾಗದ ಆರಂಭ ದಿಂದ ಸಮಾಪ್ತಿಯವರೆಗೆ ೬೮,೩೧,೫೦೦ ಜನ ಬ್ರಾಹ್ಮಣ ಸುವಾಸಿನಿಯರ ಭೋಜನವಾಯಿತು. ಇದಲ್ಲದೆ ೨೦ ಲಕ್ಷ ವೈಶ್ಯರೂ ಒಂದು ಲಕ್ಷ ಹದಿ ನಾರು ಸಾವಿರ ಜನ ಶೂದ್ರರೂ ಉಂಡರು. ಚಂದ್ರಮುಸಿಯು ೧,೫೦,೩೦೦ ರೂಪಾಯಿಗಳಾದವು. ಜ್ಞಾನ ಯಜ್ಞದಲ್ಲಿ ಸದಾ ನೆಲೆಗೊಂಡಿರುವ ಪರ ಮೇಶ್ವರನು ಲೌಕಿಕಾರ್ಥವಾಗಿ ಮಾಡಿದ ಕರ್ಮಯಜ್ಞವು ಪ್ರಸಿದ್ಧವಾಯಿತೆಂದು ಬಿಚ್ಚಿ ಹೇಳುವ ಕಾರಣವಿಲ್ಲ.

ಇದೇ ಸುಮಾರಕ್ಕೆ ಅಲ್ಲಿಯ ಜನರೊಳಗೆ ಒಂದು ಬೇನೆಯು ಉಂಟಾ ಯಿತು. ಬೇಸಿಗೆಯಿದ್ದದರಿಂದ ಜನರು ಆಕಂಠ ಭೋಜನಮಾಡಿ, ಕಂಡ ಕಂಡಂತೆ ನೀರು ಕುಡಿದ ಕಾರಣ, ಎಷ್ಟೋ ಜನರು ನವಜ್ವರದಿಂದ ಪೀಡಿತ ರಾದರು. ಎಷ್ಟು ಉಪಾಯ ಮಾಡಿದರೂ ಬೇನೆಯು ವಾಸಿಯಾಗಲೊಲ್ಲದು. ಜನರು ಆಸನ್ನ ಮರಣರಾದರು. ಆಗ ದಿವಾಕರ ದೀಕ್ಷಿತರು ಈ ಸುದ್ದಿಯನ್ನು ಚಿದಂಬರ ದೀಕ್ಷಿತರಿಗೆ ಅರುಹಿದರು. ಅದಕ್ಕೆ ದೀಕ್ಷಿತರು:—ಇದು ಕಲಿಯುಗವು ಪ್ರಾರಬ್ಧಯೋಗವು ಯಾರಿಗೂ ಬಿಡಲಾರದು. ಅದನ್ನು ಭೋಗಿಸಿಯೇ ತೀರಿ ಸಲಿಕ್ಕೆಬೇಕು. ಇರಲಿ, ಬೇನೆ ಬಂದವರಿಗೆ ಶ್ರೀ ಶಿವಕವಚದಿಂದ ವಿಭೂತಿ ಯನ್ನು ಮಂತ್ರಿಸಿ ಹಚ್ಚು, ಅಂದರೆ ಶಂಕರನು ಬೇನೆಯನ್ನು ಹೋಗಲಾಡಿಸು ವನು, ಎಂದು ಹೇಳಿದರು. ದಿವಾಕರ ದೀಕ್ಷಿತರು ಅದರಂತೆ ಮಾಡಲು, ಎಲ್ಲ ರಿಗೂ ಗುಣವಾಯಿತು.

ಅವಭೃತ ಮಹೋತ್ಸವದ ಕಾರ್ಯಗಳೆಲ್ಲ ತೀರಿ, ಬ್ರಾಹ್ಮಣ ಸಂತರ್ಪಣೆ ಯಾದ ಬಳಿಕ ಶ್ರೀ ಚಿದಂಬರ ದೀಕ್ಷಿತರು ಮಾವಿನ ತೋಪಿನಲ್ಲಿ ಬಂದು ಕುಳಿತು

ಕೊಂಡರು. ಆಗ ರಾಜರು ಮೊದಲಾದವರು ದೀಕ್ಷಿತರ ದರ್ಶನಕ್ಕಾಗಿ ಬಂದರು. ದೀಕ್ಷಿತರು ಅವರೆಲ್ಲರನ್ನು ಹತ್ತರ ಕುಳ್ಳಿರಿಸಿಕೊಂಡು:—ನಿಮ್ಮೆಲ್ಲರಿಗೆ ನನ್ನ ಸಲುವಾಗಿ ಬಹಳ ಶ್ರಮವಾಯಿತು ತಮ್ಮೆಲ್ಲರ ಸಹಾಯದಿಂದ ಯಜ್ಞಕಾರ್ಯವು ನಿರ್ವಿಘ್ನದಿಂದ ಸಾಂಗವಾಯಿತು. ಇವೇ ಮೊದಲಾದ ಮಧುರೋಕ್ತಿಗಳಿಂದ, ಅವರ ಗೌರವವನ್ನು ಮಾಡಿದರು. ಆಗ ರಾಜರು ಮೊದಲಾದವರು:—ಭಕ್ತಾಭಿಮಾನಿಯೇ, ಈ ತರದ ಮೋಹದ ಮಾತುಗಳನ್ನಾಡುವದು ಉಚಿತವೇ! ಸೃಷ್ಟಿ-ಸ್ಥಿತಿ-ಲಯಕರ್ತನಾದ ಪರಮಾತ್ಮನು ನೀನು ಇರುತ್ತಿರಲು, ನಿನಗೆ ಮಾನವರಾದ ನಮ್ಮಿಂದ ಯಾವ ಸಹಾಯವಾಗುವದು? ಇರಲಿ. ಪಾಮರರಾದ ನಾವು ಈ ಭವಾಬ್ಧಿಯೊಳಗಿಂದ ಹೇಗೆ ಪಾರಾಗಬೇಕೆಂಬದನ್ನಷ್ಟು ಹೇಳಬೇಕು, ಎಂದು ಬೇಡಿಕೊಂಡರು ಸನ್ಮಾರ್ಗದರ್ಶಿಗಳೂ, ಸದಾಶಿವರೂಪಿಗಳೂ ಆದ ಶ್ರೀ ಚಿದಂಬರ ದೀಕ್ಷಿತರಿಗೆ, ಜ್ಞಾನಾಮೃತಪಾನ ಮಾಡಲುದ್ಯುಕ್ತರಾದ ಸಭಿಕರ ಮಾತು ಕೇಳಿ ಆನಂದವಾಯಿತು. ಆ ಮೇಲೆ ಶ್ರೀ ಗುರುವು ತನ್ನ ಅಧಿಕಾರ ಪೂರ್ಣವಾದ ವಾಣಿಯಿಂದ ಮೂರು ಯಜ್ಞಗಳ ಮಹತ್ವವನ್ನು ಬಾಲಬೋಧ ರೀತಿಯಿಂದ ವರ್ಣಿಸಿ, ಇವುಗಳನ್ನು ವರ್ಣಾಶ್ರಮದಂತೆ ಆಚರಿಸುವವನಿಗೆ ಶಾಶ್ವತ ಸುಖವು ಪ್ರಾಪ್ತವಾಗುವದೆಂದು ಬೋಧಿಸಿದನು. ಅದರ ವಿವರವು ಹೇಗಂದರೆ:—

## —:ಯಜ್ಞ ಮೀಮಾಂಸೆ :—

ಈಗ ನಾವು ಮಾಡಿದ ಮಹಾ ಯಜ್ಞವು ಕರ್ಮಠರಿಗೆ ಯೋಗ್ಯವಾದದ್ದು. ಜ್ಯೋತಿಷ್ಟೋಮದಿಂದ ಸ್ವರ್ಗವು ಸಿಗುತ್ತದೆಂದು ವೇದಗಳು ಸಾರುತ್ತವೆ. ಸ್ವರ್ಗವನ್ನು ದೊರಕಿಸಬೇಕೆಂಬ ಲವಲವಿಕೆಯುಳ್ಳವನು ಯಜ್ಞಗಳನ್ನು ಮಾಡಬೇಕೆಂದು ಹೇಳುವದು ಕರ್ಮಠರ ಮಾತು. ಯಜ್ಞವು ಸರ್ವಗತವಾಗಿರುವದರಿಂದ ಅದನ್ನು ಮಾಡಲಿಕ್ಕೆ ನಾಲ್ಕೂ ಜಾತಿಯವರಿಗೂ ಅಧಿಕಾರವಿರುವದು; ಮಾತ್ರ ಯಜ್ಞವನ್ನು ನಿಷ್ಕಾಮ ಬುದ್ಧಿಯಿಂದ ಮಾಡತಕ್ಕದ್ದು. ಪ್ರಪಂಚವೆಂಬ ಸಂಕೋಲೆಗಳನ್ನು ಕಾಲಲ್ಲಿ ಹಾಕಿಕೊಂಡವರಿಗೆ ಧನದಾಶೆಯು ತಪ್ಪುವದಿಲ್ಲ. ದ್ರವ್ಯಾಶೆಯಿಂದ ಅಧರ್ಮವು ಘಟಿಸುವದು. ಅಧರ್ಮಿಗಳಿಗೆ ಜನನ-ಮರಣಗಳು ತಪ್ಪುವದಿಲ್ಲ. ಆದುದರಿಂದ ವೇದಮಾತೆಯು ದ್ರವ್ಯದಾಶೆಯಿಂದ ಬಿಡಿಸುವದಕ್ಕಾಗಿ ಯಜ್ಞವನ್ನು ಮಾಡಬೇಕೆಂದು ಬೋಧಿಸಿರುವಳು. ಯಜ್ಞದಿಂದ ಅಕ್ಷಯಸುಖವೂ, ಸ್ವರ್ಗವಾಸವೂ ಪ್ರಾಪ್ತವಾಗುವವೆಂದು ಅದೇ ವೇದಮಾತೆಯು ಉಸುರುವಳು. ಕರ್ಮಠರು ಪರಲೋಕದಾಶೆಯಿಂದ ಯಜ್ಞ

ಕ್ಕಾಗಿ ಹಣವನ್ನು ವೆಚ್ಚ ಮಾಡುವರು. ಯಜ್ಞದ ಪುಣ್ಯಬಲದಿಂದ ಅವರ ದ್ರವ್ಯದ ಮೇಲಿನ ಆಶೆಯು ಅಳಿದು, ಚಿತ್ತವು ನಿರ್ಮಲವಾಗುವದು. ಚಿತ್ತಶುದ್ಧಿ ಯಿಂದ ವಾಸನಾರಹಿತರಾಗಿ, ಅವರು ಪರಮೇಶ್ವರನನ್ನು ಭಜಿಸುವರು. ಹೀಗಾ ಯಿತೆಂದರೆ ಮೋಕ್ಷವು ನಿರಾಯಾಸದಿಂದ ಕೈಸೇರುವದು. ಚಿತ್ತಶುದ್ಧಿಗಾಗಿ ಕರ್ಮಯಜ್ಞವು ವೇದದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುವದು. ಫಲವನ್ನು ಹೇಳಿದ ಹೊರತು ಯಾರೂ ಕರ್ಮವನ್ನಾಚರಿಸುವದಿಲ್ಲ. ಆದುದರಿಂದ ವೇದವು ಯಜ್ಞಕ್ಕೆ ಮಹಾ ಫಲವನ್ನು ಹೇಳುತ್ತಿರುವದು. ಮೋಕ್ಷೇಚ್ಛುಗಳು ಮೊದಲು ಕರ್ಮಮಾರ್ಗವನ್ನು ಸ್ವೀಕರಿಸಬೇಕಾಗುವದು. 'ಯಜ್ಞೋ ವೈ ವಿಷ್ಣುಃ ಎಂದು ಶ್ರುತಿಯಲ್ಲಿ ಪ್ರಮಾಣವಿರುವದು. ವ್ಯಾಪಕನಾಗಿ ಒಪ್ಪುವ ಚಿದಾತ್ಮನಿಗೆ 'ವಿಷ್ಣು ಎಂಬ ಸಂಜ್ಞೆಯು. ಆದುದರಿಂದ ಜಗತ್ಪಾಲಕನ ಆರಾ ಧನಾರೂಪವಾದ ಯಜ್ಞವೇ ಯಾವತ್ತು ಯಾಗಗಳಲ್ಲಿ ಮುಖ್ಯವಾಗಿರುವದು.

ಈ ಯಜ್ಞವನ್ನು ಮಾಡುವದರಿಂದ ಶಾಶ್ವತವಾದ ಸ್ವರ್ಗಸುಖವು ಖಂಡಿತ ವಾಗಿ ಲಭಿಸುವದು ಆಶಾರಹಿತನಾಗಿ ಜಗದೀಶ್ವರನನ್ನಾರಾಧಿಸಿದರೆ, ಮುಕ್ತಿ ಯು ಸಹಜವಾಗಿ ದೊರಕುವದು. ಭಕ್ತಿರಹಿತವಾದ ಕರ್ಮಗಳು ನಿಷ್ಫಲವಾದ ವುಗಳೆಂದು ತಿಳಿಯಬೇಕು. ಭಗವಂತನನ್ನು ಪ್ರಸನ್ನೀಕರಿಸುವದಕ್ಕಾಗಿ ಮಾಡುವ ಕರ್ಮಗಳಿಗೆಲ್ಲ ಯಜ್ಞ ಎಂಬ ಸಂಜ್ಞೆಯಿರುವದು. ಯಜ್ಞಗಳಲ್ಲಿ ಕರ್ಮಯಜ್ಞ ವೆಂತಲೂ, ಜ್ಞಾನಯಜ್ಞವೆಂತಲೂ ಎರಡು ಬಗೆಗಳಿರುವವು. ಪ್ರತಿಯೊಬ್ಬರು ತಮ್ಮ ತಮ್ಮ ಧರ್ಮಾನುಸಾರವಾಗಿ ತಪಸ್ಸನ್ನಾಚರಿಸಿ, ಈಶ್ವರನನ್ನು ಆರಾಧಿಸಿ ದರೆ, ಚಿತ್ತಶುದ್ಧಿಯಾಗುವದು ಇದಕ್ಕೆ ಕರ್ಮಯಜ್ಞವೆಂಬ ಸಂಜ್ಞೆಯಿರು ವದು. ಪ್ರಾತಃಸ್ನಾನ, ವೇದಪಠಣ, ನಿತ್ಯಕರ್ಮಾನುಷ್ಠಾನ, ಅನ್ನದಾನ, ತೀರ್ಥ ಯಾತ್ರೆ ಇವೇ ಮೊದಲಾದ ಭಕ್ತಿಯುಕ್ತ ಸತ್ಕಾರ್ಯಗಳು ಕರ್ಮಯಜ್ಞದಲ್ಲಿ ಎಣಿಸಲ್ಪಡುತ್ತವೆ. ಅಲ್ಪಾಯಾಸದಿಂದ ಮಹತ್ಫಲದಾಯಕಗಳಾದ ಈ ಕರ್ಮ ಯಜ್ಞಗಳು ಬಡವರಿಗೂ, ಶ್ರೀಮಂತರಿಗೂ ಸುಲಭಸಾಧ್ಯವಾಗಿರುವವು.

ಜ್ಞಾನಯಜ್ಞವು (೧) ಕಾಯಿಕ (೨) ವಾಚಿಕ (೩) ಮಾನಸಿಕ ಎಂದು ತ್ರಿವಿಧವಾಗಿರುವದು. ದೇಹಾಭಿಮಾನವನ್ನು ಬಿಡುವದೇ ಕಾಯಿಕಯಜ್ಞವು. ಯಾವನ ದೇಹಾಭಿಮಾನವು ನಾಶವಾಯಿತೋ, ಆತನು ಜೀವನ್ಮುಕ್ತನೆಂತಲೇ ತಿಳಿ ಯತಕ್ಕದ್ದು; ಆದರೆ ದೇಹಾಭಿಮಾನವನ್ನು ತ್ಯಜಿಸುವದು ಸುಲಭಸಾಧ್ಯವಲ್ಲ. ಅದಕ್ಕಾಗಿ ಸದ್ಗುರುಕೃಪೆಯನ್ನು ಸಂಪಾದಿಸಬೇಕಾಗುವದು. ಶಿಷ್ಯನ ಸಂತಃ

ಗಳನ್ನು; ಯುಕ್ತಿ-ಪ್ರಯುಕ್ತಿಗಳಿಂದ ದೂರ ಮಾಡುವವನೂ, ಆತನಿಗೆ ಆಯಾಸ ವಿಲ್ಲದೆ ಮೋಕ್ಷವನ್ನು ದೊರಕಿಸಿ ಕೊಡುವವನೂ, ಬ್ರಹ್ಮಾನುಭವವುಳ್ಳವನಾಗಿ ಶಾಸ್ತ್ರಾರ್ಥವನ್ನು ತಿಳಿದವನೇ ಸದ್ಗುರು ಎಂದು ತಿಳಿದುಕೊಳ್ಳಬೇಕು. ಇಂಥಹ ಗುರುನಾಥನ ಸೇವೆಯಲ್ಲಿ ಹಗಲಿರುಳು ದೇಹವನ್ನು ಸವಿಸಬೇಕು. ಗುರುಸೇವೆ ಯನ್ನು ಮಾಡುವಾಗ ಒದಗುವಂಥ ಹಿತಾಹಿತಕರ್ಮಗಳಲ್ಲಿ ಅಭಿಮಾನವನ್ನು ವಹಿಸಲಿಕ್ಕಾಗದು; ಮೂರು ಗಳಿಗೆಗಳಲ್ಲಿ ಮಣ್ಣುಪಾಲಾಗುವ ಈ ದೇಹವು ಪರಾ ಧೀನವಾದದ್ದೂ, ಈಶ್ವರನು ಕುಣಿಸಿದಂತೆ ಕುಣಿಯುವಂಥದೂ ಆಗಿರುವದೆಂದು ತಿಳಿದು, ದೇಹಾಭಿಮಾನವನ್ನು ಬಿಡಬೇಕು. ನಿಜವಾಗಿ ವಿಚಾರಿಸಿದರೆ, ದೇಹಕ್ಕೂ, ನಮಗೂ ಆವ ಬಗೆಯ ಸಂಬಂಧವೂ ಇರುವದಿಲ್ಲ. ಜಗತ್ತಿಗೆ ಮುಖ್ಯಾಧಾರ ವಾಗಿರುವವನು ಪರಮೇಶ್ವರನು. ಜಗದಾಕಾರವಾಗಿ ತೋರುವ ಪ್ರಕೃತಿಯೇ ಎರಡನೆಯ ಆಧಾರವು ಹೀಗಿದ್ದು ಮೂರನೆಯವನಾದ ನಾನು ಎಲ್ಲಿಯವನು? ಎಂಬದನ್ನು ಚನ್ನಾಗಿ ವಿಚಾರಿಸಬೇಕು. ಒಟ್ಟಿನ ಮೇಲೆ ಹೇಳತಕ್ಕದ್ದೇನಂದರೆ- ಯಾವದೇ ಹಂಚಿಕೆಯಿಂದ ದೇಹಾಭಿಮಾನವನ್ನು ಬಿಡುವದೇ ಕಾಯಿಕಯಜ್ಞವು. ಈ ಯಜ್ಞವನ್ನು ಮಾಡುವದರಿಂದ ತನ್ನ ದೇಹದೊಳಗಿನ ಪರಮೇಶ್ವರನ ದರ್ಶನ ವಾಗಿ ಜೀವನ್ಮುಕ್ತದಶೆಯು ಪ್ರಾಪ್ತವಾಗುವದು. ಇದಕ್ಕೇ ಅಕ್ಷಯವಾದ ಸ್ವರ್ಗ ಎಂಬ ಸಂಜ್ಞೆಯಿರುವದು.

ಭೂಪಾಲರೇ, ಲಕ್ಷ್ಯಗೊಡಿರಿ. ವಾಣಿಯಿಂದ ಭಗವದಾರಾಧನೆಯನ್ನು ಮಾಡುವದೇ ವಾಕ್ಯಜ್ಞವು. ವೇದ-ಪಾರಗಳನ್ನೂ, ಈಶ್ವರನ ಸ್ತುತಿ-ಸ್ತೋತ್ರ ಗಳನ್ನೂ, ಮಂತ್ರ-ಜಪಗಳನ್ನೂ ದಿನಾಲು ನಿಯಮದಿಂದ ಮಾಡಬೇಕು. ಯಾವಾಗಲೂ ಭಗವಂತನ ನಾಮೋಚ್ಚಾರವನ್ನು ಮಾಡುತ್ತಿರಬೇಕು. ಶಬ್ದ ರೂಪವಾದ ಗಿರಿಜಾಧವನು ವಾಙ್ಮಾಲವನ್ನೆಲ್ಲ ವ್ಯಾಪಿಸಿರುವನೆಂಬ ಭಾವನೆಯನ್ನು ದೃಢಪಡಿಸಬೇಕು. ನಾವು ಪರತಂತ್ರರು. ಆದುದರಿಂದ ವಕ್ತೃತ್ವಾಭಿಮಾನ ವನ್ನು ಬಿಟ್ಟುಕೊಟ್ಟು, ಸಮಭಾವದಿಂದ ಎಲ್ಲರಿಗೂ ಹಿತವಾಗುವಂಥ ಮಾತು ಗಳನ್ನೇ ಆಡುತ್ತಿರಬೇಕು. ಗುರುವು ಗುರುತ್ವಾಹಂಕಾರವನ್ನು ಬಿಟ್ಟು ಶಿಷ್ಯ ನಿಗೆ ಸದ್ಬೋಧನೆಗಳನ್ನು ಬೋಧಿಸಬೇಕು. ಶಿಷ್ಯನಾದವನು ಗುರುಬೋಧ ವನ್ನು ವೇದವಾಕ್ಯವೆಂದು ಭಾವಿಸಿ, ಅದನ್ನು ಗ್ರಹಣ ಮಾಡಬೇಕು. ಚಾಡಿ ಯನ್ನು ಹೇಳುವದು ಅಸತ್ಯ ಭಾಷಣ ಮಾಡುವದು, ಪರರನ್ನು ಜರೆಯುವದು, ಮನಸ್ಸಿಗೆ ಹತ್ತುವಂಥ ಮಾತುಗಳನ್ನಾಡುವದು, ಇವು ವಾಗ್ಯಜ್ಞಕ್ಕೆ ಬಾಧ

ಕಗಳಾದ ದೋಷಗಳಾಗಿರುವವು ಕಾರಣ ಕಠೋರವಚನಗಳನ್ನೂ, ಪರ ನಿಂದಾಪರವಾದ ನುಡಿಗಳನ್ನೂ, ಅನ್ಯರ ಮನೋಭಂಗವನ್ನು ಮಾಡುವಂಥ ವಚನಗಳನ್ನೂ ಸರ್ವಥಾ ನುಡಿಯಲಾಗದು. ಈ ಬಗೆಯ ದೋಷರಹಿತವಾದ ವಾಗ್ಯಜ್ಞವನ್ನು ನಿರಂತರ ಆಚರಿಸುವವನೇ ಸಂಸಾರದಲ್ಲಿ ಅಭಿಜ್ಞನೆಂದು ತಿಳಿಯ ತಕ್ಕದ್ದು. ಪಾರ್ವತೀಪತಿಯು ಅಂಥವನಿಗೆ ಅಹೇತುಕವಾದ ಭಕ್ತಿಯನ್ನಿತ್ತು ಭವಬಂಧನದಿಂದ ಮುಕ್ತನನ್ನಾಗಿ ಮಾಡುವನು.

ನೃಪೋತ್ತಮರೇ, ಇನ್ನು ನಿಮಗೆ ಮಾನಸಿಕ ಯಜ್ಞವನ್ನು ಹೇಳುತ್ತೇನೆ. ಸಾವಧಾನ ಚಿತ್ತವುಳ್ಳವರಾಗಿ ಕೇಳಿಕೊಳ್ಳಿರಿ. "ಮನಸ್ಸು ತನ್ನ ವೈರಿಯೆಂದು ತಿಳಿದು, ಉಪಾಯಾಂತರದಿಂದ ಅದನ್ನು ನಾಶಗೊಳಿಸಿ, ಅಥವಾ ತನ್ನ ಕೈಯಲ್ಲಿ ಟ್ಟುಕೊಂಡು ಭವಬಂಧನವನ್ನು ತಪ್ಪಿಸುವದೇ, ಮಾನಸಿಕ ಯಜ್ಞವೆಂದು ಹೇಳ ಲ್ಪಡುತ್ತದೆ. ಮನಸ್ಸಿನ ಏಳ್ಗೆಯಿಂದ ಸಂಸಾರದ ಏಳ್ಗೆಯೂ, ಮನಸ್ಸಿನ ನಾಶ ದಿಂದ ಭವದ ನಾಶವೂ ಆಗುತ್ತವೆ. ನಿರ್ಮನಸ್ಕನಾದವನಿಗೆ ಬ್ರಹ್ಮಸಾಕ್ಷಾತ್ಕಾರ ವಾಗುತ್ತದೆ. ಮನಸ್ಸಿನ ಯೋಗದಿಂದಲೇ ಜೀವಾತ್ಮನಿಗೆ ಬಗೆ ಬಗೆಯ ದುಃಖ ಗಳುಂಟಾಗುವವು. ಮನಸ್ಸು ನಾಶವಾಗುತ್ತಲೇ ಮೋಕ್ಷವು ಲಭಿಸುವದು. ದೇಹವು ಮನಸ್ಸಿನಿಂದ ಕಲ್ಪಿತವಾಗಿದ್ದು, ಜೀವವು ಭ್ರಾಂತಿಯಿಂದ ಅದೇ ತಾನು ಎಂದು ಭಾವಿಸುವದು. ಅದರಿಂದ ಅದು ಜನ್ಮ-ಮರಣಾದಿ ದುಃಖಗಳನ್ನು ಹೊಂದುವದು. ಇವಳು ನನ್ನ ಹೆಂಡತಿಯು; ಇವರು ನನ್ನ ಮಕ್ಕಳು; ಇವು ನನ್ನ ಮನೆ-ಮಾರುಗಳು; ಇವರು ನನ್ನ ಬಂಧು-ಬಳಗದವರು; ಇದು ನಾನು ಗಳಿಸಿಟ್ಟ ದ್ರವ್ಯವು; ಮೊದಲಾದ ಕಲ್ಪನೆಗಳನ್ನು ಮನಸ್ಸೇ ಕಲ್ಪಿಸಿರುವದು. ಈ ಎಲ್ಲ ಕಲ್ಪಿತ ವಸ್ತುಗಳಲ್ಲಿ ಮಮತ್ವವು (ನನ್ನದೆಂಬ ಭಾವವು) ದೃಢವಾಗಿ ನೆಲೆಗೊಂಡಿರುವದರಿಂದ ಜೀವವು ಪರಿಪರಿಯ ದುಃಖಗಳನ್ನು ಅನುಭವಿಸುವದು. ಆದ್ದರಿಂದ ಎಲ್ಲ ದುಃಖಗಳಿಗೂ ಕಾರಣೀಭೂತವಾದ ಮನಸ್ಸನ್ನು ಗೆದೆಯ ಬೇಕು. ಮನಸ್ಸನ್ನು ಜಯಿಸುವ ಉಪಾಯವು ಯಾವದೆಂದರೆ:—ವೈರಾಗ್ಯ ರೂಪಿಯಾದ ದೀಕ್ಷೆಯನ್ನು ತಾಳಿ, ಹೃದಯವೆಂಬ ಹೋಮಕುಂಡದಲ್ಲಿ ಜ್ಞಾನಾ ಗ್ನಿಯನ್ನು ಪ್ರಜ್ವಲಿಸಿ, ಧ್ಯಾನರೂಪವಾದ ಯೂಪಸ್ತಂಭವನ್ನು ಗಟ್ಟಿಯಾಗಿ ನಿಲ್ಲಿಸಿ ಅದಕ್ಕೆ ಮನಸ್ಸೆಂಬ ಮೇಕೆಯನ್ನು (ಪಶುವನ್ನು) ವಿಚಾರವೆಂಬ ಹಗ್ಗ ದಿಂದ ಬಿಗಿಯಾಗಿ ಕಟ್ಟಿ, ಮಹಾವಾಕ್ಯಮಂತ್ರಗಳಿಂದ ಅದನ್ನು ಸಂಸ್ಕಾರಗೊಳಿಸಿ ನಿರಂಜನವೆಂಬ ಶಾಮಿತ್ರಗೃಹಕ್ಕೆ ಅದನ್ನೊಯ್ದು, ನಿರ್ಮಮತೆಸ್ವರೂಪಿಯಾದ ಶಸ್ತ್ರ

ದಿಂದ ಸಾಕ್ಷೀಭೂತನಾಗಿ ಸಂಹರಿಸಿ, ಜ್ಞಾನಾಗ್ನಿಯಲ್ಲಿ ಅದನ್ನು ದಹಿಸಬೇಕು. ಅಂದರೆ ಉಮಾರಮಣನು ಒಲಿದು, ಅಕ್ಷಯವಾದ ಸ್ವರ್ಗಸುಖವನ್ನು ದಯ ಪಾಲಿಸುವನು!

---

## ೧೯ನೆಯ ಪ್ರಕರಣ.

## ನವಲಗುಂದ ಪ್ರವೇಶವೂ, ಮೃತ್ಯುಂಜಯ-ವರರುಚಿಯರ ಮದುವೆಗಳೂ.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಶ್ರೀ ಚಿದಂಬರ ದೀಕ್ಷಿತರು ಭಕ್ತಜನರಿಗೆ ಜ್ಞಾನೋ(ಬ್ರಹ್ಮೋ)ಪದೇಶವನ್ನು ಮಾಡಿದ ಬಳಿಕ ಅಲ್ಲಿಂದಲೇ ಫಲ-ಮಂತ್ರಾಕ್ಷತೆಗಳನ್ನು ಕೊಟ್ಟು, ಅರಸರಿಗೆ ಅಪ್ಪಣೆಯನ್ನು ಕೊಡಬೇಕೆಂದು ಯೋಚಿಸಿದರು; ಹಾಗು ಅದೇ ಅಭಿಪ್ರಾಯವನ್ನು ರಾಜರಿಗೆ ತಿಳಿಸಿದರು. ಆಗ ರಾಜಸಮೂಹದ ಮನಸು ಚಂಚಲವಾಯಿತು. ಕುತ್ತಿಗೆಯ ಶಿರಗಳು ಉಬ್ಬಿದವು. ಬಾಯೊಳಗಿಂದ ಮಾತುಗಳು ಹೊರಡಲೊಲ್ಲವು. ಕಂಬನಿಗಳು ಸುರಿಯಹತ್ತಿದವು. ದುಃಖದ ಪ್ರಥಮ ವೇಗವು ಕಡಿಮೆಯಾದ ಬಳಿಕ ಅರಸರೆಲ್ಲರು ಖಿನ್ನ ಮನಸಿನಿಂದ ಶ್ರೀಗುರುಗಳನ್ನು ಕುರಿತು:—ಗುರುಗಳೇ, ತಮ್ಮ ವಿರಹ ದುಃಖವನ್ನು ಹೇಗೆ ತಾಳೋಣ? ಇನ್ನುಮೇಲೆ ನಿಮ್ಮ ದುರ್ಲಭವಾದ ದರ್ಶನವು ಹೇಗಾದೀತು? ಎಂದು ಪರಿಪರಿಯಿಂದ ದುಃಖಿಸಹತ್ತಿದರು. ಆಗ ದೀಕ್ಷಿತರು:-ನಿಮ್ಮ ದೇಹಾಭಿಮಾನವು ಇನ್ನೂ ಅಳಿದುಹೋಗಿಲ್ಲ. ದೇಹಾವಸ್ಥೆಗಳ ವಿಚಾರವನ್ನು ನೀವು ಚನ್ನಾಗಿ ಮಾಡಿಲ್ಲ ಅದಕ್ಕಾಗಿಯೇ ನಿಮ್ಮ ವಿರಹದುಃಖೋದಧಿಯು ಉಕ್ಕೇರಿರುವದು, ಎಂದು ಹೇಳಿ ಮತ್ತೆ ಅವರಿಗೆ ಜ್ಞಾನೋಪದೇಶವನ್ನು ಮಾಡಿದರು ಆಗ ರಾಜರ ಭ್ರಮವು ದೂರಾಯಿತು. ಬಳಿಕ ಅವರು ಶ್ರೀಗುರುಗಳಿಗೆ:-"ತಮ್ಮ ಅಪ್ಪಣೆಯಂತೆ ನಾವು ಇಲ್ಲಿಂದಲೇ ಹೋಗಲಿಕ್ಕೆ ಒಪ್ಪಿರುವೆವು; ಆದರೆ ತಮ್ಮನ್ನು ನಮ್ಮ ವೈಭವದೊಂದಿಗೆ ಸ್ವಸ್ಥಳಕ್ಕೆ ಕಳಿಸಿ, ಆಮೇಲೆ ಹೋಗಬೇಕೆಂಬ ಇಚ್ಛೆಯು ಮುಂದರಿಯುತ್ತಿರುವದು. ಆದ್ದರಿಂದ ಅದನ್ನಷ್ಟು ಪೂರೈಸಬೇಕೆ"ಂದು ಬೇಡಿಕೊಂಡರು. ಅದಕ್ಕೆ ಶ್ರೀಗುರುಗಳು ಸಮ್ಮತಿಸಿ, ದಿವಾಕರ ದೀಕ್ಷಿತರನ್ನು ಕರೆದು—ನಾಳೆ ಮುಹೂರ್ತವು ನೆಟ್ಟಗಿರುವದು. ಅದ್ದರಿಂದ

ನವಲಗುಂದಕ್ಕೆ ಪ್ರಯಾಣವನ್ನು ಬೆಳೆಸುತ್ತೇನೆ. ನೀನು ಉಳಿದಿರುವ ಸಾಮಗ್ರಿಯು ತೀರುವವರೆಗೆ ಇಲ್ಲೇ ನಿಂತು ಬ್ರಾಹ್ಮಣಸಂತರ್ಪಣವನ್ನು ಮಾಡಿ ಹಿಂದಗಡೆ ಬಾ, ಎಂದು ಹೇಳಿದರು.

ಆಗ ದಿವಾಕರ ದೀಕ್ಷಿತರು:—ಪ್ರಭೋ, ನೀನಿಲ್ಲದೆ ನಾನು ಬ್ರಾಹ್ಮಸಂತರ್ಪಣವನ್ನು ಮಾಡಲಾರೆ! ತಾವೂ ಇಲ್ಲಿರುವ ಅಭಿವಚನವಿತ್ತಲ್ಲಿ ಬ್ರಾಹ್ಮಸಂತರ್ಪಣೆಯನ್ನು ಮಾಡುವೆನು, ಎಂದು ನುಡಿದರು. ಅದಕ್ಕೆ ಶ್ರೀ ಚಿದಂಬರ ದೀಕ್ಷಿತರು:—ಒಳ್ಳೇದು, ಹಾಗೆಯೇ ಆಗಲಿ; ಉಗ್ರಾಣದಲ್ಲಿ ಸಾಮಗ್ರಿಯು ಎಷ್ಟು ಉಳಿದದೆ ನೋಡೋಣ ನಡೆ, ಎಂದು ಮಾತನಾಡಿ, ಪುತ್ರ-ಭಕ್ತರಿಂದ ಕೂಡಿಕೊಂಡು ಉಗ್ರಾಣಕ್ಕೆ ಬಂದರು. ಉಗ್ರಾಣದಲ್ಲಿ ಮೂರನೇದಿವಸ ಇದ್ದಷ್ಟೇ ಸಾಮಗ್ರಿಯು ಇನ್ನೂ ಇತ್ತು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಆಗ ಶ್ರೀ ಗುರುಗಳು:—ದಿವಾಕರಾ, ಸಾಮಗ್ರಿಯು ವಿಪುಲವಾಗಿ ಉಳಿದಿರುವದು. ಇಷ್ಟರಿಂದ ಇನ್ನೂ ಐದಾರು ದಿವಸಗಳವರೆಗೆ ಬ್ರಾಹ್ಮಣಸಂತರ್ಪಣವಾಗುವದು, ಎಂದು ಹೇಳಿದರು. ಅದಕ್ಕೆ ದಿವಾಕರ ದೀಕ್ಷಿತರು:—ತಂದೆಯೇ, ತಾವು ಮಾಡಿದ ಯಜ್ಞದಲ್ಲಿ ಕಾರ್ಯವ್ಯವಸ್ಥೆಯ ಮೂಲಕ ನನಗೆ ಸಂಪೂರ್ಣ ಯಜ್ಞವಿಧಾನವನ್ನು ನೋಡಲಿಕ್ಕೆ ಅನುವಾಗಲಿಲ್ಲ. ಆದ್ದರಿಂದ ಇನ್ನೊಮ್ಮೆ ನಾನೂ ಯಜ್ಞಮಾಡುವೆನು, ತಮ್ಮ ಕೃಪೆಯಾಗಬೇಕು. ಬ್ರಾಹ್ಮಣರು ಆಯತವಾಗಿ ಕೂಡಿರುವರು. ಆದ್ದರಿಂದ ಅನುಗ್ರಹಿಸಿರಿ, ಎಂದು ಬೇಡಿಕೊಂಡರು. ಆಗ ಶ್ರೀ ಚಿದಂಬರ ದೀಕ್ಷಿತರು ನಸುನಕ್ಕು:—ಹೂ! ತಂದೆಯ ಯಾಗಕ್ಕಿಂತ ಮಗನ ಯಾಗದ ಮಹೋತ್ಸವವು ಅಧಿಕವಾಗಲಿ, ಎಂದು ಭಾಷಾವೈಚಿತ್ರ್ಯದಿಂದ ತಮ್ಮ ಸಮ್ಮತಿಯನ್ನು ಕೊಟ್ಟು, ತಾವು ತಮ್ಮ ಸ್ಥಳಕ್ಕೆ ಹೊರಟು ಹೋದರು.

ಇತ್ತ ದಿವಾಕರ ದೀಕ್ಷಿತರು ಮುದಿತರಾಗಿ ಯೋಗ್ಯ ಬ್ರಾಹ್ಮಣರಿಂದೊಡಗೂಡಿ, ಯಾಗವನ್ನು ಆರಂಭಿಸಿದರು. ಶ್ರೀ ಸಚ್ಚಿದಾನಂದ ಚಿದಂಬರ ದೀಕ್ಷಿತರ ಪೂರ್ಣಾನುಗ್ರಹದಿಂದ ಯಜ್ಞವು ಸಮಾರಂಭದಿಂದ ಸಾಂಗವಾಯಿತು. ಈ ಯಾಗಕ್ಕೆ ಒಟ್ಟಿಗೆ ಎರಡು ಲಕ್ಷ ತೊಂಭತ್ತೆಂಟುಸಾವಿರ ಬ್ರಾಹ್ಮಣಭೋಜನವಾಯಿತು. ಯಾಗ ಸಮಾಪ್ತಿಯಾದಬಳಿಕ ಶ್ರೀ ಚಿದಂಬರ ದೀಕ್ಷಿತರು, ಸುಮುಹೂರ್ತ ನೋಡಿ, ನವಲಗುಂದಕ್ಕೆ ಹೋಗಲು ಸಿದ್ಧರಾದರು. ಅಷ್ಟರಲ್ಲಿ ಯಜ್ಞಮಾಡಲಿಕ್ಕೆ ಸ್ಥಳಕೊಟ್ಟ ತೋಟಿಗನು ಅಲ್ಲಿಗೆ ಬಂದು:-ನಾನು

ಮೊದಲೇ ಬಡವನು! ಮೇಲಾಗಿ ನನ್ನ ಉಪಜೀವಿಕೆಯ ಸಾಧನವಾದ ಈ ಮಾವಿನತೋಪು ಬ್ರಾಹ್ಮಣರಿಂದ ಹಾಳಾಗಿ ಹೋಗಿದೆ. ಗಿಡಗಳಲ್ಲಿ ಔಷಧಕ್ಕಾದರೂ ಹಣ್ಣು ಉಳಿದಿಲ್ಲ. ಇನ್ನು ಮುಂದೆ ನನ್ನ ಗತಿಯೇನು? ಎಂದು ಮೊರೆಯಿಡಲು, ದೀಕ್ಷಿತರು:—ಅಸತ್ಯ ಮಾತಾಡಬಾರದು! ದ್ವಿಜರನ್ನು ಹಳಿಯಬಾರದು! ನಿನ್ನ ತೋಪು ಮೊದಲಿನಂತೆಯೇ ಇರುವದು, ನೋಡಿ ಬಾ, ಎಂದರು. ಆಗ ತೋಟಿಗನು ತೋಪಿಗೆ ಹೋಗಿ, ಫಲಭಾರದಿಂದ ಬಾಗಿದ ಗಿಡಗಳನ್ನು ನೋಡಿ, ಪಶ್ಚಾತ್ತಾಪಬಟ್ಟು ಮತ್ತೆ ಗುರುಗಳ ಸನ್ನಿಧಿಗೆ ಬಂದು, ಕ್ಷಮೆಯನ್ನು ಯಾಚಿಸಿದನು. ಆಗ ಮಹಾಸ್ವಾಮಿಗಳು ಆ ತೋಟಿಗನನ್ನೂ, ಗೊಣ್ಣಾಗರಸ್ಥರನ್ನೂ ಅನುಗ್ರಹಿಸಿ, ರಥದಲ್ಲಿ ಕುಳಿತುಕೊಂಡು ನವಲಗುಂದಕ್ಕೆ ಹೊರಟರು. ಅಸಂಖ್ಯ ಜನಸಮೂಹವು ಅವರನ್ನು ತಮ್ಮ ತಮ್ಮ ವೈಭವದೊಂದಿಗೆ ಹಿಂಬಾಲಿಸಿತು. ಹೀಗೆ ಮಹಾಸ್ವಾಮಿಗಳು ಅಮಿತವಾದ ವೈಭವದೊಂದಿಗೆ ಮಾರ್ಗಕ್ರಮಣಮಾಡುತ್ತ ಅರುಣೋದಯಕ್ಕೆ ನವಲಗುಂದವನ್ನು ನೇರಿದರು. (ಶಕೆ ೧೭೨೫ ವೈಶಾಖ ಶುದ್ಧ ತ್ರಯೋದಶಿ)

ನವಲಗುಂದದ ಪುರವಾಸಿಗಳು ಈ ಮೊದಲೇ ತಮ್ಮ ಗ್ರಾಮವನ್ನು ರಮ್ಯವಾದ ತಳಿದೋರಣಗಳಿಂದಲೂ, ಧ್ವಜ-ಪತಾಕೆಗಳಿಂದಲೂ ಶೃಂಗರಿಸಿದ್ದರು. ಮಹಾಸ್ವಾಮಿಯು ಒರುವ ಮಾರ್ಗವನ್ನು ಚನ್ನಾಗಿ ಸಾರಿಸಿಸಿ, ವಿಧವಿಧದ ರಂಗವಲ್ಲಿಗಳಿಂದಲೂ, ಗೋಪಾದಗಳಿಂದಲೂ ಸುಶೋಭಿತ ಮಾಡಿದ್ದರು. ಶ್ರೀ ಗುರುಗಳು ಗ್ರಾಮದ ಸಮೀಪಕ್ಕೆ ಬರಲು, ಮೊದಲೇ ಶೃಂಗಾರಾಗಿ ದರ್ಶನೋತ್ಕಂಠಿತರಾದ ಪುರಸ್ಥರು, ಅವರನ್ನು ಎದುಗೊಂಡು ಸಂಭ್ರಮದಿಂದ ಕರೆದೊಯ್ದರು. ಶ್ರೀ ದೀಕ್ಷಿತರು ತಮ್ಮ ಸ್ಥಳಕ್ಕೆ ತಲ್ಪಿದ ಬಳಿಕ, ಪುರವಾಸಿಗಳ ಕ್ಷೇಮವಾರ್ತೆಯನ್ನು ಕೇಳಿ, ಆ ಹೊತ್ತು ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿದರು. ಭೋಜನೋತ್ತರದಲ್ಲಿ ಜನರನ್ನು ವಿಶ್ರಾಂತಿಗಾಗಿ ಕಳಿಸಿ, ತಾವೂ ವಿಶ್ರಮಿಸಿದರು. ಮರುದಿವಸ ಎಲ್ಲ ಅರಸರಿಗೂ, ಪರಿವಾರಕ್ಕೂ ಫಲ-ಮಂತ್ರಾಕ್ಷತೆಗಳನ್ನು ಕೊಟ್ಟು, ಆನಂದದಿಂದ ಅನುಗ್ರಹಿಸಿ, ಅಪ್ಪಣೆ ಕೊಟ್ಟು ಅವರವರ ಸ್ಥಳಗಳಿಗೆ ಕಳುಹಿದರು.

ಮುಂದೆ ಒಂದು ದಿವಸ ದಿವಾಕರ ದೀಕ್ಷಿತರು ತಂದೆಯ ಬಳಿಗೆ ಬಂದು- ಮೃತ್ಯುಂಜಯ-ವರರುಚಿಗಳು ದೊಡ್ಡವರಾಗಿರುವರು. ಆದ್ದರಿಂದ ಅವರ ವಿವಾಹವನ್ನು ಇಲ್ಲೇ ಮಾಡಬೇಕೆಂದು ಯೋಚಿಸಿರುವೆನು. ಅಪ್ಪಣೆಯಾಗಬೇಕು,

ಎಂದು ಕೇಳಿಕೊಂಡರು. ಆಗ ಚಿದಂಬರ ದೀಕ್ಷಿತರು:—ದಿವಾಕರಾ, ಯಜ್ಞಕ್ಕಾಗಿ ಸಾಲವು ಬಹಳವಾಗಿರುವದು. ಕಾರಣ ಸದ್ಯಕ್ಕೆ ಮದುವೆಯ ಹಂಬಲವನ್ನು ಬಿಡು. ಮುಂದಿನ ವರ್ಷ ನೋಡೋಣವಂತೆ! ಎಂದು ನುಡಿಯಲು, ದಿವಾಕರ ದೀಕ್ಷಿತರು:—ಸಾಲವೇನೂ ಬಹಳವಿಲ್ಲ! ಮದುವೆಯನ್ನು ಈಗಲೆ ಮಾಡುವದು ಯುಕ್ತವಾಗಿದೆ. ಕಾರಣ ಇದೇ ವರ್ಷ ಕಾರ್ಯವನ್ನು ತೀರಿಸೋಣ ಎನ್ನಲು, ಶ್ರೀ ಗುರುಗಳು ಅದಕ್ಕೆ ಸಮ್ಮತಿಸಿದರು; ಹಾಗು ಕನ್ಯೆಗಳನ್ನು ನೋಡಲು ಆಜ್ಞಾಪಿಸಿದರು. ಬಳಿಕ ದಿವಾಕರ ದೀಕ್ಷಿತರು ಮೊದಲು ವರರುಚಿಯ ಮುಂಜಿಯನ್ನು ವೈಶಾಖ ವದ್ಯ ಪಂಚಮಿಯ ದಿವಸ ಒಳ್ಳೇ ಸಮಾರಂಭದಿಂದ ಮಾಡಿದರು. ಈ ಮುಂಜಿಯ ಕೂಡ ಮತ್ತೆ ಮೂವತ್ತೈದು ಬ್ರಾಹ್ಮಣ ಹುಡುಗರ ಮುಂಜಿಗಳಾದವು. ಒಬ್ಬೊಬ್ಬ ಮುಂಜೀವಟುವಿಗೆ ೩೦೦ ರಂತೆ ಒಟ್ಟಿಗೆ ೧೦,೮೦೦ ಜನ ಬ್ರಾಹ್ಮಣ ಭೋಜನವಾಯಿತು. ಆ ಮೇಲೆ ಮಳೆಗಾಲ ಸಮೀಪಿಸಿದ್ದರಿಂದ ದಿವಾಕರ ದೀಕ್ಷಿತರು ತೀವ್ರವಾಗಿ ಕನ್ಯೆಗಳನ್ನು ಶೋಧಿಸತೊಡಗಿದರು. ಮೃತ್ಯುಂಜಯನಿಗೆ ಪುಣೆಯೊಳಗಿನ ಬಾಪು ಎಂಬ ವ್ಯಾಪಾರಿಯ ಮಗಳನ್ನೂ, ವರರುಚಿಗೆ ಕೊಲ್ಲಾಪುರದ ಪ್ಯೆರಾಳನಾಯಕ ಎಂಬ ಸಾಹುಕಾರನ ಮಗಳನ್ನೂ ವಧುಗಳನ್ನಾಗಿ ನೇಮಿಸಿದರು. ಈ ಲಗ್ನದಲ್ಲಿ ಪ್ರತಿಯೊಬ್ಬ ವಧುವಿಗೆ ಅರ್ಧಸೇರು ಬಂಗಾರ, ನೂರುತೊಲಿ ಬೆಳ್ಳಿ, ಮೂರು ದಟ್ಟಿ, ಮೂರು ಖಣಾ ಈ ಪ್ರಕಾರ ಸಾಮಾನು ಕೊಡುವದನ್ನು ಗೊತ್ತುಮಾಡಿದ್ದರು. ನಿಯಮಿಸಿದ ಸುಮುಹೂರ್ತಕ್ಕೆ ಎಲ್ಲರೂ ಅಲ್ಲಿಗೆ ಬಂದರು ವಿವಾಹದ ಪೂರ್ವದಿವಸ ಸೀಮಾಂತಪೂಜನವಾಯಿತು ಮರುದಿವಸ ಶುಭಲಗ್ನದಲ್ಲಿ ವಧು-ವರರ ಮೇಲೆ ಅಕ್ಷತೆಗಳನ್ನು ಹಾಕಿ, ಮಂಗಲವನ್ನು ಮಾಡಿದರು. ಮಿಕ್ಕಕಾರ್ಯಗಳಾದರೂ ಕ್ರಮದಿಂದ ಜರುಗಿದವು. ಅಂತು ಲಗ್ನಕಾರ್ಯವು ಒಳ್ಳೇ ಸಮಾರಂಭದಿಂದ ನೆರವೇರಿತು. ಈ ಲಗ್ನದಲ್ಲಿ ನಿತ್ಯದಲ್ಲಿ ಐದಾರು ಸಾವಿರ ಬ್ರಾಹ್ಮಣ ಭೋಜನವಾಗುತ್ತಿತ್ತು. ಮೃತ್ಯುಂಜಯ ದೀಕ್ಷಿತರ ಹೆಂಡತಿಯ ಹೆಸರು ಮ್ಹಾಳಸಾ, ವರರುಚಿಯ ಹೆಂಡತಿಯ ಹೆಸರು ರಮಾ ಎಂದು ಇಟ್ಟರು. ನಾಲ್ಕು ದಿವಸ ಲಗ್ನಸಮಾರಂಭವಾಗಿ, ಬೀಗರಿಗೆ ಯೋಗ್ಯವಾದ ವಸ್ತ್ರಾಲಂಕಾರಗಳಿಂದ ಮಾನಮರ್ಯಾದೆ ಮಾಡಿ, ಸೊಸೆಯಂದಿರರಿಗೆ ಉಡಿತುಂಬಿ, ಯಾವತ್ತರಿಗೂ ತಮ್ಮತಮ್ಮ ಸ್ಥಳಗಳಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟರು.

ಈ ವಿವಾಹಸಂಭ್ರಮದಲ್ಲಿ ಒಂದು ಚಮತ್ಕಾರವಾಯಿತು. ಅದೇನಂದರೆ-

ಒಂದು ದಿವಸ ಬ್ರಾಹ್ಮಣಭೋಜನವು ನಡೆದಿರಲು, ಆಕಾಶವು ಒಮ್ಮೆಲೆ ಮೋಡಗಳಿಂದ ಮುಸುಕಿಕೊಂಡಿತು. ವಿದ್ಯುಲ್ಲತೆಯು (ಮಿಂಚು) ಕ್ಷಣಕ್ಷಣಕ್ಕೆ ತನ್ನ ದೇಹವನ್ನು ತೋರಿ, ಬ್ರಹ್ಮವೃಂದಕ್ಕೆ ಭೀತಿಯನ್ನುಂಟು ಮಾಡುತ್ತಿತ್ತು. ಇಂತು ಮಳೆಯು ಬರುವ ಚಿಹ್ನಗಳು ತೀರ ಸ್ಪಷ್ಟವಾಗಿ ತೋರಹತ್ತಿದವು. ಆಗ ಇಂದು ಬ್ರಾಹ್ಮಣಭೋಜನವು ನಿರ್ವಿಘ್ನದಿಂದ ಪೂರ್ಣವಾಗುವದಿಲ್ಲವೆಂದು ಪ್ರತಿಯೊಬ್ಬನು ಚಿಂತಿಸಹತ್ತಿದನು. ಅಷ್ಟರಲ್ಲಿ ಶ್ರೀ ಚಿದಂಬರ ದೀಕ್ಷಿತರು ಅಲ್ಲಿಗೆ ಬಂದು, ಒಬ್ಬ ಬ್ರಾಹ್ಮಣನನ್ನು ಕರೆದು ಒಂದು ಪಂಜಿಯ ತುದಿಯಲ್ಲಿ ಒಂದು ತೆಂಗಿನಕಾಯಿಯನ್ನು ಕಟ್ಟಿ, ಅದನ್ನು ಆ ಬ್ರಾಹ್ಮಣನ ಕೈಯಲ್ಲಿ ಕೊಟ್ಟು— ನೀನು ಕೊತ್ತಳದ ಮೇಲೆ ನಿಂತು ಬ್ರಾಹ್ಮಣಭೋಜನವಾಗುವವರೆಗೆ ಈ ಪಂಜಿಯನ್ನು ಒಂದೇಸವನೆ ತಿರುಗಿಸು. ಅಂದರೆ ಮಳೆಯು ಬರಲಿಕ್ಕಿಲ್ಲ, ಎಂದು ಹೇಳಿ ಕಳುಹಿ, ತಾವು ಇತ್ತ ಬ್ರಾಹ್ಮಣಪಂಙ್ಕ್ತಿಯಲ್ಲಿ:—ಚಿಂತಿಸಬೇಡಿರಿ ಮೇಘರಾಜನು ಬ್ರಾಹ್ಮಣಸಂತರ್ಪಣಕ್ಕೆ ವಿಘ್ನವನ್ನು ತರಲಾರನು! ಸಾವಕಾಶ ಭೋಜನಮಾಡಿರಿ, ಎಂದು ಹೇಳುತ್ತ ಅಡ್ಡಾಡ ಹತ್ತಿದರು. ಬ್ರಾಹ್ಮಣಭೋಜನವಾಯಿತು. ದಕ್ಷಿಣೆ ತಾಂಬೂಲಗಳಿಂದ ಬ್ರಾಹ್ಮಣರು ಸತ್ಕರಿಸಲ್ಪಟ್ಟು, ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಬ್ರಾಹ್ಮಣನು ತೆಂಗಿನಕಾಯಿ ತಿರುಗಿಸುವದನ್ನು ಬಿಟ್ಟನು. ಕೂಡಲೆ ಮಳೆಯಾಗಹತ್ತಿ, ನವಲಗುಂದದ ಭೂಮಿಯು ಜಲಮಯವಾಯಿತು!

## ೨೦ನೆಯ ಪ್ರಕರಣ.

## ಬಾಜೀರಾಯನ ಆಗಮನ.



ಈ ಪ್ರಕಾರ ಶ್ರೀ ಚಿದಂಬರ ದೀಕ್ಷಿತರು ಲೋಕಕಲ್ಯಾಣಕ್ಕಾಗಿ ವಿಚಿತ್ರ ಚರಿತ್ರಗಳನ್ನು ತೋರುತ್ತ ಇರುತ್ತಿರಲು, ಒಂದು ದಿವಸ ಒಬ್ಬ ಜಾಣನಾದ ಲೆಕ್ಕಿಗನು (ಕಾರಕೂನ) ಪುಣೆಯಿಂದ ನವಲಗುಂದಕ್ಕೆ ಬಂದು, ದೀಕ್ಷಿತರ ದರ್ಶನವನ್ನು ತಕ್ಕೊಂಡು:—ನಮ್ಮ ಪ್ರಭುಗಳಾದ ಬಾಜೀರಾಯರು ತಮ್ಮ ದರ್ಶನಕ್ಕಾಗಿ ಬರಬೇಕೆಂದು ಇಚ್ಛಿಸುತ್ತಿರುವರು. ಕಾರಣ ಅಪ್ಪಣೆಯಾಗಬೇಕೆಂದು ಬೇಡಿಕೊಂಡನು. ಆಗ ಚಿದಂಬರ ದೀಕ್ಷಿತರ ಮನಸಿನಲ್ಲಿ:-ಭೆಟ್ಟಿಗೆ ಬರುವ

ಕಾರಣವಿಲ್ಲ, ಎಂದು ಹೇಳತಕ್ಕದ್ದಿತ್ತು; ಹಾಗು ಅವರು ಈ ಅಭಿಪ್ರಾಯವನ್ನು ದಿವಾಕರ ದೀಕ್ಷಿತರಿಗೆ ರಹಸ್ಯವಾಗಿ ಹೇಳಿದರು. ಅದಕ್ಕೆ ದಿವಾಕರ ದೀಕ್ಷಿತರು—ನಾವೂ ಬ್ರಾಹ್ಮಣರು; ಅವನೂ ಬ್ರಾಹ್ಮಣನು. ಮೇಲಾಗಿ ಅವನ ರಾಜ್ಯದಲ್ಲಿ ನಾವು ಇದ್ದು, ಅವನಿಗೆ ಭೆಟ್ಟಿಗೆ ಒರಬೇಡ, ಎಂದು ಹೇಳುವದು ಶಾಸ್ತ್ರಸಮ್ಮತವಲ್ಲ. ಆದ್ದರಿಂದ ಅನುಕೂಲವಾದ ಅಪ್ಪಣೆಯನ್ನು ಕೊಡಬೇಕೆಂದು ಹೇಳಿಕೊಂಡರು. ಆಗ ಶ್ರೀ ಚಿದಂಬರ ದೀಕ್ಷಿತರು—ನಿನ್ನ ಮನಸಿಗೆ ಬಂದರೆ ಹಾಗೆಯೇ ಆಗಲಿ, ಎಂದು ನುಡಿದರು. ಬಳಿಕ ದಿವಾಕರ ದೀಕ್ಷಿತರು ಬಂದ ಬ್ರಾಹ್ಮಣನಿಗೆ ಮಾನವ ಾಡಿ, ರಾಜನಿಗೆ ಭೆಟ್ಟಿಗೆ ಒರಲಿಕ್ಕೆ ಅಪ್ಪಣೆಯಾಗಿದೆ, ಎಂದು ಹೇಳಿದರು. ಆಗ ಬ್ರಾಹ್ಮಣನು ಸಂತೋಷಗೊಂಡು, ಗುರುಗಳ ಅಪ್ಪಣೆಯನ್ನು ತಕ್ಕೊಂಡು ಹೊರಟು ಹೋದನು.

ಲೆಕ್ಕಿಗನು ಪುಣೆಗೆ ಹೋದ ಒಳಿಕ ಈ ಆನಂದದಾಯಕ ವರ್ತಮಾನವನ್ನು ಬಾಜೀರಾಯನಿಗೆ ತಿಳಿಸಿದನು. ಆಗ ಅವನಿಗೂ ಆನಂದವಾಯಿತು. ಕೂಡಲೆ ಅವನು ದರ್ಶನಕ್ಕೆ ಬರುವ ಸಿದ್ಧತೆಯನ್ನು ಮಾಡಿ, ಸೈನ್ಯದೊಂದಿಗೆ ಹೊರಟು ಶಕೆ ೧೭೨೯ ಕಾರ್ತಿಕ ವದ್ಯ ಏಕಾದಶೀ ದಿವಸ ಸಾಯಂಕಾಲಕ್ಕೆ ನವಲಗುಂದಕ್ಕೆ ಬಂದನು. ಆಹೊತ್ತು ಸಾಯಂಕಾಲವಾದ ಮೂಲಕ ಗೋಧೂಳಿಯ ಮುಹೂರ್ತದ ಮೇಲೆ ತಾನೊಬ್ಬನೇ ಧೂಳಿ ದರ್ಶನವನ್ನು ತಕ್ಕೊಂಡು ಇಳಕೊಳ್ಳಲಿಕ್ಕೆ ಗೊತ್ತುಮಾಡಿದ ಸ್ಥಳಕ್ಕೆ ಹೊರಟು ಹೋದನು. ಮರು ದಿವಸ ಎಲ್ಲರಿಗೂ ದರ್ಶನ ಕೊಡುವ ಕೆಲಸವು ನಡೆಯಿತು. ದೀಕ್ಷಿತರು ಸ್ನಾನವನ್ನು ಮಾಡಿ, ಬೆಳ್ವಸ್ತ್ರವನ್ನುಟ್ಟುಕೊಂಡು ಕೋಟೆಯ ಹೆಬ್ಬಾಗಿಲ ಹತ್ತರ ಬಂದು ಎತ್ತರವಾದ ಸ್ಥಳದ ಮೇಲೆ ನಿಂತುಕೊಂಡರು. ಅವರ ಶರೀರವು ಭಸ್ಮರುದ್ರಾಕ್ಷಿಗಳಿಂದ ಅಲಂಕೃತವಾಗಿತ್ತು. ಈ ಎತ್ತರವಾದ ಸ್ಥಳದ ಸುತ್ತಲೂ ದಿವಾಕರ ದೀಕ್ಷಿತರು ಬಿದರಿನ ಕಟಾಂಜನವನ್ನು ಕಟ್ಟಿಸಿದ್ದರು. ದಿವಾಕರ ದೀಕ್ಷಿತರು ದಂಡನ್ನು ಕೋಟೆಯ ಸುತ್ತಲು ನಿಲ್ಲಿಸಿದರು. ಆಮೇಲೆ ದರ್ಶನಕ್ಕೆ ಆರಂಭವಾಯಿತು. ಶ್ರೀಗುರುಗಳು ನಿಂತ ಸ್ಥಳದಿಂದ ಹತ್ತು ಮೊಳ ಅಂತರದ ಮೇಲೆ ನಿಂತು ದರ್ಶನ ತಕ್ಕೊಳ್ಳಬೇಕೆಂದು ಗೊತ್ತಾದ ಮೂಲಕ ಪ್ರತಿಯೊಬ್ಬ ದಂಡಿನವನು ಗೊತ್ತುಮಾಡಿದ ಸ್ಥಳದಲ್ಲಿ ನಿಂತು ದರ್ಶನ ತಕ್ಕೊಳ್ಳಹತ್ತಿದನು. ಆಗ ಶ್ರೀಗುರುಗಳು ಪ್ರತಿಯೊಬ್ಬರಿಗೆ ಕೈಸನ್ನೆಯಿಂದಾಗಲಿ, ಕತ್ತಿನ ಸನ್ನೆಯಿಂದಾಗಲಿ ಅಭಯವನ್ನು ಕೊಡುತ್ತಿದ್ದರು. ಶೂದ್ರರಿಗೆ ಮನೆಯ ಹೊರಭಾಗಕ್ಕೆ

ಬಂದು ದರ್ಶನ ಕೊಟ್ಟರು. ದರ್ಶನ ಸಮಾರಂಭವು ಹನ್ನೆರಡು ಗಳಿಗೆಗಳವರೆಗೆ ನಡೆದಿತ್ತು. ದರ್ಶನ ತಕ್ಕೊಳ್ಳುವಾಗ ಪ್ರತಿಯೊಬ್ಬರು ತಮಗೆ ಬೇಕು ಬೇಕಾದ ಪದಾರ್ಥಗಳನ್ನು ಶ್ರೀಗಳ ಮುಂದೆ ಇಡುತ್ತಿದ್ದರು. ಆದರೆ ಅವುಗಳಲ್ಲಿ ಒಂದನ್ನು ಸಹ ದೀಕ್ಷಿತರು ಸ್ವೀಕರಿಸುತ್ತಿದ್ದಿಲ್ಲ. ಕೊಟ್ಟ ಕೂಡಲೆ ಕೈಯಲ್ಲಿ ತೆಗೆದು ಕೊಂಡು 'ಇದು ನಮ್ಮದಾಗಿ ನಿಮ್ಮ ಹತ್ತರ ಇರಲಿ' ಎಂದು ನುಡಿದು ಅವರವ ರದು ಅವರವರಿಗೆ ತಿರುಗಿ ಕೊಡುತ್ತಿದ್ದರು. ಇಷ್ಟರಲ್ಲಿ ಬಾಜೀರಾಯನು ಅಲ್ಲಿಗೆ ಬಂದು, ದೀಕ್ಷಿತರಿಗೆ—ಮಹಾಸ್ವಾಮಿಯು ನಮ್ಮ ಮನೆಗೆ ಬಂದು, ಮನೆ ಯನ್ನು ಪವಿತ್ರಮಾಡಿ ಫಲಮಂತ್ರಾಕ್ಷತೆಗಳನ್ನು ಕೊಡಬೇಕು; ಎಂದು ಬೇಡಿ ಕೊಳ್ಳಲು,

ಶ್ರೀ ಚಿದಂಬರ ದೀಕ್ಷಿತರು:—ನಾನು ಬಡವನು, ನಿಮ್ಮಂಥ ದೈವುಳ್ಳವರ ಮನೆಗೆ ಹ್ಯಾಗೆ ಬರಲಿ? ಮನೆಗೆ ಕರೆದೊಯ್ದು, ಭೂಮಿ-ದ್ರವ್ಯಗಳನ್ನು ಕೊಡುವ ನಿನ್ನ ಅಭಿಪ್ರಾಯವು ನಮಗೆ ತಿಳಿಯಿತು. ನಿನ್ನ ರಾಜ್ಯದಲ್ಲಿಯೇ ಇರುವೆನು. ಮನೆಗೆ ಬರುವದರಲ್ಲಿ ಹೆಚ್ಚಿಗೇನದೆ? ನಿನ್ನನ್ನೂ ನಿನ್ನ ದಂಡನ್ನೂ ನೋಡಿ ಸಂ- ತೋಷವಾಗುತ್ತದೆ. ನಿನ್ನ ಕೃಪೆಯಿಂದ ನನಗೆ ಎಲ್ಲ ತರದ ಅನುಕೂಲತೆಗಳಿರು ವವು. ಸದ್ಧರ್ಮದಿಂದ ನಡೆ, ಅಂದರೆ ತೀರಿತು, ಎಂದು ನುಡಿಯಲು, ಬಾಜೀ ರಾಯನು ನಿರುಪಾಯವುಳ್ಳವನಾಗಿ ಶ್ರೀಗುರುಗಳಿಗೆ ಹನ್ನೊಂದು ನಮಸ್ಕಾರ ಮಾಡಿ ಇಳಕೊಂಡ ಸ್ಥಳಕ್ಕೆ ಹೊರಟು ಹೋದನು. ಬಾಜೀರಾಯನು ಹೋದ ಬಳಿಕ ಶ್ರೀ ಚಿದಂಬರ ದೀಕ್ಷಿತರು ದಿವಾಕರನಿಗೆ:—ರಾಜನನ್ನು ಚನ್ನಾಗಿ ಸನ್ಮಾ ನಿಸು. ಈವೊತ್ತು ಸೈನ್ಯದವರು ಮೊದಲುಗೊಂಡು ಯಾವತ್ತರಿಗೂ ಊಟಕ್ಕೆ ಹೇಳು, ಎಂದು ನುಡಿದು ತಾವು ಮಧ್ಯಾಹ್ನವಿಧಿ ತೀರಿಸಲಿಕ್ಕೆ ಹೋದರು. ಆ ಮೇಲೆ ದಿವಾಕರ ದೀಕ್ಷಿತರು ಎಲ್ಲ ಸಿದ್ಧತೆಯನ್ನು ಮಾಡಿ ಶಂಕರ ದೀಕ್ಷಿತರನ್ನು ಭೋಜನದ ಆಮಂತ್ರಣ ಹೇಳಲಿಕ್ಕೆ ಬಾಜೀರಾಯನ ಕಡೆಗೆ ಕಳುಹಿದರು.

ಬಾಜೀರಾಯನು ಶಂಕರ ದೀಕ್ಷಿತರನ್ನು ನೋಡಿ, ಅವರನ್ನು ಯೋಗ್ಯಾ ಸನದಲ್ಲಿ ಕುಳ್ಳಿರಿಸಿ, ಚನ್ನಾಗಿ ಸತ್ಕರಿಸಿದನು. ಆ ಮೇಲೆ ಶಂಕರ ದೀಕ್ಷಿತರು ಸೈನ್ಯ ಮೊದಲು ಮಾಡಿಕೊಂಡು ಸಮಸ್ತರಿಗೆ ಭೋಜನದ ಆಮಂತ್ರಣ ಕೊಟ್ಟು ಮನೆಗೆ ಬಂದರು. ಇತ್ತ ಬಾಜೀರಾಯನು ತನ್ನ ಮಂತ್ರಿಯನ್ನು ಕರೆದು:— ನಮ್ಮ ಜನರು ಬಹಳ ಮಂದಿ ಇರುವರು. ಈ ಹೊತ್ತು ಚಿದಂಬರ ದೀಕ್ಷಿತರ ಕಡೆಯಿಂದ ಎಲ್ಲರಿಗೂ ಭೋಜನಕ್ಕೆ ನಿಮಂತ್ರಣ ಬಂದಿರುವದು; ಎಷ್ಟೆಂದು

ಜನರನ್ನು ಕರಕೊಂಡು ಹೋಗಬೇಕು? ಕಾರಣ ನೀನು ಶ್ರೀ ಗುರುಗಳ ಸನ್ನಿಧಿಗೆ ಹೋಗಿ, ಎಷ್ಟು ಮಂದಿಯನ್ನು ಕರಕೊಂಡು ಬರಬೇಕೆಂಬದನ್ನು ಕೇಳಿಕೊಂಡು ಬಾ, ಎಂದು ಹೇಳಲು, ಮಂತ್ರಿಯು ರಾಜಾಜ್ಞೆಯ ಮೇರೆಗೆ ಶ್ರೀ ಗುರುಗಳ ಹತ್ತರ ಹೋಗಿ, ರಾಜನ ಅಭಿಪ್ರಾಯವನ್ನು ಹೇಳಿದನು. ಆಗ ದೀಕ್ಷಿತರು:—ನಿಮ್ಮ ಎಲ್ಲ ಜನರನ್ನು ಕರಕೊಂಡು ಬರಬೇಕು; ಇಷ್ಟೇ ಅಲ್ಲ; ನಿಮ್ಮೊಳಗಿನ ಯಾರೂ ಉಪಹಾರವನ್ನು ತಕ್ಕೊಳ್ಳಲಾಗದು, 'ಎಂದು ಹೇಳಿ ಮಂತ್ರಿಯನ್ನು ಕಳುಹಲು, ಮಂತ್ರಿಯು ರಾಜನ ಬಳಿಗೆ ಹೋಗಿ, ದೀಕ್ಷಿತರ ಅಭಿಪ್ರಾಯವನ್ನು ಹೇಳಿದನು. ಆಗ ಬಾಜೀರಾಯನಿಗೆ ವಿಚಾರ ಬಿತ್ತು. ಅವನು ಅಡಿಗೆಯ ಕಡೆಗೆ ವಿಚಾರ ಮಾಡಿದನು. ಅವನ ದಂಡು ಮೂರ್ಲುನಾಲ್ಕಾಂಶ ಲಕ್ಷದಷ್ಟು ಇತ್ತು; ಅಷ್ಟು ಅಡಿಗೆಯ ಸಿದ್ಧತೆಯಿದ್ದಿಲ್ಲ. ಆಗಂತೂ ಬಾಜೀರಾಯನಿಗೆ ಬಲು ಸೋಜಿಗವಾಯಿತು. ಅವನು ಮನಸಿನಲ್ಲಿ:—ಒಳ್ಳೇದು ನೋಡೋಣ. ದೀಕ್ಷಿತರ ಅದ್ಭುತವು ತಿಳಿಯಲೊಲ್ಲದು. ಅವರ ಅಪ್ಪಣೆಯಾಗಿದೆ; ಅಂದಮೇಲೆ ಎಲ್ಲರೂ ಹೋಗಲಿಕ್ಕೆಬೇಕೆಂದು ಯೋಚಿಸಿ, 'ಯಾರೂ ಊಟ ಮಾಡಬೇಡಿರಿ, ಏನೂ ತಿನ್ನಬೇಡಿರಿ, ಶ್ರೀ ಚಿದಂಬರ ದೀಕ್ಷಿತರ ಮನೆಗೆ ಊಟಕ್ಕೆ ಹೋಗತಕ್ಕದ್ದಿದೆ' ಎಂದು ನಾಲ್ಕೂ ಕಡೆಗೆ ಅಪ್ಪಣೆಮಾಡಿ, ತಾನು ಸ್ನಾನವನ್ನು ತೀರಿಸಿ, ಹಾಲು-ನೀರು ಏನೂ ತಕ್ಕೊಳ್ಳದೆ, ಹಾಗೆಯೇ ಕುಳಿತುಕೊಂಡನು.

ಇತ್ತ ದಿವಾಕರ ದೀಕ್ಷಿತರು ಶಿಷ್ಯರ ಕೈಯಿಂದ ಭೋಜನಕ್ಕಾಗಿ ಕೋಟೆಯ ಒಳಗೂ ಹೊರಗೂ ಶಗಣೆಯಿಂದ ಭೂಮಿಯನ್ನು ಸಾರಿಸಿ, ತಯಾರಿಸಿದರು. ಆ ಮೇಲೆ ಅಡಿಗೆಯು ಸಿದ್ಧವಾಗಲು, ಊಟಕ್ಕೆ ಕರೆಯಲು ಕಳುಹಿದರು. ಮೊದಲು ಅರಸನು ಮುಖ್ಯ ಪ್ರಧಾನಿಗಳನ್ನು ಕೂಡಿಕೊಂಡು ದೀಕ್ಷಿತರ ಸದನಕ್ಕೆ ಬಂದನು. ಆಗ ದಿವಾಕರ ದೀಕ್ಷಿತರು, ವೈದಿಕರನ್ನೂ, ಸಾಗ್ನಿಕರನ್ನೂ ಅರಸನೇ ಮೊದಲಾದ ಮುಖ್ಯ ಜನರನ್ನೂ ಕೋಟೆಯಲ್ಲಿ ಕೂಡ್ರಿಸಿದರು. ಉಳಿದವರು ಕೋಟೆಯ ಹೊರಭಾಗಕ್ಕೆ ಕುಳಿತುಕೊಂಡರು. ಎಲ್ಲ ಕಡೆಯಲ್ಲಿಯೂ ಚಿತ್ರ-ವಿಚಿತ್ರವಾದ ರಂಗವಲ್ಲಿಯು ಹಾಕಿತ್ತು. ಕೋಟೆಯೊಳಗೆಲ್ಲ ಬಾಳೇ ಎಲೆಗಳನ್ನೂ, ಹೋರಭಾಗಕ್ಕೆ ಪತ್ರಾವಳಿಗಳನ್ನೂ ಹಾಕಿದ್ದರು. ಶ್ರೀ ಚಿದಂಬರ ದೀಕ್ಷಿತರು ಅನ್ನಪೂರ್ಣೆಯ ಪೂಜೆಯನ್ನು ಮಾಡಿ ಬಡಿಸಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಒಡಿಸುವದಕ್ಕೆ ಆರಂಭವಾಯಿತು. ಬಾಜೀರಾಯನ ಕಡೆಗೇ ಎಲ್ಲರ ಸಮಾಚಾರವನ್ನು ತಕ್ಕೊಳ್ಳುವ ಕೆಲಸವನ್ನು ನೇಮಿಸಿದ್ದರಿಂದ

ಆವನು ಎಷ್ಟೋ ಜನ ಕಾರಕೂನರನ್ನು ನೇಮಿಸಿ, ಈ ವ್ಯವಸ್ಥೆಯನ್ನು ಮಾಡಿದ್ದನು. ಬಡಿಸೋಣವು ಪೂರ್ಣವಾದ ಬಳಿಕ ದಿವಾಕರ ದೀಕ್ಷಿತರು ಉದಕವನ್ನು ಬಿಟ್ಟರು. ಎಲ್ಲರೂ 'ಹರಹರ ಮಹಾದೇವ' ಎಂದು ಗರ್ಜಿಸಿ, ಭೋಜನಕ್ಕೆ ಕುಳಿತುಕೊಂಡರು. ಯಾವತ್ತರು ನಾನಾತರದ ಪಕ್ವಾನ್ನಗಳಿಂದ ಆಕಂಠ ಭೋಜನಮಾಡಿ ತೃಪ್ತರಾದರು.

ದಿವಾಕರ ದೀಕ್ಷಿತರ ಮೇಲ್ವಿಚಾರಣೆಯ ಕೆಳಗೆ ಭೋಜನವು ಮುಗಿಯಿತು. ಯಾರಿಗೂ ಯಾವ ಪದಾರ್ಥಗಳೂ ಕಡಿಮೆಯಾಗಲಿಲ್ಲ ಭೋಜನೋತ್ತರ ದಿವಾಕರ ದೀಕ್ಷಿತರು ತಾಂಬೂಲ-ಪರಿಮಳಗಳಿಂದ ಅರಸು ಮೊದಲಾದವರನ್ನು ಸತ್ಕರಿಸಿದರು. ಒಟ್ಟು ಬ್ರಾಹ್ಮಣರು ೧೪,೫೦೦ ಜನರು ಉಂಡರು. ಮೊದಲನೆಯ ಪಙ್ಕ್ತಿಯು ಮುಗಿದಾಗ ನಾಲ್ಕು ಗಳಿಗೆ ಹೊತ್ತು ಉಳಿದಿತ್ತು. ಆಗ ಶೂದ್ರ ಮೊದಲಾದವರಿಗೆ ಪತ್ರಾವಳೀ ಹಾಕಿದರು. ಒಂದು ಯಾಮದ ವರೆಗೆ ಬಡಿಸುವ ಕೆಲಸವು ನಡೆದಿತ್ತು; ಇಷ್ಟರೊಳಗೆ ರಾತ್ರಿಯಾಯಿತು. ಆಗ ತಕ್ಕ ಸ್ಥಳದಲ್ಲಿ ೫,೫೫೫ ಇಷ್ಟು ಚಂದ್ರಜ್ಯೋತಿಗಳೆಂಬ ದೀವಿಗೆಗಳನ್ನು ಹಚ್ಚಿಸಿದರು. ಆ ದೀಪಪ್ರಕಾಶದಿಂದ ಬೆಳದಿಂಗಳು ಬಿದ್ದಿದೆಯೋ ಏನೋ ಎಂಬಂತೆ ಭಾಸವಾಗುತ್ತಿತ್ತು. ಉಪ್ಪು ಮೊದಲುಗೊಂಡು ತುಪ್ಪದ ವರೆಗೆ ಬಡಿಸಿದರು. ಅಲ್ಲೇ ಸಮೀಪದಲ್ಲಿ ಕೋಟೆಯ ಪೂರ್ವಭಾಗಕ್ಕೆ ಇರುವ ಸರೋವರದ ಒಂದು ಎತ್ತರವಾದ ಬಂಡಿಯ ಮೇಲೆ ದಿವಾಕರ ದೀಕ್ಷಿತರು ಹೋಗಿ ನಿಂತು, ಹರಹರಮಹಾದೇವ ಅಂತಾ ನುಡಿದು, ಊಟಕ್ಕೆ ಕೂಡ್ರಲಿಕ್ಕೆ ಚಪ್ಪಾಳೆ ಬಾರಿಸಿ, ಸನ್ನೆ ಮಾಡಿದರು. ಆಗ ಎಲ್ಲರು ಹರಹರ ಮಹಾದೇವ ಎಂದು ನುಡಿದು, ಚಪ್ಪಾಳೆಯನ್ನಿಕ್ಕಿ ಊಟಕ್ಕೆ ಕುಳಿತುಕೊಂಡರು. ಆ ಕಾಲಕ್ಕೆ ಉಂಟಾದ ಕರನಿನಾದವು ದಶದಿಕ್ಕುಗಳನ್ನು ತುಂಬಿಕೊಂಡಿತು.

ಆ ಮೇಲೆ ದಿವಾಕರದೀಕ್ಷಿತರು ಸ್ವತಃ ನಿಂತು ಬಡಿಸುತ್ತಿದ್ದರು. ಅಲ್ಲಿ ಬಡಿಸುವವರ ಸಂಖ್ಯೆಯು ಅರವತ್ತೊಂಬೈನೂರು (೬,೯೦೦) ಇತ್ತು. ಇವರಲ್ಲಿ ತುಪ್ಪ ಬಡಿಸುವವರು ಹನ್ನೆರಡುನೂರು (೧,೨೦೦) ಮಂದಿ ಇದ್ದರು. ಈ ಪಂಙ್ತಿಯು ಮುಗಿಯ ಬೇಕಾದರೆ ಇಪ್ಪತ್ತುಗಳಿಗೆ ರಾತ್ರಿಯಾಯಿತು. ಆ ಮೇಲೆ ಬಡಿಸುವವರೂ ವ್ಯವಸ್ಥಾಪಕರೂ ಊಟಕ್ಕೆ ಕುಳಿತರು. ಇವರ ಭೋಜನವಾದರೂ ಯಥಾಸಾಂಗವಾಯಿತು. ಇವರು ಊಟಮಾಡಿ ಎದ್ದಾಗ ಶುಕ್ರೋದಯವಾಗಿತ್ತು.! ಎರಡನೇ ಮೂರನೇ ಪಂಙ್ತಿಗೆ ಕೂಡಿ ಎಪ್ಪತ್ತೊಂದು ಸಾವಿರ

(೭೧,೦೦೦)ಜನರು ಉಂಡರು ಇದರಲ್ಲಿ ಗ್ರಾಮವಾಸಿಗಳ ಸಮಾವೇಶವಾದರೂ ಆಗಿದೆ. ಆ ಹೊತ್ತು ಹದಿನೆಂಟೂ ಜಾತಿಯವರ ಭೋಜನವಾಯಿತು. ಅಂತು ಆ ದಿನ ಒಟ್ಟಿಗೆ ಎಂಭತ್ತೈದು ಸಾವಿರದ ಐದು ನೂರು (೮೫,೫೦೦) ಜನರು ಉಂಡರು. ಒಂದೇ ದಿವಸಕ್ಕೆ ಇಷ್ಟು ಜನರು ಉಂಡದ್ದನ್ನು, ಬಾಜೀರಾಯನು ನೋಡಿದ್ದಿಲ್ಲ; ಹಾಗೂ ಕೇಳಿಯೂ ಇದ್ದಿಲ್ಲ ಅವನಿಗೆ ಪರಮಾಶ್ಚರ್ಯವಾಯಿತು. ಅವನು "ಅಡಿಗೆಯು ಸ್ವಲ್ಪವಿದ್ದು, ಎಲ್ಲರಿಗೆ ಹೇಗೆ ಪೂರೈಸಿತು? ಕಡೆಯ ವರೆಗೆ ಯಾರಿಗೂ ಯಾವ ಪದಾರ್ಥವೂ ಕಡಿಮೆ ಬೀಳಲಿಲ್ಲ ಇದು ಆಶ್ಚರ್ಯವಲ್ಲವೆ?" ಎಂದು ತನ್ನವರೊಡನೆ ಆಶ್ಚರ್ಯಪಡುತ್ತ, ಇಳಕೊಂಡ ಸ್ಥಳಕ್ಕೆ ಹೋದನು. ಇತ್ತ ದಿವಾಕರ ದೀಕ್ಷಿತರು ತಂದೆಯ ಬಳಿಗೆ ಹೋಗಿ, ಮೊದಲಿನಿಂದ ಕೊನೆಯ ವರೆಗೆ ಆದ ವೃತ್ತಾಂತವನ್ನೆಲ್ಲ ಹೇಳಿ, ಮಲಗಿಕೊಳ್ಳುವದಕ್ಕಾಗಿ ಶಯನಾಗಾರಕ್ಕೆ ಹೋದರು.

ಎರಡು ಗಳಿಗೆ ರಾತ್ರಿಯು ಉಳಿಯಿತು. ಶ್ರೀ ಚಿದಂಬರ ದೀಕ್ಷಿತರು ಸ್ನಾನಕ್ಕಾಗಿ ಎದ್ದು, ಹೊರಗೆ ಬರಲು, ಸೈನಿಕರು ಅವರ ಸಮ್ಮುಖಕ್ಕೆ ಹೋಗಿ: "ನಾವು ದುರ್ದೈವಿಗಳು! ತಮ್ಮ ಪಂಗ್ತಿಯ ಲಾಭವು ದೊರೆಯಲಿಲ್ಲ ತೀರ್ಥ-ಪ್ರಸಾದವೂ ಸಿಗಲಿಲ್ಲ ಅಂದಮೇಲೆ ನಾವು ನಿಜವಾಗಿ ಅಭಾಗ್ಯರಲ್ಲವೇ!" ಎಂದು ನುಡಿಯಲು, ದೀಕ್ಷಿತರು ಏನೂ ಮಾತಾಡದೆ ಸುಮ್ಮನೆ ಹೋದರು. ಆಗ ಸೈನಿಕರಲ್ಲಿ ಕೆಲವರು ಮನಸ್ಸಿನಲ್ಲಿ—ಬರೇ ದೋತರ ತಂಬಿಗೆಗಳನ್ನು ತೆಗೆದುಕೊಂಡು ಕೋಟೆಯೊಳಗೆ ಸೇರಬೇಕು. ಶ್ರೀ ದೀಕ್ಷಿತರ ಶಿಷ್ಯರೆಂದು ತಿಳಿದು ಯಾರೂ ಕೇಳದಿದ್ದರೆ ಅನಾಯಾಸವಾಗಿ ನಮ್ಮ ಕಾರ್ಯವು ಕೈಗೂಡುವದೆಂದು ಯೋಚಿಸಿ, ಧೋತರ-ತಂಬಿಗೆಗಳನ್ನು ತಕ್ಕೊಂಡು ಕೋಟೆಯನ್ನು ಸೇರಿ, ಅಲ್ಲಿರುವ ಭಾವಿಯ ಬಳಿಯಲ್ಲಿ ಧೋತರ ಒಗೆಯುತ್ತ ನಿಂತುಕೊಂಡರು. ಈ ಸುಮಾರಕ್ಕೆ ನಾಲ್ಕುಗಳಿಗೆ ಹೊತ್ತು ಏರಿತ್ತು. ದಿವಾಕರ ದೀಕ್ಷಿತರು ಮೇಲು ಪ್ಪರಿಗೆಯ ಮೇಲೆ ಅಡ್ಡಾಡುತ್ತಿದ್ದರು. ಅವರು ಬಾವಿಯ ಬಳಿಯಲ್ಲಿ ಧೋತರ ಒಗೆಯುತ್ತ ನಿಂತುಕೊಂಡ ಜನರನ್ನು ನೋಡಿ, "ಅವರು ಯಾರಿರುವರು? ನೋಡಿ ಬಾ" ಎಂದು ಪರಿಚಾರಕನಿಗೆ ಹೇಳಲು, ಅವನು ಹೋಗಿ, ಆ ಜನರಿಗೆ 'ನೀವು ಯಾರು? ಇಲ್ಲಿಗೆ ಯಾಕೆ ಬಂದಿರುವರು' ಎಂದು ದಿವಾಕರ ದೀಕ್ಷಿತರು ಕೇಳಿ ಬಾ, ಎಂದು ಹೇಳಿರುವರು. ಕಾರಣ ಉತ್ತರ ಕೊಡಿರಿ, ಎಂದು ಕೇಳಿದನು. ಆಗ ಅವರೆಲ್ಲರು ದಿವಾಕರ ದೀಕ್ಷಿತರ ಬಳಿಗೆ ಬಂದು:—ನಿನ್ನೆ

ನಮಗೆ ಶ್ರೀಗಳ ಪಙ್ತ್ರಿಯಲಾಭವು ದೊರೆಯಲಿಲ್ಲ. ಕಾರಣ ಈ ಹೊತ್ತು ಪಂಙ್ತ್ರಿಲಾಭವನ್ನು ಕೊಟ್ಟೀರೆಂಬ ಆಶೆಯಿಂದ ಬಂದಿರುವೆವು. ಎನಲು ದಿವಾಕರ ದೀಕ್ಷಿತರು ಅವರನ್ನು ಕರೆಸಿ "ನಿನ್ನೆ ನಿಮ್ಮ ಅರಸನು ಊಟಮಾಡಿ ಹೋದ ಎಂಜಲ ಗೋಮಯ ಇನ್ನೂ ಆಗಿಲ್ಲ; ಹಾಗು ಈ ಹೊತ್ತು ಊಟಕ್ಕೆ ಹೇಳಲು ಅಪ್ಪಣೆಯಾದರೂ ಇಲ್ಲ. ನೀವು ಅಪ್ಪಣೆಯಿಲ್ಲದೆ ಒಳಗೆ ಹೇಗೆ ಬಂದಿರಿ?" ಎಂದು ಕೇಳಿದರು. ಆಗ ಅವರು ಅಂಜಿ ದೋತರ-ತಂಬಿಗೆಗಳನ್ನು ತಕ್ಕೊಂಡು ಓಡಹತ್ತಿದರು. ಶ್ರೀ ಚಿದಂಬರ ದೀಕ್ಷಿತರು ಇದನ್ನೆಲ್ಲ ನೋಡಿ, ಆ ಸೈನಿಕರ ಸಮೀಪಕ್ಕೆ ಬಂದು:—ನೀವು ಯಾರು? ಇಲ್ಲಿ ಯಾಕೆ ಬಂದಿರುವಿರಿ? ಒಮ್ಮೆಲೆ ಓಡಿಹೋಗುವ ಕಾರಣವೇನು? ನಿರ್ಭೀತರಾಗಿ ಹೇಳಿರಿ, ಎನಲು, ಸೇವಕರು— ನಾವು ಪ್ರಾತಃಕಾಲಕ್ಕೆ ತಮಗೆ ಭೆಟ್ಟಿಯಾದ ಸೈನಿಕರು! ತಾವು ಪ್ರಾತಃಕಾಲಕ್ಕೆ ಏನೂ ಮಾತಾಡದೆ ಹಾಗೇ ಹೋದಿರಿ. ಬಾಜೀರಾಯನ ಮನಸಿನಲ್ಲಿಯೂ, ನಮ್ಮೆಲ್ಲರ ಮನಸಿನಲ್ಲಿಯೂ ಈ ಹೊತ್ತು ತಮ್ಮ ಪಂಙ್ತಿಗೆ ತೀರ್ಥ-ಪ್ರಸಾದಗಳನ್ನು ತಕ್ಕೊಳ್ಳಬೇಕೆಂಬ ಆಶೆಯಿದೆ. ಅದನ್ನು ತಿಳಿಸಲು ಬಾಜೀರಾಯನು ನಮ್ಮನ್ನು ಕಳುಹಿರುವನು. ನಿಮ್ಮ ಮಗನು ಈ ಹೊತ್ತು ಊಟಕ್ಕೆ ಹಾಕುವದಿಲ್ಲ, ಒಳಗೆ ಹೇಗೆ ಬಂದಿರಿ? ಎಂದು ಕೇಳುತ್ತಿರುವನು, ಎಂದು ಹೇಳಿದರು. ಆಗ ಶ್ರೀಗುರುಗಳು:—ನಾವು ರಾಜನ ಆಶ್ರಿತರು. ಕಾರಣ ಅವನ ಮನಸಿನಂತೆಯೇ ಆಗಲಿ, ಎಂದು ಹೇಳಿ ಅವರನ್ನೆಲ್ಲ ಸ್ವಸ್ಥಳಕ್ಕೆ ಕಳುಹಿದರು; ಹಾಗು ದಿವಾಕರ ದೀಕ್ಷಿತರನ್ನು ಕರೆದು—ದಿವಾಕರಾ, ಪ್ರಸಾದೇಚ್ಛೆಯಿಂದ ರಾಜದೂತರು ಬಂದಿದ್ದರು. ರಾಜನ ಇಚ್ಛೆಯಾದರೂ ಈಹೊತ್ತು ಪ್ರಸಾದವನ್ನು ತಕ್ಕೊಳ್ಳಬೇಕೆಂದು ಇರುತ್ತದಂತೆ! ಕಾರಣ ಅವರೆಲ್ಲರಿಗೆ ಔತಣ ಹೇಳಿ ಬಂದು ಪಾಕಸಿದ್ಧತೆಯನ್ನು ಮಾಡಿಸು, ಎಂದು ಹೇಳಿದರು.

ಇತ್ತ ದಿವಾಕರದೀಕ್ಷಿತರು ತಂದೆಯ ಅಪ್ಪಣೆಯ ಮೇರೆಗೆ ಬಾಜೀರಾಯನ ಕಡೆಗೆ ಹೋಗಿ ಎಲ್ಲರಿಗೆ ಪ್ರಸಾದಕ್ಕೆ ಬರಬೇಕೆಂದು ನಿಮಂತ್ರಣ ಕೊಟ್ಟರು. ಆಗ ಎಲ್ಲರಿಗೂ ಆನಂದವಾಯಿತು; ಬಳಿಕ ಅವರು ಪಾಕಗೃಹಕ್ಕೆ ಬಂದು, ಸಮ್ಮಾರ್ಜನವನ್ನು ಮಾಡಿಸಿ, ಮೂರುಯಾಮಕ್ಕೆ ಅಡಿಗೆಯನ್ನು ಆರಂಭಿಸಿದರು. ಆ ಹೊತ್ತು ರಾಜರಲ್ಲಿ ಆಗದಂಥ ವ್ಯವಸ್ಥೆಯು ನಮ್ಮಲ್ಲಿ ಆಗಲಿಕ್ಕೆಬೇಕೆಂದು ದಿವಾಕರರ ಅಪ್ಪಣೆಯು ಎಲ್ಲರಿಗೆ ಆದ್ದರಿಂದ ಅವರು ಒಳ್ಳೇ ಶ್ರಮಬಟ್ಟು ಬಹಳೇ ಚುರುಕಿನಿಂದ ಯಾವತ್ತು ಕೆಲಸಗಳನ್ನು ಮಾಡುತ್ತಿದ್ದರು. ಎಲೆ ಹಾಕುವ

ಹೊತ್ತಾಯಿತು. ಶ್ರೀ ದೀಕ್ಷಿತರ ಎಡಕ್ಕೆ ಮೂರು ಮೊಳದ ಮೇಲೆ ಬಾಜೀ
ರಾಯನ ಎಲೆಯನ್ನೂ, ಅದರ ಎಡಕ್ಕೆ ಪ್ರಭಾಕರ ದೀಕ್ಷಿತರ ಎಲೆಯನ್ನೂ, ಇವು
ಗಳ ಎದುರಿಗೆ ಕ್ರಮವಾಗಿ ಮಿಕ್ಕ ಎಲೆಗಳನ್ನೂ ಹಾಕಿದರು. ವಿಧ ವಿಧದ
ರಂಗವಲ್ಲಿಗಳಿಂದಲೂ, ಚಿತ್ರ ವಿಚಿತ್ರವಾದ ಮಣೆಗಳಿಂದಲೂ ಸಾಲುಗಳು ಅಂದ
ವಾಗಿ ತೋರುತ್ತಿದ್ದವು. ರಾಜನಿಗೆ ಊಟಕ್ಕೆ ಕರೆಕಳಿಸಿದರು. ದೀಕ್ಷಿತರು
ಬಂದು ಪಂಗ್ತಿಯಲ್ಲಿ ಕುಳಿತುಕೊಂಡರು. ಆ ಮೇಲೆ ಬಾಜೀರಾಯ ಮೊದ
ಲಾದವರು ಬಂದು ಶ್ರೀ ಚಿದಂಬರ ದೀಕ್ಷಿತರಿಗೆ ನಮಸ್ಕಾರ ಮಾಡಿ, ತಮ್ಮ
ತಮ್ಮ ಸ್ಥಳಗಳ ಮೇಲೆ ಕುಳಿತುಕೊಂಡರು. ಎಲೆಯ ಮೇಲೆ ಕೂಡ್ರಿಸುವ
ಕೆಲಸವನ್ನು ದಿವಾಕರ ದೀಕ್ಷಿತರು ಮಾಡುತ್ತಿದ್ದರು. ಎಲ್ಲರು ಬಂದ ಕೂಡಲೆ
ಶ್ರೀ ಗುರುಗಳು ತಾವು ಸ್ವತಃ ಅರಸು ಮೊದಲು ಮಾಡಿಕೊಂಡು ಎಲ್ಲರಿಗೂ
ಯೋಗ್ಯತೆಯ ಕ್ರಮದಂತೆ ತೀರ್ಥ-ತುಳಸಿಗಳನ್ನೂ, ಗಂಧಾಕ್ಷತೆಗಳನ್ನೂ
ಕೊಟ್ಟರು. ಇತ್ತ ಸ್ತ್ರೀ ಪರಿವಾರದಲ್ಲಿ ದೀಕ್ಷಿತರ ಹೆಂಡಂದಿರ ಒಳಿಯಲ್ಲಿ ರಾಜನ
ಹೆಂಡತಿಯ ಎಲೆಯಿತ್ತು. ಸರಸ್ವತೀ ಮಾತೆಯು ರಾಜನ ಹೆಂಡತಿಗೆ ಅರಿಶಿನ-
ಕುಂಕುಮಗಳನ್ನು ಹಚ್ಚಿ ಉಡಿ ತುಂಬಿದಳು ಮೇಲೆ ದೀಕ್ಷಿತರ ಸೊಸೆ
ಯಂದಿರು ಉಳಿದವರ ಉಡಿಗಳನ್ನು ತುಂಬಿದರು ಇಷ್ಟರಲ್ಲಿ ಬಡಿಸುವ ಕೆಲ
ಸವು ಮುಗಿಯಿತು ದೀಕ್ಷಿತರು ಎಲೆಗಳನ್ನು ಪ್ರೋಕ್ಷಿಸಿ ಉದಕವನ್ನು ಬಿಟ್ಟರು.
ಕೂಡಲೆ ಹರಹರ ಮಹಾದೇವ ಎಂದು ಎಲ್ಲರು ನಾಮಗರ್ಜನೆಯನ್ನು ಮಾಡಿ
ಭೋಜನಕ್ಕೆ ಕುಳಿತುಕೊಂಡರು. ದೀಕ್ಷಿತರ ಅನುಗ್ರಹದಿಂದುಂಟಾದ ಪಾಕದ
ರುಚಿಯನ್ನು ಕೇಳುವದೇನು? ಸಮಸ್ತರು ಆನಂದದಿಂದ ಆಕಂಠ ಭೋಜನ
ಮಾಡಿದರು. ಒಮ್ಮೆಲೆ ಯಾವತ್ತರ ಭೋಜನವಾಯಿತು. ಆಮೇಲೆ ತಾಂಬೂಲ
ಪರಿಮಳ ದ್ರವ್ಯಗಳಿಂದ ಶ್ರೀ ದೀಕ್ಷಿತರ ಪರಿವಾರದವರು ರಾಜಪರಿವಾರವನ್ನು
ಸತ್ಕರಿಸಿದರು. ಆ ಕಾಲಕ್ಕೆ ಮಾತಿಗೆ ಮಾತು ಹೊರಟು, ರಾಜನು ಇನ್ನು
ತಿರುಗಿ ಹೋಗಲಿಕ್ಕೆ ಅಪ್ಪಣೆಯಾಗಬೇಕೆಂದು ಕೇಳಿಕೊಂಡನು. ಆಗ ಶ್ರೀ
ಗುರುಗಳು—ಈ ಹೊತ್ತು ಅಪ್ಪಣೆಯಿಲ್ಲ. ಚಲೋ ಮುಹೂರ್ತ ನೋಡಿ
ಕೊಂಡು ಹೊರಡಬೇಕೆಂದು ಹೇಳಿದರು. ಆಗ ಎಲ್ಲರು ದೀಕ್ಷಿತರ ಅಪ್ಪಣೆ
ಯನ್ನು ತಕ್ಕೊಂಡು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಮುಂದೆ ಒಂದು [illegible] ನೋಡಿ
ಪರಿವಾರದೊಂದಿಗೆ ಅನುಜ್ಞೆಯನ್ನು ಬೇಡಲು, ದೀಕ್ಷಿತರ ಕಡೆಗೆ ಬಂಡನು. ಆಗ

ದೀಕ್ಷಿತರು ಸುಖಾಸನದಲ್ಲಿ ಕುಳಿತುಕೊಂಡಿದ್ದರು. ಉಭಯಪಾರ್ಶ್ವಗಳಲ್ಲಿ ದಿವಾಕರ-ಶಂಕರ ದೀಕ್ಷಿತರು ನಿಂತಿದ್ದರು; ಉಳಿದ ಶಾಸ್ತ್ರಜ್ಞರೂ, ಪಂಡಿತರೂ, ಭಕ್ತರೂ ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ಕುಳಿತಿದ್ದರು. ರಾಜನು ಬರಲು, ದಿವಾಕರ ದೀಕ್ಷಿತರು ಅವನನ್ನೂ, ಅವನ ಪರಿವಾರವನ್ನೂ ಸನ್ಮಾನಿಸಿ, ಯೋಗ್ಯಾಸನದಲ್ಲಿ ಕುಳ್ಳಿರಿಸಿದರು. ಟೆಂಗಿನಕಾಯಿ-ಅಡಿಕೆಗಳನ್ನು ಕುಂಕುಮದಲ್ಲಿ ಬೆರಿಸಿ, ಅವನ್ನೂ ಅಕ್ಷತೆಗಳನ್ನೂ ಬೆಳ್ಳಿಯ ತಾಟಿನಲ್ಲಿ ಹಾಕಿ, ದಿವಾಕರ ದೀಕ್ಷಿತರು ಶ್ರೀ ಚಿದಂಬರ ದೀಕ್ಷಿತರ ಮುಂದೆ ತಂದಿಟ್ಟರು. ಅಷ್ಟರಲ್ಲಿ ಶಂಕರ ದೀಕ್ಷಿತರು ವಸ್ತ್ರಾಭರಣಗಳನ್ನು ತಂದು ದೀಕ್ಷಿತರ ಎದುರಿನಲ್ಲಿ ಇಟ್ಟರು ಫಲ-ಮಂತ್ರಾಕ್ಷತೆಗಳನ್ನು ಕೊಡಲಿಕ್ಕೆ ದೀಕ್ಷಿತರು ಆರಂಭಿಸಿದರು. ಮೊದಲು ಅವರು ರಾಜಪುರೋಹಿತರನ್ನು ಪೂಜಿಸಿ, ಅವನಿಗೆ ವಸ್ತ್ರಾಲಂಕಾರಗಳನ್ನೂ, ಫಲ-ಮಂತ್ರಾಕ್ಷತೆಗಳನ್ನೂ ಕೊಟ್ಟು ಸತ್ಕರಿಸಿದರು. ಆ ಮೇಲೆ ರಾಜನು ರಾಜ್ಞಿಯೊಡನೆ ಬಂದು, ನಮಸ್ಕಾರಮಾಡಿ ದೀಕ್ಷಿತರ ಮುಂದುಗಡೆಯಲ್ಲಿ ನಿಂತುಕೊಳ್ಳಲು, ಅವರು ಕುಂಕುಮದಿಂದ ಯುಕ್ತವಾದ ಶೀರಿ-ಕುಪ್ಪಸ-ಕಾಯಿಗಳನ್ನು ರಾಜ್ಞಿಯ ಉಡಿಯಲ್ಲಿ ಹಾಕಿದರು; ಹಾಗು ರೇಶಿಮೆಯಲ್ಲಿ ಪೋಣಿಸಿದ ಮಧ್ಯವರ್ತಿಯಾದ ಪದಕದಿಂದೊಪ್ಪುವ ಮುತ್ತಿನ ಹಾರ (ಕಂಠಿ) ವನ್ನೂ, ಶಾಲು, ಶಿರೋಭೂಷಣಗಳನ್ನೂ, ಕುಂಕುಮ ಯುಕ್ತವಾದ ಅಡಿಕೆ-ಕಾಯಿಗಳನ್ನೂ ರಾಜನ ಕೈಯಲ್ಲಿ ಕೊಡಲು, ರಾಜನು ಮತ್ತೆ ೧೧ ಸಾರೆ ಕಾಲಿಗೆರಗಿ, ಶ್ರೀ ಗುರುಗಳನ್ನು ಸ್ತುತಿಸಿ, ತನ್ನ ಸ್ಥಳಕ್ಕೆ ಹೋದನು ಆ ಮೇಲೆ ದಿವಾಕರ ದೀಕ್ಷಿತರು ಈ ಪದಾರ್ಥವನ್ನು ಇಂಥವರಿಗೆಕೊಡಿರಿ, ಎಂದು ಹೇಳಲು, ದೀಕ್ಷಿತರು ಅವರನ್ನು ಮುಂದಕ್ಕೆ ಕರೆದು, ಅವರಿಗೆ ಆಯಾಪದಾರ್ಥಗಳನ್ನು ಕೊಡುತ್ತಿದ್ದರು. ಈ ಪ್ರಕಾರ ಎಲ್ಲರನ್ನೂ ಯೋಗ್ಯತೆಗೆ ಸರಿಯಾಗಿ ಸತ್ಕರಿಸಿ, ಅವರೆಲ್ಲರಿಗೆ ಸ್ವಸ್ಥಾನಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಡಲು, ಅವರೆಲ್ಲರು ಮತ್ತೆ ಶ್ರೀ ಗುರುಗಳಿಗೆ ನಮಸ್ಕಾರಮಾಡಿ, ತಮ್ಮ ರಾಜ್ಯಕ್ಕೆ ಹೊರಟು ಹೋದರು.



## ೨೧ನೆಯ ಪ್ರಕರಣ.

## ಚತುರ್ಭುಜರಾಜನೂ, ತೀರ್ಥೋತ್ಪತ್ತಿಯೂ.

ಸಪ್ತ ಗೋದಾವರೀತೀರದಲ್ಲಿ 'ಚತುರ್ಭುಜ' ಎಂಬ ಹೆಸರಿನ ಒಬ್ಬ ರಾಜನು ಸದಾಚಾರದಿಂದ ರಾಜ್ಯ ಪರಿಪಾಲನೆಯನ್ನು ಮಾಡುತ್ತಿದ್ದನು. ಆತನು ಶ್ರೀ-ಚಿದಂಬರ ದೀಕ್ಷಿತರನ್ನು ಪ್ರತ್ಯಕ್ಷ ನೋಡದೆ ಇದ್ದರೂ, ಅವರ ಕೀರ್ತಿಯನ್ನು ಕೇಳಿಯೇ, ಆತನ ನಂಬಿಗೆಯು ದೀಕ್ಷಿತರಲ್ಲಿ ದೃಢವಾಗಿ ನೆಲೆಗೊಂಡಿತ್ತು. ಅತನು ಎರಡು-ಮೂರು ಸಾರೆ ಹಗೆಗಳ ಹೊಂಚಿನೊಳಗಿಂದ ಶ್ರೀ ಚಿದಂಬರ ನಾಮಸ್ಮರಣೆಯನ್ನು ಮಾಡಿ, ಪಾರಾಗಿದ್ದನು. ಒಂದುದಿವಸ ಆತನು ತನ್ನ ಮಗನಿಗೆ ರಾಜ್ಯಾಧಿಕಾರವನ್ನೊಪ್ಪಿಸಿ, ಮನಸ್ಸಿನಲ್ಲಿ:—ಮಹಾಸ್ವಾಮಿಯು ದರ್ಶನವಾಗುವವರೆಗೆ ಅನ್ನಗ್ರಹಣ ಮಾಡಲಿಕ್ಕಿಲ್ಲೆಂದು ನಿಶ್ಚಯ ಮಾಡಿಕೊಂಡು, ದೀಕ್ಷಿತರ ದರ್ಶನಾರ್ಥವಾಗಿ ತನ್ನ ಸೈನ್ಯದೊಂದಿಗೆ ಹೊರಟನು. ಅಂತರಜ್ಞರಾದ ದೀಕ್ಷಿತರಿಗೆ ಈ ಸುದ್ದಿಯು ತಿಳಿದು, ರಾಜನ ನಿರ್ಧಾರಕ್ಕೆ ಮೆಚ್ಚಿ, ಅವರು ಚತುರ್ಭುಜ ರಾಜನನ್ನು ತಮ್ಮ ಮಾಯೆಯಿಂದ ಮೋಹಿಸಿ, ಸ್ವಪ್ನ-ಸೃಷ್ಟಿಯಲ್ಲಿಯೇ ಆತನನ್ನು ಉಣಿಸುತ್ತಿದ್ದರು. ಚತುರ್ಭುಜ ರಾಜನು ಮಾರ್ಗಕ್ರಮಣ ಮಾಡುತ್ತ ಕೆಲವು ಕಾಲದ ತರುವಾಯ ನವಲಗುಂದಕ್ಕೆ ಬಂದು ತಲ್ಪಿದನು. ಕೂಡಲೆ ಅವನು ತನ್ನ ಸೈನಿಕರಿಗೆ ದೀಕ್ಷಿತರ ದರ್ಶನವನ್ನು ಮಾಡಿಸಿ, ಅವರನ್ನು ಮರಳಿ ರಾಜ್ಯಕ್ಕೆ ಕಳಿಸಿಕೊಟ್ಟನು. ಅಷ್ಟರಲ್ಲಿ ದೀಕ್ಷಿತರನ್ನು ಕರೆದುಕೊಂಡು ಹೋಗಬೇಕೆಂದು ಮುರಗೋಡದಿಂದ ಕೆಲವು ಜನರು ನವಲಗುಂದಕ್ಕೆ ಬಂದರು. ಅವರು ದೀಕ್ಷಿತರಿಗೆ ಭೆಟ್ಟಿಯಾಗಿ:—ಮಹಾಸ್ವಾಮಿಗಳೇ, ತಾವು ಮುರಗೋಡವನ್ನು ಬಿಟ್ಟು, ಹನ್ನೆರಡು ವರ್ಷಗಳಾದವು. ಇನ್ನು ಮೇಲೆ ಮುರಗೋಡಕ್ಕೆ ಬರಲಿಕ್ಕೆ ಯಾವ ಪ್ರತಿಬಂಧವೂ ಉಳಿದಿರುವದಿಲ್ಲ. ಜಾತಕವು ಉತ್ತರಾಮಳೆಯನ್ನು ಅಥವಾ ಮನೆಯಲ್ಲಿದ್ದ ಎಳೆಗರುವು ಮೇಯಲಿಕ್ಕೆ ಹೋದ ಮಾತೆಯ ಮಾರ್ಗ ಪ್ರತೀಕ್ಷಣೆಯನ್ನು ಮಾಡುವಂತೆ, ಮುರಗೋಡ ನಿವಾಸಿಗಳಾದ ನಾವೆಲ್ಲರೂ ತಮ್ಮ ಆಗಮನವನ್ನು ನಿರೀಕ್ಷಿಸುತ್ತಿರುವೆವು; ಕಾರಣ ಮುರಗೋಡಿಗೆ ಪ್ರಯಾಣವನ್ನು ಬೆಳಿಸಬೇಕೆಂದು ಬೇಡಿಕೊಂಡರು. ಆಗ ದೀಕ್ಷಿತರು ಅವರ ಮಾತಿಗೆ ಒಪ್ಪಿಗೆಯನ್ನಿತ್ತು, ಎಲ್ಲರೊಡನೆ ಮುರಗೋಡಿಗೆ ಪ್ರಯಾಣವನ್ನು ಬೆಳಿಸಿದರು. ಚತು

ಭೂರ್ಜ ರಾಜನಾದರೂ ಸ್ವಾಮಿಯ ಸೇವೆಯನ್ನು ಮಾಡುತ್ತ, ಆತನನ್ನು ಹಿಂಬಾಲಿಸಿದನು. ಈ ಸುದ್ದಿಯು ಮುರಗೋಡದ ಜನರಿಗೆ ತಿಳಿಯಲು, ಅವರು ದೀಕ್ಷಿತರ ಸ್ವಾಗತದ ಸಿದ್ಧತೆಯನ್ನು ಭರದಿಂದ ಮಾಡಹತ್ತಿದರು. ಇತ್ತ ದೀಕ್ಷಿತರು ಮುರಗೋಡದಿಂದ ನಾಲ್ಕು ಮೈಲುಗಳ ಮೇಲಿರುವ ತಡಸನೂರ ಎಂಬ ಗ್ರಾಮದ ಬಳಿಗೆ ಬರಲು, ಬಿಸಿಲು ಅತಿಶಯವಿದ್ದದರಿಂದ ಅಲ್ಲಿ ಬಿಸಿಲುಗಳೆದು, ಮುಂದಕ್ಕೆ ಸಾಗಬೇಕೆಂದು ಯೋಚಿಸಿ, ಊರನ್ನು ಸೇರಿದರು. ಆ ಊರಿಗೆ ನೀರು ಸಮೀಪದಲ್ಲಿದ್ದಿಲ್ಲ. ಅಲ್ಲಿಯ ಜನರು ಹರದಾರಿಯ ಮೇಲಿಂದ ನೀರನ್ನು ತರುತ್ತಿದ್ದರು. ನೀರಿನ ವಿಷಯದಲ್ಲಿ ಅಲ್ಲಿಯವರಿಗೆ ಬಹಳ ಕಷ್ಟವಾಗುತ್ತಿತ್ತು. ದೀಕ್ಷಿತರ ಸಂಗಡ ಇದ್ದ ಯಾತ್ರಿಕರಿಗೆ ನೀರು ದೊರೆಯಲೊಲ್ಲವು ಅವರು ನೀರಡಿಕೆಯಿಂದ ಬಳಲಹತ್ತಿದರು. ಆಗ ದೀಕ್ಷಿತರು ಕನಿಕರಬಟ್ಟು, ಯಾತ್ರಿಕರ ತೃಷಾಶಾಂತಿಯನ್ನು ಮಾಡಬೇಕೆಂದು ಯೋಚಿಸಿ, ಗುದ್ದಲಿ, ಸಲಿಕೆಗಳನ್ನು ತರಿಸಿ, ಏಳೆಂಟು ಜನರನ್ನು ಕೂಡಿಕೊಂಡು, ಊರಹೊರಗೆ ಬಂದು, ಒಂದು ‡ಗಿಡದಬುಡದಲ್ಲಿ ಕುಳಿತುಕೊಂಡು, ಗಿಡದ ಅಡಿಯಿಂದ ನಾಲ್ಕುಮೊಳ ಅಂತರದ ಮೇಲೆ ಒಂದು ತಗ್ಗನ್ನು ತೆಗೆಯಬೇಕೆಂದು ಆಳುಗಳಿಗೆ ಆಜ್ಞಾಪಿಸಲು, ಅವರು ಭೂಮಿಯನ್ನು ಅಗಿಯಹತ್ತಿದರು. ಒಬ್ಬ ಒಕ್ಕಲಿಗನು ಅದೇ ದಾರಿಯಿಂದ ಹೊಲಕ್ಕೆ ಹೋಗುತ್ತಿದ್ದನು. ಅವನು ದೀಕ್ಷಿತರನ್ನು ಕುರಿತು:—ಎಲಾ ಹಾರುವನೇ, ಇದೇನು ಆರಂಭಿಸಿರುವಿ? ಈ ಹಾಳು ಮೊರಡಿಯಲ್ಲಿ ನೀರು ಹೇಗೆ ಬೀಳುವವು?

ದೀಕ್ಷಿತರು:—ನಮ್ಮ ಸಂಗಡ ಇದ್ದ ಜನರಿಗೆ ನೀರಡಿಕೆಯಾಗಿದೆ. ನೀರು ಸಿಗಲೊಲ್ಲವು. ಕಾರಣ ಬಾವಿಯನ್ನು ಅಗಿಸುತ್ತೇನೆ.

ಒಕ್ಕಲಿಗನು (ನಕ್ಕು):—ಎಲಾ ಹಾರುವ, ನಿನಗೆ ಹುಚ್ಚು ಹಿಡಿದಂತೆ ತೋರುತ್ತದೆ. ಇಲ್ಲಿ ನೀರು ಹೇಗೆ ಬೀಳುವವು? ಸುಮ್ಮನೆ ಏಕೆ ದಾವತಿ ಮಾಡುವಿ? ಇಂತಹ ಹಾಳು ಮೊರಡಿಯಲ್ಲಿ ನೀರನ್ನು ದೊರಕಿಸಲಿಕ್ಕೆ ಯತ್ನಿಸುವದೂ, ಕೋಣವನ್ನು ಹಿಂಡಿಕೊಂಡು ಹಾಲು ಕುಡಿಯುವದೂ ಒಂದೇ. ಸುಮ್ಮನೆ ಶ್ರಮಪಡಬೇಡ. ಮೊದಲು ಭೂಮಿಯನ್ನು ಪರೀಕ್ಷಿಸಿ ನೀರು ಬೀಳುವವೋ ಇಲ್ಲವೋ ಎಂಬದನ್ನು ಗೊತ್ತುಮಾಡಿ, ಬಳಿಕ ಇಂತಹ ಕೆಲಸಕ್ಕೆ ಕೈ ಹಾಕುವದು ಯೋಗ್ಯವಾದದ್ದು.

‡ ಈ ಗಿಡವು ಊರ ಈಶಾನ್ಯ ದಿಕ್ಕಿನಲ್ಲಿರುವದು.

ದೀಕ್ಷಿತರು:—ನನಗೂ, ನನ್ನ ಸಂಗಡಿಗರಿಗೂ ಬಹಳ ನೀರಡಿಕೆಯಾಗಿದೆ. ಮಹಾದೇವನು ದೊಡ್ಡವನಿದ್ದಾನೆ. ಆತನು ಇಲ್ಲಿಯೇ ನೀರನ್ನು ನಿಶ್ಚಯದಿಂದ ಕೊಡುವನು. ತುಸ ನಿಂತುಕೊಂಡು ಚಮತ್ಕಾರವನ್ನು ನೋಡು.

ದೀಕ್ಷಿತರ ಮಾತುಗಳು ಒಕ್ಕಲಿಗನಿಗೆ ಅಸಂಭವವಾಗಿ ತೋರಿದವು. ಆತನು ತನ್ನ ಕೆಲಸವನ್ನು ಬಿಟ್ಟು, ಅಲ್ಲಿಯೇ ನಿಂತುಕೊಂಡನು. ನೋಡನೋಡು ವಷ್ಟರಲ್ಲಿ ಆಳುಮಕ್ಕಳು ಎರಡುಮೊಳ ಚಚ್ಚೌಕಾದ ಭೂಮಿಯನ್ನು ಮೂರು ಮೊಳ ಆಳವಾಗಿ ಅಗಿದರು. ಆಗ ಒಮ್ಮಿಂದೊಮ್ಮೆ ಒಂದು ಸೆಲೆಯು ಆ ತಗ್ಗಿನ ಈಶಾನ್ಯ ಮೂಲೆಯಿಂದ ಹೊರಬಿದ್ದು, ಹಾ! ಹಾ!! ಅನ್ನುವಷ್ಟರಲ್ಲಿ ತಗ್ಗು ತುಂಬಿ ನೀರು ಹರಿಯಹತ್ತಿದವು. ಈ ಅದ್ಭುತವನ್ನು ನೋಡಿ, ಒಕ್ಕಲಿಗನು ಬೆರಗಾದನು. ಅವನು ದೀಕ್ಷಿತರಿಗೆ ನಮಸ್ಕಾರ ಮಾಡಿ:—ನೀನೇನು ಸಾಮಾನ್ಯ ಮನುಷ್ಯನಲ್ಲ, ಪ್ರತ್ಯಕ್ಷ ಶಿವನಿರುತ್ತೀ? ಇಂತಹ ಕಾಡು ನೆಲದಲ್ಲಿ ನೀರನ್ನುಂಟು ಮಾಡಬೇಕಾದರೆ, ಇದು ಮನುಷ್ಯರ ಕೈಯಿಂದಾಗದ ಮಾತು! ನಮ್ಮೊಳಗಿನ ಎಷ್ಟೋ ಜನರು ಊರಲ್ಲಾಗಲಿ, ಊರ ಸಮೀಪದಲ್ಲಾಗಲಿ ಬಾವಿಯನ್ನು ಅಗಿಸಬೇಕೆಂದು ಯತ್ನಿಸಿ, ನೀರು ಬೀಳದ್ದರಿಂದ ನಿರಾಶೆಯುಳ್ಳವರಾಗಿದ್ದರು. ನಾನು ತಿಳಿಗೇಡಿಯು, ಬಾಯಿಗೆ ಬಂದಂತೆ ಮಾತಾಡಿದೆನು, ಅದನ್ನು ಮನಸ್ಸಿನಲ್ಲಿ ಹಿಡಿಯಬೇಡ, ಎಂದು ಬಗೆಬಗೆಯಿಂದ ಪ್ರಾರ್ಥಿಸಲು, ದೀಕ್ಷಿತರು ಅವನಿಗೆ ಅಭಯವನ್ನಿತ್ತು, ಊರೊಳಗಿನ ಜನರನ್ನು ಕರೆದು ತರಲು, ಆಜ್ಞಾಪಿಸಿದರು. ಆಗ ಅವನು ಊರನ್ನು ಸೇರಿ ಈ ಅದ್ಭುತವನ್ನು ಜನರ ಮುಂದೆ ಹೇಳಿದನು. ಕೂಡಲೆ ಸಕ್ಕರೆಯಿದ್ದಲ್ಲಿ ಇರುವೆಗಳು ಕೂಡುವಂತೆ, ದೀಕ್ಷಿತರು ಅಗಿಸಿದ ತಗ್ಗಿನ ಬಳಿಯಲ್ಲಿ ಜನರು ಹರಿದು ಮಿಲಿತರಾಗಿ, ಮನದಣಿ ನೀರನ್ನು ಕುಡಿದು, ದೀಕ್ಷಿತರನ್ನು ಕುರಿತು:—'ಮಹಾಸ್ವಾಮಿಗಳೇ, ಇಂತಹ ಅರಗಾಡಿನಲ್ಲಿ ನೀರು ಹೇಗೆ ಬಿದ್ದವು?' ಎಂದು ಪ್ರಶ್ನೆಮಾಡಲು, ದೀಕ್ಷಿತರು:—'ನೀರಡಿಕೆಯಿಂದ ಪೀಡಿತರಾದ ನಿಮ್ಮ ಕಷ್ಟವನ್ನು ದೂರ ಮಾಡುವದಕ್ಕಾಗಿ, ಶ್ರೀ ಶಂಕರನು ಪ್ರತ್ಯಕ್ಷ ಭಾಗೀರಥಿಯನ್ನು ಕಳಿಸಿರುವನು! ಸಂಶಯವನ್ನು ಬಿಟ್ಟು ಬಿಡಿರಿ. ಈ ಗಂಗಾಜಲದಲ್ಲಿ ಯಾರು ಒಮ್ಮೆಯಾದರೂ ಸ್ನಾನಮಾಡುವರೋ, ಅವರ ಪಾಪಗಳು ಸುಟ್ಟು ಬೂದಿಯಾಗುವವು; ಮನಸ್ಸು ನಿರ್ಮಲವಾಗುವದು; ಪ್ರಯಾಗದಲ್ಲಿ ಸ್ನಾನ ಮಾಡಿದ ಪುಣ್ಯವಾದರೂ ಬರುವದು'' ಎಂದು ಹೇಳಿದರು. ಆಗ ಯಾವತ್ತರೂ ಆ † ತೀರ್ಥ

† ಭಾವಿಕ ಜನರು ಈ ಪೂರ್ತಿಗೂ ಪರ್ವಕಾಲದಲ್ಲಿ ಈ ತೀರ್ಥದಲ್ಲಿ ಸ್ನಾನ ಮಾಡಲಿಕ್ಕೆ ಹೋಗುತ್ತಿರುತ್ತಾರಂತೆ!

ದಲ್ಲಿ ಸ್ನಾನವಮಾಡಿ, ಅಲ್ಲಿ ದಾನ-ಧರ್ಮಗಳನ್ನು ಮಾಡಿದರು. ತಡಸನೂರ ಜನರಿಗೆ ಪರಮಾನಂದವಾಯಿತು. ನೀರಿನ ಅರವು ದೂರಾದ್ದರಿಂದ, ಅವರು ದೀಕ್ಷಿತರನ್ನು ಬಹಳವಾಗಿ ಹೊಗಳಿದರು. ಆಗ ದೀಕ್ಷಿತರು ಎಲ್ಲರನ್ನು ಆಶೀರ್ವದಿಸಿ, ತಮ್ಮ ಪರಿವಾರದೊಡನೆ ಮುರಗೋಡಕ್ಕೆ ಬಂದರು. ದೀಕ್ಷಿತರ ಸ್ವಾಗತವನ್ನು ಮಾಡಲುತ್ಸುಕರಾದ ಮುರಗೋಡದ ಜನರು ಒಳ್ಳೇ ಅಟ್ಟಹಾಸದಿಂದ ಸ್ವಾಗತ ಕಾರ್ಯವನ್ನು ಮುಗಿಸಿದರು. ದೀಕ್ಷಿತರು ದರ್ಶನಕ್ಕಾಗಿ ಬಂದವರನ್ನು ಆಶೀರ್ವದಿಸಿ, ಯಾವತ್ತರನ್ನು ಊರೊಳಗೆ ಕಳಿಸಿಕೊಟ್ಟು, ತಾವು ಕೆಂಗೇರಿಯಲ್ಲಿ ಇಳುಕೊಂಡು, ಮರುದಿವಸ ಊರನ್ನು ಪ್ರವೇಶ ಮಾಡಿದರು. ಚತುರ್ಭುಜ ರಾಜನು ಅವರ ಸಂಗಡಲೇ ಇದ್ದನು. ಆತನ ಭಕ್ತಿಯು ಬಹು ಶ್ರೇಷ್ಠ ಪ್ರಕಾರದ್ದಾಗಿತ್ತು. ಒಂದು ದಿವಸ ದೀಕ್ಷಿತರು ಆತನಿಗೆ:—ನರ್ಮದಾ ನದಿಯೊಳಗಿಂದ ಹನ್ನೊಂದು ಬಾಣ(ಲಿಂಗ)ಗಳನ್ನು ತಂದುಕೊಡಬೇಕೆಂದು ಹೇಳಿದರು. ಆಗ ಅವನು ಏಕಾದಶ ಬಾಣಗಳನ್ನು ತಂದು, ದೀಕ್ಷಿತರಿಗೆ ಒಪ್ಪಿಸಹೋದನು. ದೀಕ್ಷಿತರು ಆತನ ಭಾವವನ್ನು ಪರೀಕ್ಷಿಸಬೇಕೆಂದು ಯೋಚಿಸಿ, ಆ ಬಾಣಗಳನ್ನು ಸ್ವೀಕರಿಸಲಿಲ್ಲ. ಆಗ ಚತುರ್ಭುಜರಾಜನು ಮಲಾಪಹಾರಿಯಲ್ಲಿ ಬಾಣಗಳನ್ನು ಬಿಸುಟಿ ತಾನೂ ಹೊಳೆಯಲ್ಲಿ ಧುಮುಕಿಕೊಂಡನು. ಆಗ ಯಾರೋ ಆತನ ಕೈಹಿಡಿದು ಧಡಕ್ಕೆ ಎಳತಂದಂತಾಗಿ, ಅವನು ದಂಡೆಗೆ ಬಂದನು. ಅವನು ಇನ್ನೊಮ್ಮೆ ಗುರುದರ್ಶನ ತಕ್ಕೊಂಡು, ಆಮೇಲೆ ಪ್ರಾಣತ್ಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ ಗುರುಗಳ ಸನ್ನಿಧಿಗೆ ಬಂದನು. ಆತನ ಭಕ್ತಿಗೊಲಿದ ದೀಕ್ಷಿತರು ಆತನನ್ನು ಕುರಿತು:—ಚತುರ್ಭುಜರಾಜನೇ, ನೀನು ಬಲು ಶ್ರೇಷ್ಠನು. ಪ್ರಾಣತ್ಯಾಗವನ್ನು ಮಾಡಬೇಡ. ಬಾಣಗಳನ್ನು ಕೊಡು; ಸ್ವೀಕರಿಸುವೆನು, ಎಂದು ನುಡಿಯಲು, ರಾಜನು ಮನದಲ್ಲಿ—ಬಾಣಗಳನ್ನು ದೀಕ್ಷಿತರಿಗೆ ತಂದುಕೊಟ್ಟ ಹೊರತು ಅನ್ನಗ್ರಹಣ ಮಾಡಲಾರೆ! ಎಂದು ನಿಶ್ಚಯಿಸಿ, ಮತ್ತೆ ನರ್ಮದೆಯ ಕಡೆಗೆ ಸಾಗಹತ್ತಿದನು. ಹಸಿವೆಯಿಂದ ಬಳಲುವ ಆತನನ್ನು ದೀಕ್ಷಿತರು ಮೇಲಿಂದ ಮೇಲೆ ತಮ್ಮ ಅಗಾಧ ಸಾಮರ್ಥ್ಯದಿಂದ ಹಸಿವು ಸ್ವಾಭಾವಿಕವಾಗಿ ಹಿಂಗುವಂತೆ ಮಾಡುತ್ತಿದ್ದರು. ಚತುರ್ಭುಜರಾಜನು ಮತ್ತೆ ನರ್ಮದೆಯೊಳಗಿಂದ ಏಕಾದಶ ಬಾಣಗಳನ್ನು ತಂದು ಗುರುಚರಣಗಳಲ್ಲಿ ಸಮರ್ಪಿಸಿ ಕೃತಕೃತ್ಯನಾದನು.

---

# ಐದನೆಯ ಭಾಗ.

## ಅವತಾರ ಸಾಫಲ್ಯ

### ೧ನೆಯ ಪ್ರಕರಣ.




ಚಿದಂಬರ ದೀಕ್ಷಿತರು ಮರಳಿ ಮುರಗೋಡವನ್ನು ಸೇರಿ ಮತ್ತೆ ಮೊದಲಿನಂತೆ ಭಕ್ತರನ್ನು ಅನುಗ್ರಹಿಸುತ್ತಿರಲು, ಒಂದು ದಿವಸ ದಿವಾಕರ ದೀಕ್ಷಿತರು ಮನಸ್ಸಿನಲ್ಲಿ:—ನಾವಿರುವ ಮನೆಯು ಬಹು ಜೀರ್ಣವಾಗಿದ್ದು, ಸಂಕುಚಿತವಾಗಿರುವದು ಕಾರಣ ಅದನ್ನು ವಿಸ್ತಾರವಾಗಿ ಕಟ್ಟಿಸಬೇಕೆಂದು ಯೋಚಿಸಿ, ಆ ತಮ್ಮ ಅಭಿಪ್ರಾಯವನ್ನು ದೀಕ್ಷಿತರಿಗೆ ಅರುಹಿದರು. ಆಗ ದೀಕ್ಷಿತರು:—ಮೊದಲು ನದೀತಟಾಕದಲ್ಲಿ ಎಲ್ಲಾದರೂ ಶಿಷ್ಯರಿಂದೊಡಗೂಡಿ ಇರಲಿಕ್ಕೆ ಒಂದು ಮನೆಯನ್ನು ಕಟ್ಟಿಸು. ಬಳಿಕ ಈ ಮನೆಯನ್ನು ಕಟ್ಟಿಸೋಣವಂತೆ! ಎಂದು ನುಡಿಯಲು, ದಿವಾಕರ ದೀಕ್ಷಿತರು ಬ್ರಾಹ್ಮಣರಿಂದೊಡಗೂಡಿ ಮನೆ ಕಟ್ಟಲಿಕ್ಕೆ ಸ್ಥಳವನ್ನು ಶೋಧಿಸಹತ್ತಿದರು. ಮುರಗೋಡದಿಂದ ದಕ್ಷಿಣಕ್ಕೆ ಒಂದು ಯೋಜನದ ಅಂತರದ ಮೇಲೆ ಮಲಾಪಹಾರಿಯ ತೀರದಲ್ಲಿದ್ದ ಹೊಸೂರ ಎಂಬ ಹಳ್ಳಿಯು ಅನುಕೂಲವಾಗಿ ತೋರಿದ್ದರಿಂದ ಅಲ್ಲಿ ಕಟ್ಟಿಸಬೇಕೆಂದು ಗೊತ್ತುಮಾಡಿದರು. ಆ ಊರ ಗೌಡನು ಬೇಡಜಾತಿಯವನಿದ್ದನು. ದಂಡಿನ ಉಪದ್ರವದಿಂದ ಅದು ಆಗ ಹಾಳಾಗಿತ್ತು. ದಿವಾಕರ ದೀಕ್ಷಿತರು ಅಲ್ಲಿ ಮನೆ ಕಟ್ಟುವ ಸ್ಥಳವನ್ನು ಸಹ ಗೊತ್ತುಮಾಡಿ, ಎಲ್ಲ ಸಾಮಗ್ರಿಯನ್ನು ಕೂಡಿಸಿ, ತಿರುಗಿ ಮುರಗೋಡಕ್ಕೆ ಬಂದು, ಆ ಯಾವತ್ತು ಸುದ್ದಿಯನ್ನು ದೀಕ್ಷಿತರಿಗೆ ತಿಳಿಸಿದರು. ಆ ಸ್ಥಳವು ದೀಕ್ಷಿತರ ಮನಸ್ಸಿಗೂ ಬಂದಿತು; ಮತ್ತು ವಿಭವಸಂವತ್ಸರವು ಮುಗಿದ ಕೂಡಲೆ ಶಕೆ ೧೬೩೧ ಚೈತ್ರಮಾಸದಲ್ಲಿ ಮನೆಕಟ್ಟಲಿಕ್ಕೆ ಆರಂಭಿಸು, ಎಂದು ದಿವಾಕರ ದೀಕ್ಷಿತರಿಗೆ ಹೇಳಿದರು. ಈ ಸುದ್ದಿಯು ಬಾಪೂಗೋಖಲೆಗೆ ತಿಳಿಯಲು, ಆ ಹಳ್ಳಿಯು ಆತನ ವಶದಲ್ಲಿದ್ದದರಿಂದ ಆತನು ಎಷ್ಟೋ ಜನ ಬ್ರಾಹ್ಮಣರನ್ನು ಅಲ್ಲಿ ಮನೆಕಟ್ಟಿಕೊಂಡು ಇರಬೇಕೆಂದು ಹೇಳಿ ಕಳಿಸಿಕೊಟ್ಟನು; ಹಾಗು ತನ್ನದೊಂದು ವಾಡೆಯನ್ನೂ ಕಟ್ಟಿಸಹತ್ತಿದನು. ಇದೇ ಸಂಧಿಯಲ್ಲಿ ಶ್ರೀ ಚಿದಂ

ಬರ ದೀಕ್ಷಿತರು ಒಂದುದಿವಸ ಶ್ರೀ ರೇಣುಕಾ ದರ್ಶನಕ್ಕಾಗಿ ಹೊರಟರು. ಅವರ ಸಂಗಡ ಎಷ್ಟೋ ಅರಸರೂ, ಬ್ರಾಹ್ಮಣರೂ ಹೊರಟರು. ದೀಕ್ಷಿತರು ಎಲ್ಲರಿಂದ ಕೂಡಿಕೊಂಡು, ಸದ್ಯಕ್ಕೆ ಎಲ್ಲಮ್ಮನ ಗುಡ್ಡವೆಂದು ಕರೆಯಲ್ಪಡುವ ಶ್ರೀ ರೇಣುಕಾ ಕ್ಷೇತ್ರಕ್ಕೆ ಹೋಗಿ, ಶ್ರೀ ರೇಣುಕಾ ಮಾತೆಯನ್ನು ಪೂಜಿಸಿ, ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿದರು; ಹಾಗು ಮರಳಿ ಮುರಗೋಡಿಗೆ ಹೋಗಬೇಕೆಂದು ಹೊರಟರು. ಆಗ ದಿವಾಕರ ದೀಕ್ಷಿತರು ಅವರನ್ನು ಕೊಸೂರಿಗೆ ಕರಕೊಂಡು ಹೋಗಿ ಯಾವತ್ತು ಸ್ಥಳಗಳನ್ನು ತೋರಿಸಿದರು. ಅಲ್ಲಿಯ ಮನೆ ಕಟ್ಟತಕ್ಕ ಸ್ಥಳವನ್ನೂ, ಶ್ರೀ ಮಾರುತಿಯ ದೇವಾಲಯವನ್ನೂ ನೋಡಿ, ದೀಕ್ಷಿತರು ಸಂತೋಷಪಟ್ಟರು. ಅವರು ಶಕೆ ೧೭೩೧ ವೈಶಾಖ ಶುದ್ಧ ದಶಮಿಯ ದಿವಸ ಗ್ರಾಮದೇವತೆಯನ್ನೂ, ಶ್ರೀ ಮಾರುತಿ-ಮಲಾಪಹಾರಿಗಳನ್ನೂ ಪೂಜಿಸಿ, ಬಳಿಕ ಮನೆಕಟ್ಟುವ ಸ್ಥಳದಲ್ಲಿ ಬಂಗಾರ ಸಮೇತ ಫಲವನ್ನು ಸ್ಥಾಪಿಸಿ, ಆ ಸ್ಥಳವನ್ನು ಪೂಜಿಸಿದರು. ಬಳಿಕ ದಿವಾಕರ ದೀಕ್ಷಿತರು ತಳಸೋಸಿ ಮನೆಯನ್ನು ಕಟ್ಟಲಿಕ್ಕೆ ಆರಂಭಿಸಿದರು. ಮುಹೂರ್ತಮಾರ್ತಂಡದಲ್ಲಿ ಹೇಳಿದ ಪ್ರಕಾರ ಮನೆ ಕಟ್ಟುವ ಕೆಲಸವು ನಡೆದಿತ್ತು.

## ಮನೆಯ ಒಳಭಾಗಗಳು:—

ಪೂರ್ವ

| | | | | | | |
|---|---|---|---|---|---|---|
| | ೮ ದೇವ | ೯ ಮಂಡನ | ೧ ಸ್ನಾನ | ೧೦ ಆಜ್ಯ | ೨ ಪಾಕ | |
| | ೧೬ ಸರ್ವಧಾಮ | | | | ೧೧ ಪುರೀಷ | |
| ಉತ್ತರ | ೭ ಭಾಂಡಾರ | | ಮಧ್ಯಗೃಹ | | ೩ ಶಯನ | ದಕ್ಷಿಣ |
| | ೧೫ ಓಷಧಿ | | | | ೧೨ ವಿದ್ಯೆ | |
| | ೬ ಧಾನ್ಯ | ೧೪ ರತಿ | ೫ ಭೋಜನ | ೧೩ ರೋದನ | ೪ ಅಸ್ತ್ರ | |

ಪಶ್ಚಿಮ

ಗೋಡೆಗಳು ಸಿದ್ಧವಾದವು; ವಿಜಯದಶಮಿಯ ದಿವಸ ಬಾಗಿಲು ಹಚ್ಚಲ್ಪಟ್ಟಿತು. ಗದ್ದುಗೆಯ ಕಲ್ಲುಗಳ ಮೇಲೆ ಕಂಬಗಳು ನಿಲ್ಲಿಸಲ್ಪಟ್ಟು, ಜಂತಿಗೆಗಳನ್ನು ಜೋಡಿಸಿ, ಅದರ ಮೇಲ್ಭಾಗದಲ್ಲಿ ಘಾಟುವಾದ ಹಂಚುಗಳನ್ನು ಹಾಕಿದರು. ಗೋಡೆಗಳನ್ನು ನುಣುಪುಮಾಡಿ, ನೆಲಗಟ್ಟನ್ನು ಮಾಡಿದರು. ಕೆಲವು ಸ್ಥಳಗಳಲ್ಲಿ ಕಲ್ಲಿನ ಹಾಸಿಗೆಯನ್ನು ಮಾಡಿದರು. ಈ ಮನೆಯು ಮುಗಿಯುವಷ್ಟರಲ್ಲಿ ಬೇರೆ ಬೇರೆ ಭಾಗಗಳಲ್ಲಿ ಎಷ್ಟೋ ಕಟ್ಟಡಗಳನ್ನು ನಿರ್ಮಾಣ ಮಾಡಿಸಿದರು. ಅವುಗಳ ವಿವರವು:—ದೀಕ್ಷಿತರ ಮನೆಯ ಪೂರ್ವದಿಕ್ಕಿನಲ್ಲಿ ೩೦೦ ಮೊಳಗಳ ಅಂತರದ ಮೇಲೆ ಪೇಟೆಯನ್ನೂ, ಪೇಟೆಯ ದಕ್ಷಿಣದಿಕ್ಕಿನಲ್ಲಿ ಶೂದ್ರರು ವಾಸಿಸತಕ್ಕ ಸ್ಥಳಗಳನ್ನೂ, ಉತ್ತರದಿಕ್ಕಿನಲ್ಲಿ ವ್ಯಾಪಾರಸ್ಥರ ಮನೆಗಳನ್ನೂ ಕಟ್ಟಿಸಿದರು. ದೀಕ್ಷಿತರ ಮನೆಯ ಹೊಂದಿಗೆ ಬಾವಿಯನ್ನು ಅಗಿಸಿದರು. ನೀರು ವಿಪುಲವಾಗಿ ಬಿದ್ದವು. ಮನೆಯ ಪಶ್ಚಿಮ ದಿಕ್ಕಿನಲ್ಲಿ ಬ್ರಾಹ್ಮಣರಿಗೆ ಮನೆಗಳನ್ನು ಕಟ್ಟಿಸಿಕೊಟ್ಟರು. ವಾಯುವ್ಯದಿಕ್ಕಿನಲ್ಲಿ ಪ್ರಭಾಕರ ದೀಕ್ಷಿತರಿಗೋಸುಗ ಒಂದು ಮನೆಯನ್ನು ಕಟ್ಟಿಸಿ ಅದರ ಈಶಾನ್ಯ ದಿಕ್ಕಿನಲ್ಲಿ ಅಶ್ವ-ಗೋಶಾಲೆಗಳನ್ನು ನಿರ್ಮಾಣ ಮಾಡಿದರು. ಇಂತು ಎಲ್ಲರು ವಾಸಿಸಲಿಕ್ಕೆ ಕಟ್ಟಡಗಳು ಸಿದ್ಧವಾದ ಬಳಿಕ, ದಿವಾಕರ ದೀಕ್ಷಿತರು ಬಾಪೂಗೋಖಲೆ ಇವರ ಕಡೆಯಿಂದ ಬ್ರಾಹ್ಮಣರಿಗೂ ಒಡವರಿಗೂ ಭೂಮಿಯನ್ನು ಇನಾಮು ಕೊಡಿಸಿದರು. ಜನರು ಆನಂದದಿಂದ ಇರಹತ್ತಿದರು. ವ್ಯಾಪಾರ ವ್ಯವಹಾರಗಳು ನಡೆಯಹತ್ತಿದವು ದಿವಾಕರ ದೀಕ್ಷಿತರು ಈ ಪ್ರಕಾರ ಯಾವತ್ತು ವ್ಯವಸ್ಥೆಯನ್ನು ಮಾಡಿಸಿ, ಮುರಗೋಡಿಗೆ ಒಂದು, ಎಲ್ಲ ಸಂಗತಿಗಳನ್ನು ದೀಕ್ಷಿತರಿಗೆ ತಿಳಿಸಿದರು. ಮಾರ್ಗಶೀರ್ಷ ಮಾಸದಲ್ಲಿ ವಾಸ್ತು ಶಾಂತಿ ಮಾಡುವದು ಗೊತ್ತಾಯಿತು, ಸಾಹಿತ್ಯವು ಮಾಡಲ್ಪಟ್ಟಿತು ಕಾರ್ತಿಕ ಶುದ್ಧ ಪ್ರತಿಪದೆಯ ದಿವಸ ಶ್ರೀ ಚಿದಂಬರ ದೀಕ್ಷಿತರು ಪರಿವಾರದಿಂದೊಡಗೂಡಿ ಹೊಸೂರಿಗೆ ಪ್ರಯಾಣವನ್ನು ಬೆಳೆಸಿದರು. ಆಗ ಮುರಗೋಡಿನ ಜನಗೆ ಗುರುಗಳ ಪ್ರಯಾಣದಿಂದ್ಧ ಅಸಮಾಧಾನವಾಯಿತು ಅವರಿಗೆ ಗುರುಗಳು ಶೀಘ್ರವೇ ತಿರುಗಿ ಬರುವೆವೆಂದು ಆಶ್ವಾಸನವನ್ನು ಕೊಟ್ಟರು. ದೀಕ್ಷಿತರು ಊರಬಳಿಯಲ್ಲಿ ಒಂದ ಕೂಡಲೆ, ಶ್ರೀ ಮಾರುತಿ ... ಲಾಪಹಾ... ಪೂಜಿಸಿ, ಊರನ್ನು ಹೊಕ್ಕರು. ಅವರು ವಾಸ್ತುವಾಗುವವರೆಗೆ ಒಬ್ಬ ಬ್ರಾಹ್ಮಣನ ಮನೆಯಲ್ಲಿ ನಿಂತುಕೊಂಡರು. ಅಂದಿನಿಂದ ಆ ಗ್ರಾಮಕ್ಕೆ ದೀಕ್ಷಿತರ ಅನ... ಯಂತೆ 'ಗುರ್ಲಹೊಸೂರ (ಗುರುಗಳ ಹೊಸ-ಊರು-ಗುರ್ಲಹೊಸೂರು) ಎಂಬ

ಹೆಸರು ರೂಢವಾಯಿತು. ಶಕೆ ೧೭೬೧ ಮಾರ್ಗಶೀರ್ಷ ಶುದ್ಧ ಸಪ್ತಮಿಯ ದಿವಸ ಒಳ್ಳೇ ಸಮಾರಂಭದಿಂದ ವಾಸ್ತುಶಾಂತಿಯು ಮಾಡಲ್ಪಟ್ಟಿತು. ವಾಸ್ತುಶಾಂತಿಗೆ ದೂರದೂರಿನ ಜನರೂ ಬಂದಿದ್ದರು. ವಾಸ್ತು ಆದಬಳಿಕ ದೀಕ್ಷಿತರು ಕುಟುಂಬ ಸಹಿತವಾಗಿ ಹೊಸಮನೆಯಲ್ಲಿರಹತ್ತಿದರು. ಬಾಪೂಗೋಖಲೆಯು ಆ ಊರಲ್ಲಿಯೇ ಇರಹತ್ತಿದನು. ವ್ಯಾಪಾರಕ್ಕೆ ಕಳೆಯೇರಿತು. ಪಾಠಶಾಲೆಗಳೂ ಪ್ರಾಥಮಿಕ ಶಾಲೆಗಳೂ ಆರಂಭಿಸಲ್ಪಟ್ಟವು. ಶ್ರೀ ದೀಕ್ಷಿತರು ತಮ್ಮ ಶಿಷ್ಯವೃಂದಕ್ಕೆ ವೇದ ಪಾಠವನ್ನು ಸ್ವತಃ ಹೇಳುತ್ತಿದ್ದರು. ಅವರು ಸ್ವತಃ ಶ್ರೌತಾಗ್ನಿಯನ್ನು ಸೇವಿಸುತ್ತ ಸದ್ಧರ್ಮವನ್ನು ಆಚರಿಸಿ, ಜನರಿಗೆ ಸದಾಚಾರದ ಮಾದರಿಯನ್ನು ತೋರಿಸುತ್ತಿದ್ದರು. ದೀಕ್ಷಿತರ ಶಿಷ್ಯರಲ್ಲಿ ಕೆಲವರು ಶ್ರೌತ-ಸ್ಮಾರ್ತ-ಯಾಜ್ಞಿಕ ಪದ್ಧತಿಯನ್ನು ಪಠಿಸುತ್ತಿದ್ದರು. ಕೆಲವರು ನ್ಯಾಯ-ವ್ಯಾಕರಣಗಳನ್ನು ಓದುತ್ತಿದ್ದರು. ಬೇರೆ ಕೆಲಜನರು ಕರ್ಮ-ಉಪಾಸನಾ ಕಾಂಡಗಳನ್ನೂ, ಹಲವರು ಜ್ಞಾನಕಾಂಡವನ್ನೂ ವಿಚಾರಿಸುತ್ತಿದ್ದರು. ಬೇರೆ ಹಲವರು ಜ್ಯೋತಿಷಶಾಸ್ತ್ರದಲ್ಲಿ ಅಭಿರುಚಿಯುಳ್ಳವರಾಗಿದ್ದರು. ಕೆಲವರು ಸಂಹಿತೆಯ ಪದ-ಕ್ರಮಗಳಲ್ಲಿ ಪರಿಶ್ರಮವನ್ನು ಮಾಡುತ್ತಿದ್ದರು. ಋಗ್ವೇದ-ಯಜುರ್ವೇದಗಳಲ್ಲಿ ನಿಪುಣರಾದ ಶಿಷ್ಯರು ೭೦೦ ಜನರು, ಸಾಮ-ಪಾಠಗಳು ೫೮ ಜನರು, ಶಾಸ್ತ್ರವನ್ನು ಬಲ್ಲವರು ೩೦೦ ಜನರು ಇದ್ದರು. ಶುಕ್ಲಯಜುರ್ವೇದ ಪಾಠಕರ ಸುನಾದವು ದಶದಿಕ್ಕುಗಳನ್ನು ವ್ಯಾಪಿಸಿ ಆಕಾಶಮಂಡಲವನ್ನು ತುಂಬುತ್ತಿತ್ತು. ದೇವತೆಗಳು ಈ ವೇದ-ಘೋಷವನ್ನು ಕೇಳಿ, ಶ್ರೀ ಚಿದಂಬರ ಮಹಿಮೆಗಾಗಿ ತಟಸ್ಥರಾಗುತ್ತಿದ್ದರು. ಮೊದಲು ಒಂದೆರಡು ಮನೆಗಳುಳ್ಳ ಹೊಸೂರವು ಈಗ ಅಮರಾವತಿಯನ್ನು ಸರಿಗಟ್ಟಹತ್ತಿತು. ನೆಟ್ಟಿ ಇಳದಲ್ಲಿ ಪಟ್ಟಣವಾಗುವದು ಆಶ್ಚರ್ಯವೇ?

---

## ೩೯ನೆಯ ಪ್ರಕರಣ.

## ಗುರುಪುರದೊಳಗಿನ ಮಹಿಮೆಗಳು.



**೧ ವೆಂಕಟೇಶಾಗಮನ:**—ಒಂದು ದಿನ ಶ್ರೀ ಚಿದಂಬರ ದೀಕ್ಷಿತರು ಪ್ರಾತರ್ವಿಧಿಗಳನ್ನು ನೆರವೇರಿಸಿಕೊಂಡು ಬ್ರಾಹ್ಮಣರನ್ನು ಕೂಡಿಕೊಂಡು ಸಭಾಸ್ಥಾನಕ್ಕೆ ಬಂದರು. ಕೂಡಲೆ ಅಲ್ಲಿದ್ದ ಸ್ಥಂಸ್ಥಾನಿಕರೇ ಮೊದಲಾದ

ಜನರು ಒಮ್ಮೆಲೆ ಎದ್ದು ನಿಂತು, ನಮಸ್ಕಾರವನ್ನು ಮಾಡಿದರು. ದೀಕ್ಷಿತರ ಭವ್ಯವಾದ ಮೂರ್ತಿಯೂ, ಸುಹಾಸ್ಯವಾದ ವದನವೂ, ಭಸ್ಮೋದ್ಧೂಲಿತ ವಾದ ಗಾತ್ರವೂ, ರುದ್ರಾಕ್ಷಿಗಳಿಂದೊಪ್ಪುವ ಕರಕಂಧರಗಳೂ ಜನರ ಮನ ಸ್ಸನ್ನು ಆಕರ್ಷಿಸಿಕೊಳ್ಳುತ್ತಿದ್ದವು. ಅವರು ದರ್ಭಾಸನದಲ್ಲಿ ಕುಳಿತಕೂಡಲೆ ಎಲ್ಲ ಜನರು ತಮ್ಮ ತಮ್ಮ ಆಸನಗಳಲ್ಲಿ ಕುಳಿತರು ಬಳಿಕ ದೀಕ್ಷಿತರು ತಮ್ಮ ಮಧುರವಾಣಿಯಿಂದ ಸಭಿಕರನ್ನು ಕುರಿತು:—ಪುಣ್ಯಶಾಲಿಗಳಾದ ಸಭಿಕರೇ, ಸ್ವಧರ್ಮಾಚರಣೆಯೇ ಪುಣ್ಯದಾಯಕವಾದದ್ದು! ಸ್ವಧರ್ಮನಿರತರಿಗೆ ಘನ ಶ್ಯಾಮನು ಅವರು ಇದ್ದಲ್ಲಿಯೇ ದರ್ಶನಕೊಡುವನು. ಇದರ ಅನುಭವವು ನಿಮಗೆ ತೀವ್ರವಾಗಿಯೇ ಬರುವದು. ಶ್ರೀ ಲಕ್ಷ್ಮೀನಾಥನು ನೀವು ಇದ್ದ ಲ್ಲಿಯೇ ನಿಮಗೆ ದರ್ಶನಕೊಡುವನು, ಎಂದು ಹೇಳಿದರು. ಅದಕ್ಕೆ ಭಕ್ತರು:- ನಾರಾಯಣನು ಯಾವ ರೂಪದಿಂದ ದರ್ಶನ ಕೊಡುವನೆಂದು ಕೇಳಲು, ದೀಕ್ಷಿ ತರು:—ಆ ಭಗವಂತನು ಅನಂತ ರೂಪಗಳುಳ್ಳವನು! ಆತನು ಇಂತಹ ರೂಪ ದಿಂದಲೇ ದರ್ಶನಕೊಡುತ್ತಾನೆಂದು ಯಾರು ಹೇಳಬೇಕು? ಇಂದಿನಿಂದ ಹದಿ ನೈದು ದಿವಸಗಳಲ್ಲಿ ನಿಮಗೆ ಖಂಡಿತವಾಗಿ ಆತನ ದರ್ಶನವಾಗುವದು. ಇದರಲ್ಲಿ ಏನೂ ಸಂಶಯವಿಲ್ಲ, ಎಂದು ನುಡಿದರು. ಅವರ ಮಾತುಗಳು ಜನರಲ್ಲಿ ಆಶ್ಚರ್ಯವನ್ನುಂಟು ಮಾಡಿದವು. ಭಕ್ತರು ದಿವಸಗಳನ್ನು ಎಣಿಸಹತ್ತಿದ್ದರು. ಎಷ್ಟೋ ಜನರು ಅನಾಯಾಸವಾಗಿ ಶ್ರೀ ಲಕ್ಷ್ಮೀಪತಿಯ ದರ್ಶನವಾಗುತ್ತದೆಂದು ತಮ್ಮ ಅಪ್ತೇಷ್ಟರನ್ನು ಕರೆಸಿಕೊಂಡರು.

ಹದಿನೈದನೇ ದಿವಸ ಎಲ್ಲರೂ ಎಂದಿನಂತೆ ಸ್ನಾನವನ್ನು ಮಾಡಿ ಶುಚಿ ರ್ಭೂತರಾಗಿ ಸಭೆಯಲ್ಲಿ ಕುಳಿತುಕೊಂಡರು. ದೀಕ್ಷಿತರು ತಮ್ಮ ಮನೋ ರಂಜಕವಾದ ಮಾತುಗಳಿಂದ ಜನರ ಚಿತ್ತರಂಜನವನ್ನು ಮಾಡುತ್ತಿದ್ದರು. ಅಷ್ಟ ರಲ್ಲಿ ವೇಂಕಟೇಶನು ಪಠಾಣವೇಷದಿಂದ ಮಹಾದ್ವಾರದಲ್ಲಿ ಬಂದನು. ಆತನು ಕುದುರೆಯನ್ನೇರಿದ್ದನು. ಟೊಂಕದಲ್ಲಿ ಖಡ್ಗವು ನೇತಾಡುತ್ತಿತ್ತು. ಬೆನ್ನಿಗೆ ಢಾಲು ಕಟ್ಟಿದ್ದನು. ತಲೆಗೆ ಉತ್ತಮವಾದ ಮುಂಡಾಸವನ್ನು ಸುತ್ತಿದ್ದನು. ಕಿವಿಯೊಳ ಗಿನ ಬಾವುಲಿಯೂ, ಕೊರಳೊಳಗಿನ ಮುತ್ತಿನ ಸರವೂ ಆತನ ಸ್ವಭಾವ ಸಿದ್ಧ ವಾದ ಸೌಂದರ್ಯವನ್ನು ಹೆಚ್ಚಿಸುತ್ತಿದ್ದವು; ಅವನು ಬಾಗಿಲಿಗೆ ಬಂದಕೂಡಲೆ, ಅಲ್ಲಿದ್ದ ಬ್ರಾಹ್ಮಣನಿಗೆ:-ನಿಮ್ಮ ಗುರುಗಳಿಗೆ, ನಾನು ದರ್ಶನಕ್ಕೆ ಬಂದಿದ್ದೇನೆಂದು

ತಿಳಿಸು, ಎಂದು ನುಡಿಯಲು, ಬ್ರಾಹ್ಮಣನು ದೀಕ್ಷಿತರ ಬಳಿಗೆ ಬಂದು:-ಮಹಾ ಸ್ವಾಮಿ, ತಮ್ಮ ದರ್ಶನಾಪೇಕ್ಷೆಯಿಂದ ಒಬ್ಬ ಪಠಾಣನು ಬಾಗಿಲಲ್ಲಿ ಬಂದಿರು ವನು; ಆತನು ತಮ್ಮನ್ನು ಕರೆಯುತ್ತಿರುವನು, ಎಂದು ಹೇಳಿದನು ದೀಕ್ಷಿತರು:- ಪಠಾಣನು ಒಬ್ಬನೇ ಇರುವನೋ ಹ್ಯಾಗೆ? ನೋಡಿ ಬಾ ಎನಲು, ಬ್ರಾಹ್ಮಣನು ಹೊರಗೆ ಬಂದು ನೋಡಲು, ಅವನಿಗೆ ಇಬ್ಬರು ಪಠಾಣರು ಕಂಡರು. ಆಗ ಅವನು ಆಶ್ಚರ್ಯಬಟ್ಟು ಒಳಗೆ ಬಂದು ದೀಕ್ಷಿತರಿಗೆ ಇಬ್ಬರು ಪಠಾಣರು ಇರುವ ರೆಂದು ತಿಳಿಸಿದನು. ಆಗ ದೀಕ್ಷಿತರು:--ಏನು? ನಿನ್ನ ಮಾತಿನಲ್ಲಿ ನಂಬಿಗೆಯನ್ನು ಹ್ಯಾಗೆ ಇಡಬೇಕು? ಮೊದಲು ಒಬ್ಬನೆಂದು ಹೇಳಿದಿ; ಈಗ ಇಬ್ಬರೆಂದು ಹೇಳುತ್ತಿ ರುವಿ; ಇದರಲ್ಲಿ ಸತ್ಯವಾವದು? ಇನ್ನೊಮ್ಮೆ ನೆಟ್ಟಗೆ ನೋಡಿ ಬಾ, ಎಂದು ಹೇಳಿ ದರು. ಆಗ ಬ್ರಾಹ್ಮಣನು ಹೊರಗೆ ಬಂದು ನೋಡಲು, ಆತನಿಗೆ ಒಬ್ಬನೇ ಪಠಾಣ ನು ಕಾಣಹತ್ತಿದನು. ಅವನಿಗೆ ಯಾವದೂ ತಿಳಿಯದಂತಾಗಿ ಅವನು ಒಳಗೆ ಬಂದು ಒಬ್ಬನೇ ಇದ್ದಾನೆಂದು ಹೇಳಿದನು. ದೀಕ್ಷಿತರು ಆತನ ಮಾತಿಗೆ ನಕ್ಕು:-'ನಾನೇ ನೋಡಿ ಬರುತ್ತೇನೆ'ಂದು ನುಡಿದು, ಹೊರಭಾಗಕ್ಕೆ ಬಂದರು. ಪರಿವಾರವು ಅವ ರನ್ನು ಹಿಂಬಾಲಿಸಿ, ಹೊರಗೆಬಂತು ಪಠಾಣನು ದೀಕ್ಷಿತರನ್ನು ನೋಡಿದೊಡನೆ ಕುದುರೆಯಿಂದಿಳಿದು ಬಂದು, ಅವರನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಈ ಅಪೂರ್ವ ಪ್ರಸಂಗವನ್ನು ನೋಡಿ, ಅನೇಕರು ಮನಸ್ಸಿನಲ್ಲಿ ಬಗೆಬಗೆಯ ತರ್ಕ- ವಿತರ್ಕಗಳನ್ನು ಮಾಡಹತ್ತಿದರು. ಪಠಾಣನೂ, ದೀಕ್ಷಿತರೂ ಫಾರ್ಸಿಭಾಷೆ ಯಲ್ಲಿ ಮಾತಾಡುತ್ತಿದ್ದರು. ದೀಕ್ಷಿತರು ಪಠಾಣನನ್ನು ದೇವಾಲಯಕ್ಕೆ ಕರೆ ದೊಯ್ದು, ಅವನೊಡನೆ ಎರಡು ಮುಹೂರ್ತಗಳವರೆಗೆ ಅಲ್ಲಿಯೇ ಕುಳಿತು ಕೊಂಡರು. ಬಳಿಕ ತಾವು ಒಬ್ಬರೇ ಹೊರಗೆ ಬಂದರು. ಆಗ ಹೊರಭಾಗ ದಲ್ಲಿ ಪಠಾಣನ ವಿಷಯವಾಗಿ ಯೋಚಿಸುತ್ತ ನಿಂತಿರುವ ಜನರು, ದೇವಾಲಯ ದಿಂದ ದೀಕ್ಷಿತರೊಬ್ಬರೇ ಹೊರಗೆ ಬಂದದ್ದನ್ನು ನೋಡಿ, 'ಪಠಾಣನೆಲ್ಲಿರುವನು?' ಎಂದು ದೀಕ್ಷಿತರನ್ನು ಕುರಿತು ಪ್ರಶ್ನಮಾಡಿದರು. ಆಗ ದೀಕ್ಷಿತರು:—ಭಕ್ತ ಶ್ರೇಷ್ಠರೇ, ಈಗ ಇಲ್ಲಿಗೆ ಬಂದವನು ನಿಜವಾದ ಪಠಾಣನಲ್ಲ! ಸಾಕ್ಷಾತ್ ವೇಂಕ ಟೇಶನು, ಪಠಾಣ ವೇಷದಿಂದ ಬಂದಿದ್ದನು. ಇಲ್ಲದಿದ್ದರೆ ಅನ್ಯಪಠಾಣನನ್ನು ನಾವು ಹೇಗೆ ಆಲಿಂಗಿಸುವೆವು? ಹೀಗೆ ಮೋಸವಾಗಬಾರದೆಂದೇ ನಿಮಗೆ ಈ ಮೊದಲೇ ಹೇಳಿದ್ದೆನು. ಹೀಗೆ ನುಡಿಯುತ್ತಿರಲು, ಕುದುರೆಯು ನಿಂತಲ್ಲಿಯೇ ಗುಪ್ತವಾಯಿತು. ಆಗ ಎಲ್ಲರೂ ಆಶ್ಚರ್ಯಗೊಂಡು, ಈಗ ಪಠಾಣರೂಪ

ದಿಂದ ಬಂದವನು ಲಕ್ಷ್ಮೀಪತಿಯೇ ಎಂದು ಮನಗಂಡು ದೀಕ್ಷಿತರನ್ನು ಹೊಗಳುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

* * * * * *

೨ ಶ್ರೀನಿವಾಸಾಚಾರ್ಯರ ಮದಭಂಗ:—ಒಂದು ದಿವಸ ಶ್ರೀನಿವಾಸಾಚಾರ್ಯರೆಂಬ ಒಬ್ಬ ಘನಪಂಡಿತರು ಶ್ರೀ ಚಿದಂಬರ ದೀಕ್ಷಿತರಲ್ಲಿ ದೇವತ್ವವು ಎಷ್ಟರಮಟ್ಟಿಗೆ ಇರುತ್ತದೆಂಬುದನ್ನು ಪರೀಕ್ಷಿಸಬೇಕೆಂದು ನೆನಿಸಿ, ಶಿಷ್ಯರೊಡನೆ ದೀಕ್ಷಿತರ ಸಭೆಯನ್ನು ಪ್ರವೇಶಿಸಿದರು. ಆಗ ಸಾಕ್ಷಾತ್ ಸದಾಶಿವರೂಪಿಗಳಾದ ಶ್ರೀಚಿದಂಬರ ದೀಕ್ಷಿತರು ಪಂಡಿತರ ಮನೋಗತವನ್ನರಿತು ಅವರ ಮನಸಿನೊಳಗಣ ದುರ್ಬುದ್ಧಿಯನ್ನು ದೂರಮಾಡುವ ಉದ್ದೇಶದಿಂದ ವ್ಯಾವಹಾರಿಕ ಮಾತುಗಳನ್ನಾಡುತ್ತ, ಆಚಾರ್ಯರೊಡನೆ ಪ್ರೇಮಕಲಹವನ್ನು ಮಾಡತೊಡಗಿದರು. ಆಗ ಮೊದಲೇ ದೀಕ್ಷಿತರಲ್ಲಿ ದೋಷಾರೋಪಣ ಮಾಡಲೆತ್ನಿಸಿದ ಶ್ರೀನಿವಾಸಾಚಾರ್ಯರು, ಸಾಮಾನ್ಯ ಮನುಷ್ಯರಂತೆ ಮಾತನಾಡುತ್ತಿರುವ ದೀಕ್ಷಿತರ ಸ್ಥಿತಿಯನ್ನು ನೋಡಿ, ಇವರು ಸಾಮಾನ್ಯ ಮನುಷ್ಯರು! ಎಂದು ತಿಳಕೊಂಡು ಶಿಷ್ಯರೊಡನೆ ಮನೆಗೆ ಬಂದು ದೀಕ್ಷಿತರನ್ನು ಮನಬಂದಂತೆ ಹಳಿಯಹತ್ತಿದರು. ಪರನಿಂದೆಯು ಪಾಪದಾಯಕವಾಗಿರಲು, ಮಹಾಪುರುಷರ ನಿಂದೆಯು ನಾಶಮಾಡದೆ ಬಿಟ್ಟೀತೇ! ಆಚಾರ್ಯರಿಗೆ ಒಮ್ಮಿಂದೊಮ್ಮೆ ಮಾತಾಡಲಿಕ್ಕೆ ಬಾರದಂತಾಯಿತು. ಇಂದ್ರಿಯಗಳು ತೀರ ಶಿಥಿಲವಾದವು. ದೊಡ್ಡವರ ನಿಂದೆಯ ಫಲವು ತತ್ಕಾಲಕ್ಕೆ ದೊರೆತಂತಾಯಿತು. ಆಗ ಆಚಾರ್ಯರ ಶಿಷ್ಯರು ಅವರ ಈ ವ್ಯವಸ್ಥೆಯನ್ನು ನೋಡಿ ಗಾಬರಿಯಾಗಿ ಮನಸ್ಸಿನಲ್ಲಿ ಇದು ಶ್ರೀ ಚಿದಂಬರ ದೀಕ್ಷಿತರ ನಿಂದೆಯ ಫಲವೆಂದು ತಿಳಿದು, ಆಚಾರ್ಯರನ್ನು ದೀಕ್ಷಿತರ ಬಳಿಗೆ ಕರೆದೊಯ್ದು, ದೀಕ್ಷಿತರಿಗೆ ಕೈಮುಗಿದು:-ಮಹಾಸ್ವಾಮಿಯೇ, ನಿಮ್ಮ ನಿಂದೆಯಿಂದ ನಮ್ಮ ಗುರುಗಳು ಮೂಕರಾಗಿರುವರು; ಕಾರಣ ದಯವಿಟ್ಟು, ಇವರ ಅಪರಾಧವನ್ನು ಕ್ಷಮಿಸಿ, ಅವರ ಮೇಲೆ ದಯಮಾಡಬೇಕು. ಅವರು ತಮಗೆ ಶರಣು ಬಂದಿದ್ದಾರೆ, ಎಂದು ಪ್ರಾರ್ಥಿಸಿದರು. ಆಗ ಶ್ರೀ ಚಿದಂಬರ ದೀಕ್ಷಿತರು ಶ್ರೀನಿವಾಸಾಚಾರ್ಯರ ಶಿಷ್ಯರು ಆಡಿದ ಮಾತುಗಳನ್ನು ಕೇಳಿ, ನಕ್ಕು:-ಶಿಷ್ಯ ಶ್ರೇಷ್ಠರೇ, ಸ್ವಂತ ಹಿತಕ್ಕಾಗಿ ಒಬ್ಬರು ಮತ್ತೊಬ್ಬರ ನಿಂದೆಯನ್ನಾಗಲಿ, ಸ್ತುತಿಯನ್ನಾಗಲಿ ಮಾಡಕೂಡದೆಂದು ಭಗವದ್ವಾಕ್ಯವಿರುವದು. ಪ್ರತಿಯೊಂದು ಪ್ರಾಣಿಯ ಹೃದಯದಲ್ಲಿ ಈಶ್ವರನು ವಾಸಿಸುತ್ತಿರುವದರಿಂದ ಒಬ್ಬರ

ನಿಂದಾಸ್ತುತಿಗಳನ್ನು ಮಾಡುವವನು, ಪರ್ಯಾಯದಿಂದ ಈಶ್ವರನ ನಿಂದಾಸ್ತುತಿಗಳನ್ನು ಮಾಡಿದಂತಾಗಿ, ಅವನು ಅವುಗಳ ಫಲವನ್ನು ಹೊಂದಲೇ ಬೇಕಾಗುವದು. ಜನರ ಸ್ವಭಾವ ಕರ್ಮಗಳನ್ನು ಆಡಿಕೊಳ್ಳಲಾಗದೆಂದು ಸಾಧುಗಳು ಹೇಳುತ್ತಿರುವರು. ಗೀತೆಯಲ್ಲಿ ಭಗವಂತನು ಅರ್ಜುನನಿಗೆ ಇದೇ ಮರ್ಮವನ್ನು ತಿಳಿಸಿರುವನು; ಆದುದರಿಂದ ಎಂತಹ ವಿಪತ್ತು ಬಂದಾಗ್ಯೂ ತಿಳಿದವರು ಅನ್ಯರ ನಿಂದೆಯನ್ನು ಮಾಡಬಾರದು ಎಲ್ಲೆಡೆಗಳಲ್ಲಿಯೂ ಶ್ರೀಹರಿಯು ಏಕರೂಪನಾಗಿರುತ್ತಾನೆ. ದೇಹ ಮೊದಲು ಮಾಡಿಕೊಂಡು ಬುದ್ಧಿಯ ವರೆಗೆ ಎಲ್ಲ ತತ್ವಗಳು ಜಡವಾಗಿದ್ದರೂ ಅವುಗಳ ಚಾಲಕನು ಅಚ್ಯುತನಾಗಿರುತ್ತಾನೆ; ಆದುದರಿಂದ ಭೂತಮಾತ್ರರಲ್ಲಿ ಹರಿಭಾವನೆಯನ್ನಿಟ್ಟು, ಪರನಿಂದೆಗಳನ್ನಾಡದಂತೆ ಜಾಗರೂಕರಾಗಿರುವದೇ ಶ್ರೇಯಸ್ಕರವು! ಎಂದು ಬೋಧಿಸಿದರು.

ಶ್ರೀನಿವಾಸಾಚಾರ್ಯರು, ದೀಕ್ಷಿತರು ಹೇಳಿದ ಸುಧೆಯ ಸದೃಶವಾದ ಬೋಧವನ್ನು ಕೇಳಿ, ಪಶ್ಚಾತ್ತಾಪಪಟ್ಟು, ಶ್ರೀ ಚಿದಂಬರ ದೀಕ್ಷಿತರ ಕಾಲುಗಳ ಮೇಲೆ ಉರುಳಾಡಹತ್ತಿದರು. ಧ್ವನಿಯು ನಡುಗಹತ್ತಿತು. ಅವರು ದೊಡ್ಡ ದನಿತೆಗೆದು ಅಳಹತ್ತಿದರು. ಆಗ ದೀಕ್ಷಿತರಿಗೆ ಅವರ ವಿಷಯದಲ್ಲಿ ದಯೆಯುಂಟಾಯಿತು. ಅವರು ಅಮೃತದೃಷ್ಟಿಯಿಂದ ಆಚಾರ್ಯರನ್ನು ನೋಡಲು, ಆಚಾರ್ಯರ ವಾಣಿಯು ಮೊದಲಿನಂತಾಯಿತು. ಅವರು ಕೈಜೋಡಿಸಿ, ದೀಕ್ಷಿತರನ್ನು ಹೊಗಳಹತ್ತಿದರು:—ದೀಕ್ಷಿತೇಂದ್ರನೇ, ನಿನ್ನ ಮಹಿಮೆಯನ್ನರಿಯದೆ, ತಿಳಿಗೇಡಿಯಾದ ನಾನು ಮನಬಂದಂತೆ ನಿನ್ನನ್ನು ಜರೆದನು. ನನ್ನ ತಪ್ಪು ಕ್ಷಮಿಸಿ ನನ್ನನ್ನು ಉದ್ಧರಿಸಬೇಕು. ಪರನಿಂದೆಯನ್ನು ಮಾಡಿ, ನನ್ನ ಬುದ್ಧಿಯು ಮಸಣಿಸಿ ಹೋಗಿರುವದು. ಅಂದಮೇಲೆ ನನಗೆ ಇಷ್ಟೊಂದು ಜ್ಞಾನವು ಹ್ಯಾಗೆ ಉಂಟಾಗಬೇಕು? ಗುರುವರ್ಯನೇ, ನಿನ್ನ ಬೋಧದಿಂದ ನಾನು ಎಚ್ಚತ್ತೆನು. ಇಂದಿನಿಂದ ಪರನಿಂದೆಯನ್ನು ಬಿಟ್ಟುಬಿಟ್ಟೆನು. ದೀನನಾಥನೇ, ದಯಾಸಾಗರನೇ, ನನ್ನ ಮೇಲೆ ಕೃಪೆ ಮಾಡು. ಎಂದು ಪರಿಪರಿಯಿಂದ ಸ್ತುತಿಸುತ್ತಿರಲು, ದೀಕ್ಷಿತರು ಅವರ ಮೇಲೆ ಕೃಪೆ ಮಾಡಿ, ಅವರನ್ನು ವಸ್ತ್ರಾಭರಣಗಳಿಂದ ಚನ್ನಾಗಿ ಸತ್ಕರಿಸಿ ಕಳಿಸಿಕೊಟ್ಟರು.

† † † † † †

೩ ದುಷ್ಟಶಾಸನ:—ಹೀಗೆ ದೀಕ್ಷಿತರು ಗುರುನವಪುರದಲ್ಲಿ ಪ್ರತಿನಿತ್ಯ ಹೊಸ ಹೊಸ ಲೀಲೆಗಳನ್ನು ತೋರಹತ್ತಿದರು. ಅವರು ತಮ್ಮ ಕಡೆಗೆ

ಬಂದ ಯಾಚಕರಿಗೆ ತಮ್ಮ ಕೈಯೊಳಗಿನ ಕಲಶದೊಳಗಿಂದ ಬೇಕಾದಷ್ಟು ಹಣ ವನ್ನು ಕೊಡುತ್ತಿದ್ದರು. ಒಬ್ಬ ಕೆಟ್ಟ ಮನಸ್ಸಿನ ಬ್ರಾಹ್ಮಣನು ಅವರ ನೂತನ ವಾದ ಮಹಿಮೆಗಳನ್ನು ದಿನಾಲು ಕೇಳಿ, ಕೇಳಿ, ಹಗಲು ರಾತ್ರಿ ತಳಮಳಿಸುತ್ತ ಮನಸ್ಸಿನಲ್ಲಿ:—ದೀಕ್ಷಿತರ ಕಲಶದಲ್ಲಿ ಅಗಾಧವಾದ ಶಕ್ತಿಯಿರುತ್ತದೆ. ಅಕ್ಷಯ್ಯ ವಾದ ನಿಧಿಯಿರುತ್ತದೆ. ಹೇಗಾದರೂ ಮಾಡಿ, ಅದನ್ನಷ್ಟು ಎಬ್ಬಿಸಿದರೆ ನನ್ನ ದಾರಿದ್ರ್ಯವು ದೂರಾಗಿ ನಾನು ಶ್ರೀಮಂತನಾಗುವೆನು! ಎಂದು ಯೋಚಿಸಿ, ಆತನು ದೀಕ್ಷಿತರ ಶಿಷ್ಯನಾಗಿ ಅವರ ಬಳಿಯಲ್ಲಿ ನಿಂತುಕೊಂಡನು. ದೀಕ್ಷಿತರು ಆ ಬ್ರಾಹ್ಮಣನ ಕೆಟ್ಟ ಮನಸ್ಸನ್ನು ಕಂಡು ಹಿಡಿದು, ಆತನ ದುರ್ಬುದ್ಧಿಯನ್ನು ಹೋಗಲಾಡಿಸಿ, ಸದ್ಬುದ್ಧಿಯನ್ನುಂಟು ಮಾಡುವದಕ್ಕಾಗಿ, ಒಂದುದಿವಸ ತಮ್ಮ ಕಲಶವನ್ನು ಬೇಕಂತ ಶ್ರೀ ಮಾರುತೀದೇವಾಲಯದಲ್ಲಿಟ್ಟು ತಾವು ಸ್ನಾನಾ ರ್ಥವಾಗಿ ಹೊಳೆಗೆ ಹೋದರು. ಇತ್ತ ಕಲಶವನ್ನು ನೆಗಹಬೇಕೆಂದು ಸಮಯ ವನ್ನು ನಿರೀಕ್ಷಿಸುತ್ತಿದ್ದ ಬ್ರಾಹ್ಮಣನು ಈ ಸಂಧಿಯನ್ನು ಸಾಧಿಸಿ, ಗುಡಿಯನ್ನು ಹೊಕ್ಕು, ಬಾಗಿಲು ಹಾಕಿಕೊಂಡು, ಅವಸರದಿಂದ ದೋತರವನ್ನು ಹಾಸಿ, ಕಲಶವನ್ನೆತ್ತಿ ಸುರುವಿಕೊಂಡನು. ಆಗ ಗುರುಗಳ ಮಹಿಮೆಯಿಂದ ಒಂದು ವಿಚಿತ್ರ ಸಂಗತಿಯು ವರ್ತಿಸಿತು. ದೀಕ್ಷಿತರ ಕಲಶದೊಳಗಿಂದ ದ್ರವ್ಯದ ಬದ ಲಾಗಿ ಸಾವಿರಾರು ಚೇಳುಗಳು ಬ್ರಾಹ್ಮಣನ ದೋತರದಲ್ಲಿ ಬಿದ್ದು, ನೋಡನೋಡು ವಷ್ಟರಲ್ಲಿ ಗುಡಿಯನ್ನೆಲ್ಲ ವ್ಯಾಪಿಸಿ, ಬ್ರಾಹ್ಮಣನ ಮೈಮೇಲೆ ಏರಹತ್ತಿದವು. ಆಗ ಬ್ರಾಹ್ಮಣನು ಬೆದರಿ, ಆಕ್ರೋಶ ಮಾಡಹತ್ತಿದನು. ಬಾಗಿಲು ತೆಗೆಯಲಿಕ್ಕೆ ಆಸ್ಪದವಿಲ್ಲದಂತಾಯಿತು. ಆಗ ಅವನು 'ಸಾಯುತ್ತೇನೆ ಹೇಗಾದರೂ ಮಾಡಿ ನನ್ನನ್ನು ಬದುಕಿಸಿಕೊಳ್ಳಿರೆ'ಂದು ಚೀರುತ್ತ ಬೊಬ್ಬೆಯನ್ನು ಹೊಡೆಯಹತ್ತಿದನು. ದೀಕ್ಷಿತರು ಆ ಗದ್ದಲವನ್ನು ಕೇಳಿ, ಸ್ನಾನಮಾಡುವದನ್ನು ಬಿಟ್ಟು ಗುಡಿಗೆ ಬಂದು ನೋಡಲು, ಬಾಗಿಲು ಹಾಕಿತ್ತು ಅದನ್ನು ನೋಡಿ ಅವರು:—ಎಲಾ, ಒಳಗೆ ಯಾರು ಇರುವಿರಿ? ಹೀಗೆ ಆಕ್ರೋಶ ಮಾಡುವ ಕಾರಣವೇನು! ಬಾಗಿ ಲವನ್ನು ತೆಗೆ ಎನಲು, ಬ್ರಾಹ್ಮಣನು ದೀಕ್ಷಿತರನ್ನು ಗುರುತಿಸಿ:—ಮಹಾ ಸ್ವಾಮಿ, ನಾನು ಮಹಾ ಅಪರಾಧಿಯಾಗಿರುವೆನು. ತಿಳಿಗೇಡಿತನದಿಂದ ಅಲ್ಲದ ಕೆಲಸವನ್ನು ಮಾಡಲು ಸಿದ್ಧನಾದೆನು: ತೀವ್ರವಾಗಿ ನೀವೇ ಬಾಗಿಲು ತೆಗೆದು ನನ್ನನ್ನು ಬದುಕಿಸಿಕೊಳ್ಳಿರಿ. ನಾನು ಬಾಗಿಲು ತೆಗೆಯಲಿಕ್ಕೆ ಅಸಮರ್ಥನಾಗಿ ರುವೆನು, ಎಂದು ದೈನ್ಯದಿಂದ ನುಡಿಯಲು, ದೀಕ್ಷಿತರು ಬಾಗಿಲು ತೆರೆದು,

ಒಳಗೆ ಹೊಕ್ಕರು. ದೇವಾಲಯವೆಲ್ಲ ವೃಶ್ಚಿಕಮಯವಾಗಿತ್ತು ಬ್ರಾಹ್ಮಣನು ಬೆದರಿ ನಡುಗಹತ್ತಿದನು. ಆಗ ದೀಕ್ಷಿತರು ವೃಶ್ಚಿಕದ ಗತಿಯನ್ನು ತಮ್ಮ ಮಹಿಮೆಯಿಂದ ಒಮ್ಮೆಲೆ ನಿರೋಧಿಸಿ ಬ್ರಾಹ್ಮಣನನ್ನು ಕುರಿತು:--ಅಪ್ಪಾ, ಇಷ್ಟು ಚೇಳುಗಳೆಲ್ಲಿಯವು? ಎಂದು ಪ್ರಶ್ನೆ ಮಾಡಲು,

ಬ್ರಾಹ್ಮಣನು ಕೈಮುಗಿದು:—ಗುರುಗಳೇ ನಾನು ಮಹಾಪರಾಧಿಯು. ನನ್ನ ಅಪರಾಧವನ್ನು ಕ್ಷಮಿಸಿ, ನನ್ನನ್ನು ಉದ್ಧರಿಸಬೇಕು. ರತ್ನವೆಂದು ಕೆಂಡವನ್ನು ಸ್ಪರ್ಶಮಾಡಿ, ಅದರ ಪ್ರಾಯಶ್ಚಿತ್ತವನ್ನು ಹೊಂದಿದೆನು ಕಲ್ಪವೃಕ್ಷದ ಕೆಳಗೆ ಕುಳಿತು, ಕುಕಲ್ಪನೆಗಳಿಗೆ ಎಡೆಗೊಟ್ಟು, ನನ್ನ ನಾಶವನ್ನು ನಾನೇ ಮಾಡಿಕೊಳ್ಳಲು ಸಿದ್ಧನಾದೆನು. ತಮ್ಮ ಕಲಶವನ್ನು ಕದ್ದೊಯ್ದು ಶ್ರೀಮಂತನಾಗಬೇಕೆಂದು ಬಯಿಸಿದೆನು. ತಮ್ಮ ಆ ಕಲಶದಲ್ಲಿ ಎಷ್ಟು ಧನಸಂಚಯವು ಇರುವದೆಂಬದನ್ನು ನೋಡಬೇಕೆಂದು ಬಯಸಿ, ಅದನ್ನು ನನ್ನ ದೋತರದಲ್ಲಿ ಸುರುವಲು ಅದರೊಳಗಿಂದ ಈ ಸಾವಿರಾರು ಚೇಳುಗಳು ಹೊರಬಿದ್ದವು. ನನ್ನ ಕುಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವು ದೊರೆಯಿತು. ನನ್ನ ಬಡತನವು ಬಯಲಾದೀತೆಂದು ನಾನು ಈ ಕೆಟ್ಟ ಕೆಲಸಕ್ಕೆ ಕೈಹಾಕಿದೆನು. ಸದ್ಗುರವೇ, ಸಿಟ್ಟಾಗದೆ ಈ ದೀನನಿಗೆ ಕೈಗೊಡಬೇಕು, ಎಂದು ಬಗೆ ಬಗೆಯಿಂದ ಪ್ರಾರ್ಥಿಸಲು, ದೀಕ್ಷಿತರು ಆತನ ವಿಷಯವಾಗಿ ಅಂತಃಕರುಣಬಟ್ಟು:-ಶಿವ ಶಿವಾ! ಇದೇನು ಘೋರಕರ್ಮವನ್ನು ಮಾಡಿದೆ? ನೀನು ಬೇಡಿಕೊಂಡಿದ್ದರೆ, ನಿನಗೆ ಏನು ಕಡಿಮೆಯಿತ್ತು? ಆದದ್ದಾಯಿತು, ಇನ್ನು ಮೇಲಾದರೂ ಇಂತಹ ಕೆಟ್ಟ ಕೆಲಸಕ್ಕೆ ಉದ್ಯುಕ್ತನಾಗಬೇಡ. ಇನ್ನು ಮೇಲೆ ಈ ಬಗೆಯ ಕುಕರ್ಮವನ್ನು ಮಾಡಲಿಕ್ಕೆ, ಎಂದು ಸಿದ್ಧನಾಗುವಿಯೋ, ಅಂದು ನಿನ್ನ ನಾಶವಾಯಿತೆಂದು ತಿಳಿ, ಎಂದು ನುಡಿದು, ಗುಡಿಯೊಳಗಿನ ವೃಶ್ಚಿಕಗಳನ್ನೆಲ್ಲ ಕಲಶದಲ್ಲಿ ತುಂಬಿ, ಅದೇ ಕಲಶದೊಳಗಿಂದ ಎರಡು ಬೊಗಸೆ ಹಣವನ್ನು ಬ್ರಾಹ್ಮಣನ ಸೆರಗಿನಲ್ಲಿ ಹಾಕಿದರು. ಆಗ ಬ್ರಾಹ್ಮಣನು ಸಂತುಷ್ಟನಾಗಿ, ದೀಕ್ಷಿತರನ್ನು ವಂದಿಸಿ, ಮನೆಗೆ ಹೊರಟು ಹೋದನು. ದೀಕ್ಷಿತರು ಕೊಟ್ಟಷ್ಟೇ ದ್ರವ್ಯದಿಂದ ಬ್ರಾಹ್ಮಣನ ಬಡತನವು ಹಿಂಗಿ, ಆತನು ಒಳ್ಳೇ ದ್ರವ್ಯವುಳ್ಳವನಾದನು.

● ● ● ● ●

೪ ಶ್ರೀ ಶಂಕರ ಭಾರತೀ ಸ್ವಾಮಿಗಳು:—ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯು ತ್ರಿಲೋಕಗಳನ್ನು ವ್ಯಾಪಿಸಿರಲು, ಶ್ರೀ ಶಂಕರ ಭಾರತೀಸ್ವಾಮಿಗಳು ಶೃಂಗೇರಿಯಿಂದ ಶ್ರೀ ಚಿದಂಬರ ದೀಕ್ಷಿತರನ್ನು ಕಾಣುವದಕ್ಕಾಗಿ ಗುರ್ಲ

ಹೊಸೂರಿಗೆ ಬಂದರು. ಆಗ ಪ್ರಾತಃಕಾಲವಾಗಿತ್ತು. ಕಾಷಾಯ ವಸ್ತ್ರಗಳಿಂದಲೂ ದಂಡ-ಕಮಂಡಲುಗಳಿಂದಲೂ ಒಪ್ಪುತ್ತಿರುವ ಪರಮ ತೇಜಸ್ವಿಗಳಾದ ಯತಿ ವರ್ಯರು, ದೀಕ್ಷಿತರ ಸಭಾಸ್ಥಾನವನ್ನು ಪ್ರವೇಶಿಸಿದರು. ಆ ತೇಜೋರಾಶಿ ಯನ್ನು ನೋಡಿ, ಸಭೆಯೊಳಗಿನ ಶಿಷ್ಯರೆಲ್ಲ ದೆರಗಾಗಿ ಅವರಿಗೆ ಸಾಷ್ಟಾಂಗವೆರಗಿ ದರು. ಈ ಸಮಯದಲ್ಲಿ ದೀಕ್ಷಿತರು ಅಲ್ಲಿ ಇದ್ದಿಲ್ಲ; ಆದುದರಿಂದ ಯತಿಗಳು ಶಿಷ್ಯರನ್ನು ಕುರಿತು:—ನಿಮ್ಮ ಗುರುಗಳು ಎಲ್ಲಿದ್ದಾರೆ, ಎಂದು ಕೇಳಲು ಅವರು ಹೋಮಶಾಲೆಯಲ್ಲಿರುವರು. ತಾವು ಇಲ್ಲಿ ವಿಶ್ರಮಿಸಬೇಕು. ನಾವು ಅವರನ್ನು ಕರೆದುಕೊಂಡು ಬರುತ್ತೇವೆ, ಎಂದು ಬಹು ವಿನಯದಿಂದ ನುಡಿದು, ಕೆಲವರು ಯತಿಗಳಿಗೆ ಆಸನವನ್ನು ಕೊಡಲುದ್ಯುಕ್ತರಾದರು. ಕೆಲವರು ಹೋಮಶಾಲೆಗೆ ಹೋಗಿ, ದೀಕ್ಷಿತರಿಗೆ ಯತಿಗಳು ಬಂದ ಸುದ್ದಿಯನ್ನು ಅರುಹಿದರು. ಆಗ ದೀಕ್ಷಿತರು ಪೂಜಾ ಸಾಹಿತ್ಯವನ್ನು ತೆಗೆದುಕೊಂಡು ಸಭಾಸ್ಥಾನಕ್ಕೆ ಬಂದು, ಯತಿವರ್ಯರನ್ನು ಉತ್ತಮವಾದ ಪೀಠದಲ್ಲಿ ಕುಳ್ಳಿರಿಸಿ, ಅರ್ಘ್ಯ-ಪಾದ್ಯಾದಿಗ ಳಿಂದ ಅವರನ್ನು ಪೂಜಿಸಿ, ಚರಣ ತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿದರು. ಪೂಜೆ ಯಾದ ಬಳಿಕ ದೀಕ್ಷಿತರು ಯತಿಗಳನ್ನು ಕುರಿತು:—ಸ್ವಾಮಿ, ಪ್ರಪಂಚದಲ್ಲಿ ದ್ಭಾಗ್ಯೋ ನಾನು ತಮ್ಮ ಚರಣ ದರ್ಶನದಿಂದ ಪುನೀತನಾದೆನು. ದೀನನಾದ ನನಗೆ ತಮ್ಮ ದರ್ಶನವು, ಕ್ಷುಧಿತನಿಗೆ ಪಂಚ-ಪಕ್ವಾನ್ನ ದೊರೆದಂತೆ ಆಯಿತು. ನಾನು ಕೃತ ಕೃತ್ಯನಾದೆನು ನನ್ನ ಪೂರ್ವ ಪುಣ್ಯವು ಫಲಿಸಿತು. ಈ ದಾಸನಿಗೆ ತಾವು ಮಾಡುವ ಅಪ್ಪಣೆಯಾವದು? ಎಂದು ಪ್ರೇಮ ಪೂರ್ವಕವಾಗಿ ಪ್ರಶ್ನೆ ವನ್ನು ಮಾಡಿದರು.

ಆಗ ಯತಿವರ್ಯರು ನಸುನಗುತ್ತ—ದೀಕ್ಷಿತವರ್ಯನೇ, ನಿನ್ನ ಮಾತಿನ ಹೊಲಬು ಗೊತ್ತಾಯಿತು. ನಿನ್ನ ವೇದಶಾಲೆಯನ್ನು ನೋಡುವದಕ್ಕಾಗಿ ಇಲ್ಲಿಗೆ ಬಂದೆವು. ಅದನ್ನು ನೋಡಿ ಪರಮ ಸಂತೋಷವಾಯಿತು ಶುಕ್ಲಯಜುರ್ವೇ ದದ ಸುನಾದವು ಗಗನವನ್ನು ಭೇದಿಸಿ, ಸುರಲೋಕಕ್ಕೆ ಮುಟ್ಟುತ್ತಿರುವದು. ಪೂರ್ವದಲ್ಲಿ ನಾನು ಅನ್ಯಮತಗಳನ್ನು ಖಂಡಿಸಿ ಅದ್ವೈತಮತವನ್ನು ಸ್ಥಾಪಿಸಿ ದೆನು. ಅದು ಈಗ ಕಲಿಕಾಲದ ಪ್ರಯುಕ್ತ ಲೋಪವಾಗಿರುವದು. ಅದನ್ನು ಉದ್ಧರಿಸುವ ಕೆಲಸವು ನಿನ್ನ ಕಡೆಗಿರುವದು. ವೇದಾನುಸಾರವಾಗಿ ಕರ್ಮ ಉಪಾಸನ ಮತ್ತು ಜ್ಞಾನಮಾರ್ಗಗಳನ್ನು ಪ್ರಚುರಗೊಳಿಸು, ಎಂದು ಹೇಳಿದರು. ಅದಕ್ಕೆ ದೀಕ್ಷಿತರು:--ಜಗದ್ಗುರುಗಳೇ, ಪೂರ್ವಕಾಲದಲ್ಲಿ ಯಾಜ್ಞವಲ್ಕ್ಯ ಮಹಾ

ಮುನಿಗಳಿಂದ ಸ್ಥಾಪಿಸಲ್ಪಟ್ಟ ವಾಜಸನೇಯ ಶಾಖೆಯು ಈ ಕಲಿಯುಗದಲ್ಲಿ ಮಲಿನವಾಗಿರುವದು ಜನರು ಶುಕ್ಲಯಜುರ್ವೇದಕ್ಕೆ ದೋಷಾರೋಪಣೆ ಮಾಡುತ್ತಿರುವರು. ಆದುದರಿಂದ ಮೊದಲು ನಾನು ಶುಕ್ಲಯಜುರ್ವೇದವನ್ನೂ, ವಾಜಸನೇಯ ಶಾಖೆಯನ್ನೂ ಉದ್ಧರಿಸುವ ಕಾರ್ಯವನ್ನು ಮುಗಿಸುವೆನು. ಬಳಿಕ ತಮ್ಮ ಅಭಿಪ್ರಾಯದಂತೆ ವರ್ತಿಸುವೆನು, ಎಂದು ನುಡಿದರು. ಜನರು ಈ ಪ್ರಕಾರ ನಡೆದ ಭಾಷಣವನ್ನು ಕೇಳಿ, ಯತಿಗಳನ್ನು ಪ್ರತ್ಯಕ್ಷ ಶಂಕರಭಾರತಿಗಳೆಂದೇ ಭಾವಿಸಿ, ಅವರ ದರ್ಶನವಾದ್ದರಿಂದ ಈ ದಿನವು ಸುದಿನವೆಂದು ತಿಳಕೊಂಡರು. ದೀಕ್ಷಿತರೂ, ಶ್ರೀಶಂಕರಭಾರತಿವರ್ಯರೂ ಏಕರೂಪರಾಗಿರುವರೆಂಬ ಭಾವನೆಯು ಅವರಲ್ಲಿ ದೃಢವಾಯಿತು. ಇಂತು ಭಕ್ತವೃಂದವು ಆನಂದಬಡುತ್ತಿರಲು, ಶ್ರೀ ಚಿದಂಬರ ದೀಕ್ಷಿತರು ಯತಿಗಳಿಗೆ ಭಿಕ್ಷಾವಂದನಗಳನ್ನು ಮಾಡಿದರು. ಯತಿಗಳ ಆಗಮನ ನಿಮಿತ್ತವಾಗಿ ಬಹು ದೊಡ್ಡ ಬ್ರಾಹ್ಮಣ ಸಂತರ್ಪಣೆಯಾಯಿತು. ದಕ್ಷಿಣೆಯಿಂದಲೂ, ಮಿಷ್ಟಾನ್ನ ಭೋಜನದಿಂದಲೂ ಬ್ರಾಹ್ಮಣರು ತುಷ್ಟರಾದರು. ಬಳಿಕ ಶ್ರೀ ಶಂಕರ ಭಾರತಿಗಳು ಕೆಲವು ಜನ ಶಿಷ್ಯರಿಂದ ವೇದ ಪಾಠವನ್ನು ಅನಿಸಿಕೊಂಡು, ಅವರಿಗೆ ಯೋಗ್ಯ ಮರ್ಯಾದೆಯನ್ನು ಮಾಡಿದರು; ಹಾಗೂ ಭಕ್ತಾವಳಿಗೆ ಸದುಪದೇಶವನ್ನು ಮಾಡಿ, ದೀಕ್ಷಿತರ ಅಪ್ಪಣೆಯನ್ನು ಹೊಂದಿ ಮರಳಿ ಶೃಂಗೇರಿಗೆ ಪ್ರಯಾಣವನ್ನು ಬೆಳೆಸಿದರು.

**೫ ತಿಮ್ಮಪ್ಪ ಗೋಸಾವಿಯು:**—ಒಬ್ಬ ಪ್ರಸಿದ್ಧನಾದ ಹರಿದಾಸನು ದೇಶಸಂಚಾರ ಮಾಡುತ್ತ ಗುರ್ಲಹೊಸೂರಿಗೆ ಬಂದನು. ಆತನ ನಿರೂಪಣ ಶಕ್ತಿಯು ಶ್ರೇಷ್ಠವಾಗಿತ್ತು; ಜನರ ಮನಸ್ಸನ್ನು ಒಲಿಸಿಕೊಳ್ಳುವದರಲ್ಲಿ ಆತನು ಒಳ್ಳೇ ಜಾಣನಾಗಿದ್ದನು. ಮನುಷ್ಯನ ಸ್ವಭಾವಕ್ಕನುಸರಿಸಿ ಆತನಲ್ಲಿ ಈ ಗುಣಗಳ ಮೂಲಕ ಗರ್ವವುಂಟಾಗಿತ್ತು. ಹರಿಕೀರ್ತನೆಗಳನ್ನು ಮಾಡುವದರಲ್ಲಿ ತಾನೇ ಶ್ರೇಷ್ಠನೆಂದು ಆತನು ಭಾವಿಸಿಕೊಂಡಿದ್ದನು. ಆತನು ಊರನ್ನು ಸೇರಿದ ಕೂಡಲೆ ಸ್ವಾಮಿಗಳ ಶಿಷ್ಯರಿಂದ ಸತ್ಕರಿಸಲ್ಪಟ್ಟನು; ಹಾಗು ತಾನು ಬಂದ ಉದ್ದೇಶವನ್ನು ಅವರಿಗೆ ಅರುಹಿದನು. ಆಗ ಶಿಷ್ಯರು:—ಮೊದಲು ಮಹಾಸ್ವಾಮಿಗಳ ಬಳಿಯಲ್ಲಿ ಒಂದು ಕೀರ್ತನವನ್ನು ಮಾಡಿರಿ, ಆಮೇಲೆ ನಾವು ಊರಲ್ಲಿ ತಮ್ಮ ಕೀರ್ತನೆಗಳನ್ನು ಮಾಡಿಸುತ್ತೇವೆ, ಎಂದು ಹೇಳಿದರು. ಅದಕ್ಕೆ ಹರಿದಾಸನು:—ನಾವು ಬೇಕಾದಲ್ಲಿ ಕೀರ್ತನವನ್ನು ಮಾಡುತ್ತೇವೆ; ಆದರೆ ನಮ್ಮ ಒಂದು ಕೀರ್ತನಕ್ಕೆ ನೂರು ರೂಪಾಯಿ ಕೊಡಬೇಕಾಗುವದು. ಅದಕ್ಕೆ

ಒಂದು ಪೈ ಕಡಿಮೆಯಾದರೂ ನಾವು ಕೀರ್ತನ ಮಾಡುವದಿಲ್ಲ. ನಿಮ್ಮ ಗುರುಗಳು ನೂರು ರೂಪಾಯಿಗಳನ್ನು ಕೊಡಲು ಸಿದ್ಧರಾದರೆ ಅವರ ಬಳಿಯಲ್ಲಿಯೇ ಮಾಡುವೆನು. ನಮ್ಮ ಉದ್ದೇಶವು ಹಣಗಳಿಸುವದು ಮಾತ್ರ ಇರುತ್ತದೆ; ಎಂದು ನುಡಿಯಲು, ದೀಕ್ಷಿತರ ಶಿಷ್ಯರು ವಂತಿಗೆಯಿಂದ ಹಣವನ್ನು ಕೂಡಿಸಿ, ದೀಕ್ಷಿತರ ಬಳಿಯಲ್ಲಿ ಕೀರ್ತನೆ ಮಾಡಿಸುವದನ್ನು ಗೊತ್ತುಮಾಡಿದರು. ಈ ವರ್ತಮಾನವು ದೀಕ್ಷಿತರಿಗೆ ತಿಳಿಯಲು, ಅವರು ಹರಿದಾಸನ ಗರ್ವವನ್ನು ಹೋಗಲಾಡಿಸುವ ಉಪಾಯವನ್ನು ಯೋಚಿಸತೊಡಗಿದರು.

ಇಳಿಹೊತ್ತಾಯಿತು. ಸಭಾಸ್ಥಾನವು ಶೃಂಗರಿಸಲ್ಪಟ್ಟು, ಕೀರ್ತನೆಗೆ ಆರಂಭವಾಯಿತು. ಹರಿದಾಸರು ಮಂಗಲಾಚರಣವನ್ನು ಮುಗಿಸಿದರು. ಮುಂದೆ ಅವರಿಗೆ ವಿಷಯವೇ ಜ್ಞಾಪಕಕ್ಕೆ ಬರದಂತಾಯಿತು. ಅವನು ಏನಾದರೊಂದು ಹೇಳಹತ್ತಿದನು; ಆದರೆ ಕೀರ್ತನವು ಜನರ ಮನಸಿಗೆ ಬರಲೊಲ್ಲದು. ಕೂಡಿದ ಜನರು ಬಾಯಿಗೆಬಂದಂತೆ ಮಾತಾಡಹತ್ತಿದರು. ಅಷ್ಟರಲ್ಲಿ ಶ್ರೀ ಚಿದಂಬರ ದೀಕ್ಷಿತರು ಹರಿದಾಸನ ಹಾಗು ಜನರ ಪರಿಚಯವುಳ್ಳ 'ತಿಮ್ಮ' ಎಂಬ ಒಬ್ಬ ದಡ್ಡ ಶಿರೋಮಣಿಯನ್ನು ಮುಂದಕ್ಕೆ ಕರೆದು:—ಏನೋ ತಿಮ್ಮ, ಈ ಹರಿದಾಸರ ಕೀರ್ತನೆಯು ಜನರ ಮನಸ್ಸಿಗೆ ಬರಲೊಲ್ಲದು. ನೀನು ಕೀರ್ತನೆಯನ್ನು ಮಾಡಿ, ಜನರನ್ನು ಸಂತೋಷಗೊಳಿಸುವಿಯಾ? ಎಂದು ಪ್ರಶ್ನಮಾಡಿದರು. ಎದೆ ಸೀಳಿದರೂ ಮೂರಕ್ಷರಗಳು ಇಲ್ಲದ ತಿಮ್ಮನು ದೀಕ್ಷಿತರ ಮಾತುಗಳನ್ನು ಕೇಳಿ, ಮೂಢನಾದನು. ಆತನಿಗೆ ಏನೂ ತೋಚದಂತಾಯಿತು. ಆತನು ಗುರುಚರಣಗಳಿಗೆರಗಿ:—ಪ್ರಭುವೇ, ನಾನು ದಡ್ಡನೆಂಬದು ಜಗತ್ತಿಗೇ ಗೊತ್ತಿರುವದು. ಮೇಲಾಗಿ ಕುರೂಪಿಯು; ಎದೆ ಸೀಳಿದರೆ, ಮೂರು ಅಕ್ಷರಗಳಿಲ್ಲ. ನಾನು ಕೀರ್ತನೆಯನ್ನು ಮಾಡಿ, ಜನರನ್ನು ಹೇಗೆ ಸಂತೋಷಗೊಳಿಸಲಿ? ಎಂದು ಅಂದನು. ಆಗ ದೀಕ್ಷಿತರು ಆತನನ್ನು ಸಮೀಪದಲ್ಲಿ ಕರೆದು, ಕುಳ್ಳಿರಿಸಿಕೊಂಡು, ಆತನ ಮುಖದಲ್ಲಿ ತೀರ್ಥವಿಭೂತಿಗಳನ್ನು ಹಾಕಿ ತಲೆಯಮೇಲೆ ಕೈಯಾಡಿಸಿದರು. ಆಗ ತಿಮ್ಮನ ಹೃದಯಾಕಾಶದಲ್ಲಿ ಜ್ಞಾನಸೂರ್ಯನ ಉದಯವಾಯಿತು. ತಿಮ್ಮನು ದೀಕ್ಷಿತರನ್ನು ಅಭಿವಂದಿಸಿ, ಕೀರ್ತನೆಯನ್ನು ಮಾಡಲು, ಸಿದ್ಧನಾದನು. ಯಮಕಪ್ರಾಸಬದ್ಧವಾದ ಶ್ಲೋಕಗಳನ್ನು ರಚಿಸುತ್ತ ಗಾಯನ-ವಾದನ-ಶಾಸ್ತ್ರ ಸಮೇತವಾಗಿ ಹಾಡುತ್ತ, ಶ್ರೀ ಗುರುಸ್ತವನ ಪೂರ್ವಕವಾದ ಕೀರ್ತನೆಯನ್ನು ಆರಂಭಿಸಿದನು. ಪೂರ್ವರಂಗ

ದಲ್ಲಿಯೇ ಕೀರ್ತನೆಗೆ ಒಳ್ಳೇ ಕಳೆಯೇರಿತು. ಹರಿದಾಸನ ಕೀರ್ತನೆಯನ್ನು ಹೀಯಾಳಿಸುತ್ತ ಎದ್ದು ಹೋಗಲು, ಯತ್ನಿಸುವ ಜನರು ಮತ್ತೆ ಕುಳಿತು ಕೊಂಡರು ತಿಮ್ಮನು ಹೇಳುವ ಕೀರ್ತನ ಚಾತುರ್ಯವನ್ನು ನೋಡಿ, ಎಲ್ಲ ಜನರು ಬೆರಗಾದರು. ಹರಿದಾಸನಂತೂ ಭ್ರಾಂತಿಷ್ಟನಾಗಿ ಕಲ್ಲುಕಂಬದಂತೆ ಸ್ತಬ್ಧವಾಗಿ ನಿಂತುಕೊಂಡನು. ತಿಮ್ಮನು ನವರಸಗಳಿಂದ ಯುಕ್ತವಾದ ಹಾಗು ಭಕ್ತಿಯಿಂದ ಕೂಡಿದ ಕೀರ್ತನೆಯನ್ನು ಮಾಡಿ, ಸದ್ಗುರುಗಳನ್ನೂ, ಶ್ರೋತೃಗಳನ್ನೂ ಸಂತೋಷಗೊಳಿಸಿದನು. ತಿಮ್ಮನ ಕಥಾನಿರೂಪಣಕಾಲದಲ್ಲಿ ಶೋಕರಸದ ಪ್ರಸಂಗವು ಬಂದಾಗ ಜನರು ಕಣ್ಣೀರು ಸುರಿಸುತ್ತಿದ್ದರು ಕ್ಷಣ ದಲ್ಲಿ ಮತ್ತೊಂದು ಹಾಸ್ಯರಸ ಬರಲು, ನಗುತ್ತಿದ್ದರು. ಒಟ್ಟಿಗೆ ತಿಮ್ಮನ ಕೀರ್ತನೆಯಿಂದ ಜನರ ಆನಂದಸಾಗರವು ಹೊರಸೂಸಿ ಹರಿಯಹತ್ತಿತು. ಹರಿ ದಾಸನು ಈ ಅಪೂರ್ವ ಪ್ರಸಂಗದಿಂದ ಗರ್ವರಹಿತನಾಗಿ, ಶ್ರೀ ಗುರುಗಳಿಗೆ ಶರಣುಬಂದನು.

ಆಗ ದೀಕ್ಷಿತರು:—ಯಾಕೆ ಹರಿದಾಸರೇ, ರೂಪಾಯಿಗಳು ಬೇಕೋ? ಗರ್ವವು ಮನುಷ್ಯನಿಗೆ ಯೋಗ್ಯವಲ್ಲ. ಅಮೋಘ ಸಾಮರ್ಥ್ಯವುಳ್ಳ ರಾವಣನ ಗರ್ವವಾದರೂ ಕ್ಷಣದಲ್ಲಿ ಮಣ್ಣು ಪಾಲಾಯಿತು. ಅಂಥಲ್ಲಿ ನಮ್ಮಂಥ ಪಾಮ ರರ ಪಾಡಾವುದು! ವಿದ್ಯೆಯು ವಿನಯದಿಂದಲೇ ಶೋಭಿಸುತ್ತದೆ!! ಅದಕ್ಕೆ ಸೊಕ್ಕಿನ ಗಾಳಿಯು ತಗಲಿತಂದರೆ ಅದು ನಾಶವಾಯಿತೆಂದು ತಿಳಿದುಕೊಳ್ಳಬೇಕು. ಇನ್ನು ಮೇಲೆ ನೀವು ಜಾಣರಾಗಿ ನಿಮ್ಮ ಅಮೂಲ್ಯ ವಿದ್ಯೆಯ ಬೆಳಕನ್ನು ಮಾಡಿಕೊಳ್ಳಿರಿ, ಎಂದು ಬೋಧಿಸಲು, ಹರಿದಾಸನು ಗುರುಗಳ ಅಭಿಪ್ರಾಯದಂತೆ ವರ್ತಿಸುವ ವಿಷಯವಾಗಿ ಪ್ರತಿಜ್ಞೆಯನ್ನು ಮಾಡಿ, ಗುರುಗಳಿಂದ ಆಶೀರ್ವಾದವನ್ನು ಪಡೆದು ಸಭೆಯಲ್ಲಿ ಕುಳಿತುಕೊಂಡನು ಇತ್ತ ತಿಮ್ಮನು ತನ್ನ ಕೀರ್ತನವನ್ನು ಮುಗಿಸಿ ಆರತಿಯನ್ನು ಮಾಡಿದನು. ಅಂದಿನಿಂದ ಅವನು ತಿಮ್ಮಪ್ಪ ಗೋಸಾವಿಯೆಂಬ ಹೆಸರಿನಿಂದ ಪ್ರಸಿದ್ಧನಾಗಿ, ಆಮರಣ ದೀಕ್ಷಿತರ ಸೇವೆಯನ್ನು ಮಾಡುತ್ತ ಕಾಲ ಹರಣ ಮಾಡಿದನು. ಈವೊತ್ತಿಗೂ ತಿಮ್ಮಪ್ಪ ಗೋಸಾವಿಯ ಕೀರ್ತಿಯು ಅಳಿದು ಹೋಗಿಲ್ಲ. ಗುರುಕೃಪೆಯ ಮಹಿಮೆಯು ತಿಳಿಯದು! ಬಳಿಕ ಹರಿ ದಾಸನು ಗರ್ವರಹಿತನಾಗಿ ಗುರುಕೃಪೆಯನ್ನು ಸಂಪಾದಿಸಿ, ಗುರ್ಲಹೊಸೂರಿನಲ್ಲಿ ನೂರಾರು ಕೀರ್ತನೆಗಳನ್ನು ಪುಕ್ಕಟೆಯಾಗಿ ಮಾಡಿ, ಜನರಿಂದ ಹೌದೆನಿಸಿಕೊಂಡು ತನ್ನ ದೇಶಕ್ಕೆ ಹೊರಟು ಹೋದನು.

೬ ತಕ್ಕ ಪ್ರಾಯಶ್ಚಿತ್ತ:— ಶ್ರೀ ಚಿದಂಬರದೀಕ್ಷಿತರು ಒಮ್ಮೆ ಉಪೋಷಣದ ದಿವಸ, ತಾವು ತಿಂದುಳಿದ ಖರ್ಜೂರವನ್ನು ಒಬ್ಬ ಶಿಷ್ಯನ ಕೈಯಲ್ಲಿ ಕೊಟ್ಟು ಪ್ರೇಮದಿಂದ:—ತಮ್ಮಾ, ಇದನ್ನು ಒಯ್ದು ನಮ್ಮ ದಿವಾಕರನ ಹೆಂಡತಿಯ ಕೈಯಲ್ಲಿ ಕೊಡು. ಆಕೆಯು ಮಕ್ಕಳನ್ನು ಬಯಸುತ್ತಿರುವಳು. ಇದನ್ನು ತಿನ್ನುವದರಿಂದ ಅವಳ ಇಚ್ಛೆಯು ಪೂರ್ಣವಾಗುವದು ಎಂದು ಹೇಳಿದರು. ಶಿಷ್ಯನು ದೀಕ್ಷಿತರ ಅಪ್ಪಣೆಯಂತೆ ಖರ್ಜೂರವನ್ನು ತಕೊಂಡು ಹೊರಟನು. ಮಧ್ಯಮಾರ್ಗದಲ್ಲಿ ಆತನಿಗೆ ದುರ್ಬುದ್ಧಿಯುಂಟಾಯಿತು. ಆತನು ಮನಸ್ಸಿನಲ್ಲಿ:- ಮಹಾಸ್ವಾಮಿಯ ಪ್ರಸಾದವು ದೇವತೆಗಳಿಗೂ ದುರ್ಲಭವಾದದ್ದು! ಅದು ಅನಾಯಾಸದಿಂದ ನನ್ನ ಕೈಸೇರಿರುವದು. ಆದುದರಿಂದ ಅದನ್ನು ತಿಂದುಬಿಡಬೇಕು ಎಂದು ಎಣಿಕೆ ಹಾಕಿ. ಯಾರಿಗೂ ಕಾಣದಂತೆ ಆ ಖರ್ಜೂರವನ್ನು ಭಕ್ಷಿಸಿ ದೀಕ್ಷಿತರ ಬಳಿಗೆ ಬಂದನು. ಅಂತರಜ್ಞರಾದ ಮಹಾಸ್ವಾಮಿಗಳು ಶಿಷ್ಯನ ಮುಖವನ್ನವಲೋಕಿಸಿ:—ಖರ್ಜೂರವನ್ನು ಕೊಟ್ಟು ಬಂದೆಯಾ? ಎಂದು ಪ್ರಶ್ನ ಮಾಡಲು, ಶಿಷ್ಯನು ಪಿಟ್ಟೆಂದು ಮಾತಾಡದೆ ಕೆಳಗೆ ಮೋರೆಮಾಡಿ ನಿಂತುಕೊಂಡನು. ಆಗ ದೀಕ್ಷಿತರು ಎಲ್ಲರಿಗೂ ಕೇಳಿಸುವಂತೆ:—ಎಲಾ, ತಿಳಿಗೇಡಿಯೇ, ಎಂಜಲವನ್ನು ತಿನ್ನಬಾರದು. ಅದರಿಂದ ಪಾಪಸಂಗ್ರಹವಾಗುವದು; ಬುದ್ಧಿಯು ನಾಶವಾಗುವದು. ನೀನು ಎಂಜಲವನ್ನು ತಿಂದು ಪಾಪಕ್ಕೆ ಗುರಿಯಾದೆ, ಎಂದು ಹೀಯಾಳಿಸಿದರು. ಸಭಿಕರಾದರೂ:—ಏನಪ್ಪಾ, ಗುರ್ವಾಜ್ಞೆಯು ಕ್ಷೇಮದಾಯಕವಾಗಿದ್ದು, ಅದನ್ನು ಉಲ್ಲಂಘಿಸಿ ನೀನು ಯಾವ ಲಾಭವನ್ನು ಕಟ್ಟಿಕೊಂಡೆ? ನೀನು ಎಂಜಲವನ್ನು ಯಾಕೆ ತಿಂದೆ? ಬಲಿ ಚಕ್ರವರ್ತಿಯು ಗುರ್ವಾಜ್ಞೆಯನ್ನು ಮೀರಿದ್ದರಿಂದಲೇ ರಾಜ್ಯಭ್ರಷ್ಟನಾಗಿ ಪಾತಾಳಕ್ಕೆ ಇಳಿಯಲಿಲ್ಲವೇ, ಎಂದು ಆತನನ್ನು ಜರೆದರು ಹೀಗೆ ಎಲ್ಲರೂ ನಿಂದಿಸುತ್ತಿರುವದನ್ನು ಆ ಶಿಷ್ಯನು ಕೇಳಿ, ಲಜ್ಜಿತನಾಗಿ ಮೂಢತನದಿಂದ ಮನಸ್ಸಿನಲ್ಲಿ:—ನನ್ನಿಂದ ಗುರ್ವಾಜ್ಞೋಲ್ಲಂಘನವಂತೂ ಘಟಿಸಿತು. ಇದಕ್ಕೆ ಮುಂದೆ ಗತಿಯೇನು? ಏನು ಮಾಡಿದರೆ, ಈ ಪಾಪವು ದೂರಾಗುವದು? ಈ ಅನರ್ಥಕ್ಕೆಲ್ಲ ನನ್ನ ನಾಲಿಗೆಯೇ ಕಾರಣವು. ಅದು ಖರ್ಜೂರವನ್ನು ಭಕ್ಷಿಸುವ ಇಚ್ಛೆಯನ್ನು ಮಾಡದಿದ್ದರೆ, ನನ್ನ ಕೈಯಿಂದ ಈ ಪಾಪವು ಘಟಿಸುತ್ತಿದ್ದಿಲ್ಲ; ಕಾರಣ ಮೊದಲು ನಾಲಿಗೆಯನ್ನೇ ಶಿಕ್ಷಿಸಬೇಕು, ಎಂದು ಯೋಚಿಸಿ, ತಟ್ಟನೆ ಒಂದು ಗುಪ್ತವಾದ ಸ್ಥಳದಲ್ಲಿ ಹೋಗಿ, ತೀಕ್ಷ್ಣವಾದ ಚೂರಿಯಿಂದ ತನ್ನ ನಾಲಿಗೆಯನ್ನು ಕೊಯ್ದುಕೊಂಡು,

ಅದನ್ನು ತಂದು ಗುರುಚರಣಕ್ಕರ್ಪಿಸಿದನು. ಆ ಘೋರ ಕೃತ್ಯವನ್ನು ನೋಡಿ, ಜನರು ಬೆರಗಾದರು.

ದೀಕ್ಷಿತರು ಆ ಬ್ರಾಹ್ಮಣನನ್ನು ಕುರಿತು:—ಏನೋ ಇದೆಂಥ ಅಸುರೀ ಕೃತ್ಯವನ್ನು ಮಾಡಿದಿ! ತಕ್ಕ ಪ್ರಾಯಶ್ಚಿತ್ತವನ್ನು ನಾಲಿಗೆಗೆ ಕೊಟ್ಟೆಯೋ? ಮುಂದೇನು ಗತಿ? ಎಂದು ನುಡಿದು ಆತನ ಬಾಯಿಯಲ್ಲಿ ತೀರ್ಥ-ವಿಭೂತಿ ಗಳನ್ನು ಹಾಕಿ, ತಲೆಯ ಮೇಲೆ ಕೈಯಾಡಿಸುತ್ತ ಆತನನ್ನು ಕೃಪಾದೃಷ್ಟಿಯಿಂದ ನೋಡಿದರು. ಆಗ ಆ ಶಿಷ್ಯನ ನಾಲಿಗೆಯು ಪೂರ್ವಸ್ಥಿತಿಯನ್ನು ಹೊಂದಿತು. ಆಗ ಆ ಶಿಷ್ಯನು ಗುರುಚರಣಗಳಿಗೆರಗಿದನು; ಹಾಗೂ ಪರಿಪರಿಯಿಂದ ಗುರು ಗಳನ್ನು ಸ್ತುತಿಸಿದನು, ಆತನಿಗೆ ಮುಂದೆ ಗುರುಕೃಪೆಯಿಂದ ನಿರ್ಮಲವಾದ ಜ್ಞಾನವು ಪ್ರಾಪ್ತವಾಯಿತು. ಆತನು ತನ್ನ ಶೇಷಾಯುಷ್ಯವನ್ನು ದೀಕ್ಷಿತರ ಬಳಿಯಲ್ಲಿಯೇ ಕಳೆದನು.



೭ ರಾಮೇಶ್ವರ ರೂಪಧಾರಣ:—ಒಬ್ಬ ಯತಿಯು ಕಾಶೀಯಾತ್ರೆ ಯನ್ನು ಮಾಡಿ, ಭಾಗೀರಥಿಯನ್ನು ತಕ್ಕೊಂಡು ರಾಮೇಶ್ವರಕ್ಕೆ ಹೊರಟಿದ್ದನು. ಮಾರ್ಗದಲ್ಲಿ ಆತನು ಒಂದು ಕಡೆಗೆ ಇಳುಕೊಂಡಾಗ ಅವನಿಗೆ ಒಂದು ಸ್ವಪ್ನ ಬಿತ್ತು. ಶ್ರೀ ರಾಮೇಶ್ವರನು ಸ್ವಪ್ನದಲ್ಲಿ ಬಂದು:—ನಾನು ಈಗ ರಾಮೇಶ್ವರದಲ್ಲಿ ಇರುವದಿಲ್ಲ. ಶ್ರೀ ಚಿದಂಬರ ಸ್ವರೂಪದಿಂದ ಗುರ್ಲಹೊಸೂರಲ್ಲಿ ಇರುತ್ತೇನೆ. ಕಾರಣ ನೀನು ಗುರ್ಲಹೊಸೂರಿಗೆ ಹೋಗಿ ಚಿದಂಬರ ದೀಕ್ಷಿತರ ಮೇಲೆ ಅಭಿ ಷೇಕ ಮಾಡು. ಅಂದರೆ ನನಗೆ ಮುಟ್ಟುವದು ಎಂದು ಹೇಳಿದನು. ಯತಿಯು ಜಾಗ್ರತವಾದ ಬಳಿಕ ಸ್ವಪ್ನದ ಸಂಗತಿಯನ್ನು ಯೋಚಿಸಿ, ಕಾವಡಿಯನ್ನು ತಕ್ಕೊಂಡು ನೆಟ್ಟಗೆ ಗುರ್ಲಹೊಸರಿಗೆ ಬಂದನು. ಆತನು ದೀಕ್ಷಿತರ ಸಭೆಯನ್ನು ಪ್ರವೇಶಿಸಿ ನಮಸ್ಕಾರ ಮಾಡಲುದ್ಯುಕ್ತನಾಗಲು ದೀಕ್ಷಿತರು, ಆಶ್ರಮಧರ್ಮಕ್ಕೆ ವಿರುದ್ಧವಾದ ಕಾರ್ಯವು ಘಟಿಸಬಾರದೆಂದು ತಾವೇ ಎದ್ದು, ಯತಿಯನ್ನು ಕರ ಪಿಡಿದು ತಂದು ಆಸನದಲ್ಲಿ ಕುಳ್ಳಿರಿಸಿ, ಪೂಜಿಸಿ:—ಎಲ್ಲಿಂದ ಬಂದಿರಿ? ಮುಂದೆ ಯಾವ ಕಡೆಗೆ ಪ್ರಯಾಣ ಮಾಡುವವರು; ಇಲ್ಲಿಗೆ ಬಂದ ಕಾರಣವೇನು? ಎಂದು ಪ್ರಶ್ನಮಾಡಲು,

ಯತಿಗಳು:—"ನಾವು ಕಾಶಿಯಿಂದ ಭಾಗೀರಥಿಯನ್ನು ತೆಗೆದುಕೊಂಡು ಬಂದಿರುವೆವು. ಇನ್ನು ಮೇಲೆ ಇಲ್ಲಿಂದ ಮುಂದೆ ಎಲ್ಲಿಯೂ ಹೋಗುವದಿಲ್ಲ.

ಯಾಕಂದರೆ ರಾಮೇಶ್ವರನಿಗೆ ಅಭಿಷೇಕ ಮಾಡುವ ಇಷ್ಟೆಯಿತ್ತು. ಆದರೆ ಮಾರ್ಗದಲ್ಲಿ ನಮಗೆ ರಾಮೇಶ್ವರನ ದೃಷ್ಟಾಂತವಾಯಿತು. ಪ್ರತ್ಯಕ್ಷ ರಾಮೇಶ್ವರನು ಸ್ವಪ್ನದಲ್ಲಿ ಬಂದು—ನಾನು ರಾಮೇಶ್ವರದಲ್ಲಿರುವದಿಲ್ಲ. ಗುರ್ಲಹೊಸೂರಲ್ಲಿ ಚಿದಂಬರ ಹೆಸರಿನಿಂದ ಇರುತ್ತೇನೆ. ಆತನಿಗೆ ಅಭಿಷೇಕ ಮಾಡು. ಅಂದರೆ ನನಗೆ ಮುಟ್ಟುವದು, ಎಂದು ಹೇಳಿದ್ದರಿಂದ ನಾನು ಇಲ್ಲಿಗೆ ಬಂದಿರುವೆನು. ತೀವ್ರವಾಗಿ ಅಭಿಷೇಕವನ್ನು ಮಾಡಿಸಿಕೊಳ್ಳಬೇಕು!'' ಎಂದು ಬಿನ್ನವಿಸಿದನು. ಆಗ ದೀಕ್ಷಿತರು:—ನನಗೆ ಇಬ್ಬರು ಹೆಂಡರು, ಆರು ಮಂದಿ ಮಕ್ಕಳಿರುವರು. ನಾನೆಲ್ಲಿಯ ರಾಮೇಶ್ವರನು? ನಿಮ್ಮ ಅಭಿಷೇಕವನ್ನು ಹ್ಯಾಗೆ ಸ್ವೀಕರಿಸಲಿ? ಎಂದು ಹೇಳಿದರು. ಯತಿಯು ತನ್ನ ಹಟವನ್ನು ಬಿಡಲೊಲ್ಲನು; ದೀಕ್ಷಿತರು ಒಡಂಬಡಲೊಲ್ಲರು ಕಡೆಗೆ ಯತಿಯು ಗಂಗಾಪಾತ್ರೆಯನ್ನು ನೆಲಕ್ಕಪ್ಪಳಿಸಿ ಒಡೆದು, ಪ್ರಾಣತ್ಯಾಗವನ್ನು ಮಾಡಲು ಸಿದ್ಧನಾದನು. ಆಗ ದೀಕ್ಷಿತರು ಯತಿಯ ನಿಕಟವನ್ನು ನೋಡಿ, ಅಭಿಷೇಕವನ್ನು ಮಾಡಿಸಿಕೊಳ್ಳಲಿಕ್ಕೆ ಸಿದ್ಧರಾದರು. ಯತಿಯು ಇನ್ನೊಮ್ಮೆ ಕಾಶಿಗೆ ಹೋಗಿ ಭಾಗೀರಥಿಯನ್ನು ತಂದು ಅಭಿಷೇಕ ಮಾಡುತ್ತೇನೆ, ಎನಲು, ದೀಕ್ಷಿತರು—ಯತಿಗಳೇ, ನೀವು ಕಾಶಿಗೆ ಹೋಗುವ ಕಾರಣವಿಲ್ಲ ಸಂಕಲ್ಪವನ್ನು ಮಾಡಿ, ಅಭಿಷೇಕವನ್ನಾದರೂ ಆರಂಭಿಸಿರಿ ನಿಮ್ಮ ಗಂಗಾಪಾತ್ರೆಯನ್ನು ಗಂಗಾಮಾತೆಯು ನಿಮ್ಮ ಭಕ್ತಿಗೆ ಮೆಚ್ಚಿ ನೀವಿದ್ದಲ್ಲಿಗೇ ತಂದುಕೊಡುವಳು. ಮಾತ್ರ ನಿಮ್ಮ ಅಭಿಷೇಕ ತೀರುವವರೆಗೆ ನೀವು ಕಣ್ಣುಗಳನ್ನು ತೆರೆಯಕೂಡದು ಎಂದು ನುಡಿಯಲು, ಯತಿಗಳು ಆ ಮಾತಿಗೆ ಒಪ್ಪಿಕೊಂಡರು. ಬಳಿಕ ಇಬ್ಬರೂ ಸ್ನಾನವನ್ನು ತೀರಿಸಿಕೊಂಡು ಹೋಮಶಾಲೆಗೆ ಬಂದರು ದೀಕ್ಷಿತರು ಒಂದು ದೊಡ್ಡ ಪರಾತದಲ್ಲಿ ಕುಳಿತು ಕೊಂಡರು. ಯತಿಯು ಸಂಕಲ್ಪವನ್ನು ಮಾಡಲು, ಆತನ ಮುಂಭಾಗದಲ್ಲಿ ಭೂಮಿಯು ಇಬ್ಭಾಗವಾಗಿ, ಗಂಗಾಪಾತ್ರೆಯು ಮೇಲಕ್ಕೆ ಬಂತು. ಬಳಿಕ ಯತಿಯು ಆನಂದಭರಿತನಾಗಿ ಕಣ್ಣುಮುಚ್ಚಿಕೊಂಡು ಅಭಿಷೇಕವನ್ನಾರಂಭಿಸಿದನು. ರುದ್ರಾಭಿಷೇಕದ ಒಂದು ಆವರ್ತನವು ಮುಗಿದ ಬಳಿಕ ದೀಕ್ಷಿತರಿಗೆ ಸ್ಪರ್ಶಮಾಡಲು, ಯತಿಯ ಕೈಗೆ ರಾಮೇಶ್ವರಲಿಂಗಸ್ಪರ್ಶವಾಯಿತು. ಇದರಂತೆ ಹತ್ತುಸಾರೆ ರಾಮೇಶ್ವರಲಿಂಗಸ್ಪರ್ಶವಾಗಲು, ಆತನಲ್ಲಿ ರಾಮೇಶ್ವರದರ್ಶನೇಚ್ಛೆಯು ಪ್ರಬಲವಾಗಿ ಆತನು ಕಣ್ಣುಗಳನ್ನು ತೆಗೆಯಲು, ಶ್ರೀ ರಾಮೇಶ್ವರಲಿಂಗವು ಯತಿಯ ಕಣ್ಣಿಗೆ ಬಿತ್ತು. ಅದರೊಳಗಿಂದ 'ನೀನು ಕಣ್ಣು ತೆರೆದದರಿಂದ

ನಿನ್ನ ಅಭಿಷೇಕವು ಇಲ್ಲಿಗೇ ಮುಗಿಯಿತು ’ ಎಂಬ ಶಬ್ದಗಳು ಹೊರಡುತ್ತಿರಲು, ಶ್ರೀ ರಾಮೇಶ್ವರನು ಮತ್ತೆ ಚಿದಂಬರರೂಪವನ್ನು ತಾಳಿದನು. ಆಗ ಯತಿಯು ಆನಂದಪರವಶನಾಗಿ ಮಹಾಸ್ವಾಮಿಯನ್ನು ಸ್ತುತಿಸಹತ್ತಿದನು. ಆತನ ಸ್ತೋತ್ರದಿಂದ ಶ್ರೀ ಚಿದಂಬರ ದೀಕ್ಷಿತರು ತುಷ್ಟರಾಗಿ ಯತಿಗಳಿಗೆ ಬ್ರಹ್ಮೋಪದೇಶವನ್ನು ಮಾಡಿದರು. ಅದರಿಂದ ಆತನಿಗೆ ಜೀವನ್ಮುಕ್ತಸ್ಥಿತಿಯು ಪ್ರಾಪ್ತವಾಯಿತು.

---

## ೩ನೆಯ ಪ್ರಕರಣ.

## ಪುರಶ್ಚರಣ, ದೇವತಾಸ್ಥಾಪನ ಮತ್ತು ಯಾತ್ರೆ.

ಶ್ರೀ ಚಿದಂಬರ ದೀಕ್ಷಿತರು ಗುರ್ಲಹೊಸೂರಲ್ಲಿ ಅನೇಕ ಲೀಲೆಗಳನ್ನು ತೋರಿಸಿ, ಕೆಂಗೇರಿಯಲ್ಲಿ ಗಾಯತ್ರೀಪುರಶ್ಚರಣವನ್ನು ಮಾಡಬೇಕೆಂದು ಎಲ್ಲರಿಂದೊಡಗೂಡಿ ಮುರಗೋಡಿಗೆ ಬಂದರು. ಈ ಪುರಶ್ಚರಣದ ಪ್ರಸ್ತಾಪವನ್ನು ದಿವಾಕರ ದೀಕ್ಷಿತರು ತೆಗೆದಿದ್ದರು. ಆದುದರಿಂದ ಸಾಹಿತ್ಯವನ್ನು ಮಾಡುವ ಕೆಲಸವನ್ನು ಅವರ ಕಡೆಗೇ ಒಪ್ಪಿಸಿದ್ದರು. ದಿವಾಕರದೀಕ್ಷಿತರು ಹಂದರವನ್ನು ಹಾಕಿಸಿ, ಸಾಮಗ್ರಿಯನ್ನು ಸಿದ್ಧಗೊಳಿಸಿದರು. ವೇದಿಯು ರಚಿಸಲ್ಪಟ್ಟಿತು. ಪಂಚಾಂಗಕಲ್ಪವಿಧಿಯಿಂದ ಪುರಶ್ಚರಣವನ್ನು ಆರಂಭಿಸಬೇಕೆಂದು ದಿವಾಕರ ದೀಕ್ಷಿತರು ಅಭಿಪ್ರಾಯಪಟ್ಟರು; ಆದರೆ ದೀಕ್ಷಿತರು ತ್ರಯಂಗಕಲ್ಪವಿಧಿಯಿಂದ ಪುರಶ್ಚರಣವನ್ನು ಒಳ್ಳೇ ಸಮಾರಂಭದಿಂದ ಆರಂಭಿಸಿದರು, ದಿನಾಲು ಒಂದು ಲಕ್ಷ ಜಪದಂತೆ ಇಪತ್ತುನಾಲ್ಕು ದಿವಸಗಳ ವರೆಗೆ ಸಾಗಿತು. ಮೊದಲಿನ ಏಳು ದಿವಸಗಳಲ್ಲಿ (೪೦೦೫೦೦) ಬ್ರಾಹ್ಮಣಭೋಜನವಾಯಿತು. ಪುರಶ್ಚರಣವು ಮುಗಿದ ಮೇಲಾದರೂ ಹದಿನೈದು ದಿವಸಗಳ ವರೆಗೆ ದಿನಾಲು (೬೦೦) ಜನರಂತೆ ಉಣ್ಣುತ್ತಿದ್ದರು. ಪೂರ್ಣಾಹುತಿಯ ದಿವಸ ಹತ್ತುಸಾವಿರ ಬ್ರಾಹ್ಮಣರು ಉಂಡರಂತೆ!

ಪುರಶ್ಚರಣವು ಮುಗಿದ ಬಳಿಕ ದಿವಾಕರದೀಕ್ಷಿತರು ಶ್ರೀ ಚಿದಂಬರದೀಕ್ಷಿತರ ಒಪ್ಪಿಗೆಯಿಂದ ತಮ್ಮ ಹಳೆಮನೆಯನ್ನು ಬಿಚ್ಚಿ, ವಿಸ್ತಾರವಾಗಿ ಕಟ್ಟಿಸಿದರು. ಮನೆಯ ಒಳಭಾಗದಲ್ಲಿಯೇ ಒಂದು ಬಾವಿಯನ್ನು ತೆಗೆಸಿದರು. ನೀರು ವಿಪುಲವಾಗಿ ಬಿದ್ದವು. ಆ ಮೇಲೆ ವಾಸ್ತು ಆಯಿತು. ಇಷ್ಟಾದ ಬಳಿಕ ಕೆಂಗೇರಿಯಲ್ಲಿ ಶಿವಾಲಯ (ಪಂಚಾಯತನ) ವನ್ನು ಕಟ್ಟಿಸಿದರು. ಈ ದೇವಾಲಯಕ್ಕೆ

ಮಾರ್ತಂಡೇಶ್ವರನ ದೇವಾಲಯವೆಂದು ಹೆಸರುಂಟು. ವಿಷ್ಣು, ಗಣೇಶ, ಮಾರುತಿ, ದೇವಿ, ಮತ್ತು ನಂದಿ ಎಂಬ ಐದು ಕರೇ ಕಲ್ಲಿನ ಮೂರ್ತಿಗಳಿರುತ್ತವೆ. ಮಧ್ಯದಲ್ಲಿ ಬಾಣವು (ಲಿಂಗವು) ಒಪ್ಪುತ್ತದೆ. ಈ ದೇವಾಲಯವು ಮುಗಿದ ಬಳಿಕ ಇದರ ಎಡಭಾಗಕ್ಕೆ ಶ್ರೀ ರಾಮದೇವಾಲಯವನ್ನು ಕಟ್ಟಿಸಿದರು. ಈ ಗುಡಿಯಲ್ಲಿ ರಾಮ-ಲಕ್ಷ್ಮಣ-ಸೀತಾ ಮತ್ತು ಮಾರುತಿ ಎಂಬ ನಾಲ್ಕು ಮೂರ್ತಿಗಳು ಬಿಳೇ ಸಂಗಮರವರೀ ಕಲ್ಲಿನವಿರುತ್ತವೆ

ಕಟ್ಟಡ ಕೆಲಸವು ಮುಗಿಯಲು, ದಿವಾಕರ ದೀಕ್ಷಿತರು ದೇವತಾಸ್ಥಾಪನ ಮಾಡುವ ವಿಷಯವಾಗಿ ಚಿದಂಬರ ದೀಕ್ಷಿತರಿಗೆ ಬಿನ್ನವಿಸಿದರು. ಬಳಿಕ ಒಂದು ಶುಭಮುಹೂರ್ತದ ಮೇಲೆ (ಶಕೆ ೧೭೩೨ರಲ್ಲಿ) ದೇವತಾ ಸ್ಥಾಪನಕಾರ್ಯವನ್ನು ನೆರವೇರಿಸಿದರು. ಈ ಪ್ರಸಂಗದಲ್ಲಿ ಬಹಳ ಬ್ರಾಹ್ಮಣರ ಭೋಜನವಾಯಿತು. ಬಳಿಕ ಮುರಗೋಡದೊಳಗೆ, ಸಾವಿತ್ರೀ ಮಾತೆಯ ಮಗನಾದ ಕಾಶೀನಾಥನ ಉಪನಯನವನ್ನು ಒಳ್ಳೇ ಸಡಗರದಿಂದ ಮಾಡಿದರು. ಇಷ್ಟಾದ ಬಳಿಕ ಮತ್ತೆ ಪರಿವಾರದೊಂದಿಗೆ ದೀಕ್ಷಿತರು ಗುರ್ಲಹೊಸೂರಿಗೆ ಬಂದರು. ಅಲ್ಲಿ ಸರಸ್ವತೀ ಮಾತೆಯಲ್ಲಿ ಜನಿಸಿದ ಲಕ್ಷ್ಮೀ ಎಂಬ ಮಗಳ ಮದುವೆಯನ್ನು ಮಾಡಿದರು. ಮದುವೆಯ ಕಾರ್ಯವು ಶಾಸ್ತ್ರ ಸಮ್ಮತವಾಗಿಯೂ, ಅಟ್ಟಹಾಸದಿಂದಲೂ ಜರುಗಿತು. ವರನಿಗೆ ವರದಕ್ಷಿಣೆ, ವರೋಪಚಾರಗಳನ್ನು ಚೆನ್ನಾಗಿ ಕೊಟ್ಟರು. ಈ ಮದುವೆಯು ಶಕೆ ೧೭೩೨ರಲ್ಲಿ ಆಯಿತು. ಮುಂದೆ ಮೂರುವರ್ಷಗಳು ತರುವಾಯ ಅಂದರೆ ಶಕೆ ೧೭೩೫ ಮಾಘಮಾಸದಲ್ಲಿ ಕುಟುಂಬ ಸಹಿತವಾಗಿ ಯಾತ್ರಾರ್ಥವಾಗಿ ಹೊರಟರು. ಶ್ರೀ ದೀಕ್ಷಿತರು ಮಕ್ಕಳ ಒತ್ತಾಯದಿಂದಲೇ ಹೊರಟಿದ್ದರು. ಅವರ ಮೊದಲನೆಯ ವಸ್ತಿಯು ಸತ್ತೀಗೇರಿ ಎಂಬ ಗ್ರಾಮದಲ್ಲಾಯಿತು. ಅಲ್ಲಿ ಮಕ್ಕಳಿಗೆ-ಮೊಮ್ಮಕ್ಕಳಿಗೆ ಮೈಲಿಗಳಿದ್ದ ಕಾರಣ ಎರಡು ತಿಂಗಳು ಇರಬೇಕಾಯಿತು. ಮುಂದೆ ಚೈತ್ರ ಶು|| ೧ ದಿವಸ ಅಲ್ಲಿಂದ ಮುಂದಕ್ಕೆ ಪ್ರಯಾಣವನ್ನು ಬೆಳಿಸಿದರು. ಅವರ ಸಂಗಡ ಯಾತ್ರಿಕರು ಬಹಳ ಮಂದಿ ಇದ್ದರು. ಮಾರ್ಗದೊಳಗಿನ ವ್ಯವಸ್ಥೆಯನ್ನು ದಿವಾಕರ ದೀಕ್ಷಿತರು ನೋಡುತ್ತಿದ್ದರು. ಹೀಗೆ ಮಾರ್ಗವನ್ನು ಕ್ರಮಿಸುತ್ತ ದೇವರ ಹಿಪ್ಪರಗಿಗೆ ಬಂದರು. ಸುಮುಹೂರ್ತದಲ್ಲಿ ಶ್ರೀ ಮಾರ್ತಂಡ ಭೈರವನ ದರ್ಶನವನ್ನು ತಕೊಂಡರು. ದೀಕ್ಷಿತ ಪರಿವಾರವು ದೇವಾಲಯದಲ್ಲಿ ನಿಂತುಕೊಂಡಿತ್ತು. ಉಳಿದವರು ತಮ ತಮಗೆ ಅನುಕೂಲವಾದ ಸ್ಥಳದಲ್ಲಿ ನಿಂತುಕೊಂಡರು. ಬಳಿಕ ಶ್ರೀ ಮಾರ್ತಂಡೇಶ್ವರನ

ಉತ್ಸವವನ್ನು ಆರಂಭಿಸಿದರು. ಒಂದುಲಕ್ಷ ಪ್ರದಕ್ಷಿಣೆಯನ್ನೂ, ಒಂದುಲಕ್ಷ ಗಾಯತ್ರೀ ಜಪವನ್ನೂ ಮಾಡಿಸಿದರು. ಒಂದುಕೋಟಿ ಮಾರ್ತಂಡ ಮೂಲ ಮಂತ್ರದ ಜಪವನ್ನೂ, ಅತಿರುದ್ರಾಭಿಷೇಕವನ್ನೂ ಮಾಡಿಸಿದರು ಮಾರ್ತಂಡ ಮಾಹಾತ್ಮ್ಯದ ನೂರು ಆವರ್ತನಗಳನ್ನು ಮಾಡಿಸಿದರು. ದೇವರಿಗೆ ಪಲ್ಲಕ್ಕಿ, ವಸ್ತ್ರ, ಧ್ವಜ, ಪತಾಕಿ, ಛತ್ರ-ಚಾಮರಗಳು, ಪಾದುಕೆಗಳು, ಅಮೂಲ್ಯ ಆಭರಣ ಗಳು ಈ ಪ್ರಕಾರ ಪದಾರ್ಥಗಳನ್ನು ಕೊಟ್ಟರು. ದಿನಾಲು ಮೂರುಸಾವಿರ ಬ್ರಾಹ್ಮಣರ ಭೋಜನವಾಗುತ್ತಿತ್ತು. ಊಟಕ್ಕೆ ಅನ್ನ, ಗೋದಿಯ ಪಾಯಸ, ಒಗ್ಗರಣೆಯ ಮಜ್ಜಿಗೆ ಮುಂತಾದ ಜೇನಸುಗಳನ್ನು ಮಾಡುತ್ತಿದ್ದರು. ಉತ್ಸ ವವು ೩೨ ದಿವಸಗಳ ವರೆಗೆ ನಡೆದಿತ್ತು. ಇಂತಹ ಉತ್ಸವವು ಎಂದೂ ಆಗಿದ್ದಿಲ್ಲ ವೆಂದು ಜನರು ಅನ್ನುತ್ತಿದ್ದರಂತೆ! ದೇವಾಲಯದ ಸಮೀಪದಲ್ಲಿ ಒಂದು ಕಾಲು ವೆಯು ಇತ್ತು ಅದರೊಳಗಿನ ನೀರು ಜನರಿಗೆ ಸಾಲುತ್ತಿದ್ದಿಲ್ಲ; ಅದರಿಂದ ಹಿಪ್ಪರ ಗೆಯ ಗ್ರಾಮಸ್ಥರು ನೀರಿನ ವ್ಯವಸ್ಥೆಯನ್ನು ಮಾಡಿಸಬೇಕೆಂದು ಬಹು ಪ್ರಯತ್ನ ಮಾಡಿದರು; ಆದರೆ ನೀರೇ ಬೀಳಲೊಲ್ಲವು. ಈ ಮಾತು ಶ್ರೀ ಚಿದಂಬರ ದೀಕ್ಷಿ ತರಿಗೆ ತಿಳಿಯಲು, ಅವರು ಒಂದುದಿವಸ ಶ್ರೀ ಮ್ಹಾಲಸಾಕಾಂತನ ನಿರ್ಮಾಲ್ಯ ಗಳನ್ನು ತಕ್ಕೊಂಡು ಒಂದು, ಒಂದು ಸ್ಥಳದಲ್ಲಿಟ್ಟು, ಇಲ್ಲಿ ಅಗಿಯಿರಿ; ಅಂದರೆ ವಿಪುಲವಾಗಿ ನೀರು ಬೀಳುವವು, ಎಂದು ಹೇಳಿದರು. ಆ ಸ್ಥಳದಲ್ಲಿ ಎರಡು ಮೊಳ ಭೂಮಿಯನ್ನು ಅಗಿಯಲು, ನೀರು ವಿಪುಲವಾಗಿ ಹೊರಟವು.

ಮುಂದೆ ಕೆಲವು ದಿವಸಗಳ ತರುವಾಯ ಶ್ರೀ ಮಾರ್ತಂಡಭೈರವನ ಗರ್ಭ ಗುಡಿಯಲ್ಲಿ ದರ್ಶನಕ್ಕೆ ಹೋದ ಜನರಿಗೆಲ್ಲ ಒಂದು ಭಯಂಕರವಾದ ನಾಗರಹಾವು ಕಾಣಹತ್ತಿತು. ಜನರು ಅಂಜಿ, ಅದಕ್ಕೆ ಶ್ರೀ ಚಿದಂಬರನ ಆಣೆಯನ್ನು ಹಾಕಲು ಅದು ಕಾಣದಂತಾಗುತ್ತಿತ್ತು. ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು ಜನರನ್ನು ಕರೆಯಿಸಿ:—ನೀವು ಹಾವಿಗೆ ನನ್ನ ಆಣೆಯನ್ನು ಹಾಕಬೇಡಿರಿ. ದೇವಾ ಲಯವೇ ಅದರ ಸ್ಥಾನವಿರುವದು. ಸ್ವಸ್ಥಾನದಲ್ಲಿ ಸಂಚಾರ ಮಾಡಲು ಅದಕ್ಕೆ ಪ್ರತಿಬಂಧಿಸುವದು ಯೋಗ್ಯವಲ್ಲ; ಕಾರಣ ನೀವೆಲ್ಲರು ಒಟ್ಟಾಗಿ ಹೋಗಿ, ಇದು ನಿನ್ನ ಸ್ಥಳವೇ ಇರುವದು; ಕಾರಣ ನಿನ್ನ ಮನಬಂದಂತೆ ಅಡ್ಡಾಡು. ನಾವು ಅಜ್ಞಾನದಿಂದ ನಿನಗೆ ಆಣೆಯಿಟ್ಟು ಪ್ರತಿಬಂಧ ಮಾಡಿದ್ದಕ್ಕಾಗಿ ನಮ್ಮನ್ನು ಕ್ಷ- ಮಿಸು, ಎಂದು ಬೇಡಿಕೊಳ್ಳಿರಿ; ಅಂದರೆ ಅದು ನಿಮ್ಮ ಕಣ್ಣಿಗೆ ಬೀಳಲಾರದು, ಎಂದು ಹೇಳಿದರು. ಜನರು ಅದರಂತೆ ಮಾಡಲು, ಹಾವು ಕಾಣದಂತಾಯಿತು.

ಮುಂದೆ ಕೆಲವು ದಿನಗಳ ತರವಾಯು, ಒಂದು ಚಮತ್ಕಾರವಾಯಿತು ಕಲ್ಯಾಣ ಪಟ್ಟಣದ ಒಬ್ಬ ಬ್ರಾಹ್ಮಣನು ದೀಕ್ಷಿತರ ಸೇವೆಯಲ್ಲಿದ್ದನು. ಒಂದುದಿವಸ ದೀಕ್ಷಿತರು ಆತನ ಕೈಯಲ್ಲಿ ದಿವಾಕರ ದೀಕ್ಷಿತರ ಹೆಂಡತಿಗೆ ಕೊಡುವ ಉದ್ದಿಶ್ಯವಾಗಿ, ತಮ್ಮ ಉಚ್ಛಿಷ್ಟದ ಖರ್ಜೂರವನ್ನು ಕೊಟ್ಟರು. ಆತನು ಅದನ್ನು ಮುಟ್ಟಿಸದೆ, ತಾನೇ ತಿಂದುಬಿಟ್ಟನು. ಈ ಸುದ್ದಿಯು ದೀಕ್ಷಿತರಿಗೆ ತಿಳಿಯಲು, ಅವರು ಶಿಷ್ಯನನ್ನು ವ್ಯಂಗ್ಯಾರ್ಥದಿಂದ ಬೋಧಿಸಿದರು. ಆ ಮಾತು ಆ ಬ್ರಾಹ್ಮಣನ ಮನಸಿಗೆ ಹತ್ತಿತು. ಆತನು ಒಂದು ಚೂರಿಯನ್ನು ತಕ್ಕೊಂಡು ಬಂದು, ತನ್ನ ನಾಲಿಗೆಯನ್ನು ಕೊಯ್ದುಕೊಂಡು, ಎದೆಯಲ್ಲಿ ಚೂರಿಯನ್ನು ಚುಚ್ಚಿಕೊಂಡನು. ಕೂಡಲೆ ಮೈಯೆಲ್ಲ ರಕ್ತಬಂಬಾಳವಾಯಿತು. ಆತನು ಅರವುಗೆಟ್ಟು ಭೂಮಿಯ ಮೇಲೆ ಬಿದ್ದುಕೊಂಡನು. ದಿವಾಕರ ದೀಕ್ಷಿತರು ವೈದ್ಯನನ್ನು ಕರೆಯಿಸಿ ಕೇಳಲು, ಈ ಚೂರಿಯನ್ನು ತೆಗೆದ ಕೂಡಲೆ ಈತನು ಸಾಯುತ್ತಾನೆಂದು ಹೇಳಿದನು. ಒಳಿಕ ಈ ಸುದ್ದಿಯು ಚಿದಂಬರ ದೀಕ್ಷಿತರಿಗೆ ತಿಳಿಯಲು, ಅವರು:—ಗಾಬರಿಯಾಗಬೇಡಿರಿ ಆತನ ಕೈಯಿಂದ ಮೊದಲು ಶ್ರೀ ಮಾರ್ತಂಡಭೈರವನ ಪೂಜೆಯನ್ನು ಮಾಡಿಸಿ, ಗಾಯಕ್ಕೆ ಭಂಡಾರವನ್ನು ಕಟ್ಟಿರಿ. ಐದು ದಿವಸಗಳಲ್ಲಿ ಗುಣವಾಗುವದು; ಮಾತ್ರ ಇವನ ಆಯುಷ್ಯವು ತುಂಬಿ ಬಂದಿದ್ದರಿಂದ ಯಾರಾದರೂ ಈತನ ಬದಲಾಗಿ ಮೃತರಾದರೆ ಈತನು ಜೀವಿಸುವನು, ಎಂದು ಹೇಳಲು, ದಿವಾಕರ ದೀಕ್ಷಿತರು ತಂದೆ ಹೇಳಿದಂತೆ ಬ್ರಾಹ್ಮಣನನ್ನು ಉಪಚರಿಸಲು, ಆತನಿಗೆ ಗುಣವಾಯಿತು. ಆತನಿಗೆ ಗುಣವಾದ ದಿವಸವೇ ಆತನ ಹೆಂಡತಿಯು ಸತ್ತಳೆಂದು ಮುಂದೆ ತಿಳಿದುಬಂತು. ಬ್ರಾಹ್ಮಣನ ನಾಲಿಗೆಯಾದರೂ ಮೊದಲಿನಂತೆ ನೆಟ್ಟಗಾಯಿತು. ಆತನನ್ನು ದೀಕ್ಷಿತರು ಅನುಗ್ರಹಿಸಿದರು. ಆ ಬ್ರಾಹ್ಮಣನು ತನ್ನ ಮಿಕ್ಕ ಆಯುಷ್ಯವನ್ನು ಶ್ರೀಗಳ ಬಳಿಯಲ್ಲಿಯೇ ಕಳೆದು, ಅಂತ್ಯಕಾಲಕ್ಕೆ ಸದ್ಗತಿಯನ್ನು ಹೊಂದಿದನು.

ಇಂತು ಶ್ರೀ ಚಿದಂಬರ ದೀಕ್ಷಿತರು ಅನೇಕ ಮಹಿಮೆಗಳನ್ನು ತೋರಿಸಿ, ತಮ್ಮ ಕುಲದೇವರ ಯಾತ್ರೆಯನ್ನು ತೀರಿಸಿ, ಮರಳಿ ಎಲ್ಲರಿಂದ ಕೂಡಿಕೊಂಡು ಮುರಗೋಡಿಗೆ ಬಂದರು. ಮುಂದೆ ಕೆಲವು ದಿವಸಗಳ ತರುವಾಯ ಮತ್ತೆ ಗುರ್ಲಹೊಸೂರಿಗೆ ಹೋಗಿ, ಭಕ್ತರಿಗೆ ಮಹಿಮೆಗಳನ್ನು ತೋರಹತ್ತಿದರು.

———

## ೮ನೆಯ ಪ್ರಕರಣ.

## ಶಿವಶಾಸ್ತ್ರಿಗಳೂ, ಭಕ್ತಿಮಾರ್ಗ ನಿರೂಪಣವೂ.

ಮದ್ರಾಸ ಇಲಾಖೆಯೊಳಗಿನ ಮಚ್ಛಲೀಪಟ್ಟಣದಲ್ಲಿ ಶಿವಶಾಸ್ತ್ರಿಗಳೆಂಬ ಹೆಸರಾದ ಕವಿಗಳು ಇರುತ್ತಿದ್ದರು. ಅವರು ಸುಸ್ವಭಾವಿಗಳೂ, ಶಿವಭಕ್ತರೂ ಆಗಿದ್ದರು. ಅವರ ತ್ರಿಕಾಲ ಶಿವಪೂಜೆಯು ಒಂದು ದಿವಸವೂ ತಪ್ಪಲಿಲ್ಲ ದಶ ದಿಕ್ಕುಗಳಲ್ಲಿ ಹರಡಿಕೊಂಡ ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯು ಅವರಿಗೆ ತಿಳಿಯಲು, ಪಾಪಮಯವಾದ ಕಲಿಯುಗದಲ್ಲಿ ಉಮಾಧವನು ಹೇಗೆ ಅವತಾರವನ್ನು ತಾಳಿರಬಹುದು? ಎಂದು ಅವರ ಮನಸು ಸಂಶಯಗ್ರಸ್ತವಾಯಿತು. ಆಗ ಅವರು ಶ್ರೀ ದೀಕ್ಷಿತರನ್ನು ಕಂಡು, ತಮ್ಮ ಮನಸಿನೊಳಗಿನ ಸಂಶಯವನ್ನು ಕಳಕೊಳ್ಳಬೇಕೆಂದು ಯೋಚಿಸಿ, ಶಿಷ್ಯರೊಡನೆ ಶ್ರೀ ಚಿದಂಬರ ದರ್ಶನಾರ್ಥವಾಗಿ ಹೊರಡುವದನ್ನು ಗೊತ್ತುಮಾಡಿದರು. ಆ ರಾತ್ರಿಯಲ್ಲಿ ಅವರಿಗೊಂದು ಸ್ವಪ್ನಬಿತ್ತು; ಸ್ವಪ್ನದಲ್ಲಿ ತೇಜೋರಾಶಿಯೂ, ಸರ್ವಾಂತರ್ಯಾಮಿಯೂ ಆದ ಶ್ರೀ ಚಿದಂಬರನು ಶುಭ್ರವಸ್ತ್ರ-ವಿಭೂತಿಗಳಿಂದಲೂ, ರುದ್ರಾಕ್ಷಮಾಲೆಗಳಿಂದಲೂ ಅಲಂಕೃತನಾಗಿ ಬಂದು:—ಶಾಸ್ತ್ರಿಗಳೇ, ಎಲ್ಲಿಗೆ ಹೋಗುವ ಸಿದ್ಧತೆಯನ್ನು ಮಾಡಿರುವಿರಿ? ಎಂದು ಪ್ರಶ್ನಮಾಡಿದರು ಅದಕ್ಕೆ ಶಿವಶಾಸ್ತ್ರಿಗಳು:- ಶ್ರೀ ಚಿದಂಬರ ದೀಕ್ಷಿತರ ದರ್ಶನಾರ್ಥವಾಗಿ ಗುರ್ಲಹೊಸೂರಿಗೆ ಹೋಗಬೇಕೆಂದು ಗೊತ್ತುಮಾಡಿರುವೆನೆಂದು ಹೇಳಿದರು. ಆಗ ಚಿದಂಬರನು ನಗುತ್ತ: ಏತಕ್ಕೆ ದರ್ಶನಕ್ಕಾಗಿ ಹೋಗುತ್ತೀರಿ? ಕಲಿಯುಗದಲ್ಲಿ ಉಮಾರಮಣನು ಅವತರಿಸುವ ಬಗೆಯೇನು? ವ್ಯರ್ಥವಾಗಿ ಶ್ರಮವನ್ನು ತಕ್ಕೊಳ್ಳಬೇಡಿರಿ ಮನುಷ್ಯನಿಗೆ ಸಂಶಯದಿಂದ ಸದ್ಗತಿಯು ದೊರೆಯುವದಿಲ್ಲ 'ಸಂಶಯಾತ್ಮಾ ವಿನಶ್ಯತಿ' ಎಂದು ದೊಡ್ಡವರು ಹೇಳುತ್ತಿರುವರು. ಕಾರಣ ಸಂಶಯವನ್ನು ದೂರಮಾಡಿ ಯಾವದೊಂದು ಕೆಲಸವನ್ನು ಮಾಡಬೇಕು, ಎಂದು ಶಾಸ್ತ್ರಿಗಳ ಅಂತರಂಗವನ್ನು ಬೈಲಿಗಿಟ್ಟನು. ಆಗ ಶಾಸ್ತ್ರಿಗಳು ಬೆರಗಾಗಿ ಈ ಕಲಿಯುಗದಲ್ಲಿ ಅನ್ಯರ ಅಂತರಂಗದೊಳಗಿನ ಮಾತುಗಳನ್ನು ಪರಮೇಶ್ವರನ ಹೊರತು ಯಾರೂ ಹೇಳಲರಿಯರು! ನನ್ನ ಮನಸ್ಸಿನಲ್ಲಿದ್ದದ್ದನ್ನೇ ಹೇಳಿದ್ದರಿಂದ ಇವರು ನಿಜವಾದ ಅವತಾರಿಕರಾಗಿರುವರು, ಎಂದು ಯೋಚಿಸಿ, ಭಕ್ತಿಯುತರಾಗಿ ಚಿದಂಬರಾನಂದಭರಿತರಾಗಿರಲು, ಚಿದಂಬರನು:—ಯದಾಯದಾಹಿಧರ್ಮಸ್ಯ ಗ್ಲಾನಿರ್ಭವತಿ

ಭಾರತ ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ಎಂಬ ಆ ಶ್ರೀ ಭಗವಂತನ ವಚನದಂತೆ ಈ ಕಲಿಯುಗದಲ್ಲಿ ಜನರು ಪಾಪಿಷ್ಠರಾದ್ದರಿಂದ ಅವರನ್ನುದ್ಧರಿಸಿ, ಧರ್ಮವನ್ನು ಸ್ಥಾಪಿಸುವದಕ್ಕಾಗಿ ನಾನೇ ಚಿದಂಬರ ದೀಕ್ಷಿತನಾಗಿ ಅವತರಿಸಿರುವೆನು" ಎಂದು ಹೇಳಿದನು. ಅಷ್ಟರಲ್ಲಿ ಶಾಸ್ತ್ರಿಗಳು ಎಚ್ಚತ್ತರು. ಅವರು ಸ್ವಪ್ನದ ಸಂಗತಿಯನ್ನು ವಿಚಾರಿಸುತ್ತ ಆನಂದಮಗ್ನರಾದರು. ಅವರ ಚಿತ್ತವು ಶ್ರೀ ಚಿದಂಬರ ದರ್ಶನೋತ್ಸುಕವಾಯಿತು. ಬೆಳಗಾಗುತ್ತಲೇ ಅವರು ಸ್ವಪ್ನದಲ್ಲಿ ಕಂಡ ರೂಪವನ್ನೇ ಪ್ರತ್ಯಕ್ಷವಾಗಿ ನೋಡಬೇಕೆಂದು ಪ್ರಯಾಣವನ್ನು ಬೆಳಿಸಿ, ಕೆಲವು ದಿವಸಗಳಲ್ಲಿ ಗುರುಪುರಕ್ಕೆ (ಗುರ್ಲಹೊಸೂರಿಗೆ) ಬಂದು ತಲ್ಪಿದರು. ಸ್ವಪ್ನದೊಳಗಿನ ಮೂರ್ತಿಯೇ ಅಲ್ಲಿ ಅವರ ಕಣ್ಣಿಗೆ ಬಿತ್ತು. ಆಗ ಅವರು ಹರ್ಷಿತರಾಗಿ ಸಾಷ್ಟಾಂಗ ನಮಸ್ಕಾರವನ್ನು ಹಾಕಿ, ಕೈಜೋಡಿಸಿಕೊಂಡು ಸ್ತೋತ್ರವನ್ನು ಮಾಡಲಾರಂಭಿಸಿದರು:—ಎಲೈ ಉಮಾರಮಣನೇ, ಗಿರಿಜಾಪತಿಯೇ, ಮೃತ್ಯುಂಜಯನೇ ನನ್ನ ಸಪ್ತ ಜನ್ಮಗಳ ಸುಕೃತವು ಫಲಿಸಿತು; ನಾಲ್ವತ್ತೆರಡು ಕುಲಗಳ ಉದ್ಧಾರವಾಯಿತು. ಯೋಗಿಗಳಿಗೂ ದುರ್ಲಭವಾದ ದರ್ಶನವು ನನಗೆ ಅನಾಯಾಸದಿಂದ ಆಯಿತು. ಎಲೈ ಭಕ್ತಾಭಿಮಾನಿಯೇ, ಭವಸಂತಾಪಹಾರಕನೇ, ನೀನೇ ಸಂಸಾರ ಸಮುದ್ರದಿಂದ ಭಕ್ತರನ್ನು ದಾಟಿಸುತ್ತೀ; ದೀನನಾಥನೇ, ನೀನು ದೀನರ ಜೀವದ ಗೆಳೆಯನಾಗಿರುವಿ. ದಯಾಳುವೆ, ಲೋಕೋದ್ಧಾರಾರ್ಥವಾಗಿ ಅವತಾರವನ್ನು ತಾಳಿ, ಶರಣಾಗತರ ದುಃಖಗಳನ್ನು ದೂರಮಾಡುತ್ತಿರುವಿ? ಎಲೈ ಚಿದಂಬರನೇ, ಪ್ರಸನ್ನನಾಗಿ ನನ್ನ ಮೇಲೆ ಕೃಪೆಮಾಡು. ಸರ್ವೇಶನೇ ಸ್ವಪ್ನದಲ್ಲಿ ಪ್ರಸನ್ನನಾಗಿದ್ದು, ಈಗ ಏಕೆ ಆಲಸ್ಯವನ್ನು ಮಾಡುತ್ತಿರುವಿ? ಪ್ರಸಾದವನ್ನು ಕೊಟ್ಟು, ನನ್ನ ಆಶೆಯನ್ನು ಪೂರ್ಣಮಾಡು. ನಾನು ಅಪರಾಧಿಯು; ಪಾಪಿಯು; ಗರ್ವಿಷ್ಠನು. ಅಂತೇ ನಿನ್ನ ವಿಷಯದಲ್ಲಿ ಸಂಶಯವುಳ್ಳವನಾದೆನು; ಆದರೂ ಭಕ್ತನೆಂದು ಭಾವಿಸಿ, ನನ್ನನ್ನು ಕೃಪಾದೃಷ್ಟಿಯಿಂದ ಅವಲೋಕಿಸು. ಹಾದೀ ತಪ್ಪಿ ಅಡವೀ ಬಿದ್ದು, ಅಡ್ಡಾಡುತ್ತಿರುವ ನನಗೆ ನೀನು ಮಾರ್ಗದರ್ಶಕನಂತೆ ದೊರೆತಿರುತ್ತಿ! ಆದುದರಿಂದ ಸ್ವಾಮಿಯೇ, ನನಗೆ ಅಭಯವನ್ನು ಕೊಡು. ನನ್ನ ಸಂಶಯವನ್ನು ದೂರಮಾಡುವ ಸಾಕ್ಷಾತ್ ಸಾಂಬನು ನೀನೇ ಇರುತ್ತೀ. ನಾನು ನಿನಗೆ ಅನನ್ಯಭಾವದಿಂದ ಶರಣುಬಂದಿದ್ದೇನೆ. ನನ್ನ ಮಾಯಾಪಾಶವನ್ನು ಹರಿದು, ನನ್ನನ್ನು ಮುಕ್ತನನ್ನಾಗಿಮಾಡು!

ಶ್ರೀ ಚಿದಂಬರನು, ಶಿವಶಾಸ್ತ್ರಿಗಳು ಮಾಡಿದ ಈ ಪ್ರೇಮುಲವಾದ ಸ್ತೋತ್ರವನ್ನು ಕೇಳಿ, ಸಂತುಷ್ಟನಾಗಿ:—ತಮ್ಮ ಗ್ರಾಮವು ಯಾವದು? ಎಲ್ಲಿಗೆ ಹೋಗುವಿರಿ? ಇಲ್ಲಿಗೆ ಒಂದ ಕಾರಣವೇನು? ಎಂದು ಪ್ರಶ್ನಗಳನ್ನು ಮಾಡಿದನು. ಆಗ ಶಾಸ್ತ್ರಿಗಳು:—ತಾವು ಸರ್ವಜ್ಞರಿದ್ದು, ಅಜ್ಞಾನಿಯಂತೆ ಪ್ರಶ್ನಗಳನ್ನು ಕೇಳುವಿರಲ್ಲ? ನನ್ನನ್ನು ವಂಚಿಸಬೇಡಿರಿ. ತಾವು ಕೇಳುವದರಿಂದ ತಮಗೆ ನನ್ನ ವೃತ್ತಾಂತವನ್ನು ಹೇಳುತ್ತೇನೆ. ನಾನು ಮಚ್ಛಲೀಪಟ್ಟಣದವನು. ತಮ್ಮ ಚರಣಸೇವೆಗಾಗಿ ಇಲ್ಲಿಗೆ ಬಂದಿರುವೆನು. ಮುಂದೆ ಎಲ್ಲಿಯೂ ಹೋಗುವ ವಿಚಾರವಿಲ್ಲ. ಹಸಿದವನಿಗೆ ಅಮೃತವೂ, ತೃಷಿತನಿಗೆ ಶೀತಲಜಲವೂ ದೊರೆತರೆ, ಆತನು ಮುಂದೆ ಏತಕ್ಕೆ ಹೋಗುವನು! ನನ್ನ ಸ್ಥಿತಿಯು ಹಾಗೆಯೇ ಆಗಿರುವದು. ನಾನು ಇನ್ನು ಮೇಲೆ ಈ ಚರಣಗಳನ್ನು ಬಿಟ್ಟು ಎಲ್ಲಿಯೂ ಹೋಗಲಾರೆ! ತಮ್ಮ ಚರಣಕಮಲದೊಳಗಿನ ಮಕರಂದವನ್ನು ಸೇವಿಸುತ್ತ, ಇಲ್ಲಿಯೇ ಇರುವೆನು!! ಎಂದು ಹೇಳಿಕೊಳ್ಳಲು, ದೀಕ್ಷಿತರು:—ಶಾಸ್ತ್ರಿಗಳೇ, ನನ್ನ ಸ್ತೋತ್ರವನ್ನು ಬಿಟ್ಟು, ಈಶ್ವರನ ಸ್ತೋತ್ರವನ್ನು ಮಾಡಿರಿ, ಅಂದರೆ ಆತನು ನಿಮ್ಮ ಬಯಕೆಗಳನ್ನು ಪೂರ್ಣಮಾಡುವನು! ನಾನೂ ನಿಮ್ಮಂತೆಯೇ ಮನುಷ್ಯನಿರುವೆನು. ನಾನು ನಿಮಗೆ ಏನು ಕೊಡಲಿ? ಎಂದು ನುಡಿಯಲು, ಶಾಸ್ತ್ರಿಗಳು ಖಿನ್ನರಾದರು. ಅದನ್ನು ನೋಡಿ, ದೀಕ್ಷಿತರು ಅವರನ್ನು ಏಕಾಂತದಲ್ಲಿ ಕರೆದೊಯ್ದು:—ಶಾಸ್ತ್ರಿಗಳೇ, ಚಿಂತಿಸಬೇಡಿರಿ. ನಾನೇ ಶಂಕರನಾಗಿರುವೆನು ನೀವೇ ನನ್ನ ಪ್ರಿಯಭಕ್ತರು. ಹಲವು ಬಗೆಯಿಂದ ನನ್ನ ಸ್ತೋತ್ರವನ್ನು ಮಾಡಿರಿ. ನಿಮ್ಮ ಬಯಕೆಗಳು ಪೂರ್ಣವಾಗುವವು. ಎಂದು ಹೇಳಲು, ಶಾಸ್ತ್ರಿಗಳು ಪರಮ ಆನಂದವುಳ್ಳವರಾಗಿ, ದೀಕ್ಷಿತರ ಚರಣಕ್ಕೆರಗಿದರು. ದೀಕ್ಷಿತರು ಅವರನ್ನು ಆಶೀರ್ವದಿಸಿ, ಅನುಷ್ಠಾನಕ್ಕಾಗಿ ಹೋಮಶಾಲೆಗೆ ಹೊರಟು ಹೋದರು. ಇತ್ತ ಶಾಸ್ತ್ರಿಗಳು ದೀಕ್ಷಿತರಾಜ್ಞೆಯಂತೆ ಒಂದು «ಪ್ರೌಢಾರ್ಥವುಳ್ಳ» ಹಾಗು ಬಗೆಬಗೆಯ ವೃತ್ತಗಳಿಂದ ಕೂಡಿದ 'ಭಕ್ತಾನಂದಲಹರೀ' ಎಂಬ ಸ್ತೋತ್ರವನ್ನು ರಚಿಸಿದರು. ಮರುದಿವಸ ಅದನ್ನು ದೀಕ್ಷಿತರಿಗೆ ಓದಿ ತೋರಿಸಬೇಕೆಂದು ಯೋಚಿಸಿ, ಸಭೆಯಲ್ಲಿ ಬಂದು ಕುಳಿತರು. ಶ್ರೀ ಚಿದಂಬರ ದೀಕ್ಷಿತರು ಸುಖಾಸನದಲ್ಲಿ ಶೋಭಿಸುತ್ತಿದ್ದರು. ಸುತ್ತಲು ವಿದ್ವಜ್ಜನರು ಕುಳಿತುಕೊಂಡಿದ್ದರು. ಶಾಸ್ತ್ರಿಗಳು ಭಕ್ತಿಯುತರಾಗಿ ಶ್ರೀ ಚಿದಂಬರ ಚರಣಕ್ಕೆರಗಿ, ಮನಸ್ಸಿನಲ್ಲಿ ಮೂರ್ತಿಯನ್ನು ಧ್ಯಾನಿಸುತ್ತ, ಕೈ ಮುಗಿದು ಸ್ತೋತ್ರವನ್ನು ಅನ್ನಲಾರಂಭಿಸಿದರು. ಸಭಿಕರು ಅದನ್ನು ಆನಂದದಿಂದ ಕೇಳು

ತ್ತಿರಲು, ಮಧ್ಯದಲ್ಲಿಯೇ ದೀಕ್ಷಿತರು:—ಶಾಸ್ತ್ರಿಗಳೇ, ಇದೇನು ಮಾಡಿದಿರಿ? ನಾನು ನಿಮಗೆ ಶಿವಸ್ತುತಿಯನ್ನು ಮಾಡಿರೆಂದು ಹೇಳಿರಲು, ನೀವು ನನ್ನ ಸ್ತೋತ್ರವನ್ನು ಮಾಡಿ ವ್ಯರ್ಥವಾಗಿ ಶ್ರಮಪಟ್ಟಿರಲ್ಲ? ಇನ್ನು ಮೇಲೆ ಸಾಕುಮಾಡಿರಿ, ಎಂದು ನುಡಿಯಲು, ಶಾಸ್ತ್ರಿಗಳು:—ನಾನಂತೂ ಶಿವಸ್ತುತಿಯನ್ನೇ ಮಾಡಿರುವೆನು. ಇದಕ್ಕೆ ನರಸ್ತುತಿಯೆಂದು ಅನ್ನಲಿಕ್ಕೆ ಬರುವಂತಿಲ್ಲ. ಈ ವಿಷಯವಾಗಿ ನಾನೊಂದು ಪ್ರತಿಜ್ಞೆಯನ್ನು ಮಾಡುತ್ತೇನೆ. ನನ್ನ ಅಂಗೈಯಲ್ಲಿ ಕಪ್ಪುರವನ್ನು ಹಚ್ಚಿಕೊಂಡು ಈ ಸ್ತೋತ್ರವನ್ನು ಅನ್ನುತ್ತೇನೆ. ಇದು ಶಿವಸ್ತುತಿಯಾಗಿದ್ದರೆ ನನಗೆ ಅಗ್ನಿಬಾಧೆಯು ಆಗದೆ ನನ್ನ ಪ್ರತಿಜ್ಞೆಯು ಈಡೇರುವದು, ಎಂದು ನುಡಿದು, ಅಂಗೈಯಲ್ಲಿ ಕಪ್ಪುರವನ್ನು ಹಚ್ಚಿಕೊಂಡು ಸ್ತೋತ್ರವನ್ನು ಅನ್ನಲಾರಂಭಿಸಿದರು. ಅವರು ಭಕ್ತಿಪರವಶರಾದರು. ಅವರ ಕಣ್ಣೊಳಗಿಂದ ಆನಂದ ಬಾಷ್ಪಗಳು ಉದುರಹತ್ತಿದವು. ಸ್ತೋತ್ರವು ತೀರುವ ವರೆಗೆ ಕೈಯಲ್ಲಿ ಕಪ್ಪುರವು ಅದ್ಭುತವಾಗಿ ಉರಿಯುತ್ತಲೇ ಇತ್ತು. ಅದರಿಂದ ಶಾಸ್ತ್ರಿಗಳಿಗೆ ಸ್ವಲ್ಪಾದರೂ ಬಾಧೆಯಾಗಲಿಲ್ಲ. ಈ ಅದ್ಭುತವನ್ನು ಕಂಡು ಸಭಿಕರಲ್ಲಿ ಕೆಲವರು ಚಿದಂಬರನಿಗೆ ಸಾಷ್ಟಾಂಗವೆರಗಿದರು. ಕೆಲವರು ಆನಂದದಿಂದ ಕುಣಿಯಹತ್ತಿದರು. ಹಲವರು ಜಯಜಯಕಾರವನ್ನು ಮಾಡಹತ್ತಿದರು. ಚಿದಂಬರನು ಪ್ರತ್ಯಕ್ಷ ಈಶ್ವರನಿರುತ್ತಾನೆಂದು ಎಲ್ಲರ ಮನವರಿಕೆಯಾಯಿತು. ಎಲ್ಲರೂ ಪುಲಿಕಿತರಾದರು. ಹಾಗು ಭಕ್ತಿರಸಾರ್ಣವದಲ್ಲಿ ಈಸಾಡಹತ್ತಿದರು. ಶ್ರೀ ಚಿದಂಬರದೀಕ್ಷಿತರು ಭಕ್ತನ ನಿಕಟವಾದ ಭಕ್ತಿಯನ್ನು ನೋಡಿ, ಶಾಸ್ತ್ರಿಗಳನ್ನು ಹಿಡಿದೆತ್ತಿ, ವರದಹಸ್ತದಿಂದ ಅವರ ಮೈ ಮೇಲೆ ಕೈಯಾಡಿಸುತ್ತ:—ಭಕ್ತಶಿಖಾಮಣಿಯೇ, ಸಾಕು ಸಾಕು ಎಷ್ಟು ಸಾಹಸದ ಕೆಲಸವನ್ನು ಮಾಡಿದೆ! ನೀನು ನುಡಿದಂತೆ ನೀನು ಮಾಡಿದ ಸ್ತೋತ್ರವು ಶಿವಸ್ತೋತ್ರವೇ ಆಗಿರುವದು. ನಾನು ನಿನ್ನ ಭಕ್ತಿಗೊಲಿದು ಪ್ರಸನ್ನನಾಗಿದ್ದೇನೆ. ಬೇಕಾದಂಥ ವರಗಳನ್ನು ಬೇಡಿಕೊಳ್ಳು. ಅವು ಅಸಾಧ್ಯವಾಗಿದ್ದರೂ ಕೊಡುವೆನು. ಎಂದು ನುಡಿದು, ಶಾಸ್ತ್ರಿಗಳ ಕೈಯೊಳಗಣ ಕಪ್ಪುರವನ್ನು ಆರಿಸಿದರು. ಶಾಸ್ತ್ರಿಗಳ ಕೈಗೆ ಸ್ವಲ್ಪಾದರೂ ಅಗ್ನಿಬಾಧೆಯಾಗಿದ್ದಿಲ್ಲ.

ಶಿವಶಾಸ್ತ್ರಿಗಳು ಸದ್ಗುರುವಿನ ವಚನಗಳನ್ನು ಕೇಳಿ, ಚರಣಕ್ಕೆರಗಿ:—ನನಗೆ ಯಾವ ವಿಷಯದಲ್ಲಿಯೂ ಆಶೆಯಿಲ್ಲ. ನಿನ್ನ ದರ್ಶನದಿಂದ ನನ್ನ ಸರ್ವ ಬಯಕೆಗಳು ಪೂರ್ಣವಾಗಿರುವವು. ಕೊಡುತ್ತಿದರೆ, ನಿನ್ನಲ್ಲಿ ಪ್ರೇಮಲವಾದ

ಭಕ್ತಿಯು ನೆಲೆಗೊಳ್ಳುವಂತೆ ವರವನ್ನು ದಯಪಾಲಿಸು; ಮತ್ತು ನಿನ್ನ ಭಕ್ತಿ ಮಾರ್ಗವನ್ನು ಅರುಹು. ಇದೇ ನನ್ನ ಬಯಕೆಯು! ಎಂದು ಬೇಡಿಕೊಂಡರು. ಆಗ ದೀಕ್ಷಿತರು ಭಕ್ತಿಮಾರ್ಗದ ನಿರೂಪಣವನ್ನು ಮಾಡಹತ್ತಿದರು.

ಮೊದಲು ವೇದೋಕ್ತ ಕರ್ಮಗಳನ್ನಾಚರಿಸಿ, ಅವುಗಳನ್ನು ನನಗೆ ಅರ್ಪಣ ಮಾಡಬೇಕು. ಯಾವಾಗಲೂ ನನ್ನ ನಾಮಸಂಕೀರ್ತನವನ್ನು ಮಾಡಬೇಕು; ಪ್ರೀತಿಯಿಂದ ನನ್ನನ್ನು ಪೂಜಿಸಬೇಕು. ಎಲ್ಲರಲ್ಲಿಯೂ ದೇವರು ಇರುತ್ತಾನೆಂದು ಬಾವಿಸಿ, ಲೀನವೃತ್ತಿಯಿಂದ ನಡೆದುಕೊಳ್ಳಬೇಕು. ( ಭಕ್ತಿಯು ಹೆಚ್ಚುವದಕ್ಕೆ ಇಪ್ಪತ್ತನಾಲ್ಕು ಗುಣಗಳು ಬೇಕಾಗುವವು. ಅವು ಯಾವವೆಂದರೆ (೧) ಅನ್ಯರಿಂದ ಎಂದೆಂದೂ ಮರ್ಯಾದೆಯನ್ನು ಇಚ್ಛಿಸ ಕೂಡದು; ತಾನು ಹೊತ್ತು ನೋಡಿ, ಎರಡನೆಯವರಿಗೆ ಅವಶ್ಯವಾಗಿ ತಕ್ಕ ಮಾನವನ್ನು ಮಾಡಬೇಕು. (೨) ಸ್ವಪ್ರತಿಷ್ಠೆಗಾಗಿ ಡಾಂಭಿಕತನದ ಕೆಲಸವನ್ನು ಮಾಡಲಿಕ್ಕಾಗದು (೩)ದೇವ ಭಕ್ತನು ತಾನು ಮಾಡಿದ ಕಾರ್ಯವನ್ನು ಲೌಕಿಕಾರ್ಥವಾಗಿ ಅನ್ಯರ ಮುಂದೆ ಹೇಳಬಾರದು. (೪) ಸಿಟ್ಟು ಬಿಟ್ಟುಬಿಡಬೇಕು. (೫) ಎಲ್ಲರೊಡನೆ ಆರ್ಜವ ವೃತ್ತಿಯಿಂದ ನಡೆಯಬೇಕು. (೬) ಪ್ರತಿಯೊಂದು ಕೆಲಸದಲ್ಲಿ ದಕ್ಷತೆಯಿರಬೇಕು. (೭) ಮನಸ್ಸು ನಿರ್ಮಲವಿರುವಂತೆ ಎಚ್ಚರ ಪಡಬೇಕು. (೮)ಪ್ರಾಣಿಮಾತ್ರರಲ್ಲಿ ಈಶ್ವರಭಾವನೆಯನ್ನಿಡಬೇಕು (೯) ಪ್ರಾಣಿಗಳ ವಿಷಯವಾಗಿ ಅಂತಃಕರಣವಿರಬೇಕು. (೧೦) ಹೊರಗೂ ಒಳಗೂ ನಿರ್ಮಲವಾಗಿರಬೇಕು. (೧೧) ಸತ್ಯವು ಉತ್ತಮವಾದ ವ್ರತವಿರುವದರಿಂದ ಅದನ್ನು ಪಾಲಿಸಬೇಕು. (೧೨) ಇಂದ್ರಿಯವನ್ನು ತಡೆಯುವದರಲ್ಲಿ ಬುದ್ಧಿಯನ್ನು ವೆಚ್ಚಮಾಡಬೇಕು. (೧೩) ಪ್ರಾಣಹಿಂಸೆಯು ಕೆಲಸದ್ದಲ್ಲ. (೧೪) ಅನ್ಯರ ಅಪರಾಧಗಳನ್ನು ಕ್ಷಮಿಸಬೇಕು. (೧೫) ನಿಂದಕರಿಗೂ ಕಲ್ಯಾಣವನ್ನು ಬಯಸುತ್ತಿರಬೇಕು. (೧೬) ಅಂತರಂಗದ ಶಾಂತಿಯನ್ನು ಚಲಿಸಗೊಡಬಾರದು. (೧೭) ಪರಸ್ತ್ರೀಸಂಗವನ್ನು ಮಾಡಬಾರದು. (೧೮) ಸಾಧುಸಂಗವನ್ನು ಆದರದಿಂದ ಮಾಡಬೇಕು. (೧೯) ಏಕಾಂತ ವಾಸಮಾಡುವದು. (೨೦) ನನ್ನ ರೂಪವನ್ನು ಯಾವಾಗಲೂ ಧ್ಯಾನಿಸಬೇಕು. (೨೧) ನನಗೆ ದಾಸ್ಯಭಾವದಿಂದ ದೇಹವನ್ನು ಅರ್ಪಿಸಬೇಕು. (೨೨) ಗುರು ಭಕ್ತಿಗೆ ತಪ್ಪಬಾರದು. (೨೩) ನನ್ನ ಸೇವೆಯ ಉದ್ದೇಶದಿಂದಲೇ ಇಂದ್ರಿಯಗಳ ವ್ಯಾಪಾರವನ್ನು ಸಾಗಿಸಬೇಕು. (೨೪) ಆಲಸ್ಯವನ್ನು ದೇಶಾಂತರಕ್ಕೆ ಅಟ್ಟಿಬಿಡಬೇಕು. ಇಂತು ಇಪ್ಪತ್ತನಾಲ್ಕು ಗುಣಗಳನ್ನು ಯಾವನು ನಿಯಮದಿಂದ

ಅಭ್ಯಾಸಿಸುವನೋ, ಆತನ ಹೃದಯದಲ್ಲಿ ನಾನು ಖಂಡಿತವಾಗಿ ಮನೆಮಾಡಿ ಕೊಂಡಿರುತ್ತೇನೆ ಯೋಗಿಗಳು ಬಹುಕಾಲ ಕಷ್ಟಪಟ್ಟಾಗ್ಯೂ ನಾನು ಅವರ ದೃಷ್ಟಿಗೆ ಬೀಳುವದಿಲ್ಲ. ನನ್ನನ್ನು ದೊರಕಿಸಲಿಚ್ಛಿಸುವವನು ಐದುಗುಣಗಳುಳ್ಳವ ನಾಗಿರಬೇಕು. ಅವು ಯಾವವೆಂದರೆ:—(೧)ನಿರಪೇಕ್ಷ ಬುದ್ಧಿಯು ಅಂದರೆ ನನ್ನ ಹೊರತು ಅನ್ಯವಿಷಯಗಳನ್ನು ವಮನವೆಂದು ತಿಳಿಯಬೇಕು. (೨) ಮನನ ಶೀಲತ್ವವು ಅಂದರೆ ಯಾವಾಗಲೂ ನನ್ನ ವಿಚಾರವನ್ನೇ ಮಾಡುತ್ತಿರಬೇಕು. (೩)ಸಮಾಧಾನವು ಅಂದರೆ ಎಂತಹ ಕಠಿಣ ಪ್ರಸಂಗ ಬಂದರೂ ದುಃಖವನ್ನು ಎಣಿಸಲಿಕ್ಕಾಗದು. (೪) ನಿರ್ವೈರತ್ವವು. ಅಂದರೆ ಎರಡನೆಯವರ ಗುಣದೋಷ ಗಳ ವಿಚಾರವನ್ನು ಮಾಡಲಾಗದು. (೫) ಸಮದರ್ಶನವು; ಅಂದರೆ ಭೂತ ಮಾತ್ರಗಳಲ್ಲಿ ಭೇದವನ್ನೆಣಿಸದೆ ಬ್ರಹ್ಮಭಾವನೆಯನ್ನಿಡಬೇಕು. ಈ ಐದು ಗುಣ ಗಳುಳ್ಳ ಪುರುಷನು ದೊರೆಯುವದು ದುರ್ಲಭವು. ನಾನು ಭಕ್ತರ ಸಲುವಾಗಿ ಯೇ ಅವತಾರವನ್ನು ತಾಳುತ್ತೇನೆ. ಧರ್ಮವನ್ನು ಸ್ಥಾಪಿಸುತ್ತೇನೆ.. ಅಸಂ ಗನೂ, ಸ್ವಾನಂದರೂಪದಲ್ಲಿ ಸಂತುಷ್ಟನೂ, ಅದ್ವಯನೂ ಆದ ನಾನೇ ಭಕ್ತ ನೆಂತಲೂ, ಈಶ್ವರನೆಂತಲೂ ಎರಡು ವಿಧವಾಗಿರುವೆನು. ಆದುದರಿಂದ ನಿಷ್ಕಾ ಮಕರ್ಮಗಳನ್ನು ಮಾಡುವ ಭಕ್ತನು ಬ್ರಹ್ಮಾದಿ ದೇವತೆಗಳಿಗಿಂತಲೂ ನನಗೆ ಪ್ರಿಯನಾಗುತ್ತಾನೆ ನಾನು ನನ್ನನ್ನು ಹೊಂದಿದವನ ದುಃಖಗಳನ್ನು ಖಂಡಿತ ವಾಗಿ ದೂರಮಾಡುತ್ತೇನೆ. ಅವನ ಎಲ್ಲ ಭಾರವನ್ನು ವಹಿಸಿ ಆತನನ್ನು ಹಗ ಲಿರುಳು ರಕ್ಷಿಸುತ್ತೇನೆ ಭಕ್ತನ ಕರುಣಾಸ್ವರವನ್ನು ಕೇಳಿದ ಕೂಡಲೆ ನನ್ನ ಮೈಮೇಲೆ ಎಚ್ಚರವೇ ಉಳಿಯುವದಿಲ್ಲ. ಮೂರು ಮೂರು ಸಾರೆ ನಾನು ಸಾರೆ ಹೇಳುವದೇನಂದರೆ, ನರದೇಹವು ದುರ್ಲಭವೆಂದು ತಿಳಿದು, ಸರ್ವ ವಿಷಯ ಗಳ ತ್ಯಾಗವನ್ನು ಮಾಡಿ, ಯಾವನು ನನ್ನನ್ನು ನಿರಂತರದಲ್ಲಿ ಭಜಿಸುತ್ತಾನೋ, ಆತನ ಯೋಗಕ್ಷೇಮವನ್ನು ನಾನು ವಹಿಸುತ್ತೇನೆ. ಈ ಮಾತು ಸತ್ಯವು! ಸತ್ಯವು!! ಸತ್ಯವು!!! ಬಹಳ ಹೇಳುವದರಿಂದೇನು? ಭಕ್ತನ ಹೊರತು ನನಗೆ ಹೊತ್ತು ಹೋಗುವದಿಲ್ಲ. ಆತನ ಹೊರತು ಈ ಜಗತ್ತು ನನಗೆ ಶೂನ್ಯವಾಗಿ ತೋರುತ್ತದೆ. ನಾನು ಭಕ್ತಾಧೀನನು. ಭಕ್ತರ ಸಲುವಾಗಿಯೇ ನಾನು ಅವ ತಾರವನ್ನು ತಾಳುವೆನು. ಭಕ್ತರ ಬಯಕೆಗಳನ್ನು ಪೂರ್ಣಮಾಡುವದಕ್ಕಾ ಗಿಯೇ ಬೇಕಾದಂಥ ಕೆಲಸಗಳನ್ನು ಮಾಡಲು ಹಿಂದೆ-ಮುಂದೆ ನೋಡುವದಿಲ್ಲ. ನಾಮದೇವನ ಎಂಜಲವನ್ನು ತಿಂದೆನು. ಜನಾಬಾಯಿಯ ಸಂಗಡ ಬೀಸಿದೆನು.

ಅರ್ಜುನನ ಕುದುರೆಗಳ ವೈಯನ್ನು ತಿಕ್ಕಿದೆನು. ಏಕನಾಥನ ಮನೆಯಲ್ಲಿ ಆಳಾಗಿ ದುಡಿದೆನು.

ಈ ಪ್ರಕಾರ ಹಲವು ಭಕ್ತರಲ್ಲಿ ಬಗೆಬಗೆಯ ಕೆಲಸಗಳನ್ನು ಮಾಡಿರುವೆನು. ಆದುದರಿಂದ ಭಕ್ತಶ್ರೇಷ್ಠನಾದ ಶಿವಪಂಡಿತನೇ, ನನ್ನ ಮಾತನ್ನು ಮನಸ್ಸಿನಲ್ಲಿ ದೃಢವಾಗಿ ನಂಬಿ, ಸ್ವತಃ ಭಕ್ತಿ ಮಾರ್ಗಾನುವರ್ತಿಯಾಗಿ, ಅನ್ಯರನ್ನು ಅದರಂತೆ ಬೋಧಿಸು. ನೀನು ನನ್ನ ಭಕ್ತನಾದ್ದರಿಂದ ನಿನ್ನ ಮಾತಿನಂತೆ ನಡೆಯುವವನ ಕಷ್ಟಗಳನ್ನು ನಾನು ದೂರ ಮಾಡುವೆನು. ನೀನು ಮಾಡಿದ ನನ್ನ ಸ್ತೋತ್ರವನ್ನು ಪಠಿಸುವವರ ಬಯಕೆಗಳು ದುಷ್ಕರವಾಗಿದ್ದರೂ ಅವುಗಳನ್ನು ನಿಶ್ಚಯವಾಗಿ ಪೂರ್ಣಮಾಡುವೆನು. ದಿನಂಪ್ರತಿಯಲ್ಲಿ ‡ ಭಕ್ತಾನಂದ ಲಹರಿಯನ್ನು ಪಠಿಸುವವನಿಗೆ ನಿಜಾನಂದವನ್ನು ಕೊಡುವೆನು ಕಲಿ ಸಾಮರ್ಥ್ಯದಿಂದ ಶಿಥಿಲವಾದ ಭಕ್ತಿಮಾರ್ಗವನ್ನು ದೃಢಪಡಿಸುವದಕ್ಕಾಗಿಯೇ ಅವತಾರವನ್ನು ತಾಳಿರುವೆನು. ಈ ಪ್ರಕಾರ ಬೋಧಿಸಿದ ಭಕ್ತಿಮಾರ್ಗವನ್ನು ಕೇಳಿ, ಶಿವಶಾಸ್ತ್ರಿಗಳು ವೇದಗೊಂಡರು. ಭಕ್ತಿಯ ಮಹಿಮೆಯಿಂದ ಮುಂದೆ ಅವರಿಗೆ ಸಿದ್ಧಸ್ಥಿತಿಯು ಪ್ರಾಪ್ತವಾಯಿತು. ಅವರು ತೆಲಗುಭಾಷೆಯಲ್ಲಿ ದೀಕ್ಷಿತರ ವಿಷಯವಾಗಿ ಹಲವು ಗ್ರಂಥಗಳನ್ನು ಬರೆದಿರುವರು.

---

## ೫೯ನೆಯ ಪ್ರಕರಣ.

### ನಿರ್ಯಾಣ.

ಶ್ರೀ ಚಿದಂಬರ ದೀಕ್ಷಿತರು ಗುರ್ಲಹೊಸೂರಲ್ಲಿ ಭಕ್ತರಿಗೆ ಅನೇಕ ಅತ್ಯದ್ಭುತ ಲೀಲೆಗಳನ್ನು ತೋರುತ್ತ ಕಾಲಕ್ರಮಣ ಮಾಡುತ್ತಿರಲು, ಒಂದುದಿವಸ ಅವರು ಮನಸ್ಸಿನಲ್ಲಿ:-ನನ್ನ ಅವತಾರ ಕ್ರಿಯಗಳಂತೂ ಮುಗಿದವು. ಕಲಿಮಹಿಮೆಯಿಂದ ಜನರು ಕರ್ಮಭ್ರಷ್ಟರಾಗುವ ಕಾಲದಲ್ಲಿ ಭಕ್ತೋದ್ಧಾರಾರ್ಥವಾಗಿ ಪ್ರಕಟವಾಗದೆ, ಗುಪ್ತವಾಗಿರುವದೇ ಶ್ರೇಯಸ್ಕರವು, ಎಂದು ಯೋಚಿಸಿ, ಇದೇ ಅಭಿಪ್ರಾಯವನ್ನು ಮಾರ್ಮಿಕ ರೀತಿಯಿಂದ ಹೊಸೂರ ಭಕ್ತರಿಗೆ ಅರುಹಿ, ತಾವು ಪರಿವಾರದಿಂದ ಕೂಡಿಕೊಂಡು, ಶಕೆ ೧೭೩೭ ರಲ್ಲಿ ಮುರಗೋಡಿಗೆ ಬಂದರು. ಮಹಾಕಾಲನು ಬ್ರಹ್ಮಾಜ್ಞೆಯಿಂದ, ವಿರಕ್ತ ವೇಷವನ್ನು ತಳೆದು,

‡ ಈ ಪುಸ್ತಕಗಳು ಸದ್ಬೋಧ ಚಂದ್ರಿಕೆಯ ಆಫೀಸಿನಲ್ಲಿ ದೊರೆಯುತ್ತವೆ.

ಮುರಗೋಡದಿಂದ ಪೂರ್ವದಿಕ್ಕಿನಲ್ಲಿ ಒಂದು ಮೈಲಿನಮೇಲಿರುವ ಒಂದು†ಗುಹೆಯಲ್ಲಿ ಶ್ರೀ ಚಿದಂಬರನ ಮಾರ್ಗಪ್ರತೀಕ್ಷೆಯನ್ನು ಮಾಡುತ್ತ ಕುಳಿತುಕೊಂಡರು. ಆತನನ್ನು ನೋಡಿದವರು ನೀನು ಯಾರು? ಇಲ್ಲಿ ಏಕೆ ವಾಸಮಾಡಿರುವಿ? ಎಂದು ಕೇಳಲು, ನಾನೊಬ್ಬ ವಿರಕ್ತನು; ಶ್ರೀ ಚಿದಂಬರ ದರ್ಶನಾರ್ಥವಾಗಿ ಇಲ್ಲಿಗೆ ಬಂದಿರುವೆನು. ನನಗೆ ಇಲ್ಲಿಯೇ ಸರ್ವಾಂತರ್ಯಾಮಿಯಾದ ಶ್ರೀ ಚಿದಂಬರನು ದರ್ಶನ ಕೊಡುವನು, ಎಂದು ಹೇಳುತ್ತಿದ್ದನು.

ಒಂದುದಿವಸ ಶ್ರೀ ಚಿದಂಬರ ದೀಕ್ಷಿತರು, ಶಿವಶಾಸ್ತ್ರಿಗಳು, ರಾಜಾರಾಮ ಮಹಾರಾಜ ಇವರೇ ಮೊದಲಾದ ಭಕ್ತರನ್ನು ಏಕಾಂತದಲ್ಲಿ ಕರೆದೊಯ್ದು, ಮುಂದೆ ಒದಗತಕ್ಕ ದುರ್ಧರ ಪ್ರಸಂಗದಲ್ಲಿ ಧೈರ್ಯವನ್ನು ತಾಳುವದಕ್ಕಾಗಿ ಧರ್ಮಾಚರಣವನ್ನು ಬೋಧಿಸಿದರು. ಅವರು ಅಂದದ್ದೇನಂದರೆ:—ಭಕ್ತಶಿಖಾಮಣಿಗಳೇ, ನನ್ನ ವಚನಗಳನ್ನು ಮನಸ್ಸುಗೊಟ್ಟು ಕೇಳಿಕೊಂಡು, ಅದರಂತೆ ನಿಮ್ಮ ಆಚರಣವನ್ನಿಡಿರಿ; ಮುಂದೆ ಒರತಕ್ಕ ಕಾಲವು ಬಹು ಕಠಿಣವಾಗಿರುವದು. ನೀವು ಕೆಲವುಕಾಲದ ವರೆಗೆ ಎದೆಗೊಟ್ಟು, ಧರ್ಮಮಾರ್ಗವನ್ನು ಪಾಲಿಸಬೇಕಾಗುವದು. ನಿತ್ಯ-ನೈಮಿತ್ತಿಕ ಕರ್ಮಗಳನ್ನು ಬಿಡಲಿಕ್ಕಾಗದು. ಶಕ್ತಿಯಿದ್ದಷ್ಟು ದಾನ-ಧರ್ಮವನ್ನು ಮಾಡಬೇಕು. ಅನ್ಯಾಯದಿಂದ ದ್ರವ್ಯಾರ್ಜನೆಯನ್ನು ಮಾಡದೆ, ದೊರೆತದ್ದರಲ್ಲಿಯೇ ಸಂತುಷ್ಟರಾಗಬೇಕು. ದುರ್ದಾನ-ದುರನ್ನಗಳನ್ನು ಸ್ವೀಕರಿಸಬಾರದು. ಬಡತನ ಬಂದರೂ ಧರ್ಮವನ್ನು ಬಿಡಬಾರದು. ತುಸ ದಿವಸಗಳ ವರೆಗೆ ಅಬ್ರಾಹ್ಮಣ್ಯ ಕಾಲವು ಪ್ರಾಪ್ತವಾಗುವದು. ಆಗ ಎದೆಗುಂದದೆ ಸತ್ಕರ್ಮಗಳನ್ನಾಚರಿಸುತ್ತ ಸುಖದಿಂದಿರಬೇಕು. ಧರ್ಮ ರಕ್ಷಣಾರ್ಥವಾಗಿ ಕಾಲ-ಕಾಲಕ್ಕೆ ಭಗವಂತನ ಅವತಾರವಾಗುವ ನಿಯಮದಂತೆ ಕಾಲಕ್ಕೆ ಸರಿಯಾಗಿ, ಈಶ್ವರನು ಅವತರಿಸಿ, ಧರ್ಮವನ್ನುದ್ಧರಿಸುವನು. ಅಲ್ಲಿಯ ವರೆಗೆ ಧೈರ್ಯದಿಂದ ಸತ್ವವನ್ನು ಕಾಯ್ದುಕೊಂಡು, ಶಿವಧ್ಯಾನ ನಿರತರಾಗಿ ಕಾಲಹರಣವನ್ನು ಮಾಡಬೇಕು, ಎಂದು ಬೋಧಿಸಿದರು.

ಈ ಭವಿಷ್ಯವಾಣಿಯನ್ನು ಕೇಳಿ, ರಾಜಾರಾಮ ಮೊದಲಾದ ಭಕ್ತರು:-ಮಹಾಸ್ವಾಮಿ, ಕರ್ತುಮಕರ್ತುಮ ಶಕ್ತಿಯುಳ್ಳ ನೀವು, ಮುಂದೆ ಒದಗತಕ್ಕ

† ಈಗಲೂ ಈ ಗುಹೆಯು “ಸಿದ್ಧನ ಗವಿ” ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಅಲ್ಲಿ ಒಂದು ಶಿವಲಿಂಗವಿದ್ದು, ಪ್ರತಿವರ್ಷ ಶ್ರಾವಣಮಾಸದಲ್ಲಿ ಒಂದು ದಿವಸ ಜಾತ್ರೆಯಾಗುತ್ತದೆ. ದೇವರಿಗೆ ಅಭಿಷೇಕ ಬ್ರಾಹ್ಮಣರ ಭೋಜನವಾಗುತ್ತದೆ.

ಅನರ್ಥನಿವಾರಣೆಯ ವಿಷಯದಲ್ಲಿ ಅಸಮರ್ಥರಾದವರಂತೆ ಏಕೆ ನುಡಿಯು ತ್ತೀರಿ? ಇಷ್ಟು ತೀವ್ರವಾಗಿ ಅವತಾರವನ್ನು ಮುಗಿಸಲು ಕಾರಣವೇನು! ಇದು ವರೆಗೆ ಶ್ರೀ ಚರಣ ಸನ್ನಿಧಿಯಲ್ಲಿ ಕಳೆದು ಹೋದ ದಿನಗಳು ನಿಮಿಷದಂತೆ ನಮಗೆ ಭಾಸವಾದವು. ಒಂದು ಕ್ಷಣವಾದರೂ ನಮ್ಮನ್ನು ಅಗಲದ ನೀವು, ಈಗ ನಮ್ಮನ್ನು ಬಿಟ್ಟುಹೋಗಲು ಸಿದ್ಧರಾದಿರಾ! ಹೀಗೆ ಮಾಡಬೇಡಿರಿ ನಮ್ಮನ್ನೂ ತಮ್ಮ ಸಂಗಡ ಕರೆದೊಯ್ಯಿರಿ, ಎಂದು ನುಡಿದು, ಕಣ್ತುಂಬ ನೀರುತರಲು, ಶ್ರೀ ದೀಕ್ಷಿತರು ಕನಿಕರಬಟ್ಟು:—ಭಕ್ತರೇ, ಹೀಗೇಕೆ ದುಃಖಿಸುವಿರಿ? ನಾನು ನಿಮ್ಮನ್ನು ಬಿಟ್ಟು ಹಿಂದೆಯೂ ಹೋಗಿಲ್ಲ, ಮುಂದೆಯೂ ಹೋಗುವದಿಲ್ಲ. ಈ ಮಾತು ಸತ್ಯವೆಂದು ತಿಳಿಯಿರಿ. ಇನ್ನು ಮೇಲೆ ಭಕ್ತರಕ್ಷಣಾರ್ಥವಾಗಿ ಗುಪ್ತ ರೀತಿಯಿಂದಲೇ ಇಲ್ಲಿ ವಾಸಿಸಬೇಕಾಗಿದೆ. ಈ ವಿಷಯದಲ್ಲಿ ಸಂಶಯ ಪಡ ಬೇಡಿರಿ. ನನ್ನ ಅವತಾರಕೃತ್ಯಗಳು ಮುಗಿದವು. ಭಕ್ತರ ಕೃತ್ಯಗಳು ಮಾತ್ರ ಉಳಿದಿರುವವು. ಅವುಗಳನ್ನು ರಹಸ್ಯವಾಗಿಯೇ ಇದ್ದುಕೊಂಡು ಕೊನೆಗಾಣಿ ಸುವೆನು, ಎಂದು ಹೇಳಿದರು. ಆಗ ಭಕ್ತರು ಸಣ್ಣಮೋರೆ ಮಾಡಿಕೊಂಡು:- ಈ ಭಯಂಕರವಾದ ಕಲಿಕಾಲದಲ್ಲಿ ನಿಮ್ಮನ್ನಗಲಿ ಹೇಗೆ ಇರೋಣ. ಎನಲು, ದೀಕ್ಷಿತರು:—ಭಕ್ತರೇ, ಬೆದರಬೇಡಿರಿ. ನನ್ನ ಮಾತಿನ ರಹಸ್ಯವನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಿರಿ. ನಾನು ಭಕ್ತರನ್ನಗಲಿ ಒಂದು ಅರಗಳಿಗೆ ಸಹ ಇರ ಲಾರೆನು. ನನ್ನ ಪ್ರೀತಿಯ ಸ್ಥಾನವು ಕೆಂಗೇರಿಯಾಗಿರುವದು. ಅಲ್ಲಿಯೇ ವಾಸಿಸಿ, ಭಕ್ತರ ಬಯಕೆಗಳನ್ನು ಪೂರ್ಣಮಾಡುವೆನು. ಕೆಂಗೇರಿಯೇ ಕಾಶೀ ಕ್ಷೇತ್ರವೆಂದು ತಿಳಿಯಿರಿ. ಭಕ್ತಿಮಾರ್ಗವನ್ನು ಬೆಳೆಸುವದಕ್ಕಾಗಿ ಚಿದಂಬರ ಸಾಂಪ್ರದಾಯವನ್ನು ಹರಡಿರಿ. ನನ್ನ ಅಭಿಪ್ರಾಯವು ಗೊತ್ತಿದ್ದ ನನ್ನ ಆರು ಮಂದಿ ಮಕ್ಕಳು ನಿಮಗೆ ಸಹಾಯವನ್ನು ಮಾಡುವರು. ದೇವತೆಗಳು ನನ್ನ ಬರವನ್ನು ಎದುರು ನೋಡುತ್ತಿರುವರು. ಬ್ರಹ್ಮದಾಸನಾದ ಮಹಾಕಾಲನು ನನ್ನ ಸಲುವಾಗಿ ಸಿದ್ಧನ ಗುಹೆಯಲ್ಲಿ ವಾಸಿಸುತ್ತಿರುವನು. ನಾನು ದೇವತೆಗಳ ಸಂತೋಷಾರ್ಥವಾಗಿ ಅವರ ಸನ್ನಿಧಿಯಲ್ಲಿ ಹೋಗುವೆನು. ನನಗೆ ಆನಂದದಿಂದ ಅಪ್ಪಣೆಯನ್ನು ಕೊಡಿರಿ. ನಾನು ಲೌಕಿಕಾರ್ಥವಾಗಿ ದೇಹವನ್ನು ಬಿಟ್ಟು ಹೋದರೂ ಇಲ್ಲಿಯೇ ವಾಸಿಸುವೆನು. ಭಕ್ತರ ಹೃದಯವೇ ನನ್ನ ವಾಸಸ್ಥಾನವು. ಎಂದು ಅಭಯವನ್ನಿತ್ತರು; ಹಾಗೂ ಕೆಂಗೇರಿಯೇ ಪ್ರತ್ಯಕ್ಷ ಕಾಶೀ ಕ್ಷೇತ್ರವು! ಎಂಬದರ ಗುರುತು ಕೊಡುವದಕ್ಕಾಗಿ, ತಾಯಿಯ ದಹನ ಸ್ಥಾನದಲ್ಲಿದ್ದ

ಔದುಂಬರ ವೃಕ್ಷಗಳೊಳಗಿಂದ ಏಳು ದಿವಸಗಳ ವರೆಗೆ ಭಾಗೀರಥಿಯನ್ನು ಪ್ರಕಟಮಾಡಿ, ಕೆಂಗೇರಿಯೊಳಗಿನ ಬಾವಿಯಲ್ಲಿ ಪಿಂಡಗಳನ್ನು ತೇಲಿಸಿದರು.

ಶ್ರೀ ಗುರುಗಳು ಮಾರ್ಗಶೀರ್ಷ ಕೃಷ್ಣ ಷಷ್ಠಿಯ ದಿವಸ ಪ್ರಾತಃಕರ್ಮಗಳನ್ನು ನೆರವೇರಿಸಿ, ಹೋಮಶಾಲೆಗೆ ಹೋಗಿ, ವೇದಿಯ ಮಧ್ಯಭಾಗದಲ್ಲಿ ಕುಳಿತುಕೊಂಡು, ಹಾಗೂ ಕ್ಷಣಮಾತ್ರ ಧ್ಯಾನಸ್ಥರಾಗಿ 'ಬ್ರಹ್ಮಾಸ್ಮಿ' ಎಂದು ಉಚ್ಚರಿಸಿ, ಚಿದಾನಂದದಲ್ಲಿ ಐಕ್ಯರಾದರು. ಇದನ್ನು ಕಂಡು ಭಕ್ತರು ದುಃಖದಿಂದ ಮೂರ್ಛಿತರಾದರು. ದಿವಾಕರ ದೀಕ್ಷಿತರು ಅಲ್ಲಿಗೆ ಬಂದು ಹೋಮಶಾಲೆಯ ಬಾಗಿಲಲ್ಲಿ ಕುಳಿತು ಆಕ್ರೋಶ ಮಾಡಹತ್ತಿದರು. ಯಾರ ಮಾತನ್ನೂ ಕೇಳದಂತಾದರು. ನಾನು ಸ್ವಾಮಿಯನ್ನು ಬಿಡುವದಿಲ್ಲೆಂತಲೂ, ಮುಂದಿನ ಕಾರ್ಯಗಳನ್ನು ಮಾಡುವದಿಲ್ಲೆಂತಲೂ ಹೇಳಿದರು. ನನ್ನನ್ನು ಕರಕೊಂಡೇ ಶ್ರೀಗುರುವು ಹೋಗಲಿ; ಹಾಗೆ ಮಾಡದಿದ್ದರೆ ನಾನೂ ಇಲ್ಲಿಯೇ ಪ್ರಾಣತ್ಯಾಗವನ್ನು ಮಾಡುತ್ತೇನೆ, ಎಂದು ನುಡಿದರು. ಅವರನ್ನು ಸಮಾಧಾನಗೊಳಿಸಲು ಯಾರೂ ಮುಂದಾಗಲೊಲ್ಲರು. ಮುಂದೆ ಬಂದವರನ್ನು ದಿವಾಕರ ದೀಕ್ಷಿತರು ಹೊಡೆಯಲುದ್ಯುಕ್ತರಾದರು. ಇಳಿಹೊತ್ತಾದರೂ ಅವರು ಶಾಂತರಾಗಲಿಲ್ಲ.

ಆಗ ಶಿವಶಾಸ್ತ್ರಿಗಳು ಮುಂದಾಗಿ ಹೋಮಶಾಲೆಯ ಬಾಗಿಲಲ್ಲಿ ಕೈಜೋಡಿಸಿ ನಿಂತುಕೊಂಡರು. ದಿವಾಕರ ದೀಕ್ಷಿತರು ಅವರನ್ನು ಹೊಡೆಯ ಹೋದರು; ಆದರೂ ಶಾಸ್ತ್ರಿಗಳು ಅದಕ್ಕೆ ಬೆದರದೆ, ಹಾಗೇ ನಿಂತುಕೊಂಡು, ಶ್ರೀ ಗುರುಗಳನ್ನು ಕುರಿತು:—ಈಗ ದಕ್ಷಿಣಾಯನವಿರುವದು. ದಕ್ಷಿಣಾಯನದಲ್ಲಿ ಸ್ವರ್ಗದ ಬಾಗಿಲು ಇಕ್ಕಿರುತ್ತದೆ. ಇಂದಿನ ವರೆಗೆ ಅಗಾಧ ಚರಿತ್ರವನ್ನು ತೋರಿಸಿ, ಶಿವಾವತಾರವೆನಿಸಿಕೊಂಡ ನೀವು ಅಂತ್ಯಕಾಲದಲ್ಲಿ ಅಪಕೀರ್ತಿಗೆ ಗುರಿಯಾಗುವದು ಸರಿಯೇ! ಎಂದು ನುಡಿಯಲು, ಶ್ರೀ ಚಿದಂಬರ ದೀಕ್ಷಿತರು ಶಿವ ಶಿವ, ಎಂದು ನುಡಿಯುತ್ತ ಜಾಗ್ರತರಾದರು; ಹಾಗೂ ದಿವಾಕರ ದೀಕ್ಷಿತರನ್ನು ಕುರಿತು:—ದಿವಾಕರಾ, ಹೊತ್ತು ಮುಳುಗುತ್ತ ಬಂತು. ಬ್ರಾಹ್ಮಣರು ಹಸಿದಿರುವರು. ಇನ್ನೂ ಅಡಿಗೆಯನ್ನು ಏಕೆ ಮಾಡಿಸಲಿಲ್ಲ. ಭ್ರಾಂತನಂತೆ ಹೀಗೇಕೆ ಕುಳಿತುಕೊಂಡಿರುವಿ? ಎಂದು ಪ್ರಶ್ನಮಾಡಿದರು. ಆಗ ದಿವಾಕರ ದೀಕ್ಷಿತರು:- ತಾವೇ ನಮ್ಮೆಲ್ಲರನ್ನು ಅಗಲಿಹೋಗಲು ಸಿದ್ಧರಾದ ಮೇಲೆ, ನಮ್ಮ ಸ್ಮೃತಿಯು ಇಲ್ಲದಂತಾದದ್ದರಲ್ಲಿ ಆಶ್ಚರ್ಯವೇನು? ಎನಲು, ದೀಕ್ಷಿತರು:—ತಿಳಿಗೇಡಿಯಂತೆ ಹೀಗೇಕೆ ಮಾತಾಡುತ್ತಿರುವಿ? ನಾನು ಭಕ್ತರನ್ನು ಬಿಟ್ಟು ಹೋಗುವದುಂಟೆ?

ಪ್ರಳಯಕಾಲ ಒದಗಿದರೂ ನಾನು ಖಂಡಿತವಾಗಿ ಕೆಂಗೇರಿಯಲ್ಲಿಯೇ ಇರುವೆನು. ಈ ಮಾತು ಸತ್ಯವೆಂದು ತಿಳಿ, ಎಂದು ಮಗನನ್ನು ಸಮಾಧಾನಗೊಳಿಸಿದರು; ಹಾಗೂ ಅಡಿಗೆಯನ್ನು ಮಾಡಿಸಿ, ಬ್ರಾಹ್ಮಣ ಸಂತರ್ಪಣವನ್ನು ಮಾಡಿಸಿದರು.

ದಿವಾಕರ ದೀಕ್ಷಿತರು ಸನ್ನಿಧಿಯಲ್ಲಿದ್ದಾಗ ದೀಕ್ಷಿತರ ಲಿಂಗಾವತಾರವು ಆಗಕೂಡದೆಂದು ಬ್ರಹ್ಮಲಿಪಿಯಿತ್ತು. ಆದುದರಿಂದ ಶ್ರೀಗುರುಗಳು ಮನಸ್ಸಿನಲ್ಲಿ—ಏನಾದರೊಂದು ನೆವಮಾಡಿ ದಿವಾಕರನನ್ನು ಅಗಲಿಸಬೇಕು, ಎಂದು ಯೋಚಿಸಿ, ಒಂದು ದಿವಸ ದಿವಾಕರ ದೀಕ್ಷಿತರನ್ನು ಸಮೀಪಕ್ಕೆ ಕರೆದು—ದಿವಾಕರಾ, ದೈವಯೋಗದಿಂದ ಮೊನ್ನೆ ಒದಗಿದ ಕಠಿಣ ಪ್ರಸಂಗದೊಳಗಿಂದ ಪಾರಾದೆನು. ಆ ಸಮಯದಲ್ಲಿ ನಾನು ಶ್ರೀ ಮಾರ್ತಂಡಭೈರವನಿಗೆ ಅಭಿಷೇಕ ಮಾಡಿಸುತ್ತೇನೆಂದು ಬೇಡಿಕೊಂಡಿರುವೆನು. ಆದುದರಿಂದ ನೀನು ಹಿಪ್ಪರಿಗಿಗೆ ಹೋಗಿ, ಆ ಹರಕೆಯನ್ನಷ್ಟು ಮುಗಿಸಿಕೊಂಡು ಬಾ, ಎಂದು ಹೇಳಿದರು. ದಿವಾಕರ ದೀಕ್ಷಿತರು ಸೂರ್ಯಾಂಶರಾಗಿದ್ದರೂ, ದೀಕ್ಷಿತರ ಮೋಹದ ಮಾತುಗಳಿಗೆ ಮರುಳಾಗಿ, ತಂದೆಯ ಆಜ್ಞೆಯಂತೆ ಹಿಪ್ಪರಗಿಗೆ ಹೊರಟು ಹೋದರು.

ಇದೇ ಸಂಧಿಯಲ್ಲಿ ನಾಲ್ಕೂ ಕಡೆಯಲ್ಲಿ ಉತ್ಪಾತಗಳಾಗಹತ್ತಿದವು. ಭೂಕಂಪಗಳಾಗಹತ್ತಿದವು. ಸುಮ್ಮಸುಮ್ಮನೆ ಭಕ್ತರ ಕಣ್ಣೊಳಗಿಂದ ಕಂಬನಿಗಳು ಉದುರಹತ್ತಿದವು. ಗ್ರಸ್ತಾಸ್ತಗ್ರಹಣಗಳು ಆಗಹತ್ತಿದವು. ಮನೆಗಳ ಮೇಲೆ ಗೂಗೆಗಳು ಕೂಗಹತ್ತಿದವು. ಮನೆಗೆ ಜೇನಹುಟ್ಟು ಕಟ್ಟಹತ್ತಿದವು. ಜಾಹ್ನವೀನೀರು ಮೂಲದಲ್ಲಿ ಕೆಂಪಾದವು. ದೇವತಾವಸ್ತ್ರಗಳು ಕಾರಣವಿಲ್ಲದೆ ಸುಡಹತ್ತಿದವು. ಉಲ್ಕಾಪಾತಗಳಾಗಹತ್ತಿದವು. ಧೂಮಕೇತುಗಳು ಮೂಡಹತ್ತಿದವು. ಈ ಪ್ರಕಾರ ಅಪಶಕುನಗಳಾಗುತ್ತಿರಲು, ದೀಕ್ಷಿತರು ತಮ್ಮ ಜ್ವರವನ್ನುಂಟುಮಾಡಿಕೊಂಡರು. ಆಗ ಶಂಕರ ದೀಕ್ಷಿತರು ವೈದ್ಯರನ್ನು ಕರೆಯಿಸಿ, ತಂದೆಯನ್ನು ಉಪಚರಿಸಹತ್ತಿದರು. ಅದರಿಂದೇನೂ ಗುಣವಾಗಲೊಲ್ಲದು. ಒಂದು ದಿವಸ ದೀಕ್ಷಿತರು ಶಂಕರನಿಗೆ:—ಕಾಶಿಗೆ ಹೋಗತಕ್ಕದ್ದದೆ, ಸಾಮಾನುಗಳನ್ನು ಸಿದ್ಧಮಾಡಿಸು, ಎಂದು ಹೇಳಿದರು. ಶಂಕರ ದೀಕ್ಷಿತರು ಸಾಮಾನುಗಳನ್ನು ಸಿದ್ಧಮಾಡಿದರು ಆಗ ದೀಕ್ಷಿತರು:-ಕೆಂಗೇರಿಯೇ ನಮ್ಮ ಕಾಶಿಯು. ಅಲ್ಲಿ ಹಿರಿಯರ ಪಾದುಕೆಗಳಿರುವದರಿಂದ ಅದೇ ನಮ್ಮ ವಾರಣಾಸೀ ಕ್ಷೇತ್ರವು. ಅಲ್ಲಿಗೆ ಹೋಗತಕ್ಕದ್ದದೆ, ಎಂದು ನುಡಿಯಲು, ಆ

ಶಂಕರ ದೀಕ್ಷಿತರಿಗೆ ಮಾತಿನ ಮರ್ಮವು ಗೊತ್ತಾಗಲಿಲ್ಲ. ಅವರು ಸುಮ್ಮನೆ ಇದ್ದುಕೊಂಡರು.

ಮುಂದೆ ಶ್ರೀ ಗುರುಗಳು ಶಕೆ ೧೬೩೭ ಯುವನಾಮ ಸಂವತ್ಸರದ ಪೌಷ್ಯ ಶುದ್ಧ ಚತುರ್ಥಿಯ ದಿವಸ ಬ್ರಾಹ್ಮ್ಯಮುಹೂರ್ತದಲ್ಲಿದ್ದು, ನಿತ್ಯಕರ್ಮಗಳನ್ನು ನೆರವೇರಿಸಿ, ದೇವತಾರ್ಚನೆಯನ್ನೂ ಗೋಬ್ರಾಹ್ಮಣರ ಪೂಜೆಯನ್ನೂ ಮಾಡಿ, ಸೂರ್ಯನನ್ನು ಸ್ತವಿಸಿ, ಪಂಚಾಗ್ನಿಗಳನ್ನು ಪ್ರಜ್ವಲಿಸಿದರು. ಮತ್ತು ನೂರು ಸಾಲಂಕೃತ ಗೋದಾನಗಳನ್ನು ಮಾಡಿ, ಬ್ರಾಹ್ಮಣರನ್ನು ವಂದಿಸಿ, ವೇದಿಯ ಮೇಲೆ ದರ್ಭಾಸನವನ್ನು ಹಾಕಿ, ಅದರ ಮೇಲೆ ಕುಳಿತುಕೊಂಡರು. ಹಾಗು ತಮ್ಮ ಹೆಂಡಿರು-ಮಕ್ಕಳನ್ನೂ, ಭಕ್ತರನ್ನೂ, ಆಪ್ತೇಷ್ಟರನ್ನೂ ಕರೆಯಿಸಿ:-- ನನ್ನ ಅವತಾರವು ಮುಗಿಯಿತು. ಇಂದು ನೀವು ಬೇಕಾದ ವರಗಳನ್ನು ಬೇಡಿ ಕೊಳ್ಳಿರಿ. ನಾನು ಗುಪ್ತ ರೀತಿಯಿಂದ ಇಲ್ಲಿಯೇ ಇದ್ದುಕೊಂಡು ನಿಮ್ಮೆಲ್ಲರ ಬಯಕೆಗಳನ್ನು ಪೂರ್ಣಮಾಡುವೆನು ನನಗೆ ಆನಂದದಿಂದ ಅಪ್ಪಣೆಯನ್ನು ಕೊಡಿರಿ, ಎಂದು ನುಡಿಯಲು, ಜನರು ಗೋಳಿಟ್ಟರು. ಆಗ ದೀಕ್ಷಿತರು ಅವರನ್ನು ಸಂತೈಸಿ, ಭಕ್ತರ ಬಯಕೆಗಳನ್ನು ಪೂರ್ಣಮಾಡಹತ್ತಿದರು. ಪ್ರಭಾಕರ ದೀಕ್ಷಿತರು ಮುಂದಾಗಿ:—ಗುರುಗಳೇ, ನೀವು ಹೋದ ಬಳಿಕ ನಮ್ಮ ಗತಿ ಯೇನು? ಎಂದು ಕೇಳಲು, ದೀಕ್ಷಿತರು:—ಪ್ರಭಾಕರಾ, ನಾನು ಮಲಗುವ ಕೋಣೆಯನ್ನು ನೋಡಿ ಬಾ, ಎಂದು ಹೇಳಿದರು. ಪ್ರಭಾಕರದೀಕ್ಷಿತರು ಕೋಣೆಯ ಬಾಗಿಲವನ್ನು ತೆಗೆದರು. ಆಗ ಹನ್ನೆರಡುಜನ ಬ್ರಾಹ್ಮಣರು ಅವರ ಕಣ್ಣಿಗೆ ಬಿದ್ದರು. ಅವರು ಭಸ್ಮವನ್ನು ಧಾರಣಮಾಡಿ, ರುದ್ರಾಕ್ಷ ಮಾಲೆಗಳನ್ನು ಹಾಕಿ ಕೊಂಡಿದ್ದರು. ಪ್ರಭಾಕರ ದೀಕ್ಷಿತರು ಅವರನ್ನು ವಂದಿಸಿ:—ತಾವು ಯಾರು? ಇಲ್ಲಿ ಬಂದ ಕಾರಣವೇನು? ನಾನು ಅಜ್ಞಾನಿಯಿರುವದರಿಂದ ಈ ಬಗೆಯಾಗಿ ಪ್ರಶ್ನಗಳನ್ನು ಮಾಡುತ್ತೇನೆ, ಎಂದು ನುಡಿಯಲು, ಆ ಬ್ರಾಹ್ಮಣರಲ್ಲಿ ಇಬ್ಬರು:- ನಾವು ದೇವದೂತರು, ಒಡೆಯನ ಆಜ್ಞೆಯಂತೆ ಶ್ರೀ ಸದ್ಗುರುಗಳನ್ನು ಸ್ವಸ್ಥಾನಕ್ಕೆ ಕರೆದೊಯ್ಯುವದಕ್ಕಾಗಿ ಇಲ್ಲಿಗೆ ಬಂದಿರುವೆವು. ನೀನು ಹೆಚ್ಚಿಗೆ ಮಾತಾಡದೆ, ಬಾಗಿಲು ಹಾಕಿಕೊಂಡು ಹೊರಟುಹೋಗು, ಎಂದು ನುಡಿಯಲು, ಪ್ರಭಾಕರ ದೀಕ್ಷಿತರು ಬಾಗಿಲು ಹಾಕಿಕೊಂಡು ದೀಕ್ಷಿತರ ಬಳಿಗೆ ಬಂದು ಆದ ಸುದ್ದಿಯನ್ನು ಹೇಳಿದರು. ಆ ಸಂಗತಿಯನ್ನು ಕೇಳಿ, ಎಲ್ಲರಿಗೂ ಆಶ್ಚರ್ಯವಾಯಿತು; ಮೇಲಾಗಿ ದುಃಖವೂ ಆಯಿತು. ದೀಕ್ಷಿತರು ಪ್ರಭಾಕರ ದೀಕ್ಷಿತ

ರನ್ನು ಕುರಿತು:—ನೀನು ಹೆದರಬೇಡ, ನಿನಗೂ ಮನೆಯ ಜನರಿಗೂ ಸರಿಬೀಳುವದಿಲ್ಲ; ಕಾರಣ ನೀನು ಗಾವಲ ಕ್ಷೇತ್ರಕ್ಕೆ ಹೋಗಿ, ಅಲ್ಲಿಯೇ ನಿಂತುಕೊಳ್ಳು. ಅಂದರೆ ನಿನಗೆ ಸುಖವಾಗುವದು. ನಿನ್ನ ಕೀರ್ತಿಯಾದರೂ ನಾಲ್ಕೂಕಡೆಗೆ ಹಬ್ಬುವದು, ಎಂದು ಹೇಳಿ, ತಮ್ಮ ಮನೆಯ ಬೇರೆ ಜನರನ್ನು ಉಪದೇಶಿಸಹತ್ತಿದರು. ಬ್ರಾಹ್ಮಣರಿಗೆ ಸುಖಕೊಡಿರಿ, ವೃದ್ಧಾಚಾರವನ್ನು ಕಾಯ್ದುಕೊಳ್ಳಿರಿ, ಗುರ್ಲಹೊಸೂರಲ್ಲಿ ಇರಬೇಡಿರಿ; ಅಲ್ಲಿಯ ಸಾಮಗ್ರಿಯನ್ನು ತಂದು ಬಡ್ಲಿಯಲ್ಲಿ ಇಡಿರಿ; ದಿವಾಕರನಿಗೆ ಮಕ್ಕಳಿಲ್ಲ; ಆದುದರಿಂದ ಶಂಕರಾ, ನಿನ್ನ ಮಗನನ್ನು ಆತನ ಉಡಿಯಲ್ಲಿ ಹಾಕು. ನಿನಗೆ ಮತ್ತೊಬ್ಬ ಮಗನು ಜನಿಸುವನು. ನೀವೆಲ್ಲರು ದಿವಾಕರನ ಆಜ್ಞೆಯಂತೆ ನಡೆಯಿರಿ. ಆತನ ಹೆಂಡತಿಯಾದ ಯಮುನಾಬಾಯಿಗೆ ಮರ್ಯಾದೆಯನ್ನು ಕೊಡಿರಿ. ಶಂಕರಾ-ಮೃತ್ಯುಂಜಯಾ ನೀವಿಬ್ಬರೂ ನನ್ನ ಹೇಳಿಕೆಯಂತೆ ನಡೆಯುವದಿಲ್ಲ; ನಿಮ್ಮ ಮನಸ್ಸಿನಲ್ಲಿ ಕೌಟಿಲ್ಯವಿರುವದು. ಹೀಗೆ ಸ್ಪಷ್ಟವಾಗಿ ನುಡಿದದ್ದಕ್ಕೆ ಸಿಟ್ಟಾಗಬೇಡಿರಿ, ಪ್ರತಿಯೊಬ್ಬರಿಗೆ ಅವರವರ ಕರ್ಮದಂತೆ ಫಲಪ್ರಾಪ್ತಿಯಾಗುತ್ತದೆ. ಯಮುನಾಬಾಯಿ, ನಿನ್ನ ಸೌಭಾಗ್ಯವು ಬೆಳೆಯುತ್ತದೆ, ನೀನು ಚಿಂತೆಮಾಡಬೇಡ, ಸಂಸಾರದ ಭಾರವೆಲ್ಲ ನಿನ್ನ ಮೇಲೆಯೇ ಇರುವದು. ಬ್ರಾಹ್ಮಣರನ್ನು ಮಾತ್ರ ವಿಮುಖರನ್ನಾಗಿ ಮಾಡಿ ಕಳಿಸಬೇಡ, ನನ್ನ ಭಕ್ತರಲ್ಲಿ ಆದರವಿರಲಿ, ದೀನರ ಪರಾಮರಿಕೆಯನ್ನು ಮಕ್ಕಳಂತೆ ತಕ್ಕೊಳ್ಳಬೇಕು. ಸರಸ್ವತೀ, ನೀನು ದಿವಾಕರನನ್ನು ಹೊಂದಿಕೊಂಡಿರು ಆತನು ನಿನ್ನನ್ನು ಕಾಪಾಡುವನು. ನೀನು ಆತನ ಬಳಿಯಲ್ಲಿ ನಿಲ್ಲುವದಿಲ್ಲ; ಆದರೂ ನಾನು ಹೇಳತಕ್ಕ ಮಾತುಗಳನ್ನು ಹೇಳಿದೆನು; ಇಷ್ಟರ ಮೇಲೆ ನಿನ್ನ ಮನಸಿಗೆ ಬಂದಂತೆ ಮಾಡು. ಸಾವಿತ್ರೀ, ನಿನ್ನ ಚಿಕ್ಕ ಮಕ್ಕಳನ್ನು ದಿವಾಕರನು ಪಾಲಿಸುವನು. ಲಕ್ಷ್ಮೀ, ನೀನು ನಿನ್ನ ತಾಯಿಯ ಹೇಳಿಕೆಯಂತೆ ನಡೆಯಬೇಡ; ಅಂದರೆ ನಿನಗೆ ಸುಖವಾಗುವದು. ದಿವಾಕರನು ನಿನಗೆ ಎಷ್ಟು ವೃತ್ತಿಯನ್ನು ಕೊಡುವನೋ, ಅಷ್ಟನ್ನೇ ತಕ್ಕೊಂಡು, ನಿನ್ನ ಗಂಡನೊಡನೆ ಬೇರೆ ಕಡೆಯಲ್ಲಿ ನಿಂತು ಸುಖದಿಂದ ಪ್ರಪಂಚಮಾಡು. ನೀವೆಲ್ಲರೂ ಆಪ್ತತ್ವದಿಂದ ದೊಡ್ಡವರಿದ್ದರೂ, ಭಕ್ತರೇ, ನನಗೆ ನಿಜವಾಗಿ ದೊಡ್ಡವರು.

ಈ ಪ್ರಕಾರ ಬೋಧಿಸಿ, ತಾವು ಪ್ರಾಣಾಯಾಮವನ್ನು ಮಾಡಲು ಸಿದ್ಧರಾದರು. ಆ ಕಾಲದ ಅವರ ಮೂರ್ತಿಯು ಬಹು ಮನೋಹರವಾಗಿ ತೋರುತ್ತಿತ್ತು. ಅವರು ಸರ್ವಾಂಗದಲ್ಲಿ ಭಸ್ಮವನ್ನು ಚರ್ಚಿಸಿದ್ದರು. ಕರ-ಕಂಧರಗಳಲ್ಲಿ

ಪಾಪದಾಹಕವಾದ ಅಕ್ಷಮಾಲೆಗಳು ಒಪ್ಪುತ್ತಿದ್ದವು. ಕರ್ಣಗಳಲ್ಲಿ ತುಲಸೀ ಮಂಜರಿಯು ಶೋಭಿಸುತ್ತಿತ್ತು. ಹೃದಯದಲ್ಲಿ ಶಿವಪಂಚಾಯತನ ಮೂರ್ತಿಯನ್ನು ಧಾರಣಮಾಡಿದ್ದರು. ಈ ಪ್ರಕಾರ ಹೋಮಶಾಲೆಯನ್ನು ಪ್ರಕಾಶಗೊಳಿಸುತ್ತಿರುವ ದೀಕ್ಷಿತರು ಕೃಪಾದೃಷ್ಟಿಯಿಂದ ಭಕ್ತರನ್ನು ನೋಡುತ್ತಿದ್ದರು. ಭಕ್ತರು ಎವೆಯಿಕ್ಕದೆ ದೀಕ್ಷಿತರನ್ನು ನೋಡುತ್ತ ಮುಕ್ತಕಂಠದಿಂದ ಸ್ತೋತ್ರಮಾಡುತ್ತಿರಲು, ದೀಕ್ಷಿತರು ಪಂಚಾಯತನ ಮೂರ್ತಿಯನ್ನು ಭಕ್ತರ ಕೈಯಲ್ಲಿ ಕೊಟ್ಟರು. ಆಗ ಐವರು ಮಕ್ಕಳೂ ಕಣ್ಣೀರು ತಂದು ಗದ್ಗದ ಸ್ವರದಿಂದ:—ತಾತ! ತಾವಂತೂ ಹೊರಟಿರಿ. ನಾವು ಈ ಘೋರವಾದ ಸಂಸಾರದಲ್ಲಿ ಹೇಗೆ ಇರೋಣ? ಎಂದು ಕೇಳಲು, ಮತ್ತೆ ದೀಕ್ಷಿತರು ಅವರನ್ನು ಮಧುರ ವಚನಗಳಿಂದ ಸಮಾಧಾನಗೊಳಿಸಿದರು; ಹಾಗೂ ತಾವು ಜ್ಯೋತಿರ್ಧ್ಯಾನವನ್ನು ಮಾಡಲಾರಂಭಿಸಿದರು. ಅವರು ಪದ್ಮಾಸನವನ್ನು ಹಾಕಿ, ನಾಸಾಗ್ರದಲ್ಲಿ ದೃಷ್ಟಿಯನ್ನಿಟ್ಟು, ಜ್ಞಾನಮುದ್ರೆಯಿಂದೊಪ್ಪುವ ಎರಡೂ ಕರಗಳನ್ನು ಹೃದಯದಲ್ಲಿರಿಸಿ, ಕುಂಭಕದಿಂದ ಪ್ರಾಣಾಪಾನ ವಾಯುಗಳ ಸಂಚಾರವನ್ನು ನಿಲ್ಲಿಸಿ, ಕುಳಿತುಕೊಂಡರು. ಈ ಪ್ರಕಾರ ಯೋಗಸ್ಥಿತಿಯಲ್ಲಿ ಕ್ಷಣ ಹೊತ್ತು ಇದ್ದುಕೊಂಡು, ಆಮೇಲೆ 'ಬ್ರಹ್ಮಾಸ್ಮಿ' ಎಂದು ಉಚ್ಚರಿಸಿ, ಕೂಡಲೆ ಅಂತಃಶ್ವಾಸಗತಿಯನ್ನುಂಟುಮಾಡಿ ನಿಜಾನಂದ ಸ್ಥಿತಿಯನ್ನು ಹೊಂದಿದರು.

ಆಗ ಭಕ್ತರು ಆಕ್ರೋಶವನ್ನು ಮಾಡಲು, ದೀಕ್ಷಿತರು ಪ್ರತ್ಯಕ್ಷ ಬಂದು ಅವರನ್ನು ಸಮಾಧಾನಗೊಳಿಸುತ್ತಿದ್ದರು. ವೈದಿಕ ಪಂಡಿತರು ಶಂಕರ ದೀಕ್ಷಿತರ ಕೈಯಿಂದ ಪುತ್ರಧರ್ಮಾನುಸಾರವಾಗಿ ಶಾಸ್ತ್ರೋಕ್ತರೀತಿಯಿಂದ ಆಹಿತಾಗ್ನಿಯ ವಿಧಿಯನ್ನು ಮಾಡಿಸಿದರು. ಮಹಾಸ್ವಾಮಿಯು ವಿರಾಜಮಾನವಾಗಿರುವ ರಥವನ್ನು ಶುಚಿಯಾದ ಬ್ರಹ್ಮವೃಂದವು ಮೆಲ್ಲಮೆಲ್ಲನೆ ಎಳೆಯುತ್ತಿತ್ತು. ರಥದ ಮುಂಭಾಗದಲ್ಲಿ ಭಕ್ತಸಂಘವು ತಾಳ, ಮೃದಂಗ, ವೀಣೆಗಳ ನಾದದಲ್ಲಿ ಭಜನಮಾಡುತ್ತ, ಭಕ್ತಿಪರವಶವಾಗಿ ಕುಣಿಯುತ್ತಿತ್ತು. ಎಷ್ಟೋ ವೈದಿಕರು ವೇದ ಪಠಣಮಾಡುತ್ತಿದ್ದರು. ಗ್ರಾಮವಾಸಿಗಳಲ್ಲಿ ಕೆಲವರು ಉತ್ತತ್ತಿಗಳನ್ನು ಸೂರೆಮಾಡಹತ್ತಿದರು. ಕೆಲವರು ಅರಿಶಿನ-ಕುಂಕುಮಗಳನ್ನೂ, ಪರಿಮಲ ದ್ರವ್ಯಗಳನ್ನೂ, ಬತ್ತದ ಅರಳುಗಳನ್ನೂ, ಹಣ್ಣು-ಹಂಪಲ, ಬೆಂಡು-ಬತ್ತಾಸುಗಳನ್ನೂ ಸೂಗೆಮಾಡುತ್ತಿದ್ದರು. ಇಂತು ಸಂಭ್ರಮದಿಂದ ರಥವು ಗ್ರಾಮದ ಉತ್ತರದಿಕ್ಕಿಗೆ ಸಾಗಹತ್ತಿತು. ತುಸು ವೇಳೆಯಲ್ಲಿಯೇ ಆದು ಕೆಂಗೇರಿಯೊಳ

ಗಿನ ಔದುಂಬರಗಳ ಸಮೀಪಕ್ಕೆ ಬಂತು. ಬಳಿಕ ಔದುಂಬರ ಹಾಗು ರಾಮ ದೇವಾಲಯ ಇವುಗಳ ಮಧ್ಯದಲ್ಲಿ ಚಿದಂಬರ ಸ್ಥಾನವನ್ನು ಕಲ್ಪಿಸಿ, ತುಲಸಿ. ಚಂದನಾಗರುಗಳ ಕಟ್ಟಿಗೆಗಳಿಂದ ಚಿತೆಯನ್ನು ತಯಾರಿಸಿ, ಶ್ರೌತಾಗ್ನಿಯಿಂದ ಮಹಾಸ್ವಾಮಿಗಳ ದೇಹವನ್ನು ಸಂಸ್ಕಾರಗೊಳಿಸಿದರು. ಬಳಿಕ ಎಲ್ಲರೂ ಅವಭೃತಸ್ನಾನವನ್ನು ತೀರಿಸಿಕೊಂಡು ಚಿತೆಯ ಬಳಿಗೆ ಬಂದರು. ಅಲ್ಲಿ ಬ್ರಾಹ್ಮಣಭೋಜನವಾಯಿತು ಒಬ್ಬ ಬ್ರಾಹ್ಮಣನು ಚಿತೆಯ ಬೆಳಕಿನಲ್ಲಿ ಉಣ್ಣಲು, ಸಂಶಯ ತಳೆದ್ದುದರಿಂದ ಆತನಿಗೆ ಅಸಾಧ್ಯವಾಗಿ ಹೊಟ್ಟೆ ಶೂಲಿಯೇಳಲು. ಆತನು ಕೃತಾಪರಾಧದಬಗ್ಗೆ ಕ್ಷಮೆಯನ್ನು ಯಾಚಿಸಿ, ಭೋಜನವನ್ನು ಮಾಡಿದನು. ಆಗ ಆತನ ಶೂಲಿಯು ಇಲ್ಲದಂತಾಯಿತು. ಚಿತೆಯ ಜ್ವಾಲೆಯು ಔದುಂಬರ ವೃಕ್ಷಗಳಿಗೆ ತಗಲುತ್ತಿದ್ದರೂ ಅವು ಬಾಡಿ ದ್ದಿಲ್ಲ ಬಳಿಕ ಎಲ್ಲ ಜನರು ಊರಿಗೆ ಹೋಗಬೇಕೆಂದು ಹೊರಟರು. ಅಷ್ಟ ರಲ್ಲಿ ಒಂದು ಚಮತ್ಕಾರದ ಸುದ್ದಿಯು ಬಂತು. ಮುರಗೋಡದ ದಕ್ಷಿಣ ದಿಕ್ಕಿಗೆ ಒಂದು ಮೈಲಿನ ಮೇಲಿರುವ ‹ರುದ್ರಾಪುರ' ಎಂಬ ಗ್ರಾಮದ ದೇಸಾ ಯಿಯು ಶ್ರೀ ಗುರುಗಳ ನಿರ್ಯಾಣವಾರ್ತೆಯನ್ನು ಕೇಳಿ, ಮುರಗೋಡಕ್ಕೆ ಬರುತ್ತಿದ್ದನು. ಆತನಿಗೆ ಮಾರ್ಗದಲ್ಲಿ ಶ್ರೀ ಗುರುಗಳು ಭೆಟ್ಟಿಯಾದರು. ಆಗ ಅವನು ಮೆಟ್ಟಿಬಿದ್ದು:—ಮಹಾಸ್ವಾಮಿಯವರು ಏಕಾಕಿಯಾಗಿ ಎಲ್ಲಿಗೆ ಹೋಗು ವದು? ಎಂದು ಪ್ರಶ್ನಮಾಡಲು, ದೀಕ್ಷಿತರು:-ನಾವು ರಾಮೇಶ್ವರಕ್ಕೆ ಹೋಗು ತ್ತೇವೆ. ನಮ್ಮ ಹಿಂದೆ ನಮ್ಮ ಭಕ್ತಮಂಡಲಿಯು ಬರುತ್ತದೆ, ಎಂದು ನುಡಿದು, ಒಮ್ಮಿಂದೊಮ್ಮೆ ಅದೃಶ್ಯರಾದರು. ಆಗ ದೇಸಾಯಿಯು ಮನಸ್ಸಿನಲ್ಲಿ:— ಚಿದಂಬರನ ಕೃತಿಯನ್ನು ಅರಿಯುವವರಾರು? ನಾನು ನಿರ್ಯಾಣ ವಾರ್ತೆ ಯನ್ನು ಕೇಳಿ ಹೊರಟಿರಲು, ನನಗೆ ಮಾರ್ಗದಲ್ಲಿ ದರ್ಶನವನ್ನು ಕೊಟ್ಟರಲ್ಲ! ಊರೊಳಗಿನ ವಾದ್ಯಧ್ವನಿಯಂತೂ ಕೇಳಬರುತ್ತಿರುವದು. ಅದರಿಂದ ಅಲ್ಲಿಯ ವರೆಗೆ ಹೋಗಿ ನಿಜಸಂಗತಿಯನ್ನು ಮನಗಾಣಬೇಕೆಂದು ಯೋಚಿಸಿ, ಕೆಂಗೇರಿಗೆ ಬರುತ್ತಿರಲು, ಬ್ರಹ್ಮವೃಂದವು ಆತನಿಗೆ ಎದುರಾಯಿತು. ಆವಾಗ ಅವರ ಬಾಯಿಂದ ದೀಕ್ಷಿತರ ನಿರ್ಯಾಣವಾರ್ತೆಯು ತಿಳಿಯಿತು. ಆತನು ತನಗೆ ದೀಕ್ಷಿತರು ದರ್ಶನಕೊಟ್ಟ ಸಂಗತಿಯನ್ನು ತಿಳಿಸಿದನು. ಆಗ ಎಲ್ಲರೂ ಆಶ್ಚರ್ಯ ವುಳ್ಳವರಾಗಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಇತ್ತ ಹಿಪ್ಪರಗಿಯಲ್ಲಿ ದಿವಾಕರ ದೀಕ್ಷಿತರಿಗೆ ಕೆಟ್ಟ ಸ್ವಪ್ನಗಳು ಬೀಳತೊಡ

ಗಿದವು. ಒಂದು ದಿವಸ ದೀಕ್ಷಿತರು ಅವರ ಸ್ವಪ್ನದಲ್ಲಿ ಹೋಗಿ — ಶ್ರೀಮಾರ್ತಂಡ ಭೈರವನ ಮುಂದಿರುವ ಪದಾರ್ಥಗಳನ್ನು ತಕ್ಕೊಂಡು ತೀವ್ರವಾಗಿ ಬಾ, ಎಂದು ಹೇಳಿದರು. ಆಗ ಮಧ್ಯರಾತ್ರಿಯಾಗಿತ್ತು. ಆದರೂ ದಿವಾಕರ ದೀಕ್ಷಿತರು ಗುಡಿಗೆ ಹೋಗಿ ನೋಡಲು, ದೇವರ ಮುಂಭಾಗದಲ್ಲಿ ಒಂದು ಎಳ್ಳಿನ ಗುಂಪೆ ಯೂ, ಒಂದು ಬಿಳಿ ಅಕ್ಕಿಯ ಗುಂಪೆಯೂ ಕಂಡವು ಆಗ ಅವರ ಎದೆಯು ಧಸಕ್ಕೆಂದಿತು. ಅವರು ಅವುಗಳನ್ನು ತಕ್ಕೊಂಡು ಹಾಗೇ ಹೊರಟರು. ಅವರ ದುಃಖವು ಹೃದಯದಲ್ಲಿ ಹಿಡಿಸದಾಯಿತು ಆಗ ದೀಕ್ಷಿತರು ಮಧ್ಯಮಾರ್ಗ ದಲ್ಲಿಯೇ ದರ್ಶನ ಕೊಟ್ಟು, ಅವರನ್ನು ಸಂತೈಸಿದರು ದಿವಾಕರ ದೀಕ್ಷಿತರು ಎಳನೆಯ ದಿವಸ ಮುರುಗೋಡಕ್ಕೆ ಬಂದರು ಅವರು ಬಹಳ ಶೋಕವನ್ನು ಮಾಡಿದರು. ಅವರನ್ನು ಅವರ ಕಕ್ಕಂದಿರಾದ ಪ್ರಭಾಕರ ದೀಕ್ಷಿತರು ಸಮಾ ಧಾನಗೊಳಿಸಿ, ದೀಕ್ಷಿತರು ಅಂತ್ಯಕಾಲದಲ್ಲಿ ಉಪದೇಶಿಸಿದ ವಚನಗಳನ್ನು ಹೇಳಿ ದರು. ಮುಂದಿನ ಕಾರ್ಯಗಳನ್ನೆಲ್ಲ ದಿವಾಕರ ದೀಕ್ಷಿತರೇ ಮಾಡಿದರು. ಕಾಕ ಪಿಂಡದ ದಿವಸ ಕಾಗೆಯು ಪಿಂಡವನ್ನು ಮುಟ್ಟಲೊಲ್ಲದು. ದಿವಾಕರ ದೀಕ್ಷಿ ತರ ಹೊರತಾಗಿ ಬೇಕಾದವರು ತಮ್ಮ ಮನಸ್ಸಿನಂತೆ ಪ್ರತಿಜ್ಞೆಯನ್ನು ಮಾಡಿ ನೀರು ಬಿಟ್ಟರೂ, ಕಾಗೆಯು ಪಿಂಡವನ್ನು ಮುಟ್ಟಲೊಲ್ಲದು ಆಗ ದಿವಾಕರ ದೀಕ್ಷಿತರು: —"ತಾತರೇ, ನೀವು ಭಕ್ತರನ್ನು ಸಲಹಿದಂತೆಯೇ ನಾನೂ ಸಲಹು ತ್ತೇನೆ" ಎಂದು ಪ್ರತಿಜ್ಞಾಪೂರ್ವಕವಾಗಿ ನೀರನ್ನು ಬಿಡಲು, ಕಾಕಪಿಂಡವನ್ನು ಕಾಕವು ಸ್ಪರ್ಶಮಾಡಿ ತಿಂದುಬಿಟ್ಟಿತು. ಒಳಿಕ ಮುಂದಣ ಕಾರ್ಯಗಳೆಲ್ಲ ಶಾಸ್ತ್ರಾನುಸಾರವಾಗಿ ಜರುಗಿದವು ದಾನ-ಧರ್ಮಗಳು ವಿಶೇಷವಾಗಿ ಮಾಡ ಲ್ಪಟ್ಟವು; ಬ್ರಾಹ್ಮಣ ಸಂತರ್ಪಣೆಯಾದರೂ ಚನ್ನಾಗಿ ಮಾಡಲ್ಪಟ್ಟಿತು. ಉತ್ತರ ಕ್ರಿಯೆಯ ಕಾಲದಲ್ಲಿ ಎಷ್ಟೋ ಶಿಷ್ಯರು ಸಪಿಂಡಿಯಾದ ಹೊರತು ಊಟಮಾಡು ವದಿಲ್ಲೆಂದು ಹಟಹಿಡಿದ್ದರು. ಅವರಿಗೆ ದೀಕ್ಷಿತರು ದರ್ಶನ ಕೊಟ್ಟು, ಉಣ್ಣ ಲಿಕ್ಕೆ ಪ್ರತಿಬಂಧವಿಲ್ಲೆಂದು ಹೇಳಲು, ಅವರು ಊಟಕ್ಕೆ ಬಂದರು. ಇಂತು ಉತ್ತರಕ್ರಿಯೆಯು ಸಂಭ್ರಮದಿಂದ ಮಾಡಲ್ಪಟ್ಟಿತು.

ಮುಂದೆ ಒಂದುದಿವಸ ಶ್ರೀ ಗುರುಗಳು ದಿವಾಕರದೀಕ್ಷಿತರ ಸ್ವಪ್ನದಲ್ಲಿ- ನಾನು ಸದ್ಯಕ್ಕೆ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಲಿಂಗರೂಪದಿಂದ ಅಶ್ವತ್ಥವೃಕ್ಷದಡಿಯಲ್ಲಿ ರುವೆನು. ಕೆಂಗೇರಿಯೇ ನನ್ನ ವಾಸಸ್ಥಳವು! ನಾನು ಅದರಂತೆ ಭಕ್ತರಿಗೆ ಹೇಳಿ ರುವೆನು. ಆದುದರಿಂದ ಸುಬ್ರಹ್ಮಣ್ಯಕ್ಷೇತ್ರಕ್ಕೆ ಹೋಗಿ, ಅಲ್ಲಿಯ ಲಿಂಗವನ್ನು

ತಂದು ಕೆಂಗೇರಿಯಲ್ಲಿ ಸ್ಥಾಪಿಸು; ಅಂದರೆ ಮೊದಲಿನಂತೆ ಭಕ್ತರ ಬಯಕೆಗಳನ್ನು ಪೂರ್ಣಮಾಡುವೆನು ನನ್ನ ಮಾತಿನಲ್ಲಿ ನಂಬಿಗೆಯಿರಲಿ ಎಂದು ಹೇಳಿದರು ಬಳಿಕ ದಿವಾಕರದೀಕ್ಷಿತರು ಶ್ರೀ ಚಿದಂಬರಸ್ಥಾನದಲ್ಲಿ ವಿಸ್ತೀರ್ಣವಾದ ದೇವಾಲಯವನ್ನು ಪುಣೆಯ 'ಢಮಢೇರೆ' ಎಂಬ ಸದ್ಗೃಹಸ್ಥರ ಸಹಾಯದಿಂದ ನಿರ್ಮಾಣ ಮಾಡಿ, ಸುಬ್ರಹ್ಮಣ್ಯ ಕ್ಷೇತ್ರದೊಳಗಿನ ಲಿಂಗವನ್ನು ತಂದು, ಬಹಳ ಸಂಭ್ರಮದಿಂದ ದೇವಾಲಯದಲ್ಲಿ ಪಂಚಕುಂಡವನ್ನನುಸರಿಸಿ, ಶಾಸ್ತ್ರವಿಧಿಯಂತೆ ಅದನ್ನು ಸ್ಥಾಪಿಸಿದರು. ವಿಪುಲ ಬ್ರಾಹ್ಮಣರ ಸಂತರ್ಪಣೆಯನ್ನು ಮಾಡಿದರು. ಕೈಲಾಸಪತಿಯಾದ ಶ್ರೀ ಚಿದಂಬರನು, ಲಿಂಗರೂಪದಿಂದ ಕೆಂಗೇರಿಯಲ್ಲಿ ವಾಸಮಾಡಿಕೊಂಡು, ಈವೊತ್ತಿಗೂ ಭಕ್ತರ ಬಯಕೆಗಳನ್ನು ಪೂರ್ಣ ಮಾಡುತ್ತಿರುವನು! ಹಲವರಿಗೆ ಪ್ರತ್ಯಕ್ಷ ದರ್ಶನವನ್ನಾದರೂ ಕೊಡುತ್ತಿರುವನು!!

---

## ಒನೆಯ ಪ್ರಕರಣ.

## ಚರಿತ್ರಬೋಧ.

ಪರಿತ್ರಾಣಾಯ ಸಾಧೂನಾಂ| ವಿನಾಶಾಯಚದುಷ್ಕೃತಾಂ ||
ಧರ್ಮಸಂಸ್ಥಾಪನಾರ್ಥಾಯ | ಸಂಭವಾಮಿಯುಗೆಯುಗೆ || ೧ ||

ಈ ಮೇಲಿನ ಭಗವದ್ವಾಣಿಯಿಂದ ಆತನ ಅವತಾರದ ಕಾರಣಗಳು ಸ್ಪಷ್ಟವಾಗಿ ತಿಳಿದು ಬರುತ್ತವಷ್ಟೇ? ತ್ರೇತಾದಿಯುಗಗಳಲ್ಲಿ ಪರಮಾತ್ಮನು ಶಸ್ತ್ರಪಾಣಿಯಾಗಿ ದುಷ್ಟನಿಗ್ರಹವನ್ನು ಮಾಡಿದ್ದನು; ಆದರೆ ಕಲಿಯುಗದಲ್ಲಿ ರಾಕ್ಷಸರು ಪ್ರತ್ಯಕ್ಷವಾಗಿ ಪ್ರಕಟವಾಗದೆ ಮನುಷ್ಯರ ಷಡ್ವಿಕಾರಗಳಲ್ಲಿ ಸೇರಿ, ಅವರನ್ನು ಧರ್ಮಭ್ರಷ್ಟರನ್ನಾಗ ಮಾಡುತ್ತಿರುವರಾದ್ದರಿಂದ ಭಗವಂತನು ಶಸ್ತ್ರಾಸ್ತ್ರಗಳನ್ನು ಚಲ್ಲಿಕೊಟ್ಟು ಸಾತ್ವಿಕರೂಪವನ್ನು ತಳೆದು ಬೋಧಮಾತ್ರದಿಂದ ಜನರನ್ನು ಹಾದಿಗೆ ಹಚ್ಚಬೇಕಾಯಿತು. ಆದ್ದರಿಂದ ಈತನ ಈಗಿನ ಅವತಾರಗಳು ರಾಮ-ಕೃಷ್ಣರ ಅವತಾರಗಳಷ್ಟೇ ಪೂಜ್ಯವಾಗಿರುತ್ತವೆಂದು ಹೇಳಲಾಗುವದು!! ಪ್ರಸ್ತುತದ ಚರಿತ್ರನಾಯಕನಾದ ಶ್ರೀ ಚಿದಂಬರ ಮಹಾಸ್ವಾಮಿಯು ಅವತರಿಸಿ ಏನು ಮಾಡಿದನೆಂಬದನ್ನು ವಾಚಕರು ಆತನ ಚರಿತ್ರಾವಲೋಕನದಿಂದ ಸಹಜವಾಗಿ ಕಂಡುಹಿಡಿಯಬಹುದು. ಆದರೂ ಆ ಮಹಾಮಹಿಮನ ಷಡ್ಗುಣೈಶ್ವರ್ಯದ ಸೊಬಗು

ಒಡೆದು ಕಾಣುವದಕ್ಕಾಗಿ ಇದರಲ್ಲಿ ನಮಗೆ ತಿಳಿದ ಮಟ್ಟಿಗೆ ಆತನ ಪ್ರಭಾವ ವನ್ನು ಉಲ್ಲೇಖಿಸುತ್ತೇವೆ.

ಶ್ರೀ ಚಿದಂಬರ ವಿಜಯದಲ್ಲಿ ನಾವು ಪಿತೃಭಕ್ತಿ, ದೇವಭಕ್ತಿ, ರಾಜನಿಷ್ಠೆ, ಪರಮತಸಹಿಷ್ಣುತೆ, ಭೂತದಯೆ, ಸಮತ್ವ, ನಿರಭಿಮಾನ, ಪೌರುಷಪ್ರಿಯತೆ, ಪ್ರಪಂಚದಲ್ಲಿದ್ದುಕೊಂಡು ಪರಮಾರ್ಥವನ್ನು ಸಾಧಿಸಿಕೊಳ್ಳುವದು, ಪರನಿಂದಾ ಪರಾಙ್ಮುಖತೆ, ಮಧುರಭಾಷಣ, ನಿಸ್ಪೃಹತೆ, ವಾತ್ಸಲ್ಯ, ದಯಾಲುತ್ವ, ಹೀಗೆ ಒಂದಲ್ಲ, ಎರಡಲ್ಲ ಹಲವು ಗುಣಗಳನ್ನು ಸ್ಪಷ್ಟವಾಗಿ ಕಂಡುಕೊಳ್ಳಬಹುದು. ಶ್ರೀ ಚಿದಂಬರ ದೀಕ್ಷಿತರು ಈಶ್ವರಾಂಶರಾದಾಗ್ಯೂ ಜಗತ್ತಿಗೆ ಉದಾಹರಣೆ ಯನ್ನು ಹಾಕಿಕೊಡುವ ಉದ್ದೇಶದಿಂದ ತಾಯಿ-ತಂದೆಗಳ ಮಾತನ್ನು ಎಂದೂ ಮೀರಲಿಲ್ಲ. ಅವರ ಸೇವೆಯಲ್ಲಿ ಅಂತರವನ್ನುಂಟುಮಾಡಲಿಲ್ಲ. ತಮ್ಮ ತಾಯಿಯು ಅವಸಾನಕಾಲವನ್ನು ಅರಿತವರಾಗಿದ್ದರೂ ತಂದೆಯ ಮಾತನ್ನು ಮೀರ ಲಾರದೆ, ತಾಯಿಯನ್ನಗಲಿ ಇಷ್ಟಿಗೆ ಬೆಣ್ಣೆಯನ್ನು ತರುವದಕ್ಕಾಗಿ ನೆರೆಯೂರಿಗೆ ಹೋದರು ತಮ್ಮಲ್ಲಿ ತಾಯಿಯನ್ನು ಬದುಕಿಸುವ ಸಾಮರ್ಥ್ಯವಿದ್ದರೂ ಪಿತ್ರಾಜ್ಞೆಗೆ ತಲೆಬಾಗಿ, ತಾಯಿಯನ್ನು ಬದುಕಿಸುವ ಎತ್ತುಗಡೆಯನ್ನು ಮಾಡ ಲಿಲ್ಲ. ತಂದೆಯ ದಹನಸ್ಥಾನದಲ್ಲಿ ಉಂಟಾದ ಔದುಂಬರದ ಅರ್ಚನೆ ಕುಲಸ್ವಾಮಿ ಯಾದ ಮಾರ್ತಂಡೇಶ್ವರನ ಆರಾಧನೆ, ತೀರ್ಥಯಾತ್ರೆಗಳ ಸಂಚಾರ, ಯಜ್ಞದ ನೆವದಿಂದ ಬ್ರಾಹ್ಮಣರನ್ನು ಪೂಜಿಸಿದ್ದು, ಇವೆಲ್ಲ ಶ್ರೀ ಚಿದಂಬರದೀಕ್ಷಿತರ ಈಶ್ವರ ಭಕ್ತಿಯ ನಿದರ್ಶಕಗಳಾಗಿವೆ. ಶ್ರೀಮಂತ ಬಾಜೀರಾಯನು, ನವಲಗುಂದದಲ್ಲಿ ತಮ್ಮ ಸತ್ವವನ್ನು ಪರೀಕ್ಷಿಸಿದರೂ ಸಿಟ್ಟಾಗದೆ, ಆತನನ್ನು ಮಧುರವಚನಗಳಿಂದ ಸಮಾಧಾನಗೊಳಿಸಿ, ಫಲ-ಮಂತ್ರಾಕ್ಷತೆಗಳನ್ನು ಕೊಟ್ಟು, ಅನುಗ್ರಹಿಸಿದ್ದನ್ನೂ ಬಾಜೀರಾಯನು ಸೊಕ್ಕಿನಿಂದ ಫಲ-ಮಂತ್ರಾಕ್ಷತೆಗಳನ್ನು ಸೇವಕರ ಕೈಯಲ್ಲಿ ಕೊಟ್ಟಾಗ ಕಣ್ಣೀರು ಹಾಕಿದ್ದನ್ನೂ ನೋಡಿದರೆ ರಾಜಸತ್ತೆಯಲ್ಲಿದ್ದ ಅವರ ನಿಷ್ಠೆಯು ವ್ಯಕ್ತವಾಗುವದು. ಅವರು ಶ್ರೀ ವೇಂಕಟೇಶನನ್ನೂ, ಯಜ್ಞೇಶ್ವರ ನನ್ನೂ ಯವನ ರೂಪದಿಂದ; ಪರಮತಸಹಿಷ್ಣುತೆಯಿಂದಲೇ ಬರಮಾಡಿಕೊಂಡ ರು. ಕ್ಷಯನಾಮ ಸಂವತ್ಸರದ ಬರಗಾಲದಲ್ಲಿ ಅವರ ಭೂತದಯೆಯೂ ಪರೋಪಕಾರಬುದ್ಧಿಯೂ ಚೆನ್ನಾಗಿ ಜನರ ನಿದರ್ಶನಕ್ಕೆ ಬಂದವು. ಯಜ್ಞಾಸಮ ಯದಲ್ಲಿ ಶಾಸ್ತ್ರಸಮ್ಮತವಾದ ಚಂದ್ರಮಸಿಯನ್ನು ಸ್ವೀಕರಿಸುವಾಗ ಅವರು ಆಶಾ ಬದ್ಧರಾಗಿದ್ದರೆ, ಅಪಾರವಾದ ಸಂಪತ್ತು-ವೈಭವಗಳನ್ನೂ, ಗ್ರಾಮ-ಕ್ಷೇತ್ರ

ಗಳನ್ನೂ ಸಂಪಾದಿಸಬಹುದಾಗಿತ್ತು; ಆದರೆ ಅವರು ಆ ಕಾಲದಲ್ಲಿ ಕಾಲನಿರ್ಬಂಧ ವನ್ನು ಮಾಡಿ, ದಾನಪತ್ರಗಳನ್ನು ನಿರಾಕರಿಸಿ ತಮ್ಮ ನಿಸ್ಪೃಹತೆಯನ್ನು ಬೈಲಿಗಿಟ್ಟರು.

ಯಜ್ಞಸಮಾರಂಭದಲ್ಲಿ ಋತ್ವಿಜರಂತೆ ಎಲ್ಲ ಬ್ರಹ್ಮವೃಂದವನ್ನೂ ಸನ್ಮಾನಿಸುವೆನೆಂದು ಹೇಳಿ, ಅದರಂತೆ ವರ್ತಿಸಿದ್ದನ್ನೂ, ಶತ್ರು-ಮಿತ್ರರನ್ನು ಸರಿಯಾಗಿಯೇ ಅನುಗ್ರಹಿಸಿದ್ದನ್ನೂ ನೋಡಿದರೆ, ಇ ಸಮತ್ವದ ಲಕ್ಷಣಗಳೆಂದು ಮನವರಿಕೆಯಾಗುವದು. ಘಂಟಾರವ, ಟೀಪೂಸುಲ್ತಾನ, ಹರಿದಾಸ, ವೈಷ್ಣವ ಮಾಂತ್ರಿಕ ಇವರೇ ಮೊದಲಾದವರ ಗರ್ವಹರಣವನ್ನು ಮಾಡಿ, ಅವರನ್ನು ಸನ್ಮಾರ್ಗಕ್ಕೆ ಹಚ್ಚಿದ್ದರ ಮರ್ಮವು ವಿಚಾರಣೀಯವಾಗಿದೆ. ಮೃತವೃಷಭ ಸಂಜೀವನ, ವಿಧವಾಸೌಭಾಗ್ಯದಾನ, ರಾಮನ ಮದುವೆ, ಅಸಾಧ್ಯ ಸಂಕಟ ನಿವಾರಣ ಇವೇ ಮೊದಲಾದ ಸಂಗತಿಗಳು ಪೌರುಷಪ್ರಿಯತೆಯ ಹಾಗು ಕರ್ತುಮ-ಕರ್ತುಮಶಕ್ತಿಯ ದರ್ಶಕಗಳಾಗಿವೆ. ದೀಕ್ಷಿತರು ಹಲವು ಅತ್ಯದ್ಭುತ ಕೃತ್ಯಗಳನ್ನು ಮಾಡಿದಾಗ್ಯೂ ಅವರು ತಾನು ದರಿದ್ರ ಬ್ರಾಹ್ಮಣನೂ, ನರಮನುಷ್ಯನೂ ಎಂದು ಲೀನತೆಯನ್ನು ತೋರಿಸಿದ್ದು, ನಿರಾಭಿಮಾನದ ಉದಾಹರಣೆಯಾಗಿದೆ. ತಾವು ಇಬ್ಬರು ಹೆಂಡರು, ಏಳುಮಂದಿ ಮಕ್ಕಳು ಇವರಿಂದ ಕೂಡಿಕೊಂಡು, ಸಂಸಾರವನ್ನು ಮಾಡುತ್ತಿದ್ದರಲ್ಲದೆ, ಅಣ್ಣಂಭಟ್ಟನಿಗೆ ಹೆಂಡತಿಯೊಡನೆ ಸಂಸ್ಕಾರಮಾಡಲು, ಉಪದೇಶಿಸಿದ್ದನ್ನು ನೋಡಿದರೆ, ಪ್ರಪಂಚದಲ್ಲಿದ್ದು ಪರಮಾರ್ಥವನ್ನು ಸಾಧಿಸಬಹುದೆಂಬ ಸಂಗತಿಯು ವ್ಯಕ್ತವಾಗುತ್ತದೆ. ಶ್ರೀ ಮಹಾಸ್ವಾಮಿಗಳು ತಮ್ಮ ಇಡಿ ಆಯುಷ್ಯದಲ್ಲಿಯಾದರೂ ತಪ್ಪಿತಪ್ಪಿ ಅಸತ್ಯವಾಕ್ಕು ನುಡಿದದ್ದೂ, ಬಿರುಸುಮಾತುಗಳನ್ನಾಡಿದ್ದೂ ಕಂಡುಬರುವದಿಲ್ಲ. ಧುಂಡಜೀವಾಘ, ಬಾಪೂಗೋಖಲೆ, ರಾಜಾರಾಮ ಮಹಾರಾಜ ಮತ್ತು ಶಿವಶಾಸ್ತ್ರಿಗಳೇ ಮೊದಲಾದ ಸಾತ್ವಿಕತಾಮಸವೃತ್ತಿಯ ಭಕ್ತರ ವಿಷಯವಾಗಿಯೂ, ಸರಿಸಮಾನವಾದ ವಾತ್ಸಲ್ಯವನ್ನೂ, ದಯೆಯನ್ನೂ ಪ್ರಕಟಿಸಿದ್ದನ್ನು ನೋಡಿದರೆ, ಮಹಾಸ್ವಾಮಿಯ ವಾತ್ಸಲ್ಯಗುಣವೂ, ದಯೆಯೂ ವ್ಯಕ್ತವಾಗುವವು ಇಂಥ ಅತ್ಯುಜ್ವಲಗುಣಗಳುಳ್ಳ ಶ್ರೀ ಚಿದಂಬರ ದೀಕ್ಷಿತರ ಗುಣಗಳನ್ನು ಎಷ್ಟು ವರ್ಣಿಸಬೇಕು?

ಪ್ರಿಯ ವಾಚಕರೇ, ಭ್ರಮವನ್ನು ಬದಿಗೊತ್ತಿ, ಬಹು ಭಕ್ತಿಯಿಂದ ಈ ಪ್ರಕರಣದ ಆರಂಭದಲ್ಲಿ ಬರೆದ ಭಗವಂತನ ವಚನದಲ್ಲಿ ವಿಶ್ವಾಸವನ್ನಿಟ್ಟು,

ಮುಕ್ತಿಗೆ ಸಾಧನವಾದ ಈ ಶ್ರೀ ಚಿದಂಬರ ವಿಜಯುವನ್ನೋದಿ, ಅದರಲ್ಲಿಯು ಮೇಲ್ಕಾಣಿಸಿದ ಉಜ್ವಲ ಗುಣಗಳು ನಮ್ಮಲ್ಲಿ ಉಂಟಾಗಿ, ಸಂಸಾರವು ಸುಖಕರ ವಾಗುವಂತೆ ಶ್ರೀ ಸದ್ಗುರುವನ್ನು ಒಲಿಸಿಕೊಂಡು ನಮ್ಮ ಜನ್ಮದ ಸಾರ್ಥಕವನ್ನು ಮಾಡಿಕೊಳ್ಳೋಣ! ಶ್ರೀಗುರುವು ಎಲ್ಲರಿಗೂ ಸದ್ಬುದ್ಧಿಯುನ್ನೀಯಲಿ! ಶ್ರೀ ಸದ್ಗುರ್ವರ್ಪಣಮಸ್ತು!! ಶುಭಂಭವತು!!!

## || ಇತಿ ಶ್ರೀ ಚಿದಂಬರ ವಿಜಯು ಸಂಪೂರ್ಣ. ||



# ಪರಿಶಿಷ್ಟ (ಅ)

## ಸಖಾರಾಮ ಗರ್ದೆಯವರ ಅಲ್ಪ ಚರಿತ್ರೆ.

ಶ್ರೀ ಮಚ್ಚರಿತ್ರದಲ್ಲಿ ಗರ್ದೆಯವರು ಬರೆದಿಟ್ಟ ಆತ್ಮವೃತ್ತಾಂತವೇನಂದರೆ:- "ನನ್ನ ಹೆಸರು ಸಖಾರಾಮ. ನನ್ನನ್ನು ಅಪ್ಪಾನಾನಾ ಎಂತಲೂ ಕರೆಯುತ್ತಾರೆ. ನಮ್ಮ ಆರಾಧ್ಯ ದೇವತೆಯು ಸೋಮೇಶ್ವರನು. ನಮ್ಮ ಪೂರ್ವಜರಲ್ಲೊಬ್ಬರು ತೀರ್ಥ-ಯಾತ್ರೆಗಳನ್ನು ಮಾಡುತ್ತ ಸಹ್ಯಾದ್ರಿಯ ದಕ್ಷಿಣದಲ್ಲಿ ಸಪ್ತಲಿಂಗೀ ನದೀ ತಟಾಕದಲ್ಲಿರುವ ಧಾಮಾಪೂರವೆಂಬ ಕ್ಷೇತ್ರಕ್ಕೆ ಹೋಗಿದ್ದರು. ಅಲ್ಲಿ ಅವರು ಬಹು ಭಕ್ತಿಯಿಂದ ಶ್ರೀಸೋಮನಾಥನನ್ನು ಪ್ರಸನ್ನೀಕರಿಸಿಕೊಂಡರು. ಶ್ರೀಸೋಮ ನಾಥನು ಅವರ ಭಕ್ತಿಗೆ ಮೆಚ್ಚಿ, ಅವರಿಗೆ ಪ್ರತ್ಯಕ್ಷ ದರ್ಶನವನ್ನು ಕೊಟ್ಟನು. ಅಂದಿನಿಂದ ನಮ್ಮ ವಂಶಸ್ಥರು, ಶ್ರೀ ಸೋಮನಾಥನು ತಮ್ಮ ಆರಾಧ್ಯ ದೇವತೆ ಯೆಂದು ತಿಳಿದು ಆತನನ್ನು ಆರಾಧಿಸಹತ್ತಿದರು. ಕೊಂಕಣದೊಳಗಿನ 'ಗುಹಾ ಗರ ಎಂಬಲ್ಲಿ ಒಂದು ಶ್ರೀ ದುರ್ಗಾದೇವಿಯ ಸ್ಥಾನವಿರುತ್ತದೆ. ಅವಳೇ ನಮ್ಮ ಕುಲದೇವತೆಯು. ಇದರ ಹೊರತು ನಾವು ಜೇಜೂರಿಯ ಖಂಡೋಬನನ್ನಾ ದರೂ ಭಜಿಸುತ್ತೇವೆ. ಈ ಖಂಡೋಬನು ನಮ್ಮ ಮುತ್ತಜ್ಜನಿಗೆ ಒಲಿದಿದ್ದ ನಂತೆ! ನಮ್ಮ ಗೋತ್ರವು ಜಮದಗ್ನಿ. ವೇದವು ಋಗ್ವೇದ. ಶಾಖೆಯು ಶಾಕಲ ಶಾಖೆ. ಸೂತ್ರವು ಆಶ್ವಲಾಯನವು. ಅಡ್ಡ ಹೆಸರು ಗರ್ದೆ. ನಾವು ಬ್ರಾಹ್ಮಣರು. ನಮ್ಮ ಮೂಲಪುರುಷನು ಭಟ್ಟೋಜಿಯು. ಆತನ ಮಗನು ಕೇಶವನು. ಸೊಸೆಯು ಮಣಿಕರ್ಣಿಕೆ. ಕೇಶವನ ಮಗನು ಕೃಷ್ಣನು. ಈತನ ಹೆಂಡತಿಯ ಹೆಸರು ರುಕ್ಮಿಣಿಯು. ಈ ಕೃಷ್ಣನ ಮಗನಾದ ತ್ರ್ಯಂಬಕನೇ ನನಗೆ ತಂದೆಯಾಗ ಬೇಕು ಕಾಶ್ಯಪಗೋತ್ರದ ಮೋರೋಪಂತ ಪಂಡಿತರ ಮಗಳಾದ 'ಅಂಬಾ' ಎಂಬವಳು ನನಗೆ ಪತ್ನಿಯಾಗಬೇಕು. ನನ್ನ ತಂದೆಯಾದ ತ್ರ್ಯಂಬಕನಿಗೆ ನಾಲ್ವರು ಅಣ್ಣ-ತಮ್ಮಂದಿರೂ, ಮೂವರು ಅಕ್ಕ-ತಂಗಿಯರೂ, ಮೂವರು ಹೆಣ್ಣು ಮಕ್ಕ ಳೂ, ಇಬ್ಬರು ಗಂಡುಮಕ್ಕಳೂ ಇದ್ದರು. ನಾನೇ ಆತನಿಗೆ ಹಿರಿಯ ಮಗನು.

ನಾನು ಕೆಲವು ಕಾರಣಗಳ ಮೂಲಕ ವೇಣುಗ್ರಾಮದಲ್ಲಿ(ಬೆಳಗಾವಿಯಲ್ಲಿ) ಸೆರೆಮನೆಯಲ್ಲಿದ್ದೆನು. ಶ್ರೀ ಚಿದಂಬರ ದೀಕ್ಷಿತರ ಕೀರ್ತಿಯು ಕರ್ಣೋಪಕರ್ಣ ಗಳಿಂದ ನನಗೆ ಗೊತ್ತಾಗಿತ್ತು. ಒದಗಿದ ಸಂಕಟದೊಳಗಿಂದ ಪಾರು ಮಾಡ

ಬೇಕೆಂದು ಶ್ರೀ ಚಿದಂಬರನನ್ನು ಬೇಡಿಕೊಳ್ಳುತ್ತಿದ್ದೆನು. ಹೀಗಿರಲು ಒಂದು ದಿವಸ ಶ್ರೀ ಚಿದಂಬರನು ಬ್ರಾಹ್ಮಣ ವೇಷದಿಂದ ನನ್ನ ಸ್ವಪ್ನದಲ್ಲಿ ಬಂದು:— ನಾನು, ಚಿದಂಬರನು. ನೀನು ನನ್ನ ಚರಿತ್ರವನ್ನು ಆರ್ಯಾ-ವೃತ್ತಗಳಿಂದ ವರ್ಣಿಸು, ಎಂದು ಹೇಳಲು, ನಾನು:—ನನಗೆ ಏನೂ ಬರುವದಿಲ್ಲ. ವೃತ್ತಗಳ ಹೆಸರು ಸಹ ಗೊತ್ತಿಲ್ಲ. ಅಂದಬಳಿಕ ತಮ್ಮ ಚರಿತ್ರವನ್ನು ಹೇಗೆ ರಚಿಸಲಿ? ಎಂದು ಕೇಳಲು, ಶ್ರೀ ಚಿದಂಬರನು:—ನೀನು ದಡ್ಡನಿದ್ದರೂ ಚಿಂತೆಯಿಲ್ಲ. ನನ್ನ ಮಾತಿನಲ್ಲಿ ನಂಬಿಗೆಯನ್ನಿಟ್ಟು, ಚರಿತ್ರವನ್ನು ಬರೆಯಲಿಕ್ಕೆ ಪ್ರಾರಂಭಿಸು, ಅಂದರೆ ಅದು ಸಾಧು-ಸತ್ಪುರುಷರಿಗೂ ಕೂಡ ಮಾನ್ಯವಾಗುವದು, ಎಂದು ಆಶ್ವಾಸನವನ್ನು ಕೊಟ್ಟು ಗುಪ್ತನಾದನು

ಬಳಿಕ ನಾನು ಮರುದಿವಸ ಮಹಾಸ್ವಾಮಿಯ ಪಾದವನ್ನು ಸ್ಮರಿಸಿ, ಆತನ ಚರಿತ್ರವನ್ನು ಬರೆಯಲು ಪ್ರಾರಂಭ ಮಾಡಿದೆನು. ನನ್ನ ಮೈಯಲ್ಲಿ ಸ್ಫೂರ್ತಿಯುಂಟಾಯಿತು. ಸೆರೆಮನೆಯಲ್ಲಿ ನನಗೆ ಕಾಗದ-ಮಸಿ-ಲೆಕ್ಕಣಿಕೆ ಮೊದಲಾದ ಬರವಣಿಗೆಯ ಸಾಧನಗಳನ್ನು ಕೊಡುವವರಾರು? ನಾನು ಸೆಗಣಿಯನ್ನು ನೀರಿನಲ್ಲಿ ಕಲಿಸಿ, ಅದೇ ಮಸಿಯೆಂದು ತಿಳಿದು, ಬಿದರಿನ ಗಣಿಕೆಯಿಂದ ಸೆರೆಮನೆಯ ಗೋಡೆಯ ಮೇಲೆ ಶ್ರೀ ಚಿದಂಬರ ಚರಿತ್ರವನ್ನು ಬರೆಯಲಾರಂಭಿಸಿದೆನು. ಈ ಆರ್ಯಾವೃತ್ತಗಳಲ್ಲಿ ಶ್ರೀ ಚಿದಂಬರ ಚರಿತ್ರವನ್ನು ತಕ್ಕಮಟ್ಟಿಗೆ ವರ್ಣಿಸಿ, ಸ್ವಂತದ ಬಿಡುಗಡೆಯ ವಿಷಯದಲ್ಲಿ ಶ್ರೀ ಸ್ವಾಮಿಯನ್ನು ಪ್ರಾರ್ಥಿಸಿದೆನು. (ಶಕೆ ೧೭೨೧ ಸಿದ್ಧಾರ್ಥಿನಾಮ ಸಂವತ್ಸರ ಮಾಘಮಾಸ) ಮುಂದೆ ಸ್ವಲ್ಪ ದಿವಸಗಳಲ್ಲಿಯೇ ನನ್ನ ಬಿಡುಗಡೆಯ ವಿಷಯದ ಆಶೀರ್ವಾದವು ನಾರಾಯಣ ಯತಿಗಳ ಮುಖಾಂತರವಾಗಿ ಗೊತ್ತಾಯಿತು. ಯತಿಗಳು ನನಗೆ ಸೆರೆಮನೆಯಲ್ಲಿಯೇ ಶ್ರೀ ಚಿದಂಬರ ದೀಕ್ಷಿತರ ಆಶೀರ್ವಾದವನ್ನು ಹೇಳಿದರು. ದೀಕ್ಷಿತರ ಆಶೀರ್ವಾದದಂತೆ ತೀವ್ರವೇ ನನ್ನ ಬಿಡುಗಡೆಯ ಕಾಲವು ಅಕಸ್ಮಾತ್ತಾಗಿ ಒದಗಿ ಬಂತು. ಆಗ ನಾನು ನಮ್ಮ ಮೇಲಧಿಕಾರಿಗಳಿಗೆ ವಿಜ್ಞಾಪನೆಯನ್ನು ಮಾಡಿಕೊಂಡು, ಕಾಗದ-ಮಸಿ-ಲೆಕ್ಕಣಿಕೆಗಳನ್ನು ಸಂಪಾದಿಸಿ, ಗೋಡೆಗಳ ಮೇಲೆ ಬರೆದಂಥ ಶ್ರೀ ಚರಿತ್ರದ ಆರ್ಯಾವೃತ್ತಗಳನ್ನೆಲ್ಲ ಬರಕೊಂಡು ಅಲ್ಲಿಂದ ಮುಕ್ತನಾಗಿ, ದೇವಲಾಪುರಕ್ಕೆ(ದೇವಪುರಕ್ಕೆ) ಬಂದು ಶ್ರೀ ಚಿದಂಬರ ದೀಕ್ಷಿತರ ಚರಣಕಮಲಗಳನ್ನು ಪ್ರತ್ಯಕ್ಷವಾಗಿ ಕಂಡೆನು. ಆವರಿಗೆ ಆರ್ಯಾವೃತ್ತಗಳನ್ನು ತೋರಿಸಲು, ಅವರು ಸವಿಸ್ತಾರವಾದ ಚರಿತ್ರ ಬರೆಯಲು ಆಜ್ಞಾ

ಪಿಸಿದರು. ಆಗ ನಾನು ಚರಿತ್ರ ಬರೆಯಲು ಆರಂಭಿಸಿ ಶಕೆ ೧೭೨೨ ರೌದ್ರ್ಯಾಬ್ದ ದಲ್ಲಿ ಅರ್ಧ ಚರಿತ್ರವನ್ನು ಮುಗಿಸಿದೆನು.''

ಈ ಸಖಾರಾಮನ ವಿಷಯವಾಗಿ ಇದಕ್ಕೂ ಹೆಚ್ಚಿನ ಸಂಗತಿಗಳು ಗೊತ್ತಾಗಿಲ್ಲ. ಇವನು ಶ್ರೀ ಚಿದಂಬರ ದೀಕ್ಷಿತರ ಸಮಕಾಲೀನನು. ಮೇಲಾಗಿ ವಿದ್ವಾಂಸನು. ಇವನು ಶ್ರೀ ಚಿದಂಬರ ದೀಕ್ಷಿತರ ವಿಷಯವಾಗಿ 'ಶ್ರೀಮಚ್ಚರಿತ್ರ'ವೆಂಬ ಗ್ರಂಥವನ್ನು ಮಹಾರಾಷ್ಟ್ರ ಭಾಷೆಯಲ್ಲಿ ಪದ್ಯರೂಪವಾಗಿ ಬರೆದಿರುವನು. ಇದರಲ್ಲಿ ನಾಲ್ಕು ಸ್ತಬಕಗಳಿದ್ದು, ಒಂದೊಂದು ಸ್ತಬಕದಲ್ಲಿ ಎಷ್ಟೋ ಅಧ್ಯಾಯಗಳಿರುವವು. ಈ ಗ್ರಂಥದಲ್ಲಿ ಬಹಳವಾದಿ ಛಂದಃಶಾಸ್ತ್ರದೊಳಗಿನ ಎಲ್ಲ ವೃತ್ತಗಳ ಸಮಾವೇಶವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಇದರಲ್ಲಿ ಉಲ್ಲೇಖಿತವಾದ ಪದ್ಯಗಳ ಮೇಲಿಂದ ಸಖಾರಾಮನು ಗಾಯನ ವಿದ್ಯೆಯಲ್ಲಿ ನಿಪುಣನಿದ್ದನೆಂದು ಗೊತ್ತಾಗುತ್ತದೆ. ಬಗೆ ಬಗೆಯ ವೃತ್ತಗಳಿಂದ ಕೂಡಿದ ಇಂತಹ ದೊಡ್ಡ ಗ್ರಂಥವನ್ನು ಮಹಾರಾಷ್ಟ್ರ ಭಾಷೆಯಲ್ಲಿ ಕಾಣುವದು ಅಪರೂಪ! ಸಖಾರಾಮನ ಬರವಣಿಗೆಯು ಸರಣಿಯು ಉಚ್ಚ ಪ್ರತಿಯದಿರುವದು. ಈತನು ದೀಕ್ಷಿತರ ಬಳಿಯಲ್ಲಿ ಕಡೆತನಕ ಇದ್ದನು. ಮತ್ತು ಅವರ ಮಹಿಮೆಗಳನ್ನು ಆಗಾಗ್ಗೆ ಬರೆದು ಇಡುತ್ತಿದ್ದನು. ಈತನ ಈ ಗ್ರಂಥದಲ್ಲಿ ಚರಿತ್ರದ ಹೊರತಾಗಿ ಜ್ಯೋತಿಷ, ಧಾರ್ಮಿಕ, ಐತಿಹಾಸಿಕ ಮತ್ತು ಸಾಮಾಜಿಕ ಮೊದಲಾದ ವಿಷಯಗಳ ಮಾರ್ಮಿಕವೂ, ವಿಶದವೂ ಆದ ವಿವೇಚನವು ಬಂದಿರುವದು. ಅಲ್ಲಲ್ಲಿ ಕಾಲನಿರ್ದೇಶವನ್ನು ಮಾಡಿದ್ದರಿಂದ ಗ್ರಂಥಕ್ಕೆ ಒಂದು ಬಗೆಯಿಂದ ಹೆಚ್ಚಿಗೆ ಪ್ರೌಢತ್ವವು ಪ್ರಾಪ್ತವಾಗಿರುವದು. ಇವೆಲ್ಲ ಸಂಗತಿಗಳನ್ನು ವಿಚಾರಿಸಿದರೆ ಸದ್ಯಕ್ಕೆ ಶ್ರೀ ಚಿದಂಬರ ದೀಕ್ಷಿತರ ವಿಷಯವಾಗಿ ಉಪಲಬ್ಧವಿರುವ ಗ್ರಂಥಗಳಲ್ಲಿ ಇದಕ್ಕೆ ಅಗ್ರಸ್ಥಾನವನ್ನು ಕೊಡಲಿಕ್ಕೆ ಯಾವ ಪ್ರತಿಬಂಧವೂ ಇರುವದಿಲ್ಲ. ಈ ಗ್ರಂಥವು ಇನ್ನೂ ಮುದ್ರಿತವಾಗಿಲ್ಲ. ಅದು ಶ್ರೀ ದೀಕ್ಷಿತರ ವಂಶಸ್ಥರಾದ ಬಡ್ನಿಯ ಪರಮ ಪೂಜ್ಯ ಚಿಮ್ಮಣದೀಕ್ಷಿತರ ಬಳಿಯಲ್ಲಿರುತ್ತದೆ. ಅದನ್ನು ಅವರು ಶ್ರಮಬಟ್ಟು ಅಚ್ಚು ಹಾಕಿಸಿದರೆ ಶ್ರೀ ಚಿದಂಬರ ಭಕ್ತರ ಮೇಲೆ ಬಳ್ಳೇ ಅನುಗ್ರಹ ಮಾಡಿದಂತಾಗುವದು.

---

# ಪರಿಶಿಷ್ಟ [ಬ]

ಶ್ರೀ ಚಿದಂಬರ ಮಹಾಸ್ವಾಮಿಯು ಯಜ್ಞಮಾಡಿದಾಗ ಮೈಸೂರ ಸೀಮೆಯ ನಾಗಮಂಗಲವೆಂಬ ಗ್ರಾಮದಿಂದ ಕೃಷ್ಣಪ್ಪ, ತಿಪ್ಪಯ್ಯರೆಂಬ ಬ್ರಾಹ್ಮಣ ಸೋದರ ವಟುಗಳಿಬ್ಬರು ಗೊಣ್ಣಾಗರಕ್ಕೆ ಹೋಗಿದ್ದರು. ಆ ಮಹಾ ಸಮಾರಂಭದಲ್ಲಿ ಒಂದು ದಿವಸ ಬ್ರಹ್ಮಭೋಜನಕ್ಕೆ ತಡವಾಗಲು, ಈ ವಟುಗಳಿಬ್ಬರು ಹಸಿವೆಯಿಂದ ಬಳಲಿ, ಬಾಲಭಾವದಿಂದ ಕೋಠಿಯಲ್ಲಿ ಫಲಾಹಾರವನ್ನು ಬೇಡಿ ಇಸುಕೊಳ್ಳಲು ಭಯಪಟ್ಟು ಮಹಾಸ್ವಾಮಿಯನ್ನು ದೂಷಿಸಿದರು. ಸರ್ವಾಂತರ್ಯಾಮಿಯಾದ ಮಹಾಸ್ವಾಮಿಯು ಈ ಬಾಲಕರ ಹಸಿವೆಯನ್ನು ಹೋಗಲಾಡಿಸಿ, ಅವರನ್ನು ಸಂತೋಷಪಡಿಸಿದನು. ಸಮಾರಂಭವು ಸಂಪೂರ್ತಿಯಾದ ಬಳಿಕ ಸಮಸ್ತ ಪರಿವಾರಕ್ಕೂ ಅಪ್ಪಣೆಯನ್ನು ಕೊಡುವಾಗ ಆ ವಟುಗಳನ್ನು ತಮ್ಮ ಬಳಿಗೆ ಕರೆಯಿಸಿಕೊಂಡರು. ಈ ಲಕ್ಷಾಂತರ ಜನರಲ್ಲಿ ಗುರುತು ಪರಿಚಯವಿಲ್ಲದ ನಮ್ಮನ್ನು ದೀಕ್ಷಿತರು ಯಾಕೆ ಕರೆಸಿದರೆಂದು ಆ ಹುಡುಗರು ಗಾಬರಿಯಾಗಿ, ತಾವು ಒಂದು ದಿನ ಸ್ವಾಮಿಯನ್ನು ನಿಂದಿಸಿದ್ದರಿಂದ ತಮಗೆ ಈ ದಿನ ಶಾಪವು ಆಗುವದೆಂದು ತಿಳಿದರು.

ಅವರು ಈ ಬಗೆಯ ತಿಳುವಳಿಕೆಯಿಂದ ನಡಗುತ್ತ ಮಹಾಸ್ವಾಮಿಯ ಚರಣಗಳಲ್ಲಿ ದೃಷ್ಟಿಯನ್ನಿಟ್ಟು ನಿಂತುಕೊಳ್ಳಲು, ಸ್ವಾಮಿಯು ಅವರನ್ನು ಸಂತೈಸಿ ಅವರಿಗೆ ಫಲಮಂತ್ರಾಕ್ಷತೆಗಳನ್ನು ಕೊಟ್ಟು, “ಇವನ್ನು ನೀವು ೬ ತಿಂಗಳ ವರೆಗೆ ಪೂಜಿಸಿರಿ; ಅಂದರೆ ನಿಮಗೆ ಪುನಃ ನನ್ನ ದರ್ಶನವಾಗುವದು” ಎಂದು ಹೇಳಿದರು. ಈ ರೀತಿ ಸ್ವಾಮಿಯು ತಮ್ಮ ಮೇಲೆ ಅನುಗ್ರಹ ಮಾಡಿದ್ದನ್ನು ನೋಡಿ, ಆ ಸೋದರರು ಸಂತೋಷಬಟ್ಟು, ಮನೆಗೆ ಬಂದು, ಮಾತೆಗೆ ಎಲ್ಲ ಸಂಗತಿಯನ್ನು ಹೇಳಿದರು. ಆಗ ಆ ಮುದುಕೆಯು ದಿನಾಲು ನಮ್ಮ ಮನೆಗೆ ಒಬ್ಬ ಬ್ರಾಹ್ಮಣನು ಬಂದು ಹಾಲೂ, ಹಣ್ಣೂ ತನಗೆ ಕೊಡುತ್ತಿರುವ ಸಂಗತಿಯನ್ನು ಹೇಳಿದಳು. ಆ ಬ್ರಾಹ್ಮಣನ ಲಕ್ಷಣವನ್ನು ಕೇಳಿ, ಆ ವಟುಗಳು, ತಮ್ಮ ತಾಯಿಯನ್ನು ಚಿದಂಬರನೇ ರಕ್ಷಿಸಿದನೆಂದು ನಿಶ್ಚಯಿಸಿದರು.

ಹೀಗಿರಲು, ೬ ತಿಂಗಳುಗಳು ಕಳೆದವು. ಒಂದು ದಿನ ಆ ಸೋದರರಿಬ್ಬರು ಹೊರಗೆ ಹೋದಾಗ ದೇವರ ಜಗುಲಿಯ ಮೇಲೆ ಒಂದು ಮಗುವು ಕುಳಿತು ದೇವರನ್ನು ಕಿತ್ತು ಬಿಸಾಟುವದನ್ನು ಆ ಮುದುಕೆಯು ನೋಡಿತು.

ಮನೆಯಲ್ಲಿ ಹುಡುಗರು ಇಲ್ಲದಿರಲು, ಈ ಮಗುವು ಯಾರದು; ಇಲ್ಲಿಗೆ ಹೇಗೆ ಬಂದಿರುವದು; ಎಂಬ ವಿಚಾರಗಳಲ್ಲಿ ಮುದುಕಿಯು ಮಗ್ನವಾಗಿರಲು, ಆ ಮುದುಕಿಯ ಮಕ್ಕಳು ಮನೆಗೆ ಬಂದರು. ಆಗ ಅವಳು ಈ ಸಂಗತಿಯನ್ನು ಹೇಳಲು ಅವರು ಜಗುಲಿಯ ಬಳಿಗೆ ಹೋಗಿ ನೋಡುತ್ತಾರೆ, ಮಗುವು ಇಲ್ಲ. ಮಂತ್ರಾಕ್ಷತೆಗಳನ್ನು ಕಟ್ಟಿದ್ದ ಗಂಟು ಬಿಚ್ಚಿದ್ದು ಅಲ್ಲಿ ಅಕ್ಷತೆಗಳು ಇರದೆ ಸುಂದರವಾದ ಶಾಲಿಗ್ರಾಮವು ವಿರಾಜಿಸುವದು. ಈ ಸಂಗತಿಯು ಅವಲೋಕನದಿಂದ ಆ ಬಂಧುದ್ವಯಗಳಿಗೆ ಹೇಳಕೂಡದಷ್ಟು ಆನಂದವಾಯಿತು ಮಹಾಸ್ವಾಮಿಯು ವಚನ ಕೊಟ್ಟಂತೆ ಶಾಲಿಗ್ರಾಮರೂಪದಿಂದ ಆರು ತಿಂಗಳಲ್ಲಿ ದರ್ಶನಕೊಟ್ಟನೆಂದು ಅವರು ನಂಬಿದರು. ಈ ಶಾಲಿಗ್ರಾಮವು ಇನ್ನೂ ತಮ್ಮ ಮನೆಯಲ್ಲಿ ಇರುತ್ತದೆಂದೂ, ಅದನ್ನು ಮೊನ್ನೆ ಮೊನ್ನೆ ಬ್ರಹ್ಮೀಭೂತರಾದ ಶ್ರೀ ಶಿವಗಂಗಾ ಸ್ವಾಮಿಗಳೂ ಸರ್ವೇಶ್ವರನಾದ ಚಿದಂಬರನ ಮಹಿಮೆಗೆ ಮೆಚ್ಚಿ ಭಕ್ತಿಪೂರ್ವಕವಾಗಿತರಿಸಿ ನೋಡಿ ಆಶ್ಚರಿಗೊಂಡರೆಂದೂ ಆ ಸೋದರರ ಮರಿಮಕ್ಕಳಾದ ಎನ್, ಎಸ್ ಶ್ರೀಕಂಠಯ್ಯ ಎಂಬವರು ತಿಳಿಸಿರುತ್ತಾರೆ. ಮಹಾಸ್ವಾಮಿಯ ಫಲ-ಮಂತ್ರಾಕ್ಷತೆಗಳು ಈಗಲೂ ಶಾಲಿಗ್ರಾಮ ರೂಪದಿಂದ ಕಂಗೊಳಿಸುವದನ್ನು ಭಾವಿಕರು ನೋಡಬಹುದು.

---

## ಪರಿಶಿಷ್ಟ (ಕ)

ಶ್ರೀ

### ಶ್ರೀ ಚಿದಂಬರ ಸ್ತೋತ್ರಂ

ಅಸ್ಯ ಶ್ರೀ ಚಿದಂಬರ ಸ್ತೋತ್ರ ಮಂತ್ರಸ್ಯ ದತ್ತಾತ್ರೇಯ ಋಷಿಃ|| ಶ್ರೀ ಶಿವಚಿದಂಬರೇಶ್ವರೋ ದೇವತಾ ಅನುಷ್ಟುಪ್‌ಛಂದಃ ಶ್ರೀ ಚಿದಂಬರೇಶ್ವರ ಸ್ತೋತ್ರ ಮಂತ್ರಜಪೇ ವಿನಿಯೋಗಃ || ಪೃಥಿವ್ಯಾತ್ಮನೇ ಏಕಾಂಬರೇಶ್ವರಾಯ ಅಂಗುಷ್ಠಾಭ್ಯಾಂನಮಃ ಅಜಾತ್ಮನೇ ಜಂಬುಕೇಶ್ವರಾಯ ತರ್ಜನೀಭ್ಯಾಂ ತೇಜಸಾತ್ಮನೇ ಅರುಣಾಚಲೇಶ್ವರಾಯ ಮಧ್ಯಮಾಭ್ಯಾಂ ವಾಯ್ವಾತ್ಮನೇ ಕಾಲಹಸ್ತೀಶ್ವರಾಯ ಅನಾಮಿಕಾಭ್ಯಾಂ ಆಕಾಶಾತ್ಮನೇ ಶ್ರೀ ಚಿದಂಬರೇಶ್ವರಾಯ ಕನಿಷ್ಠಿಕಾಭ್ಯಾಂ ಸರ್ವಾಂತರಾತ್ಮನೇ ಸರ್ವೇಶ್ವರಾಯ ಕರತಲಕರಪೃಷ್ಠಾಭ್ಯಾಂ ನಮಃ||

ಏವಂ ಹೃದಯಾದಿ || ಇತಿ ದಿಗ್ಬಂಧಃ || ಅಥಧ್ಯಾನಮ್ || ಸಂಭ್ರಾಂತ್ಯಾದಿತ್ಯ ವರ್ಣಾಯ ಸಚ್ಚಿದಾನಂದ ಮೂರ್ತಯೇ || ತೇಜೋಮಯ ಸ್ವರೂಪಾಯ ಚಿದಂಬರ ನಮೋಸ್ತುತೇ || ೧ || ಚಿದಂಬರ ಮಹಾದೇವ ಪಾಹಿಮಾಂ ಪುರುಷೋತ್ತಮ || ಅನಾಥನಾಥಸರ್ವಜ್ಞ ಚಿದಂಬರ ನಮೋಸ್ತುತೇ || ೨ || ಚಂದ್ರ ಚೂಡಾ ಸಮಾಯುಕ್ತ ನಾಗಾಭರಣಭೂಷಿತ || ಶುಭ್ರವಸ್ತ್ರಪರೀಧಾನ ಚಿದಂಬರ ನಮೋಸ್ತುತೇ || ೩ || ಕಿರೀಟಕುಂಡಲಧರವನಮಾಲಾ ವಿರಾಜಿತ || ಭಸ್ಮೋದ್ಧೂಲಿತ ಸರ್ವಾಂಗ ಚಿದಂಬರ ನಮೋಸ್ತುತೇ || ೪ || ಸುವ್ಯಾಘ್ರಚರ್ಮೋತ್ತರೀಯ ಸರ್ಪಾಭರಣ ಭೂಷಿತ || ಭಕ್ತಲೋಕ ಕೃಪಾಪೂರ್ಣ ಚಿದಂಬರ ನಮೋಸ್ತುತೇ || ೫ || ನಾನಾದೇಶಾಗತಾನ್ವಿಪ್ರಾನ್ನಾನಾ ದೇಶಾಗತಾಸ್ತ್ರಿಯಃ||ಸರ್ವದಾ ಸ್ವಾಗತಂ ಪೃಚ್ಛನ್ ಚಿದಂಬರ ನಮೋಸ್ತುತೇ || ೬ || ಸರ್ವದಾ ವಿಪ್ರ ಸಂಕೀರ್ಣ ಫಲಮಂತ್ರಾಕ್ಷತೈರ್ಯುತ || ಭಕ್ತಾಭೀಷ್ಟಪ್ರದಾನಂತ ಚಿದಂಬರ ನಮೋಸ್ತುತೇ || ೭ || ಧರ್ಮಶಾಲಾ ಕೃತಾಯುಗ್ಮ ಪಕ್ವಾನ್ನ ಫಲಪೂರಿತ || ಯೋಗ್ಯಲೋಕ ಪ್ರದಾತ್ಯಂತ ಚಿದಂಬರ ನಮೋಸ್ತುತೇ ||೮|| ಪೂರ್ವಜನ್ಮಕೃತಂ ಕರ್ಮಯೋಗ್ಯಾಯೋಗ್ಯ ವಿಚಾರಕ || ಪ್ರಾಪ್ತ್ಯನುಸಾರಫಲದ ಚಿದಂಬರ ನಮೋಸ್ತುತೇ || ೯ || ಮುರಗೋಡಪುರಶ್ರೇಷ್ಠ ಕೆಂಗೇರಿ ತಟವಾಸಿತ || ಔದುಂಬರ ಸಮೀಪಸ್ಥ ಚಿದಂಬರ ನಮೋಸ್ತುತೇ || ೧೦ || ನಾಗಾಖ್ಯ ಪುಷ್ಕರೇತೀರ್ಥೇ ಸಿದ್ಧನಾಥಸ್ಯದರ್ಶನೆ ||ಫಲ-ಪುಷ್ಪಸಮಾಯುಕ್ತ ಚಿದಂಬರ ನಮೋಸ್ತುತೇ||೧೧|| ಚಿದಂಬರ ಮಹಾಖ್ಯಾತ ವೇಂಕಟೇಶ ಸುಪೂಜಿತ|| ಲಕ್ಷ್ಮೀಪಾರ್ವತಿ ಸಂಯುಕ್ತ ಚಿದಂಬರ ನಮೋಸ್ತುತೇ || ೧೨ || ಅಣುಶೇಷ ಕೃತಂಸ್ತೋತ್ರ ಶ್ರದ್ಧಾಭಕ್ತಿಸಮನ್ವಿತಃ || ಯಃಪಠೇತ್ತಸ್ಯಸರ್ವತ್ರ ಜಾಯಂತೆ ಸುಖಸಂಪದಃ || ೧೩ || ಏಕವಾರಂ ಪಠೇನ್ನಿತ್ಯಂ ದ್ವಿಸಂಧ್ಯಂಯಃಸದಾಪಠೇತ್ ||ತ್ರಿಸಂಧ್ಯಂಯಃಪಠೇನ್ನಿತ್ಯಂ ಮಹಾಪಾತಕನಾಶನಂ || ೧೪ || ಏಕಾವಾರಂಪಠೇನ್ನಿತ್ಯಂ ಮಹದಾಯುಷ್ಯವರ್ಧನಂ|| ದ್ವಿವಾರಂಯಃಪಠೇನ್ನಿತ್ಯಂ ಧನಧಾನ್ಯಸಮೃದ್ಧಿದಂ || ೧೫ || ತ್ರಿವಾರಂಯಃಪಠೇನ್ನಿತ್ಯಂ ಸರ್ವಸಂಪತ್ತ್ರದಾಯಕಂ || ಚತುರ್ವಾರಂ ಪಠೇನ್ನಿತ್ಯಂ ಪುತ್ರಪೌತ್ರ ಪ್ರದಾಯಕಂ ||೧೬|| ಪಂಚವಾರಂಪಠೇನ್ನಿತ್ಯಂ ಸರ್ವಜನವಶೀಕರಂ|| ಷಡ್ವಾರಂ ಯಃಪಠೇನ್ನಿತ್ಯಂ ಸರ್ವಶತ್ರುನಿವಾರಣಂ ||೧೭|| ಸಪ್ತವಾರಂ ಪಠೇನ್ನಿತ್ಯಮಿಷ್ಟ ಕಾಮ್ಯಾರ್ಥಸಿದ್ಧಿದಂ||ಅಷ್ಟವಾರಂಪಠೇನ್ನಿತ್ಯಂತ್ರೈಲೋಕ ಜ್ಞಾನದರ್ಶನಂ||೧೮|| ಸರ್ವಬಾಧಾಪಶಮನಂ ಸರ್ವಾರಿಷ್ಟನಿವಾರಣಂ ಏವಂ ಸ್ತೋತ್ರಂಪಠೇದ್ಭಕ್ತ್ಯಾ

ರುದ್ರತುಲ್ಯೋಭವೇನ್ನರಃ ||೧೯|| ಇತಿ ಶೇಷಾದ್ರಿಣಾವಿರಚಿತಂ ಶ್ರೀ ಶಿವ ಚಿದಂಬರ ಸ್ತೋತ್ರಂ ಸಂಪೂರ್ಣಂ ||

## [೧] ಆರ್ತಿಗಳು.

ಜಯದೇವ ಜಯದೇವ ಜಯಪಾವನಚರ್ಯಾ | ಭಯಹರಭವ್ಯಚಿದಂಬರ ದೀಕ್ಷಿತಗುರುವರ್ಯಾ | ಜಯದೇವ ಜಯದೇವ ||ಪಲ್ಲ|| ಪರಮೇಶ್ವರಪಿವಾ ಸೌಭೂಮಾವವತೀರ್ಯಾ | ಸುರುಚಾಸರ್ವಂಭುವನಂ ಸಂತತಮಾಪೂರ್ಯಾ || ಸರಸೋಕ್ತಿಸುಧಾಸ್ಯನ್ ವಿಪ್ರವಚನಚಾತುರ್ಯಾ | ಪರಸಂತಾಪಜ್ಞೇತ್ರಾ ಸಿತ್ವಂದ್ವಿಜವರ್ಯಾ ||೧|| ಜಯದೇವಂ || ಮುರಗೋಡಪುರೀವಾಸ ಕೆಂಗೇರಿನಿವಾಸಾ | ಹರಪಂಚಾಯತನಸ್ಥಾಪನನಿಪುಣೋಲ್ಲಾಸಾ || ಪರಮಪವಿತ್ರೌದುಂಬರ ಮೂಲಂಭಿನಿವೇಶಾ | ಗುರುವರಸಂತತ ಬೋಧಿತ ಬೋಧಸದುಪದೇಶಾ ||೨|| ಜಯದೇವಂ || ಮಂಗಲಮವನೀದ್ವೈವತ ಮಂಗಲಮೌಲಿಮಣೇ | ಮಂಗಲವೈಭವತೇಭವ ತಿಮಿರೋರುದ್ಯುಮಣೇ || ಮಂಗಲಮವ್ಯತೇಶಾತ್ಮಜ ಮಂಗಲದಿವ್ಯಮಣೇ ಮಂಗಲಮಹಿಮಾವೇಶ್ವರ ಮಾಮಾತ್ಮೀಯಗುಣೆ || ೩ || ಜಯದೇವಂ ||

(೨) ಜಯದೇವ ಜಯದೇವ ಜಯಚಿದಂಬರಾ | ಸುಂದರಶೋಭಿತ ಕರಸಿತ ಕಂಧರ ಅವತಾರಾ ||ಧೃಂ|| ಮಲ್ಲಾರೀದೀಕ್ಷಿತ ವರಪುತ್ರಂ | ದ್ವಿಕಳತ್ರಂಲೋಲಾನುಜಸಹಪುತ್ರಂ ಪಾಲಯದ್ವಿಜಛತ್ರಂ || ಕೋಲಾಹಲಜನಯಾತ್ರಂ ಕವಿತಾಗಮಶಾಸ್ತ್ರಂ || ಲೀಲಾಚಿನ್ಮಯಮಾತ್ರಂ ಕಲಯೇವೃಡಸೂತ್ರಂ ||೧|| ಮಂದಸ್ಮಿತಮೃದುಭಾಷಣ ಕುಂದಹಿತಶೀಲಂ | ಕಂದರ್ಪತಾತ ಪ್ರಿಯಮಿಂದು ಭೂಷಿತಮೌಲಂ || ಅಂಧಾದಿಕಸಂಹರ ಅರವಿಂದನಯನಭಾಲಂ | ಮಂದಾರಾದ್ರಿವಿಲಸಿತ ವಂದಿತಗಣಶೈಲಂ ||೨|| ಕರುಣಾಕರ ಸಕಲಾಶ್ರಯ ಮುರಗೋಡನಿವಾಸಂ | ಅರುಣಾರುಣಾಪದಪಲ್ಲವ ರವಿಕೋಟಿವಿಭಾಸಂ |ಪರ್ಣಾಶ್ರಯ ಪರಮಾರ್ಥಕ ಮುನಿಮಾನಸಹಂಸಂ || ಶರಣಾಗತ .ಕಲಶೋದ್ಭವ ಕವಿವರನಿಜವಾಸಂ ||೩|| ಜಯದೇವ ||

# ಅಭಂಗಗಳು.

ಭಕ್ತಜನರು ನಿತ್ಯದಲ್ಲಿ ಕೆಳಗೆ ಬರೆದ ಬಹು ಮಹತ್ವದ ಅಭಂಗವನ್ನು ಪ್ರೇಮದಿಂದ ಪಠಣಮಾಡಬೇಕು. ಅದು ಪ್ರತ್ಯಕ್ಷ ಶ್ರೀ ಚಿದಂಬರ ಮಹಾಸ್ವಾಮಿಯವರ ಮುಖದಿಂದ ಹೊರಟಿರುತ್ತದೆ. ಅದನ್ನು ಪಠಣಮಾಡುವದರಿಂದ ಭೂತಪಿಶಾಚಿಗಳು ತೊಲಗುವವು. ವ್ಯಾಘ್ರ, ಸರ್ಪಾದಿಗಳ ಭಯದ ನಿವಾರಣೆಯಾಗುವದು. ಹೀಗೆ ಅದರ ಆಖ್ಯಾಯಿಕೆಯಿರುವದು.

## ಶ್ರೀ ಚಿದಂಬರ ಉವಾಚ.

ಮಾಝಾಧಾಕಮಾನೀತ್ರಿಭುವನೀಲೋಕ । ಯಮಕುಂಭಪಾಕಧಾಕಮಾನೀ ॥೧॥ ಮಾಝಾಧಾಕಮಾನೀವ್ಯಾಘ್ರಸಿಂಹಸರ್ಪ । ತಿಹೀಲೋಕೀದರ್ಪಮಾಝಾಅಸೇ ॥೨॥ ಮಾಝಾ ಧಾಕಮಾನೀಜಲಸ್ಥಳ ಅಗ್ನೀ । ಆಕಾಶಪವನೀ ಧಾಕ ಮಾಝಾ ॥೩॥ ಮಾಝಾಧಾಕ ಅಸೇರಾಕ್ಷಸದೇವಾಸೀ । ನಾಮಮ್ಹಣೇತ್ಯಾಸೀಉದ್ಧರಿತೋ ॥೪॥

(ಶ್ರೀ ಚಿದಂಬರ ಭಕ್ತ ರಾಜಾರಾಮಬುವಾ ಕೃತ ಈ ಅಭಂಗವನ್ನು ಮುತ್ತೈದೆಯರು ತಮ್ಮ ಸೌಭಾಗ್ಯ ವೃದ್ಧ್ಯರ್ಥವಾಗಿ ದಿನಾಲು ಮರೆಯದೆ ಪಠಣಮಾಡಬೇಕು.)

೨ ಚಿದಂಬರನಾಮ ಸೌಭಾಗ್ಯಸಂಪೂರ್ಣ । ಸಕಳಆಭರಣನಾಮತುಝೇ ॥೧॥ಪಾಂಡುರಂಗನಾಮಕಂಚುಕಿಮಿಲ್ಯಾಲೀ । ಪೀತಾಂಬರನೇಸಲೀರಾಮನಾಮ ॥೨॥ ಕೇಶವಾಚೆನಾಮ ಪ್ರಗಟಮಂಗಳಸೂತ್ರ । ಪುತಳಾಂಚಾಹಾರ ನಾರಾಯಣ ॥೩॥ ಮಾಧವಾಚೆನಾಮ ಪದಕಜಡಿತ ।ಗೋವಿಂದತಾಯಿತಮೋತೀಮಾಳಾ ॥೪॥ ವಿಷ್ಣುತುಝನಾಮಮೋತ್ಯಾಚಾಕತಾಣಾ ಸರೀಮಧುಸೂದನಜಂಬೂಮಾಳಾ ॥೫॥ ತ್ರಿವಿಕ್ರಮನಾಮಶೋಭೆಮೋಹನಮಾಳಾ । ಚಂದ್ರಹಾರಗಳಾವಾಮನನಾಮ ॥೬॥ ಶ್ರೀಧರಹೇನಾಮರತ್ನಜಡಿತಕಾಪ । ಬಾಳ್ಯಾತ್ಯಾಅಮೂಪಹೃಷೀಕೇಶೀ ॥೭॥ ಪದ್ಮನಾಭನಾಮಮೋತ್ಯಾಚಿಬುಗಡಿ । ಭೋಕರಾಚಿಜೋಡಿದಾಮೋದರ ॥೮॥ ಸಂಕರ್ಷಣನಾಮವಾಕ್ಯಾಬಾಜೂಬಂದ। ವಿರಾಜಿತಛಂದವಾಸುದೇವ ॥೯॥ ಪ್ರದ್ಯುಮ್ನನಾಮರವಿಸಮಚೂಡಾ । ಪಾಟ

ಲ್ಯಾಚಾಜೋಡಾಅನಿರುದ್ಧ ||೧೦|| ಪುರುಷೋತ್ತಮನಾಮ ಜವಹೇಗಗನೀ | ಚಂದ್ರಸೂರ್ಯರ್ದೋನೀಅಧೋಕ್ಷಜ ||೧೧|| ನೃಸಿಂಹಹೇನಾಮ ರಾಕಠೀಕೇವಡಾ | ಶೋಭಿಮೂದಜೋಡಾಅಚ್ಯುತನಾಮ ||೧೨|| ಜನಾರ್ದನನಾಮ ಮಾಜಪಟ್ಟಾಭರಣ |. ಸಾಖಳ್ಯಾತೀಜಾಣಉಪೇಂದ್ರಪ್ಪೆ ||೧೩|| ಹರಿತುರ್ಘೀ ನಾಮುದಾಂಡಾಮೋತಿಯಾಚಾ | ಶ್ರೀ ಕೃಷ್ಣನಾಮಾಚಾನಾಕೀ ಮೋತೀ||೧೪|| ಪರ್ವೇಶ್ವರನಾಮುಡುಲ್ಲತಶೋಭತ | ಕುಂಕುಮಅನಂತದಾಸವ್ಹಣೇ ||೧೫||

---

## ಚೂರ್ಣಿಕಾ.

ಸರ್ವಲೋಕೈಕ ಶಂಕರ | ಭಕ್ತಾಭಯಂಕರ | ಸುರೇಶ್ವರ | ಚರಣಸರೋಜ ನಿಘೃಷ್ಟಾಮರೇಶ್ವರ | ಶಿರಃಕೋಟೀರ ರತ್ನನಿಕರ | ಭೂಸುರ | ಸಂರಕ್ಷಣ ದೃಢ ನಿಬದ್ಧ ಪರಿಕರ | ಸಜ್ಜನ ದ್ವಿಚಾರಾಶಿ ಸಮೂಲೋನ್ಮೂಲನ ಗೃಹೀತಾವತಾರ | ತರುವರೌದುಂಬರ ಕಲ್ಪಿತವಾಸಪ್ರಚಾರ | ಕರಕಲಿತದಾನಪಾತ್ರ | ವಿರಾಜಿತಧವಲೋತ್ತರೀಯ ಪರಿಧಾನೀಯಾಂಬರ | ವಚನಮಾಧುರ್ಯ | ಸಂಚಾರಿತಸುಧಾಕರ | ಭಾಲಸಂರಾಜಮಾನ ಶುಭ್ರಪಾಟೀರ | ಪರಿಣೀತ ಸರಸ್ವತೀ-ಸಾವಿತ್ರೀದಾರ | ಉತ್ಪಾದಿತಸೂರ್ಯಾದ್ಯವತಾರ | ದಿವಾಕರಾದಿ ಷಟ್ಪುತ್ರ | ಭಕ್ತಕಾಮಪೂರ್ಣ | ಚಿಂತಾಮಣಿ ಕಾಮಧೇನೂಸುರತರುವರ | ದಯಾದಾಕ್ಷಿಣ್ಯ ವಿಜ್ಞಾನ ವೈರಾಗ್ಯಾದಿ ಗುಣಸಾಗರ | ಶ್ರೀನಿವಾಸ ದಯಾಪಾತ್ರೀಕೃತ ಕೆಂಗೇರಿಪುರ | ಉತ್ಥಾಪಿತ ಕಲಿನಿವೃತ್ತ ಸದಾಚಾರ | ಸ್ವಚರಣನಲಿನಮಕರಂದಭ್ರಮರಾಯಮಾನಸ್ವಜನ ದತ್ತವಿಜ್ಞಾನವಿಚಾರ | ಭಕ್ತಾಭಿಮಾನಿ ರಾಜಾಧಿರಾಜ ಶ್ರೀ ಶಿವಚಿದಂಬರೇಶ್ವರ ಗುರುಮಹಾರಾಜ ||

---

## ಶ್ರೀ ಚಿದಂಬರ ಗುರುಸ್ತವನಂ

ಶ್ರೀ ಮತ್ ಗುರುಮ್ ಸಕಲ ಭೂಷಣ ಭೂಷಿತಾಂಗಂ |
ದಿವ್ಯಾಂಬರಂ ಸ್ಮಿತವಿಕಾಸ ಮುಖಾರವಿಂದಂ |
ಚಿಮ್ಮುದ್ರಯಾಂಕಿತ ಕರಂ ಮಹನೀಯಮೂರ್ತಿಂ |
ಧ್ಯಾಯೇತ್ ಸುಧೀ ಶಿವಚಿದಂಬರ ಮಾದಿದೇವಂ || ೧ ||

ಚಿ ರಂತನಾಶ್ಚಿಮ್ನಾಯ ದಿವ್ಯದೇಹ |
ಶ್ಚಿರಾಚರಸ್ಥಶ್ಚಿರ ಪುಣ್ಯದಾಯೀ |
ಚಕಾರ ಯಶ್ಚಿತ್ರ ತರಾಣಿಭೂಮೌ |
ಚಿದಂಬರೋಮೇ ಶ್ರಿಯಮಾತನೋತು || ೨ ||

ದ ಮಾದಿಯುಕ್ತೋ ದದತಾಂಸುದಾತಾ |
ದರಸ್ಮಿತೋ ದೈವತ ಸಾರ್ವಭೌಮಃ |
ದಶಾವಿಶೇಷೋ ದಲಿತೌಘಪಾಶ |
ಶ್ಚಿದಂಬರೋಮೇ ಶ್ರಿಯಮಾತನೋತು || ೩ ||

ಬ ಲಾರಿಮುಖ್ಯೈರ್ಬಹುರೂಪಮಾನೋ |
ಬಲೇಶ್ವರೋ ಬಾಧಿತ ಶತ್ರುಜಾಲಃ |
ಬಹೂಪಕಾರೋ ಬಹಿರಂತ ರಂಗ |
ಶ್ಚಿದಂಬರೋಮೇ ಶ್ರಿಯಮಾತನೋತು || ೪ ||

ರ ಮಾಭಿರಾಮೋ ರಮಣೀಯ ರಾಮೋ |
ರರಾಜ ರಾಜೀವ ರಸಾತಲೇಯಃ |
ರತೀಶ ರೂಪೋ ರಜತಾದ್ರಿಭೂಪ |
ಶ್ಚಿದಂಬರೋಮೇ ಶ್ರಿಯಮಾತನೋತು || ೫ ||

ಗು ರುರ್ಗುರೂಣಾಂ ಗುರುಕೀರ್ತನೀಯೋ |
ಗುಣಾಗುಣಜ್ಞೋ ಗುಣಿನಾಂಗಣೇಶಃ |
ಗುರುಪ್ರಿಯೋ ಗೌರವ ಗಣ್ಯಕೀರ್ತಿ |
ಶ್ಚಿದಂಬರೋಮೇ ಶ್ರಿಯಮಾತನೋತು || ೬ ||

ರು ಚಿಪ್ರಸಾರೀ ಋಣ ಕಷ್ಟಹಾರೀ |
ರುಜಾಂಪ್ರಹಾರೀ ರುರುಪೋತಧಾರೀ |
ರುಷೋನಿವಾರೀ ರುಚಿರಾತಿಹಾರೀ |
ಚಿದಂಬರೋಮೇ ಶ್ರಿಯಮಾತನೋತು || ೭ ||

ಚಿದಂಬರಸ್ಯಾತ್ ಗುರೋಃಶಿವಸ್ಯ |
ಷಡಕ್ಷರಸ್ತೋತ್ರ ಮತೀವಭಕ್ತ್ಯಾ |
ಕೃತಂ ಶಿವಾರ್ಯೇಣ ಪಠಂತಿ ತೇಷಾಂ |
ಚಿದಂಬರೋಮೇ ಶ್ರಿಯಮಾತನೋತು || ೮ ||

